# ಕನ್ನಡ ಕಾದಂಬರಿಗಳಲ್ಲಿ ಸ್ವಾತಂತ್ರ್ಯ ಚಳುವಳಿ

(ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯಕ್ಕೆ
ಪಿಎಚ್.ಡಿ.ಪದವಿಗಾಗಿ ಸಲ್ಲಿಸಿದ ನಿಬಂಧ )



ಸಂಶೋಧಕರು

ಶ್ರೀಮತಿ ಜ್ಯೋತಿ

ಮಾರ್ಗದರ್ಶಕರು

ಡಾ. ಸುಚೇತ ನವರತ್ನ

ಸಹ ಪ್ರಾಧ್ಯಾಪಕರು ಮತ್ತು ಮುಖ್ಯಸ್ಥರು



Kannada University Logo

ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ
ಭಾಷಾ ನಿಕಾಯ,
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

೨೦೧೫

# ಕನ್ನಡ ಕಾದಂಬರಿಗಳಲ್ಲಿ ಸ್ವಾತಂತ್ರ್ಯ ಚಳುವಳಿ

(ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯಕ್ಕೆ

ಪಿಎಚ್.ಡಿ.ಪದವಿಗಾಗಿ ಸಲ್ಲಿಸಿದ ನಿಬಂಧ )

ಸಂಶೋಧಕರು

**ಶ್ರೀಮತಿ ಜ್ಯೋತಿ**



ಮಾರ್ಗದರ್ಶಕರು

**ಡಾ. ಸುಚೇತ ನವರತ್ನ**

ಸಹ ಪ್ರಾಧ್ಯಾಪಕರು ಮತ್ತು ಮುಖ್ಯಸ್ಥರು



Kannada University Logo

ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ
ಭಾಷಾ ನಿಕಾಯ,
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

೨೦೧೫

# ಘೋಷಣಾ ಪತ್ರ

**ಡಾ. ಸುಚೇತ ನವರತ್ನ** ಅವರ ಮಾರ್ಗದರ್ಶನದಲ್ಲಿ **ಕನ್ನಡ ಕಾದಂಬರಿಗಳಲ್ಲಿ ಸ್ವಾತಂತ್ರ್ಯ ಚಳುವಳಿ** ಎಂಬ ಈ ನಿಬಂಧವನ್ನು ಸಿದ್ಧಪಡಿಸಿ ಪಿಎಚ್.ಡಿ. ಪದವಿಗಾಗಿ **ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗಕ್ಕೆ** ಸಲ್ಲಿಸುತ್ತಿದ್ದೇನೆ. ಈ ನಿಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ. ಇದರ ಯಾವುದೇ ಭಾಗವನ್ನು ಎಲ್ಲಿಯೂ ಪ್ರಕಟಗೊಳಿಸಿಲ್ಲ. ಇದು ನನ್ನ ಸ್ವತಂತ್ರವಾದ ಸಂಶೋಧನಾ ಅಧ್ಯಯನವಾಗಿದೆ ಎಂದು ಈ ಮೂಲಕ ದೃಢೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ
ದಿನಾಂಕ: 30.12.15

ಶ್ರೀಮತಿ ಜ್ಯೋತಿ
**ಸಂಶೋಧಕರು**

## ಮಾರ್ಗದರ್ಶಕರ ಪ್ರಮಾಣಪತ್ರ

**ಶ್ರೀಮತಿ ಜ್ಯೋತಿ** ಅವರು ನನ್ನ ಮಾರ್ಗದರ್ಶನದಲ್ಲಿ **ಕನ್ನಡ ಕಾದಂಬರಿಗಳಲ್ಲಿ ಸ್ವಾತಂತ್ರ್ಯ ಚಳುವಳಿ** ಎಂಬ ಸಂಶೋಧನಾ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಇಲ್ಲವೇ ಪ್ರಕಟಣೆಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ
ದಿನಾಂಕ: 30.12.15

ಡಾ. ಸುಚೇತ ನವರತ್ನ
**ಮಾರ್ಗದರ್ಶಕರು**
ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩೨೭೬

# ಪರಿವಿಡಿ

# ಅಧ್ಯಾಯ – ೧

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

**ಪ್ರವೇಶಿಕೆ**

ಭಾರತೀಯ ಸ್ವಾತಂತ್ರ್ಯ ಚಳುವಳಿಯೆನ್ನುವುದು ಸ್ವಾತಂತ್ರ್ಯ ಪೂರ್ವ ಭಾರತದಲ್ಲಿ ನಡೆದ ಒಂದು ಚಾರಿತ್ರಿಕ ಘಟನೆಯಾಗಿದೆ. ದೇಶದಾದ್ಯಂತ ಈ ಚಳುವಳಿ ಪಸರಿಸಿತು ಅಲ್ಲದೆ ಜನಸಾಮಾನ್ಯರನ್ನು ಪರಸ್ಪರ ಒಗ್ಗೂಡುವಂತೆ ಮಾಡಿತು. ಭಾವನಾತ್ಮಕವಾಗಿದ್ದ ಭಾರತೀಯತೆ ಎನ್ನುವುದು ಭೌಗೋಳಿಕವಾಗಿಯೂ, ಮೂರ್ತರೂಪವಾಗಿಯೂ ಅಭಿವ್ಯಕ್ತಿಗೊಳ್ಳುವುದಕ್ಕೆ ಈ ಚಳುವಳಿ ಕಾರಣವಾಯಿತು. ಗಾಂಧೀಜಿಯವರು ರಂಗಪ್ರವೇಶ ಮಾಡಿದ ಮೇಲೆ ಈ ಚಳುವಳಿಗೆ ಅಹಿಂಸಾತ್ಮಕ ರೂಪ ಒದಗಿತು. ಹೀಗೆ ೧೯–೨೦ನೇ ಶತಮಾನವು ಭಾರತದ ಮಟ್ಟಿಗೆ ಸ್ವಾತಂತ್ರ್ಯ ಚಳುವಳಿಯ ಶತಮಾನವಾಗಿಯೇ ಮಾರ್ಪಾಡಾಯಿತು ಎಂದು ಹೇಳಬಹುದು.

ಭಾರತೀಯರು ಸ್ವಾತಂತ್ರ್ಯ ಚಳುವಳಿಯಲ್ಲಿ ವಿವಿಧ ರೀತಿಯಲ್ಲಿ ಪಾಲ್ಗೊಂಡಿದ್ದಾರೆ. ಕೆಲವರು ನೇರವಾಗಿ ಸ್ವಾತಂತ್ರ್ಯ ಚಳುವಳಿಯಲ್ಲಿ ಧುಮುಕಿದರು. ಕೆಲವರು ಜೈಲುವಾಸ ಅನುಭವಿಸಿದರು. ಇನ್ನು ಕೆಲವರು ಪ್ರಾಣಾರ್ಪಣೆಯನ್ನು ಮಾಡಿದರು. ಇದಲ್ಲದೆ ಇನ್ನು ಕೆಲವರು ಪರೋಕ್ಷವಾಗಿಯೂ ಸ್ವಾತಂತ್ರ್ಯ ಚಳುವಳಿಯಲ್ಲಿ ಪಾಲ್ಗೊಂಡಿರುವುದುಂಟು. ಸ್ವಾತಂತ್ರ್ಯ ಚಳುವಳಿಯಲ್ಲಿ ಪಾಲ್ಗೊಳ್ಳುತ್ತಲೇ ಅದಕ್ಕೆ ಪೂರಕವಾದ ಸಾಹಿತ್ಯ ರಚನೆಯನ್ನು ಮಾಡಿದ ಪ್ರತಿಭಾಶಾಲಿಗಳು ನಮ್ಮಲ್ಲಿ ಆಗಿಹೋದರು. ಇದಲ್ಲದೆ ಕೆಲವರು ಸಾಹಿತ್ಯದ ಮೂಲಕವೇ ಪರೋಕ್ಷವಾಗಿ ಸ್ವಾತಂತ್ರ್ಯ ಚಳುವಳಿಯಲ್ಲಿ ತಮ್ಮ ಪಾತ್ರವನ್ನು ನಿರ್ವಹಿಸಿರುವುದುಂಟು. ಹೀಗೆ

ಬಗೆ ಬಗೆಯಲ್ಲಿ ಭಾರತೀಯರು ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿ ಆ ಐತಿಹಾಸಿಕ ಕ್ಷಣಗಳಿಗೆ ಸಾಕ್ಷೀಭೂತರಾಗಿದ್ದಾರೆ.

ಪ್ರಸ್ತುತ ನಿಬಂಧವು ಸ್ವಾತಂತ್ರ್ಯ ಚಳುವಳಿಗೆ ಸಂಬಂಧಿಸಿದ ಕನ್ನಡ ಕಾದಂಬರಿಗಳನ್ನು ಅಧ್ಯಯನ ಮಾಡುವ ಪ್ರಯತ್ನವಾಗಿದೆ. ಕನ್ನಡದಲ್ಲಿ ಸ್ವಾತಂತ್ರ್ಯ ಚಳುವಳಿಗೆ ಸಂಬಂಧಿಸಿದಂತೆ ಪ್ರತ್ಯಕ್ಷವಾಗಿ ಚಳುವಳಿಯಲ್ಲಿ ಭಾಗವಹಿಸಿದ ಅನುಭವಗಳೊಂದಿಗೆ ಮೂಡಿಬಂದ ಕಾದಂಬರಿಗಳ ಜೊತೆಗೆ ಚಳುವಳಿಗೆ ಸಂಬಂಧಿಸಿದ ಮಾಹಿತಿಗಳ ಮೂಲಕ ಪರೋಕ್ಷವಾದ ಅನುಭವದಿಂದ ರಚನೆಯಾದ ಕಾದಂಬರಿಗಳು ಇವೆ. ಇವೆಲ್ಲವನ್ನೂ ಗಮನಿಸುತ್ತಲೇ ಅವುಗಳ ಒಳನೋಟವನ್ನು ಗ್ರಹಿಸುವ ಕ್ರಮ ಇಲ್ಲಿದೆ. ಸ್ವಾತಂತ್ರ ಚಳುವಳಿಯಂತಹ ಭಾವನಾತ್ಮಕ ಅಂಶವು ಲೇಖಕರ ಸಂವೇದನೆಯಾಗಿ ಅಭಿವ್ಯಕ್ತಿಗೊಳ್ಳುವ ರೀತಿಯನ್ನು ಇಲ್ಲಿ ವಿಶ್ಲೇಷಿಸಲಾಗುವುದು. ಸ್ವಾತಂತ್ರ್ಯ ಚಳುವಳಿಗೆ ಸಂಬಂಧಿಸಿದಂತೆ ಇತಿಹಾಸಕಾರರು ಬರೆದಿರುವ ಅನೇಕ ಕೃತಿಗಳು ಈಗಾಗಲೇ ನಮ್ಮ ಮುಂದಿವೆ. ಇವು ಒಂದು ಮಾದರಿಯ ಜ್ಞಾನವನ್ನು ನಮಗೆ ಒದಗಿಸಿವೆ. ಅದಲ್ಲದೆ ಸ್ವಾತಂತ್ರ್ಯ ಚಳುವಳಿಗೆ ಸಂಬಂಧಿಸಿದ ಹಾಗೆ ಪಠ್ಯಪುಸ್ತಕಗಳು ಕೂಡ ರಚನೆಯಾಗುತ್ತಿದ್ದು ಅವುಗಳ ಮೂಲಕವೂ ನಾವು ಸ್ವಾತಂತ್ರ್ಯ ಚಳುವಳಿಗೆ ಮುಖಾಮುಖಿಯಾಗುತ್ತಿದ್ದೇವೆ.

ಸ್ವಾತಂತ್ರ್ಯ ಚಳುವಳಿಯು ಐತಿಹಾಸಿಕ ಘಟನೆಯಾಗುವುದರೊಂದಿಗೆ ಭಾವನಾತ್ಮಕವಾದ ಸಂಗತಿಯೂ ಆಗಿದೆ. ಅದು ವಿದೇಶಿಗರು ಅನ್ಯಾಯವಾಗಿ ನಮ್ಮ ದೇಶವನ್ನು ಆಳಿದ ಮತ್ತು ನಾವು ವಿನಾ ಕಾರಣವಾಗಿ ಅವರಿಗೆ ಗುಲಾಮರಾದ ಅಮಾನವೀಯ ಸಂಗತಿಯಾಗಿದೆ. ಸ್ವಾತಂತ್ರ್ಯ ಚಳುವಳಿಯು ಭಾವನಾತ್ಮಕವಾದುದು ಎನ್ನುವ ವಿವರಗಳನ್ನು ನೀಡುವ ಕೆಲವು ಪ್ರಯತ್ನಗಳು ಕನ್ನಡದಲ್ಲಿ ವಿರಳವಾಗಿ ನಡೆದಿರುವುದುಂಟು. ಮುಖ್ಯವಾಗಿ ಅವು ಕೆಲವು ಸಂಘಟನೆಗಳು ಹೊರತರುವ ಕೃತಿಗಳಿಗೆ ಮಾತ್ರ ಸೀಮಿತವಾಗಿವೆ. ಇವುಗಳಲ್ಲಿ ಭಾವುಕತೆಯು ಮೇರೆ ಮೀರಿರುವುದು ಮಾತ್ರವಲ್ಲದೆ ಕಲ್ಪನೆಯೇ ಪ್ರಧಾನವಾಗಿರುವುದೂ ಕಂಡುಬರುತ್ತದೆ.

ಇದಕ್ಕೆ ಹೊರತಾಗಿ ಕನ್ನಡದಲ್ಲಿ ಸ್ವಾತಂತ್ರ್ಯ ಚಳುವಳಿಯಲ್ಲಿ ಪ್ರತ್ಯಕ್ಷವಾಗಿ ಪಾಲ್ಗೊಂಡ ಹೋರಾಟಗಾರರು ಬರೆದಿರುವ ಕಾದಂಬರಿಗಳು ನಮ್ಮೊಂದಿಗಿವೆ. ಇವುಗಳು ಬೇರೆಯದೇ ಆದ ಭಾವನಾಲೋಕವೊಂದನ್ನು ನಮ್ಮ ಮುಂದೆ ತೆರೆದಿಡುತ್ತವೆ. ಇವುಗಳಲ್ಲಿ ಇತಿಹಾಸವನ್ನು ಮೀರಿದ ಭಾವನೆ, ಕಲ್ಪನೆಯನ್ನು ಮೀರಿದ ವಾಸ್ತವತೆಯ ಚಿತ್ರಣವಿದೆ. ಸ್ವಾತಂತ್ರ್ಯ ಚಳುವಳಿಯನ್ನು ಕಾಲದ ದೃಷ್ಟಿಯಿಂದ ದೂರದಲ್ಲಿ ನಿಂತು ನೋಡುವ ನಮಗೆ ಈ ಮಾದರಿಯ ರಚನೆಗಳು ನಮ್ಮ ಹಿರಿಯರು ಸ್ವಾತಂತ್ರ್ಯ ಚಳುವಳಿಗೆ ಹೇಗೆ ಭಾವನಾತ್ಮಕವಾಗಿ ಸ್ಪಂದಿಸಿದರು ಎನ್ನುವುದಕ್ಕೆ ನಿದರ್ಶನಗಳಾಗಿವೆ. ಪ್ರತಿಯೊಂದನ್ನು ವಸ್ತು ಮೌಲ್ಯದ (commodity) ದೃಷ್ಟಿಯಿಂದ ನೋಡುವ ಆಧುನಿಕ ಮನಸ್ಸು ಮುಂದೊಂದು ದಿನ ಸ್ವಾತಂತ್ರ್ಯ ಚಳುವಳಿಯನ್ನು ಹೀಗೆಯೇ ನೊಡುವ ಅಪಾಯಗಳಿವೆ. ಆಗ ನಮ್ಮ ಹಿರಿಯರು ಮಾಡಿದ ಹೋರಾಟ, ತ್ಯಾಗ ಇವುಗಳೆಲ್ಲವೂ

ಕೇವಲ ಅಧ್ಯಯನದ ವಸ್ತುಗಳಾಗಿ, ಮನರಂಜನೆಯ ಸರಕುಗಳಾಗಿ ಹೋಗುವ ಅಪಾಯ ಎದುರಾದೀತು.

ಸ್ವಾತಂತ್ರ್ಯ ಚಳುವಳಿಗೆ ಸಂಬಂಧಿಸಿದ ಕಾದಂಬರಿಗಳನ್ನು ಈ ಹಿನ್ನಲೆಯಲ್ಲಿ ಅಧ್ಯಯನ ಮಾಡಿದ ಪ್ರಯತ್ನ ಪ್ರಸ್ತುತ ನಿಬಂಧವಾಗಿದೆ. ಸ್ವಾತಂತ್ರ್ಯ ಚಳುವಳಿಗೆ ಸಂಬಂಧಿಸಿದ ಕಾದಂಬರಿಗಳು ಐತಿಹಾಸಿಕ ಅಥವಾ ರಾಜಕೀಯ ಘಟನೆಗಳನ್ನು ಹೇಳುತ್ತವಾದರೂ ಇದು 'ಪ್ರಥಮತಃ ಕಾದಂಬರಿ', ಇತಿಹಾಸವಲ್ಲ ಎಂಬ ಎಚ್ಚರಿಕೆಯನ್ನು ಪ್ರಸ್ತುತ ಪ್ರಬಂಧದುದ್ದಕ್ಕೂ ಇಟ್ಟುಕೊಳ್ಳಲಾಗಿದೆ. ಆದರೂ ಕೆಲವು ಕಾದಂಬರಿಗಳ ರಚನೆಯ ನಂತರವೇ ದಕ್ಷಿಣ ಭಾರತದಲ್ಲಿ ನಡೆದ ಸ್ವಾತಂತ್ರ್ಯ ಚಳುವಳಿಯ ಪ್ರಾಮುಖ್ಯತೆಯು ಇತಿಹಾಸದ ಗಮನಕ್ಕೆ ಬಂದಿದೆ ಎಂಬ ಮಾತು ಸುಳ್ಳಲ್ಲ.

ಕಾದಂಬರಿಗಳಲ್ಲಿ ಕಂಡುಬರುವ ಇಂತಹ ಸೂಕ್ಷ್ಮ ವಿವರಗಳಿಗೆ ಈ ಅಧ್ಯಯನದಲ್ಲಿ ಆದ್ಯತೆ ನೀಡಲಾಗಿದೆ. ಸಾಮಾನ್ಯವಾಗಿ ನಾವು ಬ್ರಿಟಿಷರಿಂದ 'ಸಿಪಾಯಿದಂಗೆ' ಎಂದು ಕರೆಯಲಾಗುವ ೧೮೫೭ರ ಹೋರಾಟವನ್ನೇ ಪ್ರಥಮ ಸ್ವಾತಂತ್ರ್ಯ ಸಂಗ್ರಾಮವೆಂದು ಕರೆಯುತ್ತೇವೆ. ಆದರೆ ಕನ್ನಡ ಕಾದಂಬರಿಗಳು ಅದಕ್ಕಿಂತ ಮೊದಲೇ ದಕ್ಷಿಣ ಭಾರತದಲ್ಲಿ ಬ್ರಿಟಿಷರನ್ನು ಓಡಿಸುವ ಪ್ರಯತ್ನಗಳು ನಡೆದ ವಿವರಗಳನ್ನು ನೀಡುತ್ತವೆ. ಮತ್ತೂರು ಕೃಷ್ಣಮೂರ್ತಿಯವರ **ವೀರಪಾಂಡ್ಯ ಕಟ್ಟಬೊಮ್ಮ**, ನಿರಂಜನರ **ಸ್ವಾಮಿ ಅಪರಾಂಪರ** ಮತ್ತು **ಕಲ್ಯಾಣ ಸ್ವಾಮಿ** ಮುಂತಾದ ಕಾದಂಬರಿಗಳು ೧೮೫೭ಕ್ಕಿಂತ ಮೊದಲೇ ತಮಿಳುನಾಡಿನಲ್ಲಿ ಮತ್ತು ಕರ್ನಾಟಕದ ಅಮರ ಸುಳ್ಯದಲ್ಲಿ ಬ್ರಿಟಿಷರನ್ನು ಓಡಿಸಲು ವ್ಯವಸ್ಥಿತ ಪ್ರಯತ್ನಗಳು ನಡೆದುವು ಎಂಬುದನ್ನು ತಿಳಿಸುತ್ತವೆ. ಆದರೆ ಚರಿತ್ರೆಯಲ್ಲಿ ಇಂತಹ ಪ್ರಮುಖ ವಿವರಗಳು ಕಡೆಗಣಿಸಲ್ಪಟ್ಟಿವೆ.

ಸ್ವಾತಂತ್ರ್ಯ ಗಳಿಸುವಲ್ಲಿ ಕರ್ನಾಟಕದ ಜನತೆಯ ಹೋರಾಟ, ತ್ಯಾಗ ಅದ್ಭುತವಾದುದು. ನಿಜವಾಗಿ ಹೇಳುವುದಾದರೆ ಇದೊಂದು ಜನಸಾಮಾನ್ಯರ ಹೋರಾಟ. ಇದು ಕೇವಲ ಕೆಲವೇ ಕೆಲವು ಜನ ಮುಖಂಡರ, ಸಮಾಜದ ಮುಖ್ಯವಾಹಿನಿಯಲ್ಲಿ ಇರುವವರ ಹೋರಾಟ ಮಾತ್ರವಲ್ಲ. ಈ ಹೋರಾಟವನ್ನು ನಿಜವಾದ ಅರ್ಥದಲ್ಲಿ ಸಫಲಗೊಳಿಸಿದವರು ಹಳ್ಳಿಯ ಜನಸಾಮಾನ್ಯರಾದ ಕೂಲಿಕಾರ್ಮಿಕರು, ರೈತರು ಹಾಗೂ ಮಹಿಳೆಯರು. ಜನಸಾಮಾನ್ಯರ ಹೋರಾಟವನ್ನು ಹತ್ತಿಕ್ಕುವುದೇ ಬ್ರಿಟಿಷರಿಗೆ ದೊಡ್ಡ ತಲೆನೋವಾಗಿತ್ತು. ೧೯೩೦ರಲ್ಲಿ ಕರನಿರಾಕರಣೆ, ಉಪ್ಪಿನ ಸತ್ಯಾಗ್ರಹದಂತಹ ಚಳುವಳಿಯಲ್ಲಿ ಶಿರಸಿ, ಸಿದ್ಧಾಪುರ, ಅಂಕೋಲ– ಹೀಗೆ ಉತ್ತರ ಕರ್ನಾಟಕದ ಗ್ರಾಮಗಳು ಪ್ರಮುಖ ಪಾತ್ರವನ್ನು ವಹಿಸುತ್ತವೆ. ಗಾಂಧೀಜಿಯ ಮಾತಿಗೆ ಅಕ್ಷರಶಃ ಸ್ಪಂದಿಸಿದವರು ಉತರ ಕರ್ನಾಟಕದ ಜನಸಾಮಾನ್ಯರು. ಇಡೀ ಕುಟುಂಬಕ್ಕೆ ಕುಟುಂಬವೇ ಜೈಲಿಗೆ ಹೋದ ಉದಾಹರಣೆಗಳಿವೆ. ಇಲ್ಲಿಯ ಅನಕ್ಷರಸ್ಥ ಹೆಣ್ಣುಮಕ್ಕಳು ಕೂಡ ಚಳುವಳಿಯಲ್ಲಿ ಭಾಗವಹಿಸಿದರು. ಹೀಗೆ ಕರನಿರಾಕರಣೆಯಲ್ಲಿ ಕರ್ನಾಟಕದ ಜನತೆಯ ಹೋರಾಟ, ತ್ಯಾಗದ ಕತೆಗಳನ್ನು ಕಾದಂಬರಿಗಳು ತಿಳಿಸುತ್ತವೆ.

೧೯೪೨ರಲ್ಲಿ ಕೂಡಾ ಕರ್ನಾಟಕದ ಪಾತ್ರ ಅತ್ಯಂತ ಮಹತ್ವವಾದುದು. 'ಈಸೂರು' ಎಂಬ ಊರಿನಲ್ಲಿ ನಡೆದ ಚಳುವಳಿಯಲ್ಲಿ ೫ ಮಂದಿ ಸಾಮಾನ್ಯ ಜನರು ಗಲ್ಲುಗಂಬವನ್ನೇರುತ್ತಾರೆ. ಬ್ರಿಟಿಷ್ ಪೊಲೀಸರ ಅಟ್ಟಹಾಸಕ್ಕೆ ಇಡೀ ಈಸೂರೇ ಹೊತ್ತಿ ಉರಿಯುತ್ತದೆ. ಆದರೂ ಅವರ ಹೋರಾಟದ ಛಲ ನಂದುವುದಿಲ್ಲ. ಈ ಪ್ರಮುಖ ಘಟನೆಯು ನಮ್ಮ ಸ್ವಾತಂತ್ರ್ಯ ಚಳುವಳಿಯ ಇತಿಹಾಸದಲ್ಲಿ ಎಲ್ಲೋ ಒಂದು ಕಡೆ ಮಿಂಚಿ ಮರೆಯಾಗುತ್ತದೆ. ಆದರೆ ಕಾದಂಬರಿ ಇದರ ನೈಜ ಚಿತ್ರಣವನ್ನು ನಮ್ಮ ಮುಂದಿಡುವಲ್ಲಿ ಯಶಸ್ವಿಯಾಗಿದೆ.

ಗುಡ್ಡಗಾಡಿನ ಯುವತಿಯರು, ಲಂಬಾಣಿ ಯುವತಿಯರು, ದೇವದಾಸಿಯರು, ದಲಿತ ಹೆಣ್ಣುಮಕ್ಕಳು ಕೂಡ ಈ ಹೋರಾಟದಲ್ಲಿ ಭಾಗವಹಿಸಿದ್ದಾರೆ. ಗುಡ್ಡಗಾಡಿನ ಹೆಣ್ಣುಮಕ್ಕಳ ಹೋರಾಟವನ್ನು ಹತ್ತಿಕ್ಕುವುದು ಬ್ರಿಟಿಷರಿಗೆ ದೊಡ್ಡ ಸಾಹಸದ ಕೆಲಸವೇ ಆಯಿತು. ಹೀಗೆ ಹೆಣ್ಣು ಮಕ್ಕಳ ಅಸಾಧಾರಣ ಧೈರ್ಯ ಹಾಗೂ ಹೋರಾಟದ ಕತೆಯನ್ನು ಕಾದಂಬರಿಗಳು ಅನಾವರಣಗೊಳಿಸುತ್ತವೆ.

ಸ್ವಾತಂತ್ರ್ಯ ಹೋರಾಟದಲ್ಲಿ ಮುಸ್ಲಿಮರ ಪಾತ್ರವೂ ಗಣನೀಯವಾದುದು. ೧೯೪೨ರ ಹೋರಾಟಕ್ಕೆ ಮುಸ್ಲೀಂಲೀಗು ಬೆಂಬಲವನ್ನು ನೀಡದಿದ್ದರೂ ಹಳ್ಳಿಯಲ್ಲಿ ಮುಸ್ಲಿಮರು ಸಕ್ರಿಯವಾಗಿ ಈ ಹೋರಾಟದಲ್ಲಿ ಪಾಲ್ಗೊಂಡಿದ್ದರು. ಹಳ್ಳಿಗಳಲ್ಲಿ ಹಿಂದು ಮುಸ್ಲಿಮರ ನಡುವೆ ಐಕ್ಯಮತವಿತ್ತೆಂಬ ಅಂಶಗಳನ್ನು ಕಾದಂಬರಿ ತೆರೆದಿಡುತ್ತದೆ. ಸ್ವಾತಂತ್ರ್ಯ ಹೋರಾಟದಲ್ಲಿ ಸಾಮಾನ್ಯ ಜನರೇ ಪ್ರಮುಖ ಪಾತ್ರವನ್ನು ವಹಿಸಿದರೂ ಕೂಡ ಸ್ವಾತಂತ್ರ್ಯ ನಂತರ ಅವರ ಸ್ಥಿತಿಯಲ್ಲಿ ಅಂತಹ ಬದಲಾವಣೆಯಾಗುವುದಿಲ್ಲೆಂಬ ಅಂಶವನ್ನು ಕಾದಂಬರಿಯ ಕೆಲವು ಪಾತ್ರಗಳು ಮನಗಂಡಿವೆ.

ಸ್ವಾತಂತ್ರ್ಯ ಚಳುವಳಿಯು ಹಲವಾರು ರೂಪದಲ್ಲಿ ನಡೆಯುತ್ತದೆ. ಸಾಮಾನ್ಯವಾಗಿ ನಾವು ಸ್ವಾತಂತ್ರ್ಯ ಚಳುವಳಿಯೆಂದು ನೇರ ಹೋರಾಟವನ್ನು ಮಾತ್ರ ಪರಿಗಣಿಸುತ್ತೇವೆ. ಆದರೆ ನಿಜವಾದ ಅರ್ಥದಲ್ಲಿ ಚಳುವಳಿಯು ವಿವಿಧ ರೂಪದಲ್ಲಿ ನಡೆಯುತ್ತದೆ. ಕರಪತ್ರ ಹಂಚುವುದಕ್ಕೆ ಸಹಾಯ ಮಾಡಿದ ಗುಡ್ಡಗಾಡಿನ ಮಹಿಳೆಯರಿಂದ ಹಿಡಿದು ಭಗತ್‌ಸಿಂಗ್ ಸ್ಯಾಂಡರ್ಸ್ ಎಂಬ ಬ್ರಿಟಿಷ್ ಪೊಲೀಸ್ ಅಧಿಕಾರಿಗೆ ಗುಂಡಿಕ್ಕಿದಾಗ ತಪ್ಪಿಸಿಕೊಳ್ಳುವಲ್ಲಿ ಸಹಕರಿಸಿದ ಟಾಂಗವಾಲನವರೆಗೆ ಯಾರೂ ಇಲ್ಲಿ ಅಪ್ರಮುಖರಲ್ಲ. ಒಂದು ಮಹಾನ್ ಚಳುವಳಿಯಲ್ಲಿ ಇಂತಹ ಒಂದು ಸಾಮಾನ್ಯ ವಿಚಾರ ಕೂಡಾ ಮಹತ್ವದ್ದೇ ಆಗಿದೆ. ಹಲವಾರು ಪ್ರತ್ಯಕ್ಷ ಪರೋಕ್ಷ ಘಟನೆಗಳು ಚಳುವಳಿಯನ್ನು ಯಶಸ್ವಿಗೊಳಿಸಲು ಕಾರಣವಾಗಿವೆಯೆಂಬದನ್ನು ಕಾದಂಬರಿಗಳು ಉಲ್ಲೇಖಿಸಿವೆ. ಕಾದಂಬರಿಗಳು ಬೆಳಕು ಚೆಲ್ಲುವ ಈ ವಿಚಾರಗಳನ್ನು ಪ್ರಸ್ತುತ ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ.

ಇಡೀ ರಾಷ್ಟ್ರವನ್ನು ಒಗ್ಗೂಡಿಸಿ ಹಳ್ಳಿಯ ಮೂಲೆ ಮೂಲೆಗೂ ಚಳುವಳಿ ಹಬ್ಬುವುದಕ್ಕೆ ಕಾರಣರಾದವರು ಗಾಂಧೀಜಿ. ಗಾಂಧೀಜಿಯವರನ್ನು ಬೆಂಬಲಿಸುವ ಜನರಿದ್ದಂತೆ ಅವರ

ತತ್ವವನ್ನು ಒಪ್ಪದೇ ಇರುವ ಜನರೂ ಇದ್ದರು. ಆಶ್ಚರ್ಯದ ಸಂಗತಿಯೆಂದರೆ ಗಾಂಧೀಜಿಯನ್ನು ಬೆಂಬಲಿಸಿದವರಲ್ಲಿ ಬಹುಸಂಖ್ಯಾತರು ಬ್ರಾಹ್ಮಣರು, ಅದೇ ರೀತಿ ಅವರ ತತ್ವವನ್ನು ತೀವ್ರವಾಗಿ ವಿರೋಧಿಸುತ್ತಿದ್ದವರು ಕೂಡ ಬ್ರಾಹ್ಮಣರು. ಹೀಗೆ ಗಾಂಧೀಜಿಯ ಕುರಿತಾದ ಪರ-ವಿರೋಧ ವಿಚಾರಗಳನ್ನು ಕಾದಂಬರಿಗಳು ನೀಡುತ್ತಾ ಹೋಗುತ್ತವೆ. ಆದರೆ ಇಡೀ ದೇಶವನ್ನು ಒಗ್ಗೂಡಿಸುವ ಶಕ್ತಿಯಿದ್ದುದು ಮತ್ತು ಅವರ ಮಾತಿನಲ್ಲಿ ಅದೇನೊ ಸಮ್ಮೋಹಕ ಶಕ್ತಿಯೆತ್ತೆಂಬುದು ಅವರ ಶತ್ರುಗಳು ಕೂಡಾ ಒಪ್ಪುವ ಮಾತಾಗಿತ್ತೆಂಬುದನ್ನು ಕಾದಂಬರಿಗಳು ತಿಳಿಸುತ್ತವೆ.

ಹತ್ತೊಂಬತ್ತು-ಇಪ್ಪತ್ತನೇ ಶತಮಾನವು ದೇಶ ಹಿಂದೆಂದೂ ಕಂಡರಿಯದ ಸಂಕ್ರಮಣದ ಕಾಲ. ಇಂತಹ ಸಂಕ್ರಮಣಾವಸ್ಥೆಗೆ ಆಧುನಿಕ ವಿಧ್ಯಾಭ್ಯಾಸ ಒಂದು ಕಾರಣವಾದರೆ ಗಾಂಧೀಜಿಯ ವಿಧಾಯಕ ಕಾರ್ಯಕ್ರಮಗಳು ಇನ್ನೊಂದು ಕಾರಣ. ಹಲವಾರು ರೀತಿಯ ಸಾಮಾಜಿಕ ಪಲ್ಲಟಗಳನ್ನು ಕಾದಂಬರಿಗಳು ಗುರುತಿಸುತ್ತವೆ. ಸಂಸ್ಕೃತ ವಿದ್ಯೆಯ ಸ್ಥಾನವನ್ನು ಇಂಗ್ಲೀಷ್ ವಿದ್ಯೆ ವ್ಯಾಪಿಸುತ್ತದೆ. ಇನ್ನೊಂದು ಕಡೆಯಲ್ಲಿ ಇಂಗ್ಲೀಷ್ ವಿದ್ಯೆ ಪಡೆದವರೆಲ್ಲರಿಗೂ ಉದ್ಯೋಗ ಸಿಗುವುದಿಲ್ಲವೆಂದು ಯಾವ ವಿದ್ಯೆಯನ್ನೂ ಪಡೆದುಕೊಳ್ಳದ 'ಶತಮೂರ್ಖರ' ವರ್ಗವೊಂದು ನಿರ್ಮಾಣವಾಗುವುದರ ಕುರಿತು ಕಾದಂಬರಿ ವಿಷಾದ ವ್ಯಕ್ತಪಡಿಸುತ್ತದೆ. ಸ್ತ್ರೀಯರ, ದಲಿತರ ಸ್ಥಾನಮಾನದಲ್ಲಿ ಬದಲಾವಣೆ, ಉದಾರ ಮನೋಭಾವ, ಅಂತರ್ಜಾತಿ ವಿವಾಹಕ್ಕೆ ಕಟು ಸಂಪ್ರದಾಯ ಬ್ರಾಹ್ಮಣ ಕುಟುಂಬ ಕೂಡ ಒಪ್ಪಬೇಕಾದ ಅನಿವಾರ್ಯತೆ, ಹಳೆಯ ಸಂಪ್ರದಾಯವನ್ನು ಬಿಡಲೂ ಆಗದೆ, ಹೊಸದನ್ನು ಒಪ್ಪಿಕೊಳ್ಳಲೂ ಆಗದೆ ಇರುವವರ ತೊಳಲಾಟ- ಹೀಗೆ ಹಲವಾರು ಸಾಮಾಜಿಕ ಪಲ್ಲಟಗಳ ಕುರಿತು ಕಾದಂಬರಿಗಳು ಬೆಳಕು ಚೆಲ್ಲುತ್ತವೆ.

ಅದೇ ಸಂದರ್ಭದಲ್ಲಿ ಒಂದು ಕಡೆ ಸದ್ದಿಲ್ಲದೆ ಮತಾಂತರ ನಡೆಯುತ್ತಿರುತ್ತದೆ. ಈ ಮತಾಂತರ ನಡೆಯಲು ಕಾರಣವಾದ ಅಂಶಗಳು, ಮತಾಂತರಗೊಳಿಸಲು ಪಾದ್ರಿಗಳು ಉಪಯೋಗಿಸುತ್ತಲಿದ್ದ ತಂತ್ರಗಳು, ಕ್ರೈಸ್ತ ಧರ್ಮದಲ್ಲಿ ಮತಾಂತರಗೊಂಡ ಹಿಂದುಗಳ ಸ್ಥಾನ-ಮಾನ ಈ ಎಲ್ಲ ವಿಚಾರಗಳನ್ನು ವಿಶ್ಲೇಷಣೆಗೊಳಪಡಿಸುವ ಪ್ರಯತ್ನವನ್ನು ಕಾದಂಬರಿಗಳು ಮಾಡಿವೆ.

ತೀವ್ರವಾಗಿ ಹಬ್ಬಿಕೊಂಡು ಬ್ರಿಟಿಷರ ಎದೆಗುಂಡಿಗೆಯನ್ನು ನಡುಗಿಸುತ್ತಿದ್ದ ಸ್ವಾತಂತ್ರ್ಯ ಚಳುವಳಿಯನ್ನು ಹತ್ತಿಕ್ಕಲು ಬ್ರಿಟಿಷರು ನೆಚ್ಚಿಕೊಂಡದ್ದು ನಮ್ಮ ಭಾರತೀಯ ಪೋಲೀಸರನ್ನು. ಪೋಲೀಸರ ದೌರ್ಜನ್ಯವಂತೂ ಆ ಕಾಲದಲ್ಲಿ ಮೇರೆ ಮೀರಿತ್ತು. ಕೆಲಸದಲ್ಲಿ ಭಡ್ತಿ ಸಿಗಲು ಅವರ ಕ್ರೌರ್ಯವೇ ಮಾನದಂಡವಾಗಿತ್ತು. ಅಂದು ಸುಲಭವಾಗಿ ಸಿಗುತ್ತಿದ್ದ ನೌಕರಿಯೆಂದರೆ ಪೋಲೀಸ್ ಕೆಲಸ. ಇಂತಹ ಪೊಲೀಸರು ತಮ್ಮ ಸ್ವಾರ್ಥಕ್ಕೋಸ್ಕರ ತಮ್ಮ ಸಹೋದರರನ್ನೇ ಅತ್ಯಂತ ಹೇಯವಾಗಿ ನಡೆಸಿಕೊಳ್ಳುತ್ತಿದ್ದರು. ಪೊಲೀಸ್ ದೌರ್ಜನ್ಯದ ನರಕಯಾತನೆಯನ್ನು

ಕಾದಂಬರಿಗಳು ಕಣ್ಣಿಗೆ ಕಟ್ಟುವಂತೆ ವಿವರಿಸುತ್ತವೆ. ಪೊಲೀಸರಿಂದ ಹೆಣ್ಣುಮಕ್ಕಳ ಅತ್ಯಾಚಾರವಂತೂ ಸಾಮಾನ್ಯ ಸಂಗತಿಯಾಗಿತ್ತು. ಚಳುವಳಿಯನ್ನು ಹತ್ತಿಕ್ಕಲು ಪೊಲೀಸರೇ ದರೋಡೆಕೋರರ ಸಹಾಯವನ್ನು ಯಾಚಿಸಿದ ಉದಾಹರಣೆಗಳನ್ನು ಕೂಡ ಕಾದಂಬರಿಗಳು ನಮಗೆ ತಿಳಿಸಿಕೊಡುತ್ತವೆ.

ಆದರೆ ಅಪರೂಪಕ್ಕೊಮ್ಮೆ ಕೆಲವೊಬ್ಬರು ಮಾನವೀಯತೆಯುಳ್ಳ ಪೊಲೀಸರೂ ಇದ್ದರು. ಕೆಲವೊಂದು ಪೊಲೀಸ್ ಅದಿಕಾರಿಗಳೇ ತಮ್ಮ ಮನೆಯಲ್ಲಿ ಭೂಗತ ಹೋರಾಟಗಾರರಿಗೆ ಆಶ್ರಯ ನೀಡಿದ ನಿದರ್ಶನಗಳನ್ನು ಕಾದಂಬರಿಗಳು ತಿಳಿಸುತ್ತವೆ. ಚಳುವಳಿಯ ಪರವಾಗಿದ್ದ ಸರಕಾರಿ ನೌಕರರೇ ಬ್ರಿಟಿಷ್ ಸರಕಾರದ ಕೆಲವೊಂದು ಗುಪ್ತ ಮಾಹಿತಿಯನ್ನು ಚಳುವಳಿಗಾರರಿಗೆ ನೀಡುತ್ತಿದ್ದರು.

## ಅಧ್ಯಯನದ ಉದ್ದೇಶ

ಇಡೀ ದೇಶದಲ್ಲೇ ಭುಗಿಲೆದ್ದ ಸ್ವಾತಂತ್ರ್ಯ ಚಳುವಳಿಗೆ ಸಾಹಿತ್ಯ, ಅದರಲ್ಲೂ ಜನಪ್ರಿಯವಾದ ಕಾದಂಬರಿಯಂತಹ ಮಾಧ್ಯಮವೊಂದು ಪ್ರತಿಕ್ರಿಯಿಸದಿರಲು ಸಾಧ್ಯವೇ? ಕನ್ನಡ ಕಾದಂಬರಿಗಳು, ನಮ್ಮ ಕನ್ನಡದ ಸಾಹಿತಿಗಳು ಸ್ವಾತಂತ್ರ್ಯ ಚಳುವಳಿಯಂತಹ ಒಂದು ಮಹಾಕ್ರಾಂತಿಗೆ ಯಾವ ರೀತಿಯಲ್ಲಿ ಸ್ಪಂದಿಸಿದ್ದಾರೆ ಎಂಬುದನ್ನು ಈ ಪ್ರಬಂಧದಲ್ಲಿ ಚರ್ಚಿಸಲಾಗುತ್ತದೆ. ಸ್ವಾತಂತ್ರ್ಯ ಚಳುವಳಿಯೊಂದು ಐತಿಹಾಸಿಕ ಘಟನೆ.

ಈ ಚಳುವಳಿಯ ಆಳ, ವಿಸ್ತಾರದ ಕುರಿತು ಮಾಹಿತಿಯನ್ನು ನೀಡುವ ಅಸಂಖ್ಯಾತ ಚಾರಿತ್ರಿಕ ಪುಸ್ತಕಗಳು ಹಲವಾರು ಭಾಷೆಗಳಲ್ಲಿ ಜಗತ್ತಿನಾದ್ಯಂತ ಲಭ್ಯವಿವೆ. ಆದರೆ ಆ ಚರಿತ್ರೆಗೆ ಸಂಬಂಧಿಸಿದ ಕೃತಿಗಳು ಕಟ್ಟಿಕೊಡುವುದಕ್ಕಿಂತ ಭಿನ್ನವಾದ ಚಿತ್ರಣವನ್ನು ಕನ್ನಡ ಕಾದಂಬರಿಗಳು ಕಟ್ಟಿಕೊಡುತ್ತಿವೆಯೇ? ಸ್ವಾತಂತ್ರ್ಯದಂತಹ ಒಂದು ಮಹಾಘಟನೆಗೆ ಜನಸಾಮಾನ್ಯರ ಮಹಿಳೆಯರ ಪ್ರತಿಕ್ರಿಯೆ ಏನು? ಅಂದಿನ ಸಾಮಾಜಿಕ ವ್ಯವಸ್ಥೆ ಹೇಗಿತ್ತು? ಈ ಕುರಿತಾದ ವಿಚಾರಗಳ ಬಗ್ಗೆ ಕಾದಂಬರಿಗಳು ಬೆಳಕು ಚೆಲ್ಲುತ್ತವೆಯೇ? ಎಂಬದನ್ನು ಅಧ್ಯಯನ ಮಾಡಲಾಗುತ್ತದೆ.

ಸ್ವಾತಂತ್ರ್ಯ ಹೋರಾಟದಲ್ಲಿ ಕರ್ನಾಟಕ ಕೂಡಾ ಪ್ರಮುಖ ಪಾತ್ರವನ್ನು ವಹಿಸಿದೆ. ಕರನಿರಾಕರಣೆ, ಉಪ್ಪಿನ ಸತ್ಯಾಗ್ರಹ, ಕ್ವಿಟ್ ಇಂಡಿಯಾ ಚಳುವಳಿ, ಇವುಗಳಲ್ಲಿ ಕರ್ನಾಟಕದ ಜನತೆಯ ಕುರಿತು ಕಾದಂಬರಿಗಳಲ್ಲಿ ಕಂಡು ಬರುವ ವಿವರಗಳನ್ನು ಚರ್ಚಿಸಲಾಗುತ್ತದೆ. ಸ್ವಾತಂತ್ರ್ಯ ಚಳುವಳಿಯ ಸಮಯದಲ್ಲೇ ನಿಧಾನವಾಗಿ ನಮ್ಮ ದೇಶದಲ್ಲಿ ಒಂದು ಕಡೆ ಮತಾಂತರ, ಇನ್ನೊಂದು ಕಡೆ ಕೋಮುವಾದವು ಬೆಳೆಯುತ್ತಾ ಹೋಗುತ್ತವೆ. ಕಾದಂಬರಿಗಳು ಇಂತಹ ಸೂಕ್ಷ್ಮ ಪ್ರಶ್ನೆಯನ್ನು ಯಾವ ರೀತಿಯಲ್ಲಿ ವಿಶ್ಲೇಷಿಸಿದೆಂಬುದನ್ನು ಈ ಆಧ್ಯಯನದಲ್ಲಿ ನೋಡಲಾಗುತ್ತದೆ.

ಸ್ವಾತಂತ್ರ್ಯ ಚಳುವಳಿ ಎಂಬುದು ನೂರಾರು ಸಣ್ಣ ಹಾಗೂ ಮಹಾನ್ ಘಟನೆಗಳ ಸಂಗಮ. ಇಡೀ ದೇಶವನ್ನೇ ಯಾಕೆ? ಇಡೀ ವಿಶ್ವದ ಜನತೆಯನ್ನೇ ತಲ್ಲಣಗೊಳಿಸಿದ

ಯೋಚನೆಗೆ ಹಚ್ಚಿದಂತಹ ಒಂದು ಮಹಾಕ್ರಾಂತಿ. ಈ ಹೋರಾಟವು ಸುಸಂಸ್ಕೃತರೆನಿಸಿಕೊಂಡ ಬ್ರಿಟಿಷರ ದೌರ್ಜನ್ಯದ ಕ್ರೂರ ಮುಖವನ್ನು ಇಡೀ ಜಗತ್ತಿಗೆ ಪರಿಚಯಿಸುತ್ತದೆ. ಇಂತಹ ಕ್ರಾಂತಿಯನ್ನು ಕನ್ನಡದ ಕಾದಂಬರಿಗಳು ಹೇಗೆ ಗ್ರಹಿಸಿವೆ ಎಂಬುದನ್ನು ಪ್ರಸ್ತುತ ಅಧ್ಯಯನಕ್ಕೆ ಒಳಪಡಿಸುವುದು ಈ ನಿಬಂಧದ ಉದ್ದೇಶವಾಗಿದೆ.

## ಅಧ್ಯಯನದ ವ್ಯಾಪ್ತಿ

ಸಾಮಾನ್ಯವಾಗಿ ೧೮೫೭ರಲ್ಲಿ ನಡೆದ, ಬ್ರಿಟಿಷರು ಸಿಪಾಯಿದಂಗೆಯೆಂದು ಕರೆದ ಸಂಘಟಿತ ಹೋರಾಟವನ್ನೇ ನಾವು ಪ್ರಥಮ ಸ್ವಾತಂತ್ರ್ಯ ಸಂಗ್ರಾಮವೆಂದು ಗ್ರಹಿಸುತ್ತೇವೆ. ಆದರೂ ಅದಕ್ಕಿಂತ ಮೊದಲು ಕೂಡಾ ದಕ್ಷಿಣ ಭಾರತಲ್ಲಿ ಬ್ರಿಟಿಷರ ವಿರುದ್ಧ ಹೋರಾಟಗಳು ನಡೆದಿವೆ. ೧೭೯೨ರಿಂದ ೧೭೯೮ರವರೆಗೆ ಅಂದರೆ ಸುಮಾರು ೬ ವರ್ಷಗಳವರೆಗೆ ಪಾಂಚಾಲಕುರುಚಿಯ ದೊರೆ ವೀರಪಾಂಡ್ಯ ಕಟ್ಟಬೊಮ್ಮು ಬ್ರಿಟಿಷರಿಗೆ ಕಪ್ಪವನ್ನು ನಿರಾಕರಿಸಿ ಅವರಿಗೆ ಸಿಂಹಸ್ವಪ್ನವಾಗಿ ಕಾಡಿದ್ದನು. ಈ ಘಟನೆಯ ಕುರಿತಾಗಿ ಮತ್ತೂರು ಕೃಷ್ಣಮೂರ್ತಿಯವರು 'ವೀರಪಾಂಡ್ಯ ಕಟ್ಟಬೊಮ್ಮು' ಎಂಬ ಕಾದಂಬರಿಯನ್ನು ರಚಿಸಿದ್ದಾರೆ. ೧೮೩೬ರಲ್ಲಿ ಕೊಡಗಿನ ದೊರೆ ಚಿಕವೀರರಾಜನನ್ನು ಬ್ರಿಟಿಷರು ಪದಚ್ಯುತಗೊಳಿಸುತ್ತಾರೆ. 'ಸ್ವಾಮಿ ಅಪರಾಂಪರ' ನೆಂಬ ಒಬ್ಬ ಜಂಗಮ ಸ್ವಾಮಿಯು ಬ್ರಿಟಿಷರನ್ನು ಓಡಿಸಿ ಪದಚ್ಯುತ ರಾಜನನ್ನು ಮರಳಿ ಸಿಂಹಾಸನದಲ್ಲಿ ಸ್ಥಾಪಿಸಲು ಜನಸಂಘಟನೆಯಲ್ಲಿ ತೊಡಗುತ್ತಾನೆ. ಆದರೆ ಇವನನ್ನು ಬ್ರಿಟಿಷರು ಬಂಧಿಸುತ್ತಾರೆ. ಅನಂತರ 'ಕಲ್ಯಾಣಸಾಮಿ' ಎಂಬ ಮುಖಂಡನನ್ನು ರಾಜವಂಶಸ್ಥನೆಂದು ಬಿಂಬಿಸಿ ವ್ಯವಸ್ಥಿತವಾದ ಸಂಘಟನೆಯನ್ನು ಕೊಡಗಿನ ಕೆಲವು ರಾಜಭಕ್ತರು ಮಾಡುತ್ತಾರೆ. ಈ ಎರಡೂ ಘಟನೆಗಳು ಕೂಡಾ ಬ್ರಿಟಿಷರನ್ನು ಭಾರತದಿಂದ ಓಡಿಸಲು ನಡೆಸಲಾದ ವ್ಯವಸ್ಥಿತವಾದ ಹೋರಾಟವಾಗಿವೆ. ಕೊಡಗಿನ ಘಟನೆಯನ್ನು ಕುರಿತಂತೆ ನಿರಂಜನರು 'ಸ್ವಾಮಿ ಅಪರಾಂಪರ' ಮತ್ತು 'ಕಲ್ಯಾಣ ಸ್ವಾಮಿ' ಎಂಬ ಎರಡು ಕಾದಂಬರಿಗಳನ್ನು ರಚಿಸಿದ್ದಾರೆ. ಆದುದರಿಂದ ಮೇಲೆ ಹೇಳಿದ ಈ ಮೂರೂ ಕಾದಂಬರಿಗಳನ್ನು ಕೂಡ ನನ್ನ ಅಧ್ಯಯನದ ವ್ಯಾಪ್ತಿಗೆ ಒಳಪಡಿಸಲಾಗಿದೆ. ೧೭೯೨ರಿಂದ ೧೯೪೭ರವರೆಗೆ ನಡೆದ ಬ್ರಿಟಿಷರ ವಿರುದ್ಧದ ಹೋರಾಟದ ಮತ್ತು ಸ್ವಾತಂತ್ರ್ಯಚಳುವಳಿಯ ವಸ್ತುವನ್ನೊಳಗೊಂಡ ಉಪಲಬ್ಧವಿರುವ ಎಲ್ಲಾ ಪ್ರಮುಖ ಕಾದಂಬರಿಗಳನ್ನು ಈ ಅಧ್ಯಯನದಲ್ಲಿ ಚರ್ಚಿಸಲಾಗಿದೆ.

## ಅಧ್ಯಯನದ ತಾತ್ವಿಕತೆ

ಸ್ವಾತಂತ್ರ್ಯ ಚಳುವಳಿಗೆ ಸಂಬಂಧಿಸಿದ ಹಾಗೆ ಕನ್ನಡದಲ್ಲಿ ಸುಮಾರು ಮೂವತ್ತು ಕಾದಂಬರಿಗಳು ಉಪಲಬ್ಧ ಇವೆ. ಸ್ವಾತಂತ್ರ್ಯ ಹೋರಾಟದ ಚಿತ್ರಣವನ್ನು ನೀಡುವ ಬಿಡಿ ಬಿಡಿ ಬರಹಗಳಿಂದ ಹಿಡಿದು ಸರಣಿ ಸಂಪುಟಗಳವರೆಗೆ ವಿಸ್ತಾರವಾದ ಬರವಣಿಗೆಗಳಿವೆ. ಇವುಗಳ ಮೂಲಕ ಸ್ವಾತಂತ್ರ್ಯ ಚಳುವಳಿಯ ಕುರಿತಾದ ಒಂದು ಬಗೆಯ ಜ್ಞಾನ ನಮ್ಮಲ್ಲಿ ಮೂಡಿದೆ.

ಇದನ್ನು ಆಧರಿಸಿ ಅನೇಕ ಪಠ್ಯ ಪುಸ್ತಕಗಳು, ಜನಪ್ರಿಯ ಪುಸ್ತಕಗಳು ಮುದ್ರಣಗೊಂಡಿವೆ. ಸ್ವಾತಂತ್ರ್ಯ ಚಳುವಳಿಯ ಸಂದರ್ಭದಲ್ಲಿ ಪಾಲ್ಗೊಂಡ ನಮ್ಮ ಹಿರಿಯರಿಗೆ, ಸ್ವಾತಂತ್ರ್ಯ ಹೋರಾಟಗಾರರಿಗೆ, ಜನಸಾಮಾನ್ಯರಿಗೆ ಅಂದಿನ ಕಾಲದ ಒತ್ತಡದ ಹಿನ್ನೆಲೆಯಲ್ಲಿ ಇವುಗಳನ್ನು ಪರಾಮರ್ಶಿಸುವ ವ್ಯವಧಾನವಾಗಲಿ, ಅಗತ್ಯವಾಗಲಿ ಇರಲಿಲ್ಲ. ಆದರೆ ಭಾರತೀಯರ ಭೌಗೋಳಿಕ, ಚಾರಿತ್ರಿಕ, ಸಾಂಸ್ಕೃತಿಕ ಹಾಗೂ ರಾಜಕೀಯ ಸನ್ನಿವೇಶಗಳಲ್ಲಿ ಘಟಿಸಿಹೋದ ಈ ಐತಿಹಾಸಿಕ ಘಟನೆ ಮತ್ತೆ ಮತ್ತೆ ಕಾಡುವುದು ಸುಳ್ಳಲ್ಲ. ಮರಳಿ ಮರಳಿ ಬರುವ ಸ್ವಾತಂತ್ರ್ಯ ದಿನಾಚರಣೆಗಳು, ಈಗ ಬದುಕಿರುವ ಸ್ವಾತಂತ್ರ್ಯಯೋಧರ ಅನುಭವಗಳು, ದೇಶಭಕ್ತಿಗೆ ಸಂಬಂಧಿಸಿದ ಹಾಗೆ ಇರುವ ಆರೋಪ ಪ್ರತ್ಯಾರೋಪಗಳು, ದೇಶಭಕ್ತಿಯ ಉನ್ಮತ್ತ ಭಾವನೆಗಳು, ದೇಶದಲ್ಲಿ ಉಂಟಾಗುತ್ತಿರುವ ಕೋಮುವಾದಿ ಮತ್ತು ಮೂಲಭೂತವಾದಿಗಳ ಚಟುವಟಿಕೆಗಳು ಸ್ವಾತಂತ್ರ್ಯ ಹೋರಾಟದ ಸ್ಮೃತಿಯನ್ನು ನಮಗೆ ತರುತ್ತಲೇ ಇರುತ್ತವೆ. ಹಾಗಿದ್ದಾಗ ವರ್ತಮಾನದಲ್ಲಿ ಬದುಕುತ್ತಿರುವ ಭಾರತೀಯರು ವಿವಿಧ ಸಂದರ್ಭಗಳಲ್ಲಿ ಇದಕ್ಕೆ ಮುಖಾಮುಖಿ ಆಗುತ್ತಲೇ ಇರುತ್ತಾರೆ.

ಇದು ಜನಸಾಮಾನ್ಯರಿಗೆ ಸಂಬಂಧಿಸಿದ ವಿಷಯಗಳಾದರೆ ಅಧ್ಯಯನಶೀಲರು ಇನ್ನೊಂದು ರೀತಿಯಲ್ಲಿ ಈ ವಿಷಯಗಳಿಗೆ ಮುಖಾಮುಖಿಯಾಗುತ್ತಾರೆ. ಆಗಲೇ ಹೇಳಿದಂತೆ ಸ್ವಾತಂತ್ರ್ಯ ಚಳುವಳಿಯಲ್ಲಿ ಪಾಲ್ಗೊಂಡ ಹಿರಿಯರಿಗೆ ಅದನ್ನು ವಿಮರ್ಶಿಸುವ ಅಗತ್ಯ ಕಂಡುಬರಲಿಲ್ಲವಾದರೂ ಅಧ್ಯಯನಕಾರರಿಗೆ ಈ ಘಟನೆಯು ವಿಪುಲವಾದ ಅವಕಾಶವಾಗಿ ಕಂಡುಬರುತ್ತದೆ. ಯಾವುದೇ ಘಟನೆಯೊಂದು ಘಟಿಸಿದ ಮೇಲೆ ಅದು ಮುಂದಿನ ಪೀಳಿಗೆಯವರಿಗೆ ಅಧ್ಯಯನದ ವಸ್ತುವಾಗುವುದು ಮನುಷ್ಯ ಸಂಸ್ಕೃತಿಯ ಆಶ್ಚರ್ಯಕರವಾದ ಘಟನೆಗಳಲ್ಲಿ ಒಂದು ಪ್ರಮುಖ ಸಂಗತಿಯೇ ಆಗಿರುತ್ತದೆ. ಏಕೆಂದರೆ ಮನುಷ್ಯರಿಗೆ ನೆನಪಿನ ಶಕ್ತಿ ನಿಸರ್ಗದತ್ತವಾಗಿ ಬಂದಿರುವ ಕೊಡುಗೆಯಾಗಿದೆ. ಆದುದರಿಂದ ಘಟನೆಗಳನ್ನು ಮತ್ತೆ ನಮ್ಮ ಮನಃಪಟಲದಲ್ಲಿ ಘಟಿಸುವ ಹಾಗೆ ಮಾಡುವುದು ಮತ್ತು ಅದನ್ನು ನೆನಪಿನಲ್ಲಿಟ್ಟುಕೊಳ್ಳುವುದಕ್ಕೆ ಸಾಧ್ಯಮಾಡುವುದು ಮನಷ್ಯರ ವಿಶಿಷ್ಟ ಶಕ್ತಿಯಾಗಿದೆ. ಘಟನೆಯೊಂದು ನಡೆದಾಗ ಆ ಕಾಲಘಟ್ಟದಲ್ಲಿದ್ದವರು ಅದನ್ನು ಸಾಕ್ಷೀಕರಿಸುತ್ತಾರೆ. ಘಟನೆಯೊಂದು ಘಟಿಸಿಹೋದ ಮೇಲೆ ಅನಂತರದ ಪೀಳಿಗೆಯವರು ಅದನ್ನು ನೆನಪಿಟ್ಟುಕೊಂಡು ಅಭಿವ್ಯಕ್ತಿಸುತ್ತಾರೆ. ಸ್ವಾತಂತ್ರ್ಯ ಚಳುವಳಿಗೆ ಸಂಬಂಧಿಸಿದಂತೆ ಇಲ್ಲಿ ಎರಡು ಪ್ರಕ್ರಿಯೆಗಳು ನಡೆದಿವೆ. ಈ ಪ್ರಕ್ರಿಯೆಗಳ ಅನ್ವಯ ನಿರ್ದಿಷ್ಟವಾಗಿ ಸ್ವಾತಂತ್ರ್ಯ ಚಳುವಳಿಯ ಬಗೆಗೆ ಲೇಖಕರ ದೃಷ್ಟಿಕೋನವನ್ನು ಕಂಡುಕೊಳ್ಳುವುದು ಇಲ್ಲಿನ ಮುಖ್ಯ ಕಾಳಜಿಯಾಗಿದೆ.

ಸ್ವಾತಂತ್ರ್ಯ ಚಳುವಳಿಗೆ ಸಂಬಂಧಿಸಿದಂತೆ ಕನ್ನಡ ಕಾದಂಬರಿಗಳನ್ನು ಈ ಹಿನ್ನಲೆಯಲ್ಲಿ ಅಧ್ಯಯನಮಾಡುವುದು ಸೂಕ್ತವೆನಿಸುತ್ತದೆ. ಸಾಮಾನ್ಯವಾಗಿ ಸ್ವಾತಂತ್ರ್ಯ ಚಳುವಳಿಗೆ ಸಂಬಂಧಿಸಿದಂತೆ ಬಂದಿರುವ ಇತಿಹಾಸದ ಪಠ್ಯಪುಸ್ತಕಗಳು, ಕೆಲವು ಸಿದ್ಧಮಾದರಿಗಳನ್ನು ನಮ್ಮ ಮುಂದೆ ಪ್ರಕಟಪಡಿಸುತ್ತವೆ. ಅವುಗಳೆಂದರೆ ಸ್ವಾತಂತ್ರ್ಯ ಚಳುವಳಿಯು ಉತ್ತರ ಭಾರತದಲ್ಲಿ

ವ್ಯಾಪಕವಾಗಿ ನಡೆಯಿತು, 1857ರ ಪ್ರಥಮ ಸ್ವಾತಂತ್ರ್ಯ ಸಂಗ್ರಾಮವು ಬ್ರಿಟಿಷರ ವಿರುದ್ಧ ನಡೆದ ವ್ಯವಸ್ಥಿತವಾದ ಹೊರಾಟ, ಗಾಂಧೀಜಿಯವರ ಮುಖಂಡತ್ವದಲ್ಲಿ ನಡೆದ ಅಹಿಂಸಾತ್ಮಕ ಹೋರಾಟದಿಂದಲೇ ಬ್ರಿಟಿಷರು ನಮಗೆ ಸ್ವಾತಂತ್ರ್ಯ ಕೊಟ್ಟರು, ಕೆಲವೇ ಕೆಲವು ಮುಖಂಡರು ಈ ಹೋರಾಟದ ಮುಂಚೂಣಿಯಲ್ಲಿದ್ದರು, ಭಗತ್ ಸಿಂಗ್ ನಂತಹ ಕೆಲವು ಮಂದಿ ವೀರರು ಬ್ರಿಟಿಷರ ವಿರುದ್ಧ ಹೋರಾಡಿ ಗಲ್ಲುಗಂಬವನ್ನೇರಿದ ಹುತಾತ್ಮರು, ಸ್ವಾತಂತ್ರ್ಯ ಹೋರಾಟವು ಭಾರತದ ಒಳಗಡೆ ಮಾತ್ರ ನಡೆಯಿತು ಇತ್ಯಾದಿ. ಆದರೆ ಇದರಿಂದ ಏನು ಹೇಳಿದಂತಾಯಿತು? ಈ ಸಿದ್ಧಮಾದರಿಗಳನ್ನು ಹೀಗೆ ಮುಂದುವರಿಸಿದರೆ ಸ್ವಾತಂತ್ರ್ಯ ಚಳುವಳಿಯನ್ನು ನಾವು ಅರ್ಥಮಾಡಿಕೊಳ್ಳುವುದಾದರೂ ಹೇಗೆ? ಮೊದಲಾದ ಪ್ರಶ್ನೆಗಳು ಉತ್ತರವಿಲ್ಲದೆ ಹಾಗೆಯೇ ಉಳಿಯುತ್ತವೆ. ಕನ್ನಡ ಕಾದಂಬರಿಗಳು ಇಂತಹ ಸಿದ್ಧಮಾದರಿಗಳನ್ನು ಬೇರೆ ರೀತಿಯಾಗಿ ಅರ್ಥಮಾಡಿಕೊಳ್ಳುವುದಕ್ಕೆ ನಮಗೆ ನೆರವಾಗುತ್ತವೆ.

ಇತಿಹಾಸವು ಕಾಲದೇಶ ಬದ್ಧವಾದುದು, ಅಂದರೆ ಒಂದು ನಿರ್ಧಿಷ್ಟವಾದ ಘಟನೆಯನ್ನು ನಿರ್ಧಿಷ್ಟವಾದ ಕಾಲದಲ್ಲಿ ಸೂಕ್ತವಾದ ಆಧಾರಗಳ ಜೊತೆಗೆ ಹೇಳಿದಾಗ ಅದು ಇತಿಹಾಸವಾಗುತ್ತದೆ. ಅದು ಇತಿಹಾಸದ ಸ್ಥೂಲವಾದ ಗುಣಲಕ್ಷಣವಾಗಿದೆ. ಆದರೆ ಸಾಹಿತ್ಯ ಕೃತಿಗಳು ಹಾಗಲ್ಲ. ಅವು ಕಾಲ ದೇಶಾತೀತವಾದುದು. ಅಂದರೆ ಸಾಹಿತ್ಯ ಕೃತಿಗಳು ಯಾವ ನಿರ್ಧಿಷ್ಟವಾದ ಸ್ಥಳ ಮತ್ತು ಕಾಲಗಳಿಗೆ ಸೀಮಿತವಾಗಿ ಉಳಿಯುವುದಿಲ್ಲ. ಈ ಕಾರಣದಿಂದಲೇ 10ನೇ ಶತಮಾನದ ಮಹಾಕಾವ್ಯಗಳನ್ನು ಈಗಲೂ ನಾವು ನಮ್ಮ ಕಾಲದ ಕೃತಿಗಳಾಗಿ ಓದಲು ಸಾಧ್ಯ. ಹಾಗೆಯೇ ಅವುಗಳನ್ನು ಜಗತ್ತಿನ ಯಾವುದೇ ಭಾಷೆಗಳಿಗೆ ಅನುವಾದಿಸಿದಾಗ ಆ ಭಾಷೆ ಮತ್ತು ಸಂಸ್ಕೃತಿಯ ಜನ ತಮ್ಮದೇ ಅನುಭವ ಎನ್ನುವಂತೆ ಅವುಗಳನ್ನು ಸ್ವೀಕರಿಸಲು ಸಾಧ್ಯ. ಹಾಗಾದುದರಿಂದ ಸಾಹಿತ್ಯ ಕೃತಿಗಳಿಗೆ ಇತಿಹಾಸದ ಹಾಗೆ ಕಾಲದೇಶದ ನಿರ್ಧಿಷ್ಟತೆಯ ಚೌಕಟ್ಟು ಅನ್ವಯವಾಗುವುದಿಲ್ಲ. ಈ ದೃಷ್ಟಿಕೋನದ ಹಿನ್ನಲೆಯಲ್ಲಿ ಪ್ರಸ್ತುತ ನಿಬಂಧವನ್ನು ರೂಪಿಸಲಾಗಿದೆ. ಅಂದರೆ ಕನ್ನಡದ ಕಾದಂಬರಿಗಳು ಸ್ವಾತಂತ್ರ್ಯ ಚಳುವಳಿಗೆ ಸಂಬಂಧಿಸಿದ ಹಾಗೆ ಐತಿಹಾಸಿಕ ಘಟನೆಯನ್ನು ನಿರೂಪಿಸುತ್ತವೆ ಎಂದಾಗಲಿ, ಮತ್ತು ಈ ಕಾದಂಬರಿಗಳು ಈಗ ಬಂದಿರುವ ಐತಿಹಾಸಿಕ ಕೃತಿಗಳಿಗಿಂತ ಅಧಿಕೃತವಾದುವು ಎಂಬ ನಿಲುವಾಗಲಿ ಪ್ರಸ್ತುತ ಪ್ರಬಂಧದ ಹಿನ್ನಲೆಯಲ್ಲಿ ಇಲ್ಲ.

ಸಾಹಿತ್ಯ ಕೃತಿಗಳು ದಾಖಲೆಯ ಯಥಾವತ್ತಾದ ನಿರೂಪಣೆಗಳಲ್ಲ. ಅದು ಇತಿಹಾಸದ ದೃಷ್ಟಿಕೋನವಾಗಿರಲು ಅಷ್ಟೇ ಸಾಧ್ಯ. ಸಾಹಿತ್ಯಕೃತಿಗಳು ಭಾಷೆಯ ಮೂಲಕ ರೂಪುಗೊಳ್ಳುವುದರಿಂದ, ಭಾಷೆಯಲ್ಲಿ ನಮ್ಮ ಭಾವನೆಗಳೂ ಅಭಿವ್ಯಕ್ತಗೊಳ್ಳುವುದರಿಂದ ಸಹಜವಾಗಿಯೇ ಸಾಹಿತ್ಯಕೃತಿಗಳು ಭಾವನೆಗೆ ಸಂಬಂಧಿಸಿದ ರಚನೆಗಳೂ ಹೌದು. ಇನ್ನೊಂದು ಮಾತಿನಲ್ಲಿ ಹೇಳುವುದಿದ್ದರೆ ಸಾಹಿತ್ಯ ಕೃತಿಗಳಲ್ಲಿ ಮನುಷ್ಯರ ಭಾವನೆಗಳು ಸಜೀವವಾಗಿ ಪ್ರಕಟಗೊಳ್ಳುತ್ತವೆ. ಇತಿಹಾಸದಲ್ಲಿ ಅದು ಸಾಧ್ಯವಿಲ್ಲ. ಅಂದರೆ ಕಾದಂಬರಿಗಳಲ್ಲಿ ಮನಸ್ಸಿನ ಪಾತ್ರ ಬಹಳ ಮುಖ್ಯವಾಗುತ್ತದೆ. ಈ ಹಿನ್ನಲೆಯಲ್ಲಿ ಹೇಳುವುದಾದರೆ ಸ್ವಾತಂತ್ರ್ಯ ಚಳುವಳಿಗೆ

ಸಂಬಂಧಿಸಿದ ಕಾದಂಬರಿಗಳಲ್ಲಿ ಆ ಕಾಲಘಟ್ಟದ ಜನರ ಮನಸ್ಸು ಹಾಗೂ ಭಾವನೆಗಳನ್ನು ನಾವು ಗಮನಿಸಬಹುದಾಗಿದೆ. ಸ್ವಾತಂತ್ರ್ಯ ಚಳುವಳಿಯನ್ನು ಅಂದಿನ ಕಾಲದ ಕನ್ನಡಿಗರು ಹೇಗೆ ಭಾವಿಸುತ್ತಿದ್ದರು ಎನ್ನುವುದರ ದಟ್ಟವಾದ ವಿವರಗಳು ಕನ್ನಡ ಕಾದಂಬರಿಗಳಲ್ಲಿ ಕಂಡುಬರುತ್ತವೆ.

ಇದರ ಬದಲಾಗಿ ಇತಿಹಾಸ ಕೃತಿಗಳಲ್ಲಿ ಸ್ವಾತಂತ್ರ್ಯ ಚಳುವಳಿಯು ಒಂದು ವಸ್ತುವಾಗಿ ಮಾತ್ರ ನಿರೂಪಣೆಯಾಗಿರುತ್ತದೆ. ಪ್ರಸ್ತುತ ಅಧ್ಯಯನವು ಹೀಗೆ ಚಳುವಳಿಯೊಂದು ವಸ್ತುರೂಪವಾಗಿ ಮತ್ತು ಮನಷ್ಯರ ಭಾವನೆಯ ರೂಪದಲ್ಲಿ ಅಭಿವ್ಯಕ್ತಿಗೊಂಡಾಗ ಆಗುವ ಬದಲಾವಣೆಗಳನ್ನು ಅರ್ಥಮಾಡಿಕೊಳ್ಳುವ ಪ್ರಯತ್ನವಾಗಿದೆ. ಹೀಗೆ ಹೇಳಿದ ತಕ್ಷಣ ಸ್ವಾತಂತ್ರ್ಯ ಚಳುವಳಿಗೆ ಸಂಬಂಧಿಸಿದ ಹಾಗೆ ಕನ್ನಡದಲ್ಲಿ ಬಂದಿರುವ ಕಾದಂಬರಿಗಳಲ್ಲಿ ಇತಿಹಾಸದ ಯಾವುದೇ ಘಟನೆಗಳು ನಿರೂಪಣೆಯಾಗಿಲ್ಲವೆಂದಾಗಲಿ, ಕನ್ನಡ ಕಾದಂಬರಿಗಳೆಲ್ಲವೂ ಕೇವಲ ಕಾಲ್ಪನಿಕವೆಂದಾಗಲಿ ಹೇಳಲು ಬರುವುದಿಲ್ಲ. ಉದಾ:- ನಿರಂಜನರ 'ಚಿರಸ್ಮರಣೆ' ಕಾದಂಬರಿಯು ಮೊದಲ ಬಾರಿಗೆ ಕನ್ನಡದಲ್ಲಿ 'ಕಯ್ಯೂರ ರೈತ' ಹೋರಾಟದ ಬಗೆಗೆ ಬೆಳಕು ಚೆಲ್ಲುತ್ತದೆ. ಇದು ಕನ್ನಡದಲ್ಲಿ ಮಾತ್ರವಲ್ಲ, ಕೇರಳದಲ್ಲಿಯೂ ಜನಪ್ರಿಯವಾದ ಕಾದಂಬರಿಯಾಗಿದೆ. ಯಾಕೆಂದರೆ ಮಲಿಯಾಳ ಭಾಷೆಯಲ್ಲಿಯೂ ಕೂಡಾ ನಿರಂಜನರಿಗಿಂತ ಪೂರ್ವದಲ್ಲಿ ಈ ವಸ್ತುವನ್ನು ಕುರಿತು ಇತಿಹಾಸ ರಚನೆಯಾಗಲಿ ಸೃಜನಶೀಲ ಬರವಣಿಗೆಯಾಗಲಿ ಕಂಡು ಬರುವುದಿಲ್ಲ. ಕನ್ನಡದಲ್ಲಿಯೂ ನಿರಂಜನರ 'ಚಿರಸ್ಮರಣೆ' ಕಾದಂಬರಿಯ ಬಳಿಕವೇ ಕಯ್ಯೂರು ರೈತ ಹೋರಾಟದ ಬಗೆಗೆ ನಮಗೆ ಅರಿವು ಉಂಟಾಗಿರುವುದು. ಹಾಗೆಯೇ ಅವರ 'ಕಲ್ಯಾಣಸ್ವಾಮಿ' ಕಾದಂಬರಿಗೆ ಸಾಹಿತ್ಯ ಕೃತಿಯಾಗಿ ಐತಿಹಾಸಿಕ ಮಹತ್ವವಿದೆ. ಏಕೆಂದರೆ ಈ ಕಾದಂಬರಿಯಿಂದಾಗಿಯೇ ಕೊಡಗು ಮತ್ತು ಸುಳ್ಯ ಪರಿಸರದ ಭಾಗಗಳಲ್ಲಿ ನಡೆದ ಸ್ವಾತಂತ್ರ್ಯ ಚಳುವಳಿಗೆ ಮಹತ್ವ ಲಭಿಸಿರುವುದಾಗಿದೆ. ಇತಿಹಾಸ ಕೃತಿಗಳಲ್ಲಿ ಕೇವಲ ಉಲ್ಲೇಖಗಳ ಮಟ್ಟಿಗಷ್ಟೇ ಸೀಮಿತವಾಗಿದ್ದ ಈ ಘಟನೆಯು ಈ ಕಾದಂಬರಿಯ ಪ್ರಕಟಣೆಯ ನಂತರ ನಾಟಕ ರೂಪವಾಗಿ ಜಾಥಗಳ ರೂಪದಲ್ಲಿ ಮನಸ್ಸಿನಲ್ಲಿ ನೆಲೆಯೂರಿದೆ. ಈ ಕೃತಿಯ ಬಳಿಕವೇ ಇದೇ ವಸ್ತುವಿಗೆ ಸಂಬಂಧಿಸಿದ ಹಾಗೆ ಅನೇಕ ಕಾದಂಬರಿಗಳು ಪ್ರಕಟವಾಗಿವೆ. ಹಾಗೆಯೇ ಇತಿಹಾಸ ಕೃತಿಗಳಲ್ಲಿಯೂ ಈಗ ಇಂತಹ ಹೋರಾಟಗಳಿಗೆ ತಕ್ಕ ಸ್ಥಳಾವಕಾಶ ಲಭಿಸಿವೆ. ಇದು ಸಾಹಿತ್ಯ ಕೃತಿ ಇತಿಹಾಸದ ಬರವಣಿಗೆಯನ್ನು ಪ್ರಭಾವಿಸುವ ಕ್ರಮವೂ ಆಗಿದೆ. ಪ್ರಸ್ತುತ ನಿಬಂಧದಲ್ಲಿ ಅಂತಹ ಕೆಲವು ಮುಖ್ಯ ಸಂಗತಿಗಳನ್ನೂ ಗಮನಿಸಲಾಗಿದೆ. ಆದರೆ ಸಾಹಿತ್ಯ ಕೃತಿಗಳಲ್ಲಿ ಪ್ರಧಾನ ಆಶಯ ಇತಿಹಾಸದ ನಿರೂಪಣೆಯಲ್ಲ ಎನ್ನುವ ಎಚ್ಚರಿಕೆಯನ್ನು ಈ ನಿಬಂಧದುದ್ದಕ್ಕೂ ಇಟ್ಟುಕೊಳ್ಳಲಾಗಿದೆ.

ಇತಿಹಾಸಕಾರರಿಗೆ ಒಂದು ಘಟನೆಯ ರಾಜಕೀಯ ಸಂಗತಿಗಳು ಮುಖ್ಯವಾಗುತ್ತವೆಯೇ ಹೊರತು ಅದಕ್ಕೆ ಪ್ರೇರಣೆ ಹಾಗೂ ಕಾರಣವಾದ ಇನ್ನಿತರ ಸಂಗತಿಗಳು ಅಮುಖ್ಯವಾಗುತ್ತದೆ. ಆದರೆ ಸಾಹಿತ್ಯವು ಇತಿಹಾಸಕ್ಕೆ ಅಮುಖ್ಯವೆನಿಸಿದ ವಿಚಾರಗಳನ್ನು ಮುಂಚೂಣಿಗೆ ತರುತ್ತದೆ. ದಾಖಲೆಗಳಿಲ್ಲದೆ ಅನೇಕ ಸೂಕ್ಷ್ಮ ವಿವರಗಳನ್ನು ಸಾಹಿತಿಗಳು ತಮ್ಮ ಕಾದಂಬರಿಗಳಲ್ಲಿ

ನಿರೂಪಿಸಿದ್ದಾರೆ. ಆ ಕಾಲಘಟ್ಟದ ಸಾಮಾಜಿಕ ವ್ಯವಸ್ಥೆ, ಸಂಸ್ಕೃತಿ, ಪ್ರಾದೇಶಿಕ ಹೋರಾಟದ ಮಹತ್ವ, ಇವುಗಳನ್ನು ದಾಖಲಿಸುವುದು ಈ ಅಧ್ಯಯನದ ಉದ್ದೇಶವಾಗಿದೆ. ಐತಿಹಾಸಿಕ ಘಟನೆಯೊಂದರ ಕುರಿತು ಸಾಹಿತ್ಯ ಬರಹಗಾರರ ದೃಷ್ಟಿಕೋನವನ್ನು ಅರಿತುಕೊಳ್ಳುವುದು ಈ ಅಧ್ಯಯನದ ಕಾಳಜಿಯಾಗಿದೆ. ಒಟ್ಟಾರೆಯಾಗಿ ಇತಿಹಾಸ ಮತ್ತು ಸಾಹಿತ್ಯದ ಅನುಸಂಧಾನವನ್ನು ಕಾದಂಬರಿಕಾರರು ನಿರ್ವಹಿಸಿದ ಬಗೆ ಹಾಗೂ ಆ ಕುರಿತಾದ ಚರ್ಚೆಯನ್ನು ಪ್ರಸ್ತುತ ಅಧ್ಯಯನವು ಮಂಡಿಸುತ್ತದೆ.

ಸ್ವಾತಂತ್ರ ಚಳುವಳಿ ಏಕಕಾಲಕ್ಕೆ ಸಮಕಾಲೀನ ಹಾಗೂ ಸಾರ್ವಕಾಲಿಕ ವಿಚಾರವಾಗಿ ಗೋಚರಿಸುತ್ತದೆ. ಈ ಗೋಚರ ಸತ್ಯವನ್ನು ಪ್ರತ್ಯಕ್ಷವಾಗಿ, ಪರೋಕ್ಷವಾಗಿ ಸ್ವೀಕರಿಸುವಲ್ಲಿ ಅಭಿವ್ಯಕ್ತಿಸುವಲ್ಲಿ ಆಯಾ ಲೇಖಕರು ತಳೆಯುವ ನಿಲುವುಗಳು ತಾತ್ವಿಕತೆಯ ಸ್ವರೂಪವಾಗಿರುತ್ತವೆ.

ಈ ನಿಬಂಧದಲ್ಲಿ ಈ ಕೆಳಗಿನಂತೆ ಅಧ್ಯಾಯಗಳನ್ನು ವಿಂಗಡಿಸಲಾಗಿದೆ.

**ಅಧ್ಯಾಯ ೧: ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ**

ಈ ಅಧ್ಯಾಯವು ಈಗಾಗಲೇ ಮಂಡಿಸಿದ ವಿವರಗಳ ಸಂಕ್ಷಿಪ್ತ ವಿವರಣೆಯಾಗಿದ್ದು ಪ್ರಸ್ತುತ ನಿಬಂಧದ ಉದ್ದೇಶ ಮತ್ತು ವ್ಯಾಪ್ತಿಯನ್ನು ಸ್ಪಷ್ಟಪಡಿಸುತ್ತದೆ.

**ಅಧ್ಯಾಯ ೨: ಇದುವರೆಗೆ ಆಗಿರುವ ಅಧ್ಯಯನಗಳ ಸಮೀಕ್ಷೆ**

ಕನ್ನಡ ಕಾದಂಬರಿಗಳಲ್ಲಿ ಸ್ವಾತಂತ್ರ್ಯ ಚಳುವಳಿ ಎಂಬ ವಿಷಯದ ಕುರಿತು ಇದುವರೆಗೆ ಯಾವುದೇ ನಿರ್ಧಿಷ್ಟವಾದ ಅಧ್ಯಯನಗಳು ಆಗಿಲ್ಲ. ಆದರೆ ಈ ವಿಷಯಕ್ಕೆ ಸಂಬಂಧಿಸಿದಂತೆ ಕೆಲವು ಪಾರ್ಶ್ವಿಕ ಅಧ್ಯಯನಗಳು ಆಗಿವೆ. ಅವುಗಳನ್ನು ಸ್ಥೂಲವಾಗಿ ಈ ಕೆಳಗಿನಂತೆ ವಿಂಗಡಿಸಲಾಗಿದೆ.

೧. ಸ್ವಾತಂತ್ರ್ಯ ಚಳುವಳಿಯ ಘಟನೆಯನ್ನು ಆದರಿಸಿ ರಚಿತವಾದ ಕಾದಂಬರಿಗಳ ಕುರಿತು ರಚಿಸಿರುವ ಪಿಎಚ್.ಡಿ. ಮಹಾಪ್ರಬಂಧಗಳು.

೨. ಸ್ವಾತಂತ್ರ್ಯ ಚಳುವಳಿಗೆ ಸಂಬಂಧಿಸಿದಂತೆ ರಚಿತವಾದ ಕಾದಂಬರಿಗಳ ಮೇಲೆ ಬಂದಂತಹ ವಿಮರ್ಶೆಗಳು.

ವಿವಿಧ ವಿಶ್ವವಿದ್ಯಾನಿಲಯಗಳಿಗೆ ಭೇಟಿಯಿತ್ತು ಈ ಅಧ್ಯಯನಕ್ಕೆ ಸಂಬಂಧಿಸಿದ ಹಾಗೆ ಬಂದಿರುವ ಪಿಎಚ್.ಡಿ. ಮಹಾಪ್ರಬಂಧಗಳು ಹಾಗೂ ಲಭ್ಯವಿರುವ ವಿಮರ್ಶೆಗಳನ್ನು ಗಮನಿಸಲಾಗಿದೆ.

## ಅಧ್ಯಾಯ ೩: ಸ್ವಾತಂತ್ರ್ಯ ಚಳುವಳಿ ಕುರಿತ ಕಾದಂಬರಿಗಳು ಒಂದು ಸಮೀಕ್ಷೆ

ಸ್ವಾತಂತ್ರ್ಯ ಸಂಗ್ರಾಮದಂತಹ ಮಹಾನ್ ಘಟನೆಯನ್ನು ಆಧರಿಸಿ ಅನೇಕ ಕಾದಂಬರಿಗಳು ಕನ್ನಡದಲ್ಲಿ ರಚನೆಯಾಗಿವೆ. ಚರಿತ್ರೆಗೆ ಪರ್ಯಾಯ ಚರಿತ್ರೆಯಾಗಿ ಈ ಕಾದಂಬರಿಗಳು ಅಧ್ಯಯನಯೋಗ್ಯವಾಗಿವೆ ಮತ್ತು ಇದೊಂದು ಸ್ವಾತಂತ್ರ್ಯ ಹೋರಾಟದ ಜನಸಾಮಾನ್ಯರ ಚರಿತ್ರೆ ಕೂಡಾ ಆಗಿದೆ. ಸ್ವಾತಂತ್ರ್ಯ ಚಳುವಳಿ ಕುರಿತಂತೆ ಕನ್ನಡದಲ್ಲಿ ಲಭ್ಯವಿರುವ ಕೆಲವು ಪ್ರಮುಖ ಕೃತಿಗಳ ಸಂಕ್ಷಿಪ್ತ ಸಾರಾಂಶವನ್ನು ಈ ಅಧ್ಯಾಯದಲ್ಲಿ ನೀಡಲಾಗಿದೆ.

## ಅಧ್ಯಾಯ ೪: ಸ್ವಾತಂತ್ರ್ಯ ಚಳವಳಿಯ ವಿವಿಧ ನಿರೂಪಣೆ

ಕನ್ನಡ ಕಾದಂಬರಿಗಳು ಸ್ವಾತಂತ್ರ್ಯ ಚಳುವಳಿಯ ವಿವಿಧ ಹಂತಗಳನ್ನು ಚಿತ್ರಿಸುತ್ತವೆ. ಸ್ವಾತಂತ್ರ್ಯ ಚಳುವಳಿಯಲ್ಲಿ ವಿವಿಧ ಜನವರ್ಗದ ಭಾಗವಹಿಸುವಿಕೆ, ವಿವಿಧ ಹಂತದಲ್ಲಿ ಈ ಚಳುವಳಿ ಜನರನ್ನು ತಲುಪಿದ ಬಗೆ, ಚಳುವಳಿಗೆ ಸಂಬಂಧಿಸಿದಂತೆ ಜನರ ಪರ ವಿರೋಧ ವಿಚಾರಗಳು, ಗಾಂಧೀಜಿಯ ಪ್ರವೇಶವು ಸಾಮಾನ್ಯ ಜನರಲ್ಲೂ ಬಡಿದೆಬ್ಬಿಸಿದ ರಾಷ್ಟ್ರೀಯ ಪ್ರಜ್ಞೆ, ಕರನಿರಾಕರಣೆ, ಉಪ್ಪಿನ ಸತ್ಯಾಗ್ರಹ, ಕ್ವಿಟ್ ಇಂಡಿಯಾ ಚಳುವಳಿಯನ್ನು ಕಾದಂಬರಿ ಗ್ರಹಿಸಿದ ಬಗೆಯನ್ನು ಕಾದಂಬರಿಗಳು ನಿರೂಪಿಸಿವೆ. ಕರ್ನಾಟಕದಲ್ಲಿ ಈ ಚಳುವಳಿಗಳು ಪಡೆದುಕೊಂಡ ತೀವ್ರತೆಯನ್ನು ಕಾದಂಬರಿಗಳು ಚಿತ್ರಿಸಿದ ಬಗೆಯನ್ನು ಹಾಗೂ ಇವುಗಳ ಸೂಕ್ಷ್ಮ ವಿವರಗಳನ್ನು ನಾವು ಕಾದಂಬರಿಯಲ್ಲಿ ಕಾಣಬಹುದು. ಈ ಎಲ್ಲಾ ವಿಚಾರಗಳನ್ನು ಈ ಅಧ್ಯಾಯದಲ್ಲಿ ವಿಶ್ಲೇಷಣೆಗೊಳಪಡಿಸಲಾಗಿದೆ.

## ಅಧ್ಯಾಯ ೫: ಸ್ವಾತಂತ್ರ ಚಳುವಳಿಯಲ್ಲಿ ಜನಸಾಮಾನ್ಯರ ಪಾತ್ರ

ಗಾಂಧೀಜಿಯವರು ಆಯೋಜಿಸಿದ ಉಪ್ಪಿನ ಸತ್ಯಾಗ್ರಹ, ಅರಣ್ಯ ಸತ್ಯಾಗ್ರಹ, ಇವುಗಳು ಕಾಡುಮೇಡುಗಳ, ಹಳ್ಳಿಗಳ ಜನರಲ್ಲಿ ಜಾಗೃತಿ ಮೂಡಿಸಿತು. ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಅಗಣಿತ ದೇಶಭಕ್ತರು ಅನೇಕ ವಿಧಗಳಲ್ಲಿ ಕಷ್ಟ, ಕಾರ್ಪಣ್ಯ ಅನುಭವಿಸಿದ್ದಾರೆ. ಜೈಲುವಾಸ ಅನುಭವಿಸಿರುತ್ತಾರೆ. ಪಾಣವನ್ನೇ ಅರ್ಪಿಸಿರುತ್ತಾರೆ. ಇತಿಹಾಸದ ಅವಗಣನೆಗೆ ಒಳಗಾದ ಹಲವಾರು ಶ್ರೀ ಸಾಮಾನ್ಯರ ಮಹಿಳೆಯರ ಹಾಗೂ ಮುಸ್ಲಿಮರ ಹೋರಾಟದ ಕತೆಯನ್ನು ಕಾದಂಬರಿಗಳ ಚಿತ್ರಣದ ಹಿನ್ನಲೆಯಲ್ಲಿ ಚರ್ಚಿಸಲಾಗಿದೆ.

## ಅಧ್ಯಾಯ ೬: ದೇಶ ವಿಭಜನೆ ಹಾಗೂ ೧೯೪೭ರ ಸ್ವಾತಂತ್ರ್ಯ

ತಾವೆಲ್ಲರೂ ಭಾರತೀಯರು ಎಂಬ ಭಾವನೆಯಿಂದ ಹಿಂದುಗಳ ಜೊತೆ ಜೊತೆಯಲ್ಲೇ ಹೋರಾಡಿದ, ಬಾರತ ಸ್ವಾತಂತ್ರ್ಯವನ್ನೇ ಧ್ಯೇಯವಾಗಿರಿಸಿಕೊಂಡ ಮುಸ್ಲಿಮರ ಮನಸ್ಸಿನಲ್ಲಿ ತೀವ್ರವಾದ 'ಪ್ರತ್ಯೇಕವಾದ' ಮತ್ತು 'ಪರಕೀಯತೆ' ಹುಟ್ಟಲು ಕಾರಣವಾದ ಅಂಶಗಳೇನು? ಪಕ್ಕಾ ರಾಷ್ಟ್ರೀಯವಾದಿಯಾಗಿದ್ದ, ವಿದ್ಯಾವಂತರಾಗಿದ್ದ ಜಿನ್ನಾರವರು ಕೊನೆಗೆ ಧರ್ಮಾಂಧರಂತೆ ವರ್ತಿಸಲು ಕಾರಣವೇನು? ಎಂಬ ವಿಚಾರಗಳನ್ನು ಕಾದಂಬರಿಗಳ ಆಧಾರದಲ್ಲಿ ಈ ಅಧ್ಯಯನದಲ್ಲಿ ಚರ್ಚಿಸಲಾಗಿದೆ. ದೇಶವಿಭಜನೆಯ ಘೋರ ದುರಂತ ಹಾಗೂ ನರಮೇಧದ ಚಿತ್ರಣವನ್ನು ಕನ್ನಡ ಕಾದಂಬರಿಗಳು ಕಟ್ಟಿಕೊಟ್ಟ ಬಗೆಯನ್ನು ಈ ಅಧ್ಯಾಯದಲ್ಲಿ ವಿವರಿಸಲಾಗಿದೆ.

## ಅಧ್ಯಾಯ ೭: ಕನ್ನಡ ಸಾಹಿತಿಗಳು ಮತ್ತು ಸ್ವಾತಂತ್ರ್ಯ ಚಳುವಳಿ

ನವೋದಯ ಕಾಲಘಟ್ಟದಲ್ಲಿ ಕಂಡುಬರುವ ಕೆಲವೊಂದು ಪ್ರಮುಖ ಅಂಶವೆಂದರೆ ದೇಶದಲ್ಲೇ ಹೊತ್ತಿ ಉರಿಯುತ್ತಿದ್ದ ಸ್ವಾತಂತ್ರ್ಯ ಹೋರಾಟದಂತಹ ಮಹಾನ್ ಘಟನೆಗೆ ನಮ್ಮ ಪ್ರಮುಖ ಸಾಹಿತಿಗಳು ಸ್ಪಂದಿಸಿಲ್ಲ ಯಾಕೆ? ಶಿವರಾಮ ಕಾರಂತರನ್ನು ಹೊರತುಪಡಿಸಿದರೆ ನವೋದಯ ಕಲಘಟ್ಟದಲ್ಲಿ ಸ್ವಾತಂತ್ರ್ಯ ಚಳುವಳಿಗೆ ಪ್ರೇರಣೆಯನ್ನು ನೀಡುವ ಸಾಹಿತ್ಯ ರಚನೆಯಾಗದೇ ಇರಲು ಕಾರಣವಾದ ಅಂಶಗಳನ್ನು ಈ ಅಧ್ಯಾಯದಲ್ಲಿ ವಿಶ್ಲೇಷಣೆಗೊಳಪಡಿಸಲಾಗಿದೆ. ನವೋದಯ ಸಾಹಿತ್ಯದ ನಂತರದ ಕಾಲಘಟ್ಟದಲ್ಲಿ ಪ್ರಗತಿಶೀಲ ಸಾಹಿತಿಗಳಾದ ಬಸವರಾಜ ಕಟ್ಟೀಮನಿ, ತ.ರಾ.ಸು. ನಿರಂಜನ, ವಿ.ಎಂ ಇನಾಂದರ್, ವಡೇಗರಹಳ್ಳಿ ಆಶ್ವಥ ನಾರಯಣ, ಗೊರೂರು ರಾಮಸ್ವಾಮಿ ಅಯ್ಯಂಗಾರ್, ಕೊ.ಚೆ ಮುಂತಾದವರು ಸ್ವಾತಂತ್ರ್ಯ ಚಳುವಳಿಯನ್ನೇ ವಸ್ತುವನ್ನಾಗಿಸಿಕೊಂಡ ಕಾದಂಬರಿಗಳನ್ನು ರಚಿಸಿದರು. ಹೀಗೆ ಸ್ವಾತಂತ್ರ್ಯದಂತಹ ಒಂದು ಮಹಾನ್ ಹೋರಾಟದಲ್ಲಿ ನಮ್ಮ ಸಾಹಿತಿಗಳ ಭಾಗವಹಿಸುವಿಕೆಯನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

## ಅಧ್ಯಾಯ ೮: ಪರ್ಯಾಯ ಚರಿತ್ರೆಯ ರೂಪವಾಗಿ ಕನ್ನಡ ಕಾದಂಬರಿಗಳು

ಸಾಹಿತ್ಯ ಮತ್ತು ಚರಿತ್ರೆ ಇವೆರಡೂ ಕೂಡಾ ಒಂದಕ್ಕೊಂದು ಪೂರಕವಾಗಿ ಅಸ್ತಿತ್ವದಲ್ಲಿರುವಂತಹುದು. ಚರಿತ್ರೆಯು ಇದ್ದುದನ್ನು ಇದ್ದ ಹಾಗೆ ಹೇಳಿದರೆ ಸಾಹಿತ್ಯವು ಅದಕ್ಕೆ ಕಲ್ಪನೆಯ ಸೊಬಗನ್ನು ಸೇರಿಸಿ ನೈಜ ಘಟನೆಗಳು ನಮ್ಮ ಮನಸ್ಸಿನಲ್ಲಿ ರಸೋತ್ಪತ್ತಿ ಮಾಡುವ ರೀತಿಯಲ್ಲಿ ಹೇಳುತ್ತದೆ. ಕಾದಂಬರಿಯು ಇತಿಹಾಸವು ತೆರೆಮರೆಗೆ ಸರಿಸಿದ ನಮ್ಮ ಮಹಿಳೆಯರ ಹೋರಾಟವನ್ನು ಚಿತ್ರಿಸುತ್ತದೆ. ಸ್ವಾತಂತ್ರ್ಯ ಹೋರಾಟಕ್ಕೆ ಸಂಬಂಧಿಸಿದಂತೆ ಲಭ್ಯವಿರುವ ಎಲ್ಲಾ ಕಾದಂಬರಿಗಳನ್ನು ಗಮನಿಸಿದಾಗ ನಮ್ಮ ಅನುಭವಕ್ಕೆ ಬರುವ ಪ್ರಮುಖ ಅಂಶವೆಂದರೆ

ಅದೊಂದು ಜನಸಾಮಾನ್ಯರ ಚರಿತ್ರೆ. ಹೀಗೆ ಸ್ವಾತಂತ್ರ್ಯ ಹೋರಾಟದ ಚರಿತ್ರೆಯನ್ನು ಪುನರ್ ಪರಿಶೀಲಿಸುವ ಅಗತ್ಯವನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

**ಅಧ್ಯಾಯ ೯: ಸಮಾರೋಪ**

ಈ ಅಧ್ಯಾಯದಲ್ಲಿ ಪ್ರಸ್ತುತ ಅಧ್ಯಯನದ ಫಲಿತಗಳನ್ನು ನೀಡಲಾಗಿದೆ.

*****

# ಅಧ್ಯಾಯ - ೨

## ಇದುವರೆಗಿನ ಅಧ್ಯಯನಗಳ ಸಮೀಕ್ಷೆ

ಕನ್ನಡ ಕಾದಂಬರಿಗಳಲ್ಲಿ ಸ್ವಾತಂತ್ರ್ಯ ಚಳುವಳಿ ಎಂಬ ವಿಷಯದ ಕುರಿತು ಇದುವರೆಗೆ ಯಾವುದೇ ನಿರ್ಧಿಷ್ಟವಾದ ಅಧ್ಯಯನಗಳು ಆಗಿಲ್ಲ. ಆದರೆ ಈ ವಿಷಯಕ್ಕೆ ಸಂಬಂಧಿಸಿದ ಹಾಗೆ ಕೆಲವು ಪಾರ್ಶ್ವಿಕ ಅಧ್ಯಯನಗಳು ಆಗಿವೆ. ಅವುಗಳನ್ನು ಸ್ಥೂಲವಾಗಿ ಈ ಕೆಳಗಿನಂತೆ ವಿಂಗಡಸಲಾಗಿದೆ.

೧. ಸ್ವಾತಂತ್ರ್ಯ ಚಳುವಳಿಯ ಘಟನೆಯನ್ನ ಆಧರಿಸಿ ರಚಿತವಾದ ಕಾದಂಬರಿಗಳ ಕುರಿತು ರಚಿಸಿರುವ ಪಿ.ಎಚ್.ಡಿ. ಮಹಾಪ್ರಬಂಧಗಳು

೨. ಸ್ವಾತಂತ್ರ್ಯ ಚಳುವಳಿಗೆ ಸಂಬಂಧಿಸಿದಂತೆ ರಚಿತವಾದ ಕಾದಂಬರಿಗಳ ಮೇಲೆ ಬಂದಂತಹ ಕೆಲವು ವಿಮರ್ಶೆಗಳು.

ಸ್ವಾತಂತ್ರ್ಯ ಚಳುವಳಿಯು ಒಂದು ರಾಷ್ಟ್ರ ಮಟ್ಟದ ಚಳುವಳಿಯಾಗಿದೆ. ನವೋದಯ ಕಾಲಘಟ್ಟದಲ್ಲಿ ರಚಿತವಾದ ಅನೇಕ ಕಾದಂಬರಿಗಳು ಈ ಚಳುವಳಿಯನ್ನು ವಸ್ತುವನ್ನಾಗಿಟ್ಟುಕೊಂಡಿವೆ. ನವೋದಯ ಕಾಲದ ಕೆಲವು ಕವಿಗಳು ಕೂಡಾ ಈ ಹೋರಾಟದಲ್ಲಿ ಸ್ವತಃ ಭಾಗಿಯಾದ್ದರು. ಅನೇಕ ಕವಿಗಳ ಅಂತರಂಗವನ್ನು ಕಲಕಿದ ಮಹಾಕ್ರಾಂತಿಯಿದು. ಈ ಮಹಾಘಟನೆಯನ್ನು ಕುರಿತಂತೆ ರಚಿತವಾದ ಕೆಲವು ಸಾಹಿತಿಗಳ ಕಾದಂಬರಿಗಳನ್ನು ಕುರಿತು ಕೆಲವು ಸಂಶೋಧಕರು ಅಧ್ಯಯನ ನಡೆಸಿ ಪಿಎಚ್.ಡಿ ಮಹಾಪ್ರಬಂಧವನ್ನು ರಚಿಸಿದ್ದಾರೆ. ಆದರೆ ಅವೆಲ್ಲವೂ ಸ್ವಾತಂತ್ರ್ಯ ಚಳುವಳಿ ಕುರಿತಂತೆ ನಡೆಸಿದ ಕೆಲವು ಪಾರ್ಶ್ವಿಕ ಆಧ್ಯಯನವಾಗಿದೆ. ಅವುಗಳು ಸ್ವಾತಂತ್ರ್ಯ ಚಳುವಳಿಯ ಯಾವುದಾದರೂ ಒಂದು ನಿರ್ಧಿಷ್ಟ ಘಟನೆಯನ್ನು ಆಧರಿಸಿ

ರಚಿತವಾದ ಕಾದಂಬರಿಗೆ ಸಂಬಂಧಿಸಿದ ಅಧ್ಯಯನಗಳಾಗಿವೆ. ಹಾಗೆಯೇ ಕೆಲವೊಂದು ಮಹಾಪ್ರಬಂಧಗಳು ನಿರ್ದಿಷ್ಟ ಲೇಖಕರ ಕೃತಿಗಳಿಗೆ ಮಾತ್ರ ಸೀಮಿತವಾದುವು. ಕಾದಂಬರಿಕಾರರ ವಸ್ತುಗಳೇ ಸೀಮಿತವ್ಯಾಪ್ತಿಯನ್ನೊಳಗೊಂಡಿರುವುದರಿಂದ ಅವುಗಳನ್ನು ಆಧರಿಸಿ ನಡೆಸಿದ ಅಧ್ಯಯನಗಳಿಗೆ ಸಹಜವಾಗಿಯೇ ಈ ಮಿತಿ ಉಂಟಾಗಿದೆ.

## ಸ್ವಾತಂತ್ರ್ಯ ಚಳುವಳಿಯ ಘಟನೆಯನ್ನು ಆಧರಿಸಿ ರಚಿತವಾದ ಕಾದಂಬರಿಗಳ ಅಧ್ಯಯನಗಳು

ಸ್ವಾತಂತ್ರ್ಯ ಚಳುವಳಿಯ ಕೆಲವು ಘಟನೆಗಳನ್ನು ಆಧರಿಸಿ ಕೆಲವು ಕವಿಗಳು ಕಾದಂಬರಿಗಳನ್ನು ರಚಿಸಿದ್ದಾರೆ. ಅವುಗಳನ್ನು ಆಧರಿಸಿ ಈ ಕೆಳಗಿನ ಪಿಎಚ್.ಡಿ ಅಧ್ಯಯನಗಳು ಬಂದಿವೆ.

### ೧. ವ್ಯಾಸರಾಯ ಬಲ್ಲಾಳರ ಕಾದಂಬರಿಗಳು– ಒಂದು ಅಧ್ಯಯನ

ಕೃಷ್ಣಪ್ಪ ಜಿ. ಚವಾಣ ಅವರ ಪಿಎಚ್.ಡಿ ನಿಬಂಧವಾಗಿದೆ. ಪ್ರಬಂಧವು ವ್ಯಾಸರಾಯ ಬಲ್ಲಾಳರ ಎಲ್ಲಾ ಕಾದಂಬರಿಗಳನ್ನು ಅಧ್ಯಯನದ ವ್ಯಾಪ್ತಿಗೆ ಒಳಪಡಿಸಿದೆ. ಸ್ವಾತಂತ್ರ್ಯ ಚಳುವಳಿಗೆ ಸಂಬಂಧಿಸಿದಂತೆ 'ಹೆಜ್ಜೆ' ಮತ್ತು 'ಹೇಮಂತಗಾನ' ಈ ಎರಡು ಕಾದಂಬರಿಗಳನ್ನು ಅಧ್ಯಯನ ಮಾಡಲಾಗಿದೆ.

### ೨. ಬಸವರಾಜ ಕಟ್ಟೀಮನಿಯವರ ಕಾದಂಬರಿಗಳು–ಒಂದು ಅಧ್ಯಯನ

ಈ ನಿಬಂಧವನ್ನು ಬಸವರಾಜ ಸಬರದ ಅವರು ರಚಿಸಿದ್ದಾರೆ. ಇದು ಕಟ್ಟೀಮನಿಯವರ ಸಮಗ್ರ ಸಾಹಿತ್ಯವನ್ನು ಕರಿತು ಅಧ್ಯಯನ ನಡೆಸುತ್ತದೆ. ಇಲ್ಲಿ ಅಧ್ಯಯನದ ದೃಷ್ಟಿಯಿಂದ ರಾಷ್ಟ್ರೀಯತೆ ಕುರಿತ ಕಾದಂಬರಿಗಳು, ಸಾಮಾಜಿಕತೆ ಕುರಿತ ಕಾದಂಬರಿಗಳು ಎಂಬುದಾಗಿ ವಿಂಗಡಿಸಿದ್ದಾರೆ. ರಾಷ್ಟ್ರೀಯತೆಯನ್ನೇ ವಸ್ತುವನ್ನಾಗಿ ಒಳಗೊಂಡ ಕಾದಂಬರಿಗಳಲ್ಲಿ 'ಮಾಡಿ ಮಡಿದವರು' ಮತ್ತು 'ಸ್ವಾತಂತ್ರ್ಯದೆಡೆಗೆ' ಕಾದಂಬರಿಗಳನ್ನು ಈ ಪ್ರಬಂಧದಲ್ಲಿ ವಿಶ್ಲೇಷಣೆ ಮಾಡಲಾಗಿದೆ.

### ೩. ಕನ್ನಡ ಕಾದಂಬರಿಗಳಲ್ಲಿ ಗಾಂಧಿವಾದದ ಪ್ರೇರಣೆ

ಇದು ಮೂಡಲಗಿರಿಯಯ್ಯನವರ ಅಧ್ಯಯನದ ಕೃತಿಯಾಗಿದೆ. ಇದು ಸ್ವಾತಂತ್ರ್ಯ ಹೋರಾಟಕ್ಕೆ ಸಂಬಂಧಿಸಿದ ಯಾವುದೇ ಕಾದಂಬರಿಗಳನ್ನು ಅಧ್ಯಯನಕ್ಕೊಳಪಡಿಸುವ ನಿಬಂಧವಲ್ಲ. ಕನ್ನಡ ಕಾದಂಬರಿಗಳು ಗಾಂಧಿವಾದವನ್ನು ಗ್ರಹಿಸಿದ ಬಗೆ, ಸ್ವಾತಂತ್ರ್ಯ ಪೂರ್ವದಲ್ಲಿ ಮನ್ನಣೆಗೊಳಗಾಗಿದ್ದ ಗಾಂಧಿವಾದವು ಸ್ವಾತಂತ್ರ್ಯ ದೊರಕಿದ ಬಳಿಕ ಅವಗಣನೆಗೆ ಒಳಗಾಗಲು ಕಾರಣಗಳೇನು ಎಂಬುದನ್ನು ಕುರಿತು ಈ ಪ್ರಬಂಧದಲ್ಲಿ ವಿಶ್ಲೇಷಿಸಲಾಗಿದೆ.

**೪. ಕನ್ನಡ ಕಾದಂಬರಿಗಳಲ್ಲಿ ಕೋಮುವಾದದ ವಿಭಿನ್ನ ಸ್ವರೂಪಗಳು**

ವಿಠಲ ಭಂಡಾರಿಯೆನ್ನುವವರು ಈ ವಿಷಯದ ಕುರಿತು ಅಧ್ಯಯನ ನಡೆಸಿದ್ದಾರೆ. ಈ ಪ್ರಬಂಧದಲ್ಲಿ 'ಕೋಮುವಾದ ಮತ್ತು ಸ್ವಾತಂತ್ರ್ಯ ಚಳುವಳಿ' ಎಂಬ ಅಧ್ಯಯನವನ್ನು ಹೊರತು ಪಡಿಸಿ ಉಳಿದಂತೆ 'ಚಂದ್ರಗಿರಿಯ ತೀರದಲ್ಲಿ' 'ಚೋಮನ ದುಡಿ'- ಹೀಗೆ ವಿವಿಧ ಕಾದಂಬರಿಗಳಲ್ಲಿ ಕಂಡು ಬರುವ ಕೋಮುವಾದದ ಸ್ವರೂಪವನ್ನು ವಿವರಿಸಲಾಗಿದೆ.

**೫. ವಸಾಹತುಶಾಹಿ ಅನುಭವಕ್ಕೆ ಕನ್ನಡದ ಪ್ರಾತಿನಿಧಿಕ ಪ್ರತಿಕ್ರಿಯೆ**

ಇದು ರಾಜೇಶ್ವರಿ ಜಿ.ವಿ ಅವರ ನಿಬಂಧವಾಗಿದೆ. ವಸಾಹತುಶಾಹಿ ಅನುಭವವೆನ್ನುವುದು ಕನ್ನಡ ಸಾಹಿತ್ಯದಲ್ಲಿ ವಿವಿಧ ನೆಲೆಗಳಲ್ಲಿ ಕಂಡುಬರುತ್ತದೆ. ಅದು ವಿದ್ಯಾಭ್ಯಾಸದಿಂದ ಆರಂಭವಾಗಿ ಸಮಾಜಕ್ಕೆ ನಾವು ತೆರೆದುಕೊಳ್ಳುವ ಬಗೆಗಳವರೆಗೂ ಅದರ ವ್ಯಾಪ್ತಿ ವಿಸ್ತರಿಸಿದೆ. ವಸಾಹತುಶಾಹಿ ಅನುಭವವು ನಮ್ಮ ಕನ್ನಡದ ಕೆಲವು ಪ್ರಾತಿನಿಧಿಕ ಕೃತಿಗಳಲ್ಲಿ ಹೇಗೆ ವ್ಯಕ್ತವಾಗಿದೆ ಎಂಬುದರ ಕುರಿತು ಈ ಪ್ರಬಂಧವು ಅಧ್ಯಯನ ನಡೆಸುತ್ತದೆ.

**೬. ವ್ಯಾಸರಾಯ ಬಲ್ಲಾಳರ ಬದುಕು ಮತ್ತು ಬರಹ- ಒಂದು ಅಧ್ಯಯನ**

ಈ ವಿಷಯದ ಕುರಿತು ಪ್ರಮೀಳಾ ಮಾಧವ್ ಅವರು ಅಧ್ಯಯನ ನಡೆಸಿದ್ದಾರೆ. ಈ ಪ್ರಬಂಧದಲ್ಲಿ ವ್ಯಾಸರಾಯರ ಒಟ್ಟು ಸಮಗ್ರ ಸಾಹಿತ್ಯ ಹಾಗೂ ಅವರ ಬದುಕನ್ನು ಅಧ್ಯಯನದ ವ್ಯಾಪ್ತಿಗೆ ಒಳಪಡಿಸಲಾಗಿದೆ.

**೭ ಕನ್ನಡ ಕಾದಂಬರಿಗಳಲ್ಲಿ ರಾಜಕೀಯ ವಸ್ತು ವಿನ್ಯಾಸ**

ಪಾಟೀಲ ಸುರೇಶ ಭೀಮರಾವ್ ಅವರು ನಡೆಸಿದ ಅಧ್ಯಯನ ಇದಾಗಿದೆ. 'ರಾಷ್ಟ್ರ' ಎಂಬ ಕಲ್ಪನೆ ಭಾರತೀಯರಲ್ಲಿ ಯಾವಾಗ ಉಂಟಾಯಿತು? ಎಂಬ ವಿಚಾರದ ಕುರಿತು ಈ ಪ್ರಬಂಧದಲ್ಲಿ ಸುದೀರ್ಘ ಚರ್ಚೆ ನಡೆಯುತ್ತದೆ. ಹಲವಾರು ಅನುವಾದಿತ ಕಾದಂಬರಿಗಳನ್ನು ತನ್ನ ಅಧ್ಯಯನಕ್ಕೆ ಒಳಪಡಿಸಿದೆ. ಸ್ವಾತಂತ್ರ್ಯ ಚಳುವಳಿಗೆ ಸಂಬಂಧಿಸಿದಂತೆ 'ಮಾಡಿ ಮಡಿದವರು' 'ಅಮರ ಆಗಸ್ಟ್' 'ರಕ್ತತರ್ಪಣ' ಮುಂತಾದ ಕೆಲವು ಕಾದಂಬರಿಗಳ ಪಾತ್ರಗಳನ್ನು ಕುರಿತು ಈ ನಿಬಂಧದಲ್ಲಿ ಚರ್ಚಿಸಲಾಗಿದೆ.

**೮. ವಸಾಹತುಶಾಹಿ ಅನುಭವ ಮತ್ತು ಕನ್ನಡ ಕಾದಂಬರಿಗಳು**

ಐ.ಜೆ. ಮ್ಯಾಗೇರಿಯವರು ರಚಿಸಿದ ಈ ನಿಬಂಧದಲ್ಲಿ ವಸಾಹತುಶಾಹಿಯು ಉಂಟುಮಾಡಿದ ಸಾಮಾಜಿಕ ಸ್ಥಿತ್ಯಂತರಗಳನ್ನು ಅಧ್ಯಯನ ಮಾಡಲಾಗಿದೆ. ಕನ್ನಡ ಕಾದಂಬರಿಗಳು ವಸಾಹತುಶಾಹಿಯನ್ನು ಒಂದು ಗುಮಾನಿಯಿಂದಲೇ ಕಂಡಿವೆ. ೧೯೨೦ನೇ ಶತಮಾನದಲ್ಲಿ ವಸಾಹತುಶಾಹಿ ಪ್ರಭಾವದಿಂದಾಗಿ ವಿವಿಧ ಪ್ರದೇಶದಲ್ಲಿ ನಡೆಯುವ ಸಾಮಾಜಿಕ

ಸ್ಥಿತ್ಯಂತರಗಳು, ದೇಶೀಯ ಚಿಂತನೆ ಹಾಗೂ ಪಾಶ್ಚಾತ್ಯ ಚಿಂತನೆಗಳ ನಡುವೆ ನಡೆಯುವ ಮುಖಾಮುಖಿಯು ಕನ್ನಡ ಕಾದಂಬರಿಗಳಲ್ಲಿ ಮೂಡಿ ಬಂದ ಬಗೆಯನ್ನು ಚರ್ಚಿಸುತ್ತದೆ.

**೯. ಬಸವರಾಜ ಕಟ್ಟೀಮನಿಯವರ ಕೃತಿಗಳು ಒಂದು ಸಾಮಾಜಿಕ ಮತ್ತು ಸಾಂಸ್ಕೃತಿಕ ಅಧ್ಯಯನ**

ನೀಲಮ್ಮ ಅವರು ಈ ವಿಷಯದ ಕುರಿತು ಅಧ್ಯಯನ ನಡೆಸಿದ್ದಾರೆ. ಈ ಪ್ರಬಂಧದಲ್ಲಿ ಕಟ್ಟೀಮನಿಯವರ ಸ್ವಾತಂತ್ರ್ಯ ನಂತರದ ಕೃತಿಗಳನ್ನು ಅಧ್ಯಯನಕ್ಕೊಳಪಡಿಸಿದೆ. ನಿಜವಾದ ಹೋರಾಟಗಾರರಿಗೆ ಸ್ವತಂತ್ರ ಭಾರತದಲ್ಲಿ ಮನ್ನಣೆ ಸಿಗದೆ ಹೋದ ವಿಚಾರಗಳನ್ನು ಕಟ್ಟೀಮನಿಯವರ ಕೃತಿಗಳು ವಿಶ್ಲೇಷಣೆಗೊಳಪಡಿಸಿದ ಬಗೆಯನ್ನು ಈ ಪ್ರಬಂಧದಲ್ಲಿ ಅಧ್ಯಯನ ಮಾಡಲಾಗಿದೆ.

**೧೦. ಶಿವರಾಮ ಕಾರಂತರ ಕಾದಂಬರಿಗಳಲ್ಲಿ 'ರಾಜಕೀಯ ಪ್ರಶ್ನೆ' ಒಂದು ಅಧ್ಯಯನ**

ಇದು ಮುನಿಯಪ್ಪ ಅವರ ಅಧ್ಯಯನವಾಗಿದೆ, ಇದು ಶಿವರಾಮ ಕಾರಂತರ ಎಲ್ಲಾ ಕಾದಂಬರಿಗಳನ್ನು ವಿಶ್ಲೇಷಣೆಗೊಳಪಡಿಸುತ್ತದೆ. ಸ್ವಾತಂತ್ರ್ಯಕ್ಕೆ ಸಂಬಂಧಿಸಿದಂತೆ ಅವರು ರಚಿಸಿದ 'ಔದಾರ್ಯದ ಉರುಳಲ್ಲಿ' ಕಾದಂಬರಿಯನ್ನು ಕೂಡಾ ಇದು ವಿಶ್ಲೇಷಿಸುತ್ತದೆ. ಸ್ವಾತಂತ್ರ್ಯೋತ್ತರ ರಾಜಕೀಯ ಕಾದಂಬರಿಗಳಾದ ಗೊಂಡಾರಣ್ಯ, ಸಮೀಕ್ಷೆ, ಆಳ ನಿರಾಳ, ಮೂಜನ್ಮ ಮುಂತಾದ ಅನೇಕ ಕಾದಂಬರಿಗಳನ್ನು ಇದು ತನ್ನ ಅಧ್ಯಯನದ ವ್ಯಾಪ್ತಿಗೆ ಒಳಪಡಿಸಿದೆ.

ಕನ್ನಡ ಕಾದಂಬರಿಗಳ ವಿಮರ್ಶೆ ಸದಾ ನಡೆಯುತ್ತಿರುತ್ತದೆ. ವಿಮರ್ಶೆಯು ಸಾಹಿತ್ಯದ ಒಂದು ಪ್ರಮುಖ ಅಂಗ. ಸ್ವಾತಂತ್ರ್ಯ ಚಳುವಳಿಯ ಕುರಿತಾಗಿ ಲಭ್ಯವಿರುವ ಕಾದಂಬರಿಗಳ ಮೇಲೆ ನನ್ನ ಗಮನಕ್ಕೆ ಬಂದ ಹಾಗೆ ಈ ಕೆಳಗಿನ ವಿಮರ್ಶಾ ಸಂಕಲನಗಳು ಬಂದಿವೆ.

**೧. ತ.ರಾ.ಸು**

ಪ್ರಧಾನ ಗುರುದತ್ತ ಅವರು ಸಂಪಾದಿಸಿದ ಈ ವಿಮರ್ಶಾ ಸಂಕಲನದಲ್ಲಿ 'ರಕ್ತತರ್ಪಣ ಆದರ್ಶಪಾತ್ರಗಳ ವೈಭವೀಕರಣ' ಎಂಬ ವಿಷಯದ ಬಗ್ಗೆ ಹಾ.ತಿ.ಕೃಷ್ಣೇಗೌಡ ಎಂಬವರು ಬರೆದಿದ್ದಾರೆ. ಈ ಕೃತಿಯು ತ.ರಾ.ಸು ಯಾವುದೇ ಪಾತ್ರವನ್ನು ಕಣ್ಣಿಗೆ ಕಟ್ಟುವಂತೆ ವರ್ಣಿಸಬಲ್ಲರು. ಆದರೆ ಪಾತ್ರಗಳ ಬೆಳವಣಿಗೆ ಕೆಲವೊಮ್ಮೆ ಭಾವುಕವೆನಿಸುತ್ತದೆ. ಅತ್ಯುತ್ಸಾಹವೇ ಇಲ್ಲಿ ದೋಷವಾಗಿ ಪರಿಣಮಿಸಿದೆ. ಸಹಜ ಬೆಳವಣಿಗೆಗಿಂತ ಅವುಗಳನ್ನು ವೈಭವೀಕರಿಸುವತ್ತ ಲೇಖಕರ ಗಮನ ಕೇಂದ್ರೀಕೃತವಾಗಿದೆ. 'ರಕ್ತತರ್ಪಣ' ಕಾದಂಬರಿಯಲ್ಲಿ ಚಂದ್ರಶೇಖರ, ಸೀತಾರಾಮಯ್ಯ ಮುಂತಾದ ಪಾತ್ರಗಳು ಇಂತಹ ಆದರ್ಶದಿಂದ ನರಳಿವೆ. ಸ್ವಾತಂತ್ರ್ಯ ಆಂದೋಲನದ ಕಲ್ಪನೆಯೇ ಇಲ್ಲದ ಅನಂತರದ ತಲೆಮಾರಿನರಿಗೆ ಆ ಝಳದ ಕಿರು ಅನುಭವವನ್ನು ಉಂಟುಮಾಡುವಲ್ಲಿ ಈ ಕಾದಂಬರಿ ಯಶಸ್ವಿಯಾಗಿದೆ ಎಂದು ಈ ಕೃತಿ ತಿಳಿಸುತ್ತದೆ.

## ೨. ಮಿರ್ಜಿ ಅಣ್ಣಾರಾಯರು– ಒಂದು ಅಧ್ಯಯನ

ಶಿವಾನಂದ ಗೂಳಿಯವರ ಈ ಕೃತಿಯು ಮಿರ್ಜಿಯವರು ಸ್ವಾತಂತ್ರ್ಯಕ್ಕೆ ಸಂಬಂಧಿಸಿದಂತೆ ರಚಿಸಿದ 'ರಾಷ್ಟ್ರಪುರುಷ' ಕಾದಂಬರಿಯನ್ನು ವಿಮರ್ಶೆಗೊಳಪಡಿಸಿದೆ. ಇಲ್ಲಿ 'ಅಜಿತ'ನೆಂಬ ಕಲ್ಪಿತ ಪಾತ್ರ ಹೋರಾಟದಲ್ಲಿ ಧುಮುಕುವ ಚಿತ್ರಣವಿದೆ. ಇದರಲ್ಲಿ ಬರುವ ಅಜಿತ–ಜಯತುನಬಿ ಪ್ರೇಮಕತೆ ಭಾರತ ಪಾಕಿಸ್ತಾನಗಳ ನಿರ್ಮಾಣದಂತೆ ಅಖಂಡ ಭಾರತವು ಎರಡು ತುಂಡುಗಳಾಗಿ ವಿಭಜಿಸಲ್ಪಟ್ಟುದರ ಸಂಕೇತವಾಗಿದೆ.

## ೩. ಇನಾಂದರರ ಕಾದಂಬರಿಗಳು

ಡಾ. ಮೋಹನ ಕುಂಟಾರ್ ಅವರ ಈ ಕೃತಿಯು ಇನಾಂದರರ ಸಂಪೂರ್ಣ ಕಾದಂಬರಿಗಳನ್ನು ಅಧ್ಯಯನ ನಡೆಸಿದೆ. ಅಧ್ಯಯನದ ಅನುಕೂಲಕ್ಕಾಗಿ ಲೇಖಕರು ಕಾದಂಬರಿಗಳನ್ನು ಮುಖ್ಯವಾಗಿ, ಸಾಮಾಜಿಕ, ರಾಜಕೀಯ, ಹಾಗೂ ಅನುವಾದ ಎಂದು ವಿಂಗಡಿಸಿಕೊಂಡಿದ್ದಾರೆ. ಇಲ್ಲಿ ಸ್ವಾತಂತ್ರ್ಯ ಚಳುವಳಿಗೆ ಸಂಬಂಧಿಸಿದ ಹಾಗೆ ಇನಾಂದರರ ಮುಖ್ಯವಾದ ಎರಡು ಕಾದಂಬರಿಗಳೆಂದರೆ – 'ಮೂರಾಬಟ್ಟೆ' ಮತ್ತು 'ವಿಜಯ ಯಾತ್ರೆ'. ಸಂಶೋಧಕರು ಈ ಎರಡೂ ಕಾದಂಬರಿಗಳನ್ನೂ ತಮ್ಮ ಅಧ್ಯಯನದ ವ್ಯಾಪ್ತಿಗೆ ಒಳಪಡಿಸಿದ್ದಾರೆ. ಇನಾಂದರರ ಜೀವನ ಮತ್ತು ಕೃತಿಗಳ ಒಟ್ಟು ಅಧ್ಯಯನವಾಗಿದೆ.

## ೪. ವ್ಯಾಸಸಾಹಿತ್ಯ: ಶ್ರೀ ವ್ಯಾಸರಾಯಬಲ್ಲಾಳರ ಕಾದಂಬರಿಗಳ ವಿಮರ್ಶಾಗ್ರಂಥ

ಗೌರಿ ಸುಂದರ್ ಅವರು ಸಂಪಾದಿಸಿದ ಈ ವಿಮರ್ಶಾಗ್ರಂಥವು ವ್ಯಾಸರಾಯ ಬಲ್ಲಾಳರ 'ಹೆಜ್ಜೆ' ಕಾದಂಬರಿಯನ್ನು ವಿಮರ್ಶೆಗೊಳಪಡಿಸಲಾಗಿದೆ. ನೂರಾರು ಪಾತ್ರಗಳು, ಊರುಗಳು, ರಾಜಕೀಯ ಚರಿತ್ರೆಗಳು ಮತ್ತು ಗಾಂಧೀಜಿ ಬದುಕಿನಲ್ಲಿ ದಾಖಲಾದ ಸಂಗತಿಗಳು, ಅನೇಕ ಚಾರಿತ್ರಿಕ ಪುರುಷರ ಹೆಸರಗಳು, ನೆಹರೂ, ಸುಭಾಷ್, ಹಿಟ್ಲರ್, ಜಿನ್ನಾ, ತಿಲಕ್ ಕಾಂಗ್ರೆಸ್ಸಿಗರು, ಕಮ್ಯುನಿಸ್ಟರು, ಮುಸ್ಲಿಂಲೀಗ್‌ನವರು, ಹರಿಜನರು ದೇವಾಸ್ಥಾನಕ್ಕೆ ಪ್ರವೇಶಿಸುವುದು, ಅವರಿಗೆ ಶಿಕ್ಷಣ, ಕೇಶಮುಂಡನವನ್ನು ನಿಲ್ಲಿಸುವುದು, ವಿಧವಾ ವಿವಾಹ, ಜಾತೀಯತೆ ಲೆಕ್ಕಕ್ಕಿಲ್ಲದೆ ಹೋಗುವುದು, ಮಹಾಮಡಿವಂತಿಕೆಯಿಂದ ಕ್ರೂರಿಗಳಾಗಿದ್ದವರು ಕ್ರಮೇಣ ಸುಧಾರಣೆಗೊಂಡು ಮನುಷ್ಯರಾಗುವುದು. ಹೀಗೆ ೨೦ನೇ ಶತಮಾನದ ಸಾಮಾಜಿಕ ಸಂಕ್ರಮಣ ಕಾಲದಲ್ಲಿ ಬದುಕು ಪಡೆದುಕೊಳ್ಳುವ ವಿವಿಧ ತಿರುವುಗಳನ್ನು ಬಲ್ಲಾಳರು ಕಟ್ಟಿಕೊಡುವ ಬಗೆಯನ್ನು ಈ ಕೃತಿಯಲ್ಲಿ ವಿಶ್ಲೇಷಿಸಲಾಗಿದೆ.

## ೫. ಶ್ರೀ.ಕೋ.ಚೆನ್ನಬಸಪ್ಪ[ಕೋಚೆ]

ಚಂದ್ರಶೇಖರ ಪಾಟೀಲರು ಸಂಪಾದಿಸಿದ ಈ ಕೃತಿಯು ಕೋಚೆಯವರು ಅಖಿಲ ಭಾರತ ೭೯ನೇ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದಾಗ ಬಿಡುಗಡೆಯಾಗಿದೆ. ಇದರಲ್ಲಿ

ಕೋಚೆಯವರ 'ಬೇಡಿ ಕಳಚಿತು ದೇಶ ಒಡೆಯಿತು' ಕಾದಂಬರಿಯ ಮಹತ್ವವನ್ನು ಹಲವಾರು ಮಂದಿ ಲೇಖಕರು ಪ್ರಶಂಸಿದ್ದಾರೆ. ಇದೊಂದು ಸ್ವಾತಂತ್ರ್ಯದ ಸಂಪೂರ್ಣ ಮತ್ತು ನೈಜ ಚಿತ್ರಣವನ್ನು ನೀಡಿವ ಕಾದಂಬರಿಯೆಂಬುದನ್ನು ಎಲ್ಲರೂ ಒಪ್ಪಿಕೊಂಡಿದ್ದಾರೆ.

**೬. ಸ್ವಾತಂತ್ರ್ಯದ ಸ್ವರ್ಣ ಹೆಜ್ಜೆ**

ಬಿ.ವಿ. ಕಕ್ಕಿಲಾಯ ಅವರು ರಚಿಸಿದ ಈ ಕೃತಿಯು ನಿರಂಜನರ 'ಕಲ್ಯಾಣಸ್ವಾಮಿ' ಕಾದಂಬರಿಯನ್ನು ಸ್ವಲ್ಪಮಟ್ಟಿಗೆ ವಿಮರ್ಶೆಗೊಳಪಡಿಸಲಾಗಿದೆ. 'ಕಲ್ಯಾಣಪ್ಪನ ಕಾಟಕಾಯಿ' ಎಂದು ಬ್ರಿಟಿಷರಿಂದ ಹೆಸರು ಪಡೆದುಕೊಂಡಂತಹ 'ದಂಗೆ'ಯು ನಿಜವಾದ ಅರ್ಥದಲ್ಲಿ ಅಮರ ಸುಳ್ಯದಿಂದ ಆರಂಭವಾಗಿ ಮಂಗಳೂರಿನವರೆಗೆ ಸಂಘಟಿತರಾದ ಜನರ ವ್ಯವಸ್ಥಿತವಾದ ಒಂದು ಸ್ವಾತಂತ್ರ್ಯ ಹೋರಾಟ. ಇದನ್ನು ಅಡಗಿಸಿದವರಿಗೆ ಬ್ರಿಟಿಷರು ಸನ್ಮಾನಿಸಿದ ಬಗೆಯನ್ನೂ ಈ ಕಾದಂಬರಿ ಆಧಾರ ಸಹಿತವಾಗಿ ಉಲ್ಲೇಖಿಸುತ್ತದೆ.

ಮೇಲ್ಕಾಣಿಸಿದ ಎಲ್ಲಾ ಮಹಾಪ್ರಬಂಧಗಳು ನಿರ್ದಿಷ್ಟ ಕವಿಗಳ ಕೃತಿಗಳನ್ನು ಮಾತ್ರ ತಮ್ಮ ಅಧ್ಯಯನದ ವ್ಯಾಪ್ತಿಗೆ ಒಳಪಡಿಸಿದೆ. ಸ್ವಾತಂತ್ರ್ಯ ಚಳುವಳಿಯನ್ನು ಕುರಿತಂತೆ ರಚಿತವಾದ ಲಭ್ಯವಿರುವ ಎಲ್ಲಾ ಕಾದಂಬರಿಗಳನ್ನು ನನ್ನ ಅಧ್ಯಯನದ ವ್ಯಾಪ್ತಿಗೆ ಒಳಪಡಿಸಲಾಗಿದೆ. ಸ್ವಾತಂತ್ರ್ಯ ಚಳುವಳಿಯನ್ನು ಕುರಿತಂತೆ ರಚಿತವಾದ ಕಾದಂಬರಿಗಳ ಮೇಲೆ ಇಲ್ಲಿಯವರೆಗೆ ಪೂರ್ಣವಾದ ಅಧ್ಯಯನವು ನಡೆದಿಲ್ಲ.

ಮೇಲ್ಕಾಣಿಸಿದ ಅಧ್ಯಯನಗಳು ಕೆಲವೇ ಕಲವು ಕೃತಿಗಳು ಅಥವ ಲೇಖಕರೊಬ್ಬರ ಕೃತಿಗಳನ್ನು ಇಟ್ಟುಕೊಂಡು ನಡೆಸಿದ ಅಧ್ಯಯನ ಮಾದರಿಗಳಾಗಿವೆಯೇ ಹೊರತು ಸ್ವಾತಂತ್ರ್ಯ ಚಳುವಳಿ ಸಂದರ್ಭವನ್ನು ಒಳಗೊಂಡ ಸಮಗ್ರ ಕಾದಂಬರಿ ಪ್ರಪಂಚದ ವಿಸ್ತೃತ ಅಧ್ಯಯನಗಳಲ್ಲ. ಈ ಹಿನ್ನಲೆಯಲ್ಲಿ ಸ್ವಾತಂತ್ರ್ಯ ಚಳುವಳಿ ಕುರಿತ ಕಾದಂಬರಿಗಳ ತಳಸ್ಪರ್ಶಿ ಅಧ್ಯಯನ ಇದಾಗಿದೆ.

*****

# ಅಧ್ಯಾಯ - ೩

# ಕನ್ನಡದಲ್ಲಿ ಸ್ವಾತಂತ್ರ್ಯ ಚಳುವಳಿ ಕುರಿತ ಕಾದಂಬರಿಗಳು ಒಂದು ಸಮೀಕ್ಷೆ

ಕನ್ನಡದ ಮೊದಲ ಕಾದಂಬರಿಗಳ ಬಗೆಗೆ ಚರ್ಚಿಸಿರುವ ವಿದ್ವಾಂಸರು ಕೆಲವು ತಾತ್ವಿಕ ಪ್ರಮೇಯಗಳನ್ನು ಮಂಡಿಸಿದ್ದಾರೆ. ಅವುಗಳಲ್ಲಿ ವಸಾಹತುಶಾಹಿ ಆಡಳಿತ, ಅದಕ್ಕೆ ಎದುರಾಗಿ ರೂಪುಗೊಳ್ಳುತ್ತಿದ್ದ ರಾಷ್ಟ್ರದ ಕಲ್ಪನೆ, ವಸಾಹತು ಆಧುನಿಕತೆಯು ಭಾರತದಲ್ಲಿ ಅದರಲ್ಲೂ ಕರ್ನಾಟಕದಲ್ಲಿ ತೆರೆದುಕೊಳ್ಳುತ್ತಲಿದ್ದ ರೀತಿ, ಉದಯವಾದ ಇಂಗ್ಲಿಷ್ ವಿದ್ಯಾವಂತ ವರ್ಗ, ಅವರ ಸಾಂಸ್ಕೃತಿಕ ಕಾಳಜಿಗಳು ಮೊದಲಾದುವುಗಳು ಮುಖ್ಯವಾಗಿವೆ.

ವಸಾಹತೀಕರಣವೆನ್ನುವುದು ಒಂದು ಸೀಮಿತ ಪ್ರತಿಕ್ರಿಯೆಯಲ್ಲ. ಅದು ನಾಡಿನಲ್ಲಿ ಅಮೂಲಾಗ್ರ ಪರಿವರ್ತನೆಯನ್ನುಂಟುಮಾಡಿದ ಮಹಾನ್ ಘಟನೆ. ಬಿಪಿನ್‌ಚಂದ್ರ ಅವರು ಗುರುತಿಸಿರುವ ಹಾಗೆ ವಸಾಹತುಶಾಹಿ ಆಧುನೀಕರಣ ಕೇವಲ ಆರ್ಥಿಕ ವ್ಯವಹಾರವಲ್ಲ; ಆರ್ಥಿಕ, ಸಾಮಾಜಿಕ, ರಾಜಕೀಯ, ಆಡಳಿತಾತ್ಮಕ, ಸಾಂಸ್ಕೃತಿಕ ಕ್ಷೇತ್ರಗಳಿಗೆ ಅದು ಹಬ್ಬಿದೆ. ಯಾವುದೇ ಪ್ರದೇಶವನ್ನು ಅಂಕೆಗೆ ತಂದುಕೊಂಡು, ಆಡಳಿತಕ್ಕೆ ಒಪ್ಪಿಗೆ ನೀಡಬಲ್ಲ ಪ್ರಜೆಗಳನ್ನು ರೂಪಿಸುವ ಕೆಲಸ ಕೇವಲ ದಮನಯಂತ್ರದ ಮೂಲಕ ನಡೆಯುವುದಿಲ್ಲ. ಚರಿತ್ರೆ, ತತ್ವಜ್ಞಾನ, ಸಮಾಜಶಾಸ್ತ್ರ, ಭಾಷಾಶಾಸ್ತ್ರ, ಸಾಹಿತ್ಯ, ಮೊದಲಾದ ಐಡಿಯಾಲಾಜಿಕಲ್ ಬರಹ, ಶಾಸ್ತ್ರಗಳ ಮೂಲಕವೂ ನಡೆಯುತ್ತದೆ.[೧]

ಭಾರತದಲ್ಲಿ ವಸಾಹತು ಆಡಳಿತ ಮತ್ತು ಇಂಗ್ಲೀಷ್ ವಿದ್ಯಾಕ್ರಮಗಳ ಒಂದು ಪರಿಣಾಮವೆಂದರೆ ಬದುಕನ್ನು ನಾವು ಅರಿಯುವ ಕ್ರಮದಲ್ಲಿ ಆದ ಬದಲಾವಣೆ, ಪ್ರಪಂಚವನ್ನು ನೋಡುವ, ವರ್ಗೀಕರಿಸುವ, ತಿಳಿಯುವ, ಪರಿಭಾಷೆ, ನುಡಿಗಟ್ಟುಗಳು ಬದಲಾದವು. ಭಾರತೀಯ ವಿದ್ಯಾವಂತ ವರ್ಗವು ಪಾಶ್ಚಾತ್ಯ ವಿಚಾರಧಾರೆಯಿಂದ ಪಡೆದುಕೊಂಡ ಜ್ಞಾನವನ್ನು ಭಾರತೀಯ ಸಂಸ್ಕೃತಿಯ ಬೆಳಕಿನಲ್ಲಿ ಸಂಸ್ಕರಿಸಿದರು. ಈ ಕಾರಣದಿಂದಲೇ ಈ ವಿದ್ಯಾವಂತ ವರ್ಗದ ಆಲೋಚನಾಕ್ರಮದಲ್ಲಿಯೇ ಭಾರತ ರಾಷ್ಟ್ರದ, ರಾಷ್ಟ್ರೀಯತೆಯ, ವಸಾಹತು ವಿರೋಧದ ಪ್ರಜ್ಞೆ ತನ್ನ ರೂಪವನ್ನು ಪಡೆಯುತ್ತದೆ.

ಮಿಶನರಿಗಳ ಮತಪ್ರಸಾರ, ಬ್ರಿಟಿಷರ ಆಡಳಿತ ಪದ್ಧತಿ, ಇಂಗ್ಲೀಷ್ ವಿದ್ಯಾಭ್ಯಾಸವು ದೇಸಿ ವಿದ್ಯಾವಂತ ವರ್ಗದ ಅಂತರಂಗದಲ್ಲಿ ರಾಷ್ಟ್ರೀಯತೆ ಮೊಳಕೆಯೊಡೆಯಲು ಕಾರಣವಾಯಿತು. ತಮ್ಮ ರಾಜಕೀಯ ಆಸೆ– ಆಕಾಂಕ್ಷೆಗಳ ಚಿತ್ರಣ, ಭಾರತ ಪಡೆದುಕೊಳ್ಳುತ್ತಲಿದ್ದ ವಿವಿಧ ಬದಲಾವಣೆಗಳ ಚಿತ್ರಣವು ಈ ಸಾಹಿತಿಗಳು ರಚಿಸಿದ ಕೃತಿಗಳಲ್ಲಿ ಒಡಮೂಡಲಾರಂಭಿಸಿದುವು. ಹೀಗೆ ಕಾದಂಬರಿಯು ವಸಾಹತುಶಾಹಿ ಆಡಳಿತದಿಂದ ಬೇಸತ್ತು ರಾಷ್ಟ್ರದ ಕಲ್ಪನೆಯನ್ನು ಜನರ ಮುಂದಿಡುವ ಪ್ರಯತ್ನ ಮಾಡುತ್ತದೆ. ಸ್ವಾತಂತ್ರ್ಯಕ್ಕೋಸ್ಕರ ತಮ್ಮ ಬದುಕನ್ನೇ ತ್ಯಾಗ ಮಾಡಿದವರ ಚಿತ್ರಣವನ್ನು ಚಿತ್ರಿಸುವುದರ ಮೂಲಕ ಇತರರಿಗೆ ಪ್ರೇರಣೆಯನ್ನು ನೀಡಲಾರಂಭಿಸುತ್ತದೆ.

ಕನ್ನಡ ಕಾದಂಬರಿಯ ಹುಟ್ಟಿಗೆ ಕಾರಣವಾದ ಹಲವಾರು ಅಂಶಗಳಲ್ಲಿ ವಸಾಹತುಶಾಹಿ ಆಡಳಿತದ ದಮನ ನೀತಿಯು ಪ್ರಮುಖವಾಗಿದೆ. ನಿಜವಾದ ಅರ್ಥದಲ್ಲಿ ಕಾದಂಬರಿಯು ವಸಾಹತುಶಾಹಿ ಆಡಳಿತದ ಕೂಸು ಎನ್ನಬಹುದು. ಇಂಗ್ಲೀಷ್ ಶಿಕ್ಷಣದಿಂದ ದೊರೆತ ಆಧುನಿಕ ಜ್ಞಾನ, ಪಾಶ್ಚಾತ್ಯ ಸಾಹಿತ್ಯಗಳ ಪರಿಚಯ, ವಿದ್ಯಾವಂತ ಓದುಗ ವರ್ಗದ ಉಗಮ, ಪದ್ಯರೂಪದಲ್ಲಿದ್ದ ಸಾಹಿತ್ಯವು ಗದ್ಯರೂಪಕ್ಕೆ ಪರಿವರ್ತನೆಯಾದ ಬಗೆ– ಒಟ್ಟಿನಲ್ಲಿ ಎಲ್ಲಾ ದೃಷ್ಟಿಯಲ್ಲೂ ಇದೊಂದು ನವೋದಯದ ಸಂಕ್ರಮಣ ಕಾಲವಾಗಿದೆ.

ಕನ್ನಡ ಕಾದಂಬರಿ ರಚನೆಗೆ ಹೀಗೆ ಕಾರಣವಾದ ಸಮಕಾಲೀನ ಸಂಗತಿಗಳಲ್ಲಿ ಓದುಗ ವರ್ಗದ ಕೊಡುಗೆ ಅಪಾರವಾದುದು. ಯಾಕೆಂದರೆ ವಸಾಹತು ಸನ್ನಿವೇಶದಲ್ಲಿ ಪಳಗಿದ ಮನುಷ್ಯನ ಅಭಿರುಚಿ ಮತ್ತು ಜೀವನ ಕ್ರಮಗಳೇ ಪರಂಪರೆಯ ಮೌಲ್ಯಗಳಿಗಿಂತ ಭಿನ್ನವಾದವು. ಅಲ್ಲಿಯವರೆಗೆ ಕುಮಾರವ್ಯಾಸ ಭಾರತ, ಜೈಮಿನಿ ಭಾರತಗಳಂತಹ ಸುಲಲಿತ ಕಾವ್ಯಗಳನ್ನು ಕೇಳುವ ಶ್ರೋತೃವೃಂದದವರಿದ್ದರು. ಬ್ರಿಟಿಷ್ ಆಡಳಿತದ ಬಳುವಳಿಯಿಂದಾಗಿ ಬಂದ ಹೊಸ ಶಿಕ್ಷಣ ಕ್ರಮದಿಂದಾಗಿ ಮನೆಯಲ್ಲೇ ಓದಿಕೊಳ್ಳಬಲ್ಲ ವರ್ಗವೊಂದು ಸೃಷ್ಟಿಯಾಯಿತು. ಸಹಜವಾಗಿ ಈ ವರ್ಗ ಮಧ್ಯಮ ವರ್ಗವಾಯಿತು. ಇಂಥ ಮಧ್ಯಮ ವರ್ಗಕ್ಕೂ ಕನ್ನಡ ಕಾದಂಬರಿಗಳಿಗೂ ನಿಕಟ ಸಂಬಂಧವಿರುವುದರಿಂದ ಸಾಹಿತ್ಯ ವಸ್ತುವೊಂದು ಇಂಥ ಸಮುದಾಯದ ಬಯಕೆಗಳನ್ನು ಪೂರೈಸುವ ಸಾಧನವಾಗಿ ಕಾದಂಬರಿ ರೂಪುಗೊಂಡಿತು. ಕಾದಂಬರಿ ಸರಳವಾದ, ಸುಲಭವಾದ ಭಾಷೆ, ಸುಂದರವಾದ ವರ್ಣನೆ, ಅನುಭವಕ್ಕೆ ನಿಲುಕುವ ಕಥಾ ಹಂದರದಿಂದ ಹೆಚ್ಚು ಜನಪ್ರಿಯವಾಗತೊಡಗಿತು.

ಕಾದಂಬರಿಯು ಭಾಷೆ, ಕಲ್ಪನೆ ಹಾಗೂ ವಾಸ್ತವಾಂಶಗಳ ತ್ರಿವೇಣಿ ಸಂಗಮ. ಇದು ಸಮಕಾಲೀನ ಸಮಾಜದ ಆಶೋತ್ತರಗಳು, ನೋವು ನಲಿವುಗಳು. ಕಾಡುತ್ತಿರುವ ಸಮಸ್ಯೆಗಳು, ಸಂಸ್ಕೃತಿಗಳ ಪ್ರತಿಬಿಂಬವಾಗಿದೆ. ಕಾದಂಬರಿಯ ಉಗಮವೇ ವಸಾಹತು ಆಡಳಿತದ ಪರಿಣಾಮವಾಗಿದೆ. ಕಾದಂಬರಿ ಪ್ರಕಾರವೊಂದು ಇಷ್ಟು ಜನಪ್ರಿಯವಾಗುವುದಕ್ಕೆ ಅವುಗಳ ಸರಳತೆ, ಓದಿಸಿಕೊಂಡು ಹೋಗುವ ಗುಣ, ಜನಸಾಮಾನ್ಯರ ಅನುಭವಕ್ಕೆ ನಿಲುಕುವ ಸಾಮಾಜಿಕ ಘಟನೆಗಳು ಪ್ರಮುಖ ಕಾರಣವಾವೆ. ಆಧುನಿಕ ರೀತಿಯ ವಿದ್ಯುನ್ಮಾನ ಮನಃರಂಜನೆಯಿಲ್ಲದ ಕಾಲದಲ್ಲಿ ಕಾದಂಬರಿಯೊಂದು ಮನಃರಂಜನೆಯ ಮಾಧ್ಯಮವಾಗಿ, ಕಾಲಕ್ಷೇಪದ ಸಾಧನವಾಗಿ ಕೂಡಾ ಜನಪ್ರಿಯತೆಯನ್ನು ಗಳಿಸಿತು.

ಸ್ವಾತಂತ್ರ್ಯ ಚಳುವಳಿಯ ತೀವ್ರತೆ, ಕಾರಾಗೃಹ ವಾಸ, ಬ್ರಿಟಿಷರ ಹೊಸ ಹೊಸ ದಮನ ನೀತಿಗಳಿಗೆ ಜನಸಾಮಾನ್ಯರ ಪ್ರತಿಕ್ರಿಯೆ, ಸ್ವಾತಂತ್ರ್ಯ ಚಳುವಳಿಗೆ ಗಾಂಧೀಜಿ ಪ್ರವೇಶಿಸಿದ ನಂತರ ಅದು ಪಡೆದುಕೊಂಡ ವಿಭಿನ್ನ ರೂಪಗಳು– ಈ ಎಲ್ಲವೂ ಕೂಡಾ ಕಾದಂಬರಿಗೆ ವಸ್ತುವನ್ನೊದಗಿಸುತ್ತವೆ. ಗಾಂಧೀಜಿಯವರ ಅಸಹಕಾರ ಚಳುವಳಿ, ಕರನಿರಾಕರಣೆ, ಸತ್ಯಾಗ್ರಹ, ಕಾನೂನುಭಂಗ ಚಳುವಳಿ, ಸ್ವದೇಶಿ ಚಳುವಳಿ, ಅನೇಕ ರೀತಿಯ ಸಾಮಾಜಿಕ ಸುಧಾರಣೆಯ ತತ್ತ್ವಗಳನ್ನು ಒಡಲಲ್ಲಿರಿಸಿಕೊಂಡ ವಿಧಾಯಕ ಕಾರ್ಯಕ್ರಮವು ಅತ್ಯಂತ ಜನಮನ್ನಣೆಯನ್ನು ಗಳಿಸುತ್ತದೆ. ಈ ಸ್ವಾತಂತ್ರ್ಯ ಚಳುವಳಿಯಲ್ಲಿ ಅನೇಕ ಮಂದಿ ಸಾಹಿತಿಗಳು ಕೂಡ ಪ್ರತ್ಯಕ್ಷವಾಗಿ ಧುಮುಕುತ್ತಾರೆ. ಕೆಲವರು ಜೈಲುವಾಸದ ರುಚಿಯನ್ನು ಅನುಭವಿಸುತ್ತಾರೆ. ಇನ್ನು ಕೆಲವು ಸಾಹಿತಿಗಳು ದೂರದಿಂದಲೇ ಈ ಸಾಮಾಜಿಕ ವಿಪ್ಲವಗಳನ್ನು ಗಮನಿಸುತ್ತಾರೆ. ಗಾಂಧೀಜಿಯ ಕರೆಗೆ ಜನಸಾಮಾನ್ಯರು ಕೂಡಾ ಸ್ಪಂದಿಸಿದ ಬಗೆಯು ಸಾಹಿತಿಗಳಿಗೂ ಆಶ್ಚರ್ಯವನ್ನುಂಟುಮಾಡುತ್ತದೆ. ಜನರ ತ್ಯಾಗ, ಬಲಿದಾನ ಇವೆಲ್ಲವನ್ನು ಕಣ್ಣಾರೆ ಕಂಡ ಸಾಹಿತಿಗಳು ತಮ್ಮ ಕಥನ ಸಾಹಿತ್ಯದಲ್ಲಿ ಇವುಗಳನ್ನು ಒಡಮೂಡಿಸಿದ್ದಾರೆ. ಈ ರೀತಿಯಾಗಿ ಇತಿಹಾಸದ ಪುಟಗಳಲ್ಲಿ ದಾಖಲಾಗದ ಅನೇಕ ಸತ್ಯ ಘಟನೆಗಳು, ಜನಸಾಮಾನ್ಯರ ಬಲಿದಾನದ ಕಥಾನಕಗಳು ದೇಶದ ಮೂಲೆ ಮೂಲೆಯಲ್ಲಿರುವ ಓದುಗ ವರ್ಗವನ್ನು ತಲುಪುತ್ತದೆ. ಹೀಗೆ ಒಂದು ಕಾಲದಲ್ಲಿ ಜನಪ್ರಿಯವಾಗಿದ್ದ ಮಹಾಕಾವ್ಯಗಳ ಸ್ಥಾನವನ್ನು ಈ ಕಾದಂಬರಿಗಳು ಆಕ್ರಮಿಸಿಕೊಳ್ಳುತ್ತವೆ.

ಭಾರತದ ಸ್ವಾತಂತ್ರ್ಯ ಚಳುವಳಿಯಂತಹ ಈ ಘಟನೆಯನ್ನು ಆಧರಿಸಿ ಬೇರೆ ಬೇರೆ ಭಾರತೀಯ ಭಾಷೆಗಳಲ್ಲಿ ಅನೇಕ ಲೇಖನಗಳು, ಕತೆ, ಕಾದಂಬರಿಗಳು ಬಂದಿವೆ. ಲಾವಣಿ ಜಾನಪದಗೀತೆಯಂತಹ ಅನೇಕ ಮೌಖಿಕ ಸಾಹಿತ್ಯ ಪರಂಪರೆಯು ಈ ಘಟನೆಯನ್ನು ಆಧರಿಸಿ ಹುಟ್ಟಿಕೊಂಡಿವೆ. ಆ ಕಾಲಘಟ್ಟದಲ್ಲಿ ಹಾಗೂ ಸ್ವಾತಂತ್ರ್ಯ ಲಭಿಸಿದ ನಂತರ ಕೂಡಾ ಕನ್ನಡ ಬಾಷೆಯಲ್ಲೂ ಅನೇಕ ಕಥೆ, ಕಾದಂಬರಿಗಳು ಜನ್ಮತಾಳಿವೆ. ತಮ್ಮ ಕೃತಿಗಳ ಮೂಲಕ ಕನ್ನಡ ನಾಡಿನ ಕವಿಗಳು ಬಾರತಾಂಭೆಗೆ ತಮ್ಮ ನುಡಿನಮನವನ್ನು ಸಲ್ಲಿಸಿದ್ದಾರೆ. ಸ್ವಾತಂತ್ರ್ಯ ಸಂಗ್ರಾಮದಂತಹ ಮಹಾನ್ ಘಟನೆಯ ಅತಿ ಸೂಕ್ಷ್ಮಾತಿಸೂಕ್ಷ್ಮ ವಿವರಗಳು ಈ

ಕಾದಂಬರಿಯಲ್ಲಿ ನಮಗೆ ದೊರಕುತ್ತವೆ. ಚರಿತ್ರೆಗೆ ಪರ್ಯಾಯ ಚರಿತ್ರೆಯಾಗಿ ಈ ಕಾದಂಬರಿಗಳು ಅಧ್ಯಯನಯೋಗ್ಯವಾಗಿವೆ ಮತ್ತು ಇದೊಂದು ಸ್ವಾತಂತ್ರ್ಯ ಹೋರಾಟದ ಜನಸಾಮಾನ್ಯರ ಚರಿತ್ರೆ ಕೂಡಾ ಆಗಿದೆ.

**ಬಿಡುಗಡೆಯ ಬೆಲೆ**

ಈ ಕಾದಂಬರಿಯನ್ನು ರಚಿಸಿದವರು ವಡೇಗನಹಳ್ಳಿ ಅಶ್ವಥನಾರಾಯಣ. ಸ್ವಾತಂತ್ರ್ಯ ಹೋರಾಟಕ್ಕೆ ಸಂಬಂಧಿಸಿದಂತೆ ಉಪಲಬ್ಧವಿರುವ ಮೊದಲ ಕಾದಂಬರಿಯಿದು. ಲೇಖಕರು ಸ್ವತಃ ಹೋರಾಟದಲ್ಲಿ ಭಾಗವಹಿಸಿದವರಾದ ಕಾರಣ ತಮ್ಮ ನೈಜ ಅನುಭವವನ್ನೇ ಈ ಕಾದಂಬರಿಯಲ್ಲಿ ದಾಖಲಿಸಿದ್ದಾರೆ.

೧೯೩೦, ಮಾರ್ಚ್ ೧೨ರಂದು ಸ್ವದೇಶಿ ಚಳುವಳಿ ಆರಂಭವಾಗುತ್ತದೆ. ಜನರೆಲ್ಲರೂ ಗುಂಪು ಸೇರಿ ವಿದೇಶೀ ವಸ್ತ್ರವನ್ನು ದಹಿಸುತ್ತಾರೆ. ಗುಂಪು ಗುಂಪಾಗಿ ಮೆರವಣಿಗೆಯಲ್ಲಿ ಭಾಗವಹಿಸುತ್ತಾರೆ. ಅಲ್ಲೊಂದು ಶಿಸ್ತಿದೆ, ಏನೂ ಗಲಾಟೆ ಪುಂಡುತನಗಳಿಲ್ಲ. ಹುರುಪಿನ ಹಾಡುಗಳು, ಜಯಜಯಕಾರಗಳು ಕೇಳಿ ಬರುತ್ತಿದೆ. ಹಳ್ಳಿಯಲ್ಲಿ ಹುಟ್ಟಿಕೊಂಡ ಹಲವಾರು ಸ್ವಾತಂತ್ರ್ಯ ಗೀತೆಗಳು ಸ್ವಯಂಸೇವಕರ ಉತ್ಸಾಹವನ್ನು ಇಮ್ಮಡಿಗೊಳಿಸುತ್ತದೆ. ವಿದೇಶಿ ವಸ್ತ್ರಗಳು ಅಗ್ನಿ ನಾರಾಯಣನಿಗೆ ಆಹುತಿಯಾಗುತ್ತದೆ.

ಸ್ವಯಂಸೇವಕರು ಬಹಳಷ್ಟು ಶಿಸ್ತಿನಿಂದ ಅರಣ್ಯ ಕಾಯಿದೆಯನ್ನು ಮುರಿಯುತ್ತಾರೆ. ಅಡವಿಗೆ ಬೆಳಿಗ್ಗೆ ಹೋಗಿ ಒಂದೆರಡು ಗಿಡಗಳನ್ನು ಕಡಿಯುತ್ತಾರೆ. ಅಲ್ಲಿ ಕೂಡಾ ಶಾಂತವಾಗಿ ನಡೆದುಕೊಳ್ಳುತ್ತಾರೆ, ಇವರ ಗುಂಪನ್ನು ನೋಡಿ ಸರಕಾರಕ್ಕೆ ಆಶ್ಚರ್ಯವಾಗುತ್ತದೆ. ಸಾವಿರ ಸಾವಿರ ಹಳ್ಳಿಯ ಜನರು ಅರಣ್ಯ ಶಾಸನವನ್ನು ಉಲ್ಲಂಘಿಸಿ ಸಂಜೆಗೆ ಸಭೆ ಸೇರಿದ್ದಾರೆ. ಅರೆಬೆತ್ತಲೆಯಿಂದ ಕೂಡಿದ, ಅರೆಹೊಟ್ಟೆಯ ಈ ರೈತರು ಸಾವಿರಾರು ಜನ ಹೀಗೆ ಬಂದು ನಿಂತು ಯುಗಯುಗಾಂತರದಿಂದ ತಮ್ಮ ಪಾಲಿಗೆ ಬಂದ ದೌರ್ಜನ್ಯವನ್ನು ತಿರಸ್ಕರಿಸಲು ಹೊರಟಿದ್ದಾರೆ.

ಅರಣ್ಯ ಶಾಸನದ ಬಳಿಕ ಸ್ವಯಂಸೇವಕರು ಹಳ್ಳಿಯ ಪಟೇಲರು ತಮ್ಮ ಕೆಲಸಕ್ಕೆ ರಾಜೀನಾಮೆ ಕೊಡುವಂತೆ ಬುದ್ಧಿ ಹೇಳಿದರು. ಯಾಕೆಂದರೆ ಹಳ್ಳಿಗಳಲ್ಲಿ ಪಟೇಲ, ಶಾನುಭೋಗರೇ ಬ್ರಿಟಿಷ್ ಸರಕಾರದ ಅಧಿಕೃತ ಪ್ರತಿನಿಧಿಗಳು. ಈ ಯೋಜನೆಯಲ್ಲಿ ಸ್ವಯಂಸೇವಕರು ಬಹಳಷ್ಟು ಪ್ರಗತಿಯನ್ನು ಸಾದಿಸುತ್ತಾರೆ. ಸುಮಾರು ೨೦-೨೫ ಜನ ಪಟೇಲರು ತಮ್ಮ ರಾಜೀನಾಮೆಯನ್ನು ಮಾಮಲೇದಾರರಿಗೆ ಸಲ್ಲಿಸಿದರು.

ಈ ಕಾದಂಬರಿಯ ಲೇಖಕ ಕೆಲಸ ಮಾಡುತ್ತಿದ್ದ ಸ್ವಯಂಸೇವಕರ ಗುಂಪಿನ ನಾಯಕನನ್ನೇ ಹಿಡಿಯುತ್ತಾರೆ, ಆದರೆ ಇದರಿಂದ ಚಳಿವಳಿಯ ತೀವ್ರತೆ ಜಾಸ್ತಿಯಾಗುತ್ತದೆಯೇ ಹೊರತು ಕಡಿಮೆಯಾಗುವುದೇ ಇಲ್ಲ. ಲೇಖಕರ 'ಬುಲೆಟನ್' ಎಂಬ ಪತ್ರಿಕೆಯ ಮೇಲೆ ನಿಷೇಧವಿದ್ದರೂ ಅದು ಸರಕಾರದ ಕಣ್ಣಿಗೆ ಮಣ್ಣೆರಚಿ ಮುದ್ರಣಗೊಳ್ಳುತ್ತದೆ.

ಪಟ್ಟಣದವರಿಗಿಂತ ಹಳ್ಳಿಯವರೇ ಹೆಚ್ಚು ಉತ್ಸಾಹದಿಂದ ದೇಶ ಸೇವೆಯನ್ನು ಮಾಡುತ್ತಾರೆ. ಯಾಕೆಂದರೆ ಬ್ರಿಟಿಷ್ ಸರಕಾರದಲ್ಲಿ ನಿಜವಾಗಿಯು ಹೆಚ್ಚು ಕಷ್ಟವನ್ನು ಅನುಭವಿಸಿದವರೆಂದರೆ ಹಳ್ಳಿಯವರು. ಲೇಖಕ ಜೈಲಿನಲ್ಲಿ ಕಳೆದ ದಿನಗಳು, ಜೈಲಿನಲ್ಲಿ ತಿನ್ನಲಿಕ್ಕಾಗದ ಅನ್ನ, ಮುದ್ದೆ, ರಾಜಕೀಯ ಕೈದಿಗಳ ಚಿತ್ರಣ, ಜೈಲಿನ ಆಹಾರದಿಂದ ಆರಂಭವಾಗುವ ಆಮಶಂಕೆ ರೋಗ– ಈ ಎಲ್ಲಾ ಚಿತ್ರಣವನ್ನು ಈ ದಿನಚರಿ ತೆರೆದಿಡುತ್ತದೆ.

**ಪ್ರತಿಸರಕಾರ**

ಮಿರ್ಜಿ ಅಣ್ಣರಾಯರು ರಚಿಸಿದ ಈ ಕೃತಿಯು ಹಲವಾರು ಸತ್ಯ ಸಂಗತಿಗಳನ್ನು ನಮಗೆ ತಿಳಿಸುತ್ತದೆ. ಪ್ರತಿ ಸರಕಾರದ ಕಾರ್ಯಕರ್ತರ ಹೆಸರಿನಲ್ಲಿ ದರೋಡಕೋರರು ಮನೆಗಳನ್ನು ಲೂಟಿ ಮಾಡುತ್ತಿದ್ದರು. ಪ್ರತಿಸರಕಾರದ ಕಾರ್ಯಕರ್ತರನ್ನು ಹಿಡಿಯಲು ಪೋಲೀಸರು ಕುಖ್ಯಾತ ದರೋಡೆಕೋರರ ನೆರವನ್ನು ಕೋರುತ್ತಿದ್ದರು. ದರೋಡೆಕೋರರು ಕಾರ್ಯಕರ್ತರನ್ನು ಹಿಡಿದುಕೊಟ್ಟರೆ ಅವರಿಗೆ ಶಿಕ್ಷೆಯಲ್ಲಿ ಮಾಫಿ ಸಿಗುತ್ತಿತ್ತು.

ಕಾರ್ಯಕರ್ತರು ಯಾರಾದರೂ ದ್ರೋಹ ಮಾಡಿ ತಮ್ಮ ಗುಟ್ಟನ್ನು ಬಿಟ್ಟುಕೊಟ್ಟರೆ ಅವರ ಕಾಲಿಗೆ ಪತ್ರೆ ಬಡಿಯುವ ಶಿಕ್ಷೆ ಕಾದಿರುತ್ತಿತ್ತು. ಸುಬ್ಬರಾವ್‌ನಂತಹ ಜಮೀನ್ದಾರರ ಮಕ್ಕಳು ಕೂಡಾ ಪ್ರತಿಸರಕಾರದ ಕಾರ್ಯಕರ್ತರಾಗಿದ್ದರು. ಪ್ರತಿ ಸರಕಾರದ ಬಗ್ಗೆ ಹಳ್ಳಿ ಜನರಿಗೆ ಅಪಾರವಾದ ಒಲವಿತ್ತು. ಇವರಿಂದಾಗಿ ಹಳ್ಳಿಯಲ್ಲಿ ಕಳವು, ಮೋಸ ಕಡಿಮೆಯಾಗುತ್ತದೆ. ನ್ಯಾಯತೀರ್ಮಾನಕ್ಕೆ ಹಳ್ಳಿಯ ಜನರು ಕೋರ್ಟು, ಪೊಲೀಸ್ ಸ್ಟೇಷನ್‌ಗೆ ಹೋಗುವ ಬದಲು ಪ್ರತಿ ಸರಕಾರದ ಹತ್ತಿರ ಬರುತ್ತಿದ್ದರು.

ಬ್ರಿಟಿಷ್ ಸರಕಾರದ ಹುಟ್ಟನ್ನು ಅಡಗಿಸುವ ಸಲುವಾಗಿಯೇ ಪ್ರತಿಸರಕಾರದ ನಿರ್ಮಾಣವಾಗುತ್ತದೆ. ಆದರೆ ಪ್ರತಿಸರಕಾರದ ವಿರುದ್ಧ ಸರಕಾರ ಹಾಗೂ ಅದರ ಬಾಲಬುಡಕರು ಅಪಪ್ರಚಾರ ಮಾಡುತ್ತಾರೆ. ಪ್ರತಿಸರಕಾರದ ಪ್ರಮುಖ ಕಾರ್ಯಕರ್ತನಾದ ನಾನಾಸಾಹೇಬನ ಸಾಹಸದ ಮೈನವಿರೇಳಿಸುವ ಅನೇಕ ಕಥೆಗಳು ಇಂದಿಗೂ ರೂಢಿಯಲ್ಲಿವೆ. ಪ್ರತಿಸರಕಾರವೆಂದರೆ ೧೯೪೨ರಲ್ಲಿ ಗುಪ್ತವಾಗಿ ಚಳವಳಿಯಲ್ಲಿ ಭಾಗವಹಿಸಿದ್ದ ಜನರ ಸಂಘಟಿತ ಗುಂಪು. ಪ್ರತಿಸರಕಾರಕ್ಕೆ ಹೆದರಿ ಕೆಲವು ಗೌಡರು ಹಳ್ಳಿಯನ್ನೇ ಬಿಟ್ಟರು. ಇದರ ಕಾರ್ಯಕರ್ತರಿಗೆ ಶಿಸ್ತಿನ ತರಬೇತಿಯನ್ನು ಕೊಡಲಾಗುತ್ತಿತ್ತು. ಇಂಥ ತರುಣರೇ ಪ್ರತಿಸರಕಾರದ ಗುಪ್ತ ಪೋಲೀಸರು. ಇವರಿಂದಲೆ ಬ್ರಿಟಿಷ್ ಸೇನೆಯ ಚಲನ– ವಲನವೆಲ್ಲ ಪ್ರತಿಸರಕಾರಕ್ಕೆ ತಿಳಿಯುವುದು.

ಪ್ರತಿಸರಕಾರದ ಜೊತೆಯಲ್ಲಿ ಸುಮಳಂತಹ ಹೆಣ್ಣು ಮಗಳು ಕೂಡ ಕೆಲಸ ಮಾಡುತ್ತಾಳೆ. ವಸಂತ ಎಂಬ ಪ್ರತಿಸರಕಾರದ ಪ್ರತಿನಿಧಿಯನ್ನು ಜೈಲಿನಿಂದ ಬಿಡಿಸಲು ಹೋಗಿ ಪೋಲೀಸರ ಗುಂಡಿಗೆ ಬಲಿಯಾಗುತ್ತಾಳೆ.

**ಸ್ವಾತಂತ್ರ್ಯದೆಡೆಗೆ**

ಇದು ಬಸವರಾಜ ಕಟ್ಟೀಮನಿಯವರು ಬರೆದ ಮೊದಲ ಕಾದಂಬರಿಯಾಗಿದೆ. ಗಾಂಧೀಜಿಯವರ ಪೂರ್ಣ ಸ್ವರಾಜ್ಯದ ಕಲ್ಪನೆಯ ಪ್ರತಿರೂಪದ ಹಾಗೆ ಈ ಕಾದಂಬರಿಯು ಮೇಲ್ನೋಟಕ್ಕೆ ಕಂಡು ಬರುತ್ತದೆ. ವಸಾಹತುಶಾಹಿಯನ್ನು ವಿರೋಧಿಸುವ ಪ್ರತಿಭಟನೆಯ ನೆಲೆಯಲ್ಲಿ ಕಾದಂಬರಿ ಆರಂಭವಾಗುತ್ತದೆ. ಶೇಖರ ಎಂಬ ಹುಡುಗ ಪೊಲೀಸ್ ಸಿಪಾಯಿಯ ಮಗ. ಗಾಂಧೀಜಿಯ ಬಂಧನವನ್ನು ವಿರೋಧಿಸಿ ಬೆಳಗಾವಿಯಲ್ಲಿ ಮೆರವಣಿಗೆ ನಡೆದಿರುತ್ತದೆ. ಈ ಮೆರೆವಣಿಗೆಯಲ್ಲಿ ಧುಮುಕುವ ಮೂಲಕ ಶೇಖರ ತನ್ನಲ್ಲಿದ್ದ ಹೋರಾಟದ ಪ್ರಜ್ಞೆಯನ್ನು ಜಾಗೃತಗೊಳಿಸುತ್ತಾನೆ. ಪೊಲೀಸರಿಂದ ಏಟು ತಿಂದುದಲ್ಲದೆ ಗಾಂಧಿಟೋಪಿಗಾಗಿ ಪೀಡಿಸಿದ ಕಾರಣಕ್ಕಾಗಿ ತಂದೆಯಿಂದಲೂ ಮೈ ಹಣ್ಣಾಗುವಂತೆ ಬಡಿಸಿಕೊಳ್ಳುತ್ತಾನೆ. ಸ್ವಾಭಿಮಾನಕ್ಕೆ ಧಕ್ಕೆಯಾದ ಶೇಖರ ಮನೆಬಿಟ್ಟು ಹೋಗುತ್ತಾನೆ. ಗೊತ್ತು ಗುರಿಯಿಲ್ಲದೆ ಹೊರಟಾಗ ದಾರಿಯಲ್ಲಿ ಪರಿಚಯವಾಗುವ ಬಾಡಿಗೆ ಗಾಡಿಯ ಕಲ್ಲಾಪುರದ ಮಲ್ಲಣ್ಣ ಆತನನ್ನು ಕಲ್ಲಾಪುರಕ್ಕೆ ಕರೆದೊಯ್ಯುತ್ತಾನೆ.

ಹೀಗೆ ಸ್ವಾತಂತ್ರ್ಯ ಹೋರಾಟದ ಸೂಚನೆ ಕೊಟ್ಟ ಕಾದಂಬರಿ ತನ್ನ ಎರಡನೆಯ ಘಟ್ಟದಲ್ಲಿ ಕಲ್ಲಾಪುರದ ವಿವರಗಳನ್ನು ಕೊಡುವ ಮೂಲಕ, ಸ್ವಾತಂತ್ರ್ಯಪೂರ್ವದ ಹಳ್ಳಿಗಳ ಸ್ಥಿತಿಗತಿಗಳನ್ನು ಚಿತ್ರಿಸುತ್ತದೆ. ಅಜ್ಞಾನ, ದಾರಿದ್ರ್ಯ, ಹಸಿವು, ರೋಗ – ರುಜಿನ ಅಂಧಕಾರದ ಕೊಂಪೆಯಾಗಿದ್ದ ಕಲ್ಲಾಪುರವನ್ನು ಕಂಡ ಶೇಖರ ಮರುಗುತ್ತಾನೆ. ಗಾಂಧೀಜಿಯ ಗ್ರಾಮಾಭಿವೃದ್ಧಿಯ ಚಿಂತನೆ ಅವನಲ್ಲಿ ಗರಿಗೆದರಿ ಆತ ಅಲ್ಲೇ ನಿಂತು ಕಲ್ಲಾಪುರದ ಸರ್ವಾಂಗೀಣ ಪ್ರಗತಿಗೆ ದುಡಿಯತೊಡಗುವಂತೆ ಮಾಡುತ್ತದೆ. ಮಲ್ಲಣ್ಣನ ಮಗಳಾದ ಮುಗ್ಧ ಗೌರಿಗೂ ಓದು–ಬರಹ ಕಲಿಸಿದ್ದಲ್ಲದೆ ಅವಳಲ್ಲಿಯೂ ಆತ ರಾಷ್ಟ್ರೀಯತೆ ಹಾಗೂ ಗ್ರಾಮಾಭಿವೃದ್ಧಿಯ ವಿಚಾರಗಳ ಪ್ರಯೋಗಾತ್ಮಕ ಬೀಜ ಬಿತ್ತುತ್ತಾನೆ.

ಇಲ್ಲಿಂದ ಕಾದಂಬರಿ ನಗರ ಪ್ರದೇಶದ ದಲಿತ ಕೇರಿಯತ್ತ ಸಾಗುತ್ತದೆ. ಶೇಖರ ಕಲ್ಲಾಪುರದಲ್ಲಿರುವುದನ್ನು ಪತ್ತೆ ಮಾಡಿದ ಶಂಕರಪ್ಪ ಆತನನ್ನು ಊರಿಗೆ ಮರಳಿ ಕರೆದೊಯ್ಯುತ್ತಾನೆ. ಈ ಸಂದರ್ಭದಲ್ಲಿ ಆತ ಅನಿವಾರ್ಯವಾಗಿ ಬೆಳಗಾವಿಯ ದಲಿತ ಕೇರಿಯಲ್ಲಿ ವಾಸ ಮಾಡಬೇಕಾಗುತ್ತದೆ. ದಲಿತ ಕೇರಿಯ ಮುರುಕು ಗುಡಿಸಲು, ಅನ್ನದ ಕೂಗು, ಅನಾರೋಗ್ಯ, ಜರ್ಝರಿತ ಜೀವನ, ಅಲ್ಲಿ ನಡೆಯುತ್ತಿದ್ದ ಶ್ರೀಮಂತರ, ಕಾಮುಕರ ಶೋಷಣೆ– ಈ ಎಲ್ಲಾ ವಿಕೃತ ಸ್ಥಿತಿ ಶೇಖರನಿಗೆ ಸ್ವಾತಂತ್ರ್ಯಪೂರ್ವ ಭಾರತದ ಇನ್ನೊಂದು ಮಗ್ಗುಲನ್ನು ಪರಿಚಯಿಸುತ್ತದೆ. ಆತನ ಬಾಲ್ಯ ಸ್ನೇಹಿತ ರಾಜನಿಂದ ಶೇಖರನಿಗೆ ಕಮ್ಯುನಿಜಂನ ಪರಿಚಯವಾಗುತ್ತದೆ. ಬಡವರ ರಾಜ್ಯಕಟ್ಟುವ ಪಕ್ಷ ಅದೆಂದು ಭಾವಿಸಿ ಮೊದಲು ಅದನ್ನು ಗೌರವಿಸುತ್ತಾನೆ. ಆದರೆ ರಾಜನಂಥ ನಕಲಿ ಕಮ್ಯುನಿಸ್ಟರ ದಂಧೆಯನ್ನು ಅರಿತ ಮೇಲೆ ಶೇಖರ ಅದರಿಂದ ದೂರ ಉಳಿಯುತ್ತಾನೆ.

ಈ ಕಾದಂಬರಿಯ ಕೊನೆಯ ಘಟ್ಟ ಊರಿಗೆ ಊರೇ ಇನ್‌ಫ್ಲುಯೆಂಜಾ ತಗುಲಿ ಹೆಣಗಳ ರಾಶಿಯಾಗತೊಡಗಿದ ಸುದ್ದಿ ಶೇಖರನಿಗೆ ತಲುಪುತ್ತದೆ. ಮತ್ತೆ ಆತನಲ್ಲಿ ಗಾಂಧೀಜಿಯ ಗ್ರಾಮಾಭಿವೃದ್ಧಿಯ ಚಿಂತನೆ ಹರಳುಗೊಳ್ಳುತ್ತದೆ. ಆತ ಕಲ್ಲಾಪುರಕ್ಕೆ ಧಾವಿಸುತ್ತಾನೆ. ಊರಿನ ಆರೈಕೆಗೆ ನಿಲ್ಲುತ್ತಾನೆ. ಕಲ್ಲಾಪುರದಲ್ಲಿ ಗೌರಿಯ ಕೈ ಹಿಡಿದ ಶೇಖರ, ಶಾಂತಾ ಎಂಬವಳ ಸಹಕಾರದೊಂದಿಗೆ ಕಲ್ಲಾಪುರದಲ್ಲಿ 'ನೆಹರೂ ವಿದ್ಯಾಲಯ'ವನ್ನು ಆರಂಭಿಸಿ ಆ ಊರನ್ನು ಮಾದರಿ ಗ್ರಾಮವನ್ನಾಗಿ ಪರಿವರ್ತಿಸುತ್ತಾನೆ. ೧೯೪೨ರ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಲು ಕಲ್ಲಾಪುರದ ಜನರು ಸಿದ್ಧರಾಗುತ್ತಾರೆ. ಶೇಖರನೂ ಈ ಚಳುವಳಿಯೊಂದಿಗೆ ಭಾಗವಹಿಸುವುದರೊಂದಿಗೆ ಈ ಕಾದಂಬರಿ ಮುಕ್ತಾಯವಾಗುತ್ತದೆ

**ಕಲ್ಯಾಣಸ್ವಾಮಿ**

ನಿರಂಜನರೆಂದೇ ಪ್ರಸಿದ್ಧರಾದ ಕುಳಕುಂದ ಶಿವರಾಯರು ೧೯೫೭ರಲ್ಲಿ ಈ ಕಾದಂಬರಿಯನ್ನು ಬರೆದಿದ್ದಾರೆ. ಕೊಡಗು ಮತ್ತು ಈಗಿನ ದಕ್ಷಿಣಕನ್ನಡ ಎಂದು ಕರೆಯಲಾಗುವ ಪ್ರದೇಶಕ್ಕೆ ಸೇರಿರುವ ಸುಳ್ಯ ತಾಲೂಕಿನ ಪರಿಸರದಲ್ಲಿ ೧೮೩೭ರ ಆಸುಪಾಸಿನಲ್ಲಿ ನಡೆದ ಸ್ವಾತಂತ್ರ್ಯ ಹೋರಾಟದ ಘಟನೆಯು ಈ ಕಾದಂಬರಿಯ ವಸ್ತುವಾಗಿದೆ.

ಚಿಕವೀರರಾಜೇಂದ್ರನ ಕಾಲಕ್ಕಾಗುವಾಗ ಕೊಡಗಿನ ರಾಜಮನೆತನ ಹಾಗೂ ಬ್ರಿಟಿಷರ ಗೆಳೆತನ ಹಳಸಿತು. ಬ್ರಿಟಿಷ್ ಸೈನ್ಯ ಕೊಡಗಿಗೆ ದಂಡೆತ್ತಿ ಬಂತು. ರಾಜ ಮನೆತನದ ಅಂತಃಕಲಹ, ಬೋಪುದಿವಾನನ ಸ್ವಾಮಿದ್ರೋಹ ಕೂಡ ಕೊಡಗಿನ ದೊರೆಯ ಸೋಲಿಗೆ ಕಾರಣವಾಯಿತು. ಬೋಪು ದಿವಾನ ಮತ್ತು ಪ್ರೇಸರ್ ಉಪಾಯದಿಂದ ರಾಜನನ್ನು ಕಾಶಿಗೆ ಸಾಗಹಾಕಿದರು. ಹೀಗೆ ಕೊಡಗು ಕಂಪೆನಿ ಸರಕಾರದ ವಶವಾಗುತ್ತದೆ.

ಅಮರ ಸುಳ್ಯದಲ್ಲಿ ಮೊದಲು ಕಂದಾಯ ಅಸ್ತಿತ್ವದಲ್ಲಿದ್ದದ್ದು ಲಿಂಗರಾಜನ ಶಿಸ್ತು, ಲಿಂಗರಾಜನ ಕೋಲು. ಕೊಡಗಿನ ದೊರೆ ಲಿಂಗರಾಜ ಭೂಮಿಯ ಫಲವತ್ತತೆ ಹಾಗೂ ಅಳತೆಗನುಗುಣವಾಗಿ ಕಂದಾಯವನ್ನು ನಿಗದಿಪಡಿಸಿದ್ದನು. ಆದರೆ ಈಗ ಕಂಪೆನಿ ಸರಕಾರ ಕಂದಾಯವನ್ನು ಹಣದ ರೂಪದಲ್ಲಿ ಕೇಳಿತ್ತು. ಯುದ್ಧ ಗೊತ್ತಿಲ್ಲದ ರೈತರೆಲ್ಲಾ ಕಂಪೆನಿ ಸರಕಾರದ ವಿರುದ್ಧ ಯುದ್ಧಕ್ಕೆ ಸೇರಿದರು. ನಂಜಯ್ಯ, ರಾಮಪ್ಪಗೌಡ, ಸೋಮಯ್ಯ, ಹಿರಿಯರೆಲ್ಲ ತಮ್ಮ ಮನೆ ಮಠ ಎಲ್ಲವನ್ನೂ ತ್ಯಜಿಸಿ ಇಂಗ್ಲಿಷರ ವಿರುದ್ಧ ಹೋರಾಡಲು ಬಂದಿದ್ದರು. ಕೊಡಗಿನ ಸ್ವಾತಂತ್ರ್ಯಕ್ಕೋಸ್ಕರ ಕೊಡವರು, ಕನ್ನಡಿಗರು, ತುಳುವರೆಲ್ಲರೂ ಒಂದಾಗಿದ್ದರು. ಕಲ್ಯಾಣಪ್ಪನ ದಂಡು ಸುಳ್ಯದಲ್ಲಿ ಸ್ವಾತಂತ್ರ್ಯ ಘೋಷಿಸಿ ಬೆಳ್ಳಾರೆಯತ್ತ ನಡೆಯಿತು. ಬೆಳ್ಳಾರೆಯಲ್ಲಿ ಸರಕಾರದ ಖಜಾನೆಯು ಇವರ ವಶವಾಗುತ್ತದೆ, ಬೆಳ್ಳಾರೆಯ ಜನರನ್ನು ವಿಶ್ವಾಸಕ್ಕೆ ತೆಗೆದುಕೊಂಡು ಅಲ್ಲಿಗೊಬ್ಬ ಸುಬೇದಾರರನ್ನು ಗೊತ್ತುಮಾಡಿ ಕಲ್ಯಾಣಪ್ಪನ ದಂಡು ಪುತ್ತೂರಿಗೆ ಬರುತ್ತದೆ. ಬ್ರಿಟಿಷರು ಕಲ್ಯಾಣಪ್ಪನ ದಂಡನ್ನು 'ಕಾಟಕಾಯಿ' ಎಂದು ಕರೆದಿದ್ದಾರೆ. ಆದರೆ

ಕಲ್ಯಾಣಪ್ಪನ ಸೈನ್ಯ ಎಲ್ಲಿಯೂ ಜನಸಾಮಾನ್ಯರಿಗೆ ಅನ್ಯಾಯ ಮಾಡುವುದಿಲ್ಲ. ಜನರ ವಿಶ್ವಾಸಕ್ಕೆ ಪಾತ್ರವಾಗುತ್ತದೆ.

ಕಲ್ಯಾಣಪ್ಪನ ದಂಡು ಮುಂದೆ ಮುಂದೆ ಸಾಗುತ್ತಿದ್ದಂತೆ ಸುಳ್ಯ, ಬೆಳ್ಳಾರೆ, ಪುತ್ತೂರು ಎಲ್ಲಾ ಕಡೆಯಿಂದಲೂ ಕಂಪೆನಿ ಸರಕಾರದ ವಿರುದ್ಧ ಯುದ್ಧ ಮಾಡಲು ಶಸ್ತ್ರಾಸ್ತ್ರ ಸಮೇತರಾಗಿ ಸೇರಿಕೊಳ್ಳುತ್ತಾರೆ. ವಿಟ್ಲದರಸು ನೂರೈವತ್ತು ಮಂದಿ ಸೈನಿಕರೊಂದಿಗೆ ಕಲ್ಯಾಣಸ್ವಾಮಿಯ ದಂಡಿಗೆ ಸೇರುತ್ತಾನೆ. ನಂದಾವರದ ಅರಸು ಲಕ್ಷ್ಮಪ್ಪ ಬಂಗರಸ ದಂಡಿಗೆ ಅದ್ದೂರಿ ಸ್ವಾಗತವನ್ನು ನೀಡಿ ದಂಡಿಗೆ ಸೇರಿಕೊಂಡನು. ನಂದಾವರದಿಂದ ಸೇನೆ ಬಂಟ್ವಾಳಕ್ಕೆ ಬರುತ್ತದೆ. ಇತ್ತ ಮಂಜೇಶ್ವರದಲ್ಲಿ ಸುಬ್ರಾಯ ಹೆಗ್ಗಡೆಯ ನೇತೃತ್ವದಲ್ಲಿ ಒಂದೂವರೆಸಾವಿರ ಸೈನಿಕರು ಕಲ್ಯಾಣಸ್ವಾಮಿಯ ದಂಡನ್ನು ಸೇರಿಕೊಳ್ಳಲು ನೆರೆದಿರುತ್ತಾರೆ. ಆದರೆ ಈ ಸೈನ್ಯ ಕೊನೆಗೂ ಕಲ್ಯಾಣಸ್ವಾಮಿಯ ದಂಡನ್ನು ಸೇರಿಕೊಳ್ಳಲು ಸಾಧ್ಯವಾಗಲಿಲ್ಲ. ನದಿ ದಾಟಬೇಕಾದರೆ ಕೊನೆಗೂ ಇಂಗ್ಲಿಷರ ಫರಂಗಿಗೆ ಬಲಿಯಾದುವು. ಮಂಗಳೂರಿಗೆ ಕಲ್ಯಾಣಸ್ವಾಮಿಯ ಸೈನ್ಯ ತಲುಪುವ ಮೊದಲೇ ಬ್ರಿಟಿಷರು ಅಲ್ಲಿಂದ ಕಾಲ್ಕಿತ್ತರು. ಆಂಗ್ಲರು ವಾಸ ಮಾಡುತ್ತಿದ್ದ ಮನೆಯನ್ನು ಸುಡಲಾಯಿತು. ಕಲ್ಯಾಣಸ್ವಾಮಿಯ ದಂಡಿನಿಂದ ಅವರ ಆಡಳಿತದ ಬುಡ ದಡದಡನೆ ನಡುಗತೊಡಗಿತು.

ಕೊಡಗಿನ ವೀರಾಧಿವೀರರೆಲ್ಲರೂ, ಕೊಡಗು ಸಾಮ್ರಾಜ್ಯದ ಹಿತೈಷಿಗಳೆಲ್ಲರೂ ಕಲ್ಯಾಣಸ್ವಾಮಿಯ ದಂಡನ್ನು ಸೇರಿಕೊಂಡದ್ದು ಲಿಹಾರ್ಡಿಗೆ ನಡುಕ ಹುಟ್ಟಿಸುತ್ತಿತ್ತು. ಕಲ್ಯಾಣಪ್ಪನ ದಂಡಿನ ಹೆಸರಿನಲ್ಲಿ ಕೆಲವು ಕಿಡಿಗೇಡಿಗಳು ಊರ ಮನೆಗಳನ್ನು ದರೋಡೆ ಮಾಡುತ್ತಾರೆ. ಆದುದರಿಂದಲೇ 'ಕಾಟಕಾಯಿ' ಎಂಬ ಕಳಂಕ ಅವನ ಸೈನ್ಯಕ್ಕೆ ತಟ್ಟುತ್ತದೆ. ಚೆಂಬು ಪೆರಾಜೆ ಮತ್ತು ವೀರರಾಜಪೇಟೆಯ ಕೆಲವು ಸೈನಿಕರು ಬಂದು ದಂಡನ್ನು ಸೇರಿಕೊಳ್ಳುತ್ತಾರೆ. ಕೊಡಗಿನಲ್ಲಿ ಬೋಪುದಿವಾನನಂತಹ ರಾಜದ್ರೋಹಿಯ ಸೈನಿಕರು ಕೂಡ ದಂಡನ್ನು ಸೇರಲು ಹೊರಟಿದ್ದರು. ಕಲ್ಯಾಣಸ್ವಾಮಿಯ ಹೆಸರು ಕೇಳಿದರೆ ಬ್ರಿಟಿಷ್ ಅಧಿಕಾರಿ ಲಿಹಾರ್ಡಿಯ ಜಂಘಾಬಲವೇ ಉಡುಗಿ ಹೋಯಿತು.

ಬೋಪು ದಿವಾನನಂತಹ ದೇಶದ್ರೋಹಿಗಳಿಂದಾಗಿ ಕೊಡಗು ಬ್ರಿಟಿಷರ ವಶವಾಗುತ್ತದೆ. ಆದರೆ ೧೮೩೭ರ ಸುಮಾರಿಗೆ ಪುಟ್ಟ ಬಸವನು ಕಲ್ಯಾಣಸ್ವಾಮಿಯೆಂಬ ಹೆಸರಿನಿಂದ ಸೇನೆಯೊಂದನ್ನು ಕಟ್ಟುತ್ತಾನೆ. 'ಕಲ್ಯಾಣಪ್ಪನ ದಂಡು' ಎಂದೇ ಪ್ರಸಿದ್ಧವಾದ ಈ ಸೇನೆಯನ್ನು ಲಿಂಗಾಯಿತರು, ಒಕ್ಕಲಿಗರು, ಹಿಂದುಗಳು, ಮುಸಲ್ಮಾನರು, ಎಲ್ಲರೂ ಸೇರಿಕೊಂಡರು. ಪರಕೀಯರನ್ನು ಭಾರತದಿಂದ ಹೊಡೆದೋಡಿಸಲು ಕನ್ನಡಾಂಬೆಯ ಮಕ್ಕಳೆಲ್ಲರೂ ಕೈಜೋಡಿಸಿ ಮಂಗಳೂರನ್ನು ವಶಪಡಿಸಿಕೊಳ್ಳುತ್ತಾರೆ. ಆದರೂ ಬೋಪುದಿವಾನನಂತಹ ದೇಶದ್ರೋಹಿಗಳ ಸಂಚಿನಿಂದಾಗಿ ಹಾಗೂ ಬ್ರಿಟಿಷರ ಆಧುನಿಕ ಶಸ್ತ್ರಾಸ್ತ್ರಗಳ ಬಳಕೆಯಿಂದಾಗಿ 'ಕಲ್ಯಾಣಪ್ಪನ ದಂಡು' ಸೋಲನ್ನು ಅನುಭವಿಸುತ್ತದೆ. ಕೊನೆಗೆ ತನ್ನ ಮಾತೃಭೂಮಿಗೋಸ್ಕರ ಬಿಕರ್ನಕಟ್ಟೆಯಲ್ಲಿ ಉರುಳುಗಂಬಕ್ಕೆ ತಲೆಯೊಡ್ಡಬೇಕಾಗುತ್ತದೆ.

**ರಕ್ತತರ್ಪಣ**

ತ.ರಾ.ಸು ಎಂದೇ ಪ್ರಸಿದ್ಧರಾದ ತಳುಕಿನ ರಾಮಚಂದ್ರ ಸುಬ್ಬರಾವ್ ಅವರು ೧೯೪೬ರಲ್ಲಿ ಈ ಕಾದಂಬರಿಯನ್ನು ಪ್ರಕಟಿಸಿದರು. ಇದು ಒಂದು ಹಳ್ಳಿಯಲ್ಲಿ ನಡೆದ ಘಟನೆಯ ಚಿತ್ರಣವಾಗಿದೆ. ಸೋನಲಾಪುರವೆಂಬ ಚಿಕ್ಕ ಹಳ್ಳಿಯಲ್ಲಿ ನಡೆದ ಘಟನೆ ಇದು. ಚಂದ್ರಶೇಖರನ ಆಗಮನವು ಸೋನಲಾಪುರದ ಜನತೆಯಲ್ಲಿ ಸುಪ್ತವಾಗಿದ್ದ ದೇಶಪ್ರೇಮವನ್ನು ಬಡಿದೆಬ್ಬಿಸತ್ತದೆ. ಸ್ವಾತಂತ್ರ್ಯದ ಬಗೆಗಾಗಲಿ, ಬ್ರಿಟಿಷರ ಬಗೆಗಾಗಲಿ, ಅಷ್ಟೊಂದು ಕಲ್ಪನೆಯಿಲ್ಲದ ಹಳ್ಳಿಯ ಜನರಿಗೆ ರಾಷ್ಟ್ರೀಯತೆಯ ಕಲ್ಪನೆ, ತಾವು ಬ್ರಿಟಿಷರ ದಾಸ್ಯದಲ್ಲಿದ್ದೇವೆ, ತಮ್ಮ ಪ್ರಾಣವನ್ನು ತೆತ್ತಾದರೂ ಈ ದಾಸ್ಯದಿಂದ ಮುಕ್ತಿ ದೊರಕಿಸಬೇಕೆಂಬ ಜಾಗೃತಿಯನ್ನು ಮೂಡಿಸಿದವನು ಚಂದ್ರಶೇಖರ್. ಹೆಂಡದಂಗಡಿ ಪಿಕೆಟಿಂಗ್‌ನಲ್ಲಿ ತೊಡಗಿದ್ದ ಚಂದ್ರಶೇಖರ್ ಪೊಲೀಸರ ಲಾಠಿ ಏಟಿಗೆ ಬಲಿಯಾಗಿ ಅದರಿಂದ ತಪ್ಪಿಸಿಕೊಳ್ಳಲು ಅಜ್ಜಿಗನ ಗಾಡಿಯಲ್ಲಿ ಮಲಗಿರುತ್ತಾನೆ. ಲಾಠಿಚಾರ್ಜಿನಿಂದ ಹಣೆಗೆ ಪೆಟ್ಟಾಗಿದ್ದ ಆತನಿಗೆ ಪ್ರಜ್ಞೆ ತಪ್ಪಿರುತ್ತದೆ. ಈ ವಿಷಯ ತಿಳಿದ ಅಜ್ಜಿಗ ಹಾಗೂ ಆತನ ತಂದೆ ಬೊಮ್ಮಯ್ಯ ಚಂದ್ರಶೇಖರನನ್ನು ಉಪಚರಿಸುತ್ತಾರೆ. ತಮ್ಮ ಊರ ಶಾನುಭೋಗರಾದ ಸೀತಾರಾಮಯ್ಯನವರ ಮನೆಯಲ್ಲಿ ಅವನಿಗೆ ಆಶ್ರಯವನ್ನು ಕೊಡಿಸುತ್ತಾರೆ. ಚಂದ್ರಶೇಖರ ಆ ಹಳ್ಳಿಯ ಯುವಕರಿಗೆ ಭಾರತ ಮಾತೆ ಬ್ರಿಟಿಷರ ದಾಸ್ಯಕ್ಕೊಳಗಾದುದು, ಬ್ರಿಟಿಷರು ಭಾರತೀಯರ ಮೇಲೆ ನಡೆಸುವ ದೌರ್ಜನ್ಯ, ಗಾಂಧೀಜಿಯವರ ಅಹಿಂಸಾತ್ಮಕ ಚಳುವಳಿ ಇತ್ಯಾದಿ ವಿಷಯವನ್ನು ಸವಿವರವಾಗಿ ಆ ಜನರಿಗೆ ವಿವರಿಸಿ ಹಳ್ಳಿಯ ಜನರಲ್ಲಿ ಹೋರಾಟದ ಕಿಚ್ಚನ್ನು ಹುಟ್ಟಿಸುತ್ತಾನೆ. ಅಲ್ಲಿಯ ಯುವಕರೆಲ್ಲರೂ ದೇಶಕ್ಕೋಸ್ಕರ ಪ್ರಾಣತ್ಯಾಗಕ್ಕೂ ತಾವು ಸಿದ್ಧ ಎಂಬುದಾಗಿ ಪ್ರಮಾಣ ಮಾಡುತ್ತಾರೆ. ದೇಶದ್ರೋಹಿ ಬಾಪಾರೆಡ್ಡಿ ದೇಶ ಪ್ರೇಮಿಗಳಾದ ಈ ಹಳ್ಳಿಯ ಜನರ ವಿರುದ್ಧ ದಫೇದಾರನಿಗೆ ದೂರು ನೀಡುತ್ತಾನೆ. ಇಂತಹ ಸ್ವದೇಶ ದ್ರೋಹಿಗಳ ಕುಕೃತ್ಯಕ್ಕೆ ಚಂದ್ರಶೇಖರ ಬಲಿಯಾಗುತ್ತಾನೆ. ಹೋರಾಟದ ಮಂತ್ರವನ್ನೇ ಜಪಿಸುತ್ತಾ ಪ್ರಾಣತ್ಯಾಗ ಮಾಡುತ್ತಾನೆ.

**ಮೂರಾಬಟ್ಟೆ**

ವಿ.ಎಂ ಇನಾಂದಾರ್ ಅವರು ರಚಿಸಿದ ಈ ಕಾದಂಬರಿಯ ಹೆಸರೇ ಸೂಚಿಸುವಂತೆ ಇಲ್ಲಿ ಬರುವ ಎಲ್ಲಾ ಪಾತ್ರಗಳ ಬದುಕು ಕೂಡಾ ಮೂರಾಬಟ್ಟೆಯಾಗುತ್ತದೆ. ಶಾಮಣ್ಣ ದೇಶಸೇವೆ ಮಾಡಿ ಜೈಲು ಸೇರುತ್ತಾನೆ. ಅವನ ಮನೆ ಮೂರಾಬಟ್ಟೆಯಾಗುತ್ತದೆ. ತಾಯಿ ತಂಗಿಯ ಬದುಕು ನಾಶವಾಗುತ್ತದೆ. ಮಗನ ಚಿಂತೆಯಲ್ಲಿ ಅವನ ತಾಯಿ ರಿಂದವ್ವ 'ಶಾಮಣ್ಣ, ಶಾಮಣ್ಣ' ಎಂದು ಕೂಗುತ್ತಲೇ ಇಹಲೋಕದ ಯಾತ್ರೆಯನ್ನು ಮುಗಿಸುತ್ತಾಳೆ.

ಇತ್ತ ರಾಮಣ್ಣ ತನ್ನ ತಾಯಿಗಾಗಿ ತನ್ನ ಧ್ಯೇಯವನ್ನು ಬಲಿಕೊಟ್ಟು ಕ್ಷಮಾಪಣ ಪತ್ರ ಬರೆದು ಜೈಲಿನಿಂದ ಹೊರಬರುತ್ತಾನೆ. ತನ್ನ ಧ್ಯೇಯವೇ ಮೂರಾಬಟ್ಟೆಯಾದರೂ ಹೆತ್ತ ತಾಯಿ

ಎಲ್ಲಕ್ಕಿಂತಲೂ ಮಿಗಿಲು ಎಂದು ಭಾವಿಸುತ್ತಾನೆ. ಆದರೆ ಕೊನೆಗೂ ಅವನಿಗೆ ತಾಯಿಯ ಮುಖವನ್ನು ನೋಡುವ ಭಾಗ್ಯ ದೊರಕುವುದಿಲ್ಲ.

ಶಾಮಣ್ಣನ ಗೆಳೆಯ ರಾಮಣ್ಣ ಸರಕಾರಿ ವಕೀಲನಾಗಿರುತ್ತಾನೆ. ಭೋಗ ಜೀವನವನ್ನು ಬಯಸಿದವನು. ನಿರ್ಮಲೆಯ ಪ್ರೇಮದಲ್ಲಿ ಮೈ ಮರೆತು ಪ್ರಪಂಚದಲ್ಲಿ ತಾನು ಅತ್ಯಂತ ಸುಖಿ ಎಂಬುದಾಗಿ ಯೋಚಿಸುತ್ತಾನೆ. ತನ್ನ ಸರಕಾರಿ ವಕೀಲಗಿರಿಯನ್ನು ಉಳಿಸಿಕೊಳ್ಳಲು ತನ್ನ ಆತ್ಮಸಾಕ್ಷಿಗೆ ವಿರುದ್ಧವಾಗಿ ಗೆಳೆಯ ಶಾಮಣ್ಣನ ವಿರುದ್ಧವಾಗಿಯೇ ವಾದಿಸುತ್ತಾನೆ. ಆದರೆ ಕೊನೆಗೆ ಅವನನ್ನು ಪಾಪಪ್ರಜ್ಞೆ ಕಾಡಲಾರಂಭಿಸುತ್ತದೆ. ಪುಣೆಯಲ್ಲಿ ನಿರ್ಮಲೆ ಮತ್ತು ರಾಮಣ್ಣ ಒಂದಾಗುತ್ತಾರೆ. ಆದರೆ ಆ ಘಟನೆಯ ನಂತರ ಅವಳಿಗೆ ಏನೋ ಒಂದು ರೀತಿಯ ಖಿನ್ನತೆ ಆವರಿಸುತ್ತದೆ. ಪ್ರೀತಿ, ಪ್ರೇಮದ ಉತ್ಕೃಷ್ಟತೆ ದೈಹಿಕ ಸಂಪರ್ಕದೊಂದಿಗೆ ಕೊನೆಗೊಳ್ಳಬೇಕೆ? ಇದಕ್ಕಿಂತ ಅತೀತವಾದುದು ಏನೂ ಇಲ್ಲವೇ? ಎಂಬಂತಹ ಒಂದು ಭಾವನೆ ಅವಳನ್ನು ಆವರಿಸುತ್ತದೆ. ಅವಳು ಕೂಡಾ ರಾಮಣ್ಣನಲ್ಲಿ ಆಸಕ್ತಿಯನ್ನು ಕಳೆದುಕೊಳ್ಳುತ್ತಾಳೆ. ಅವಳ ತಾಯಿ ಕೂಡಾ ರಾಮಣ್ಣ ನಿರ್ಮಲೆಯಿಂದ ದೂರವಾಗಬೇಕೆಂದು ಬಯಸುತ್ತಾಳೆ. ಈ ರೀತಿಯಾಗಿ ನಿರ್ಮಲೆ ಹಾಗೂ ರಾಮಣ್ಣನ ಬದುಕಿನ ಸುಖದ ಕ್ಷಣಗಳು ಕೂಡಾ ಮಿಂಚಿನಂತೆ ಮಿಂಚಿ ಮಾಯವಾಗುತ್ತದೆ. ಹೀಗೆ ಈ ಕಾದಂಬರಿಯಲ್ಲಿ ಬರುವ ಪ್ರತಿಯೊಂದು ಪ್ರಮುಖ ಪಾತ್ರದ ಬಾಳು ಕೂಡಾ ಒಂದಲ್ಲ ಒಂದು ರೀತಿಯಲ್ಲಿ ಮೂರಾಬಟ್ಟೆಯಾಗುವುದನ್ನು ನಾವು ಕಾಣುತ್ತೇವೆ.

**ರಾಷ್ಟ್ರ ಪುರುಷ**

ಮಿರ್ಜಿ ಅಣ್ಣರಾಯರ 'ರಾಷ್ಟ್ರಪುರುಷ' ಕಾದಂಬರಿಯಲ್ಲಿ 'ಅಜಿತ'ನೆಂಬ ಯುವಕ ದೇಶದ ಸ್ವಾತಂತ್ರ್ಯಸಂಗ್ರಾಮದಲ್ಲಿ ಧುಮುಕಿ ದೇಶಕ್ಕಾಗಿ ತನ್ನನ್ನೇ ಅರ್ಪಿಸಿಕೊಳ್ಳುತ್ತಾನೆ. ರಾಷ್ಟ್ರೀಯ ಆದರ್ಶದಿಂದ ಪ್ರೇರಿತನಾಗಿ ಸೆರೆಮನೆವಾಸ ಹಾಗೂ ಇನ್ನಿತರ ಕಷ್ಟ ಪರಂಪರೆಗಳನ್ನು ಅನುಭವಿಸುತ್ತಾನೆ. ಅಜಿತನ ಜೀವನ ಚಿತ್ರಣದೊಂದಿಗೆ ಭಾರತ ಸ್ವಾತಂತ್ರ್ಯದ ಕಥೆಯನ್ನು ನಿರೂಪಿಸಲಾಗಿದೆ. ಕಥಾನಾಯಕನಾದ ಅಜಿತನು ಭಾರತದ ರಾಷ್ಟ್ರೀಯತ್ವದ ಪ್ರತೀಕವಾಗಿ ಬೆಳೆದುಕೊಂಡು ಬರುತ್ತಾನೆ.

**ಆಂದೋಲನ**

ವಸುದೇವ ಭೂಪಾಲನಂ ಅವರು ಈ ಕಾದಂಬರಿಯನ್ನು ರಚಿಸಿದ್ದಾರೆ. ಅವರು ತಮ್ಮ ವಿದ್ಯಾರ್ಥಿ ದೆಸೆಯಲ್ಲಿ ಹೋರಾಟದಲ್ಲಿ ಭಾಗವಹಿಸಿದವರಾದ ಕಾರಣ ಈ ಕಾದಂಬರಿಗೆ ಐತಿಹಾಸಿಕ ಮಹತ್ವವಿದೆ. ವೀರೇಂದ್ರ ಕಾಲೇಜು ವಿದ್ಯಾರ್ಥಿಗಳ ನಾಯಕ. ಹೊಸದಾಗಿ ತಾರ ಎಂಬ ಸುಂದರಿಯಾದ ಯುವತಿಯನ್ನು ಮದುವೆಯಾಗಿದ್ದನು. ಆದರೆ ತಾರೆಯ ಆಕರ್ಷಣೆಗಿಂತ ಸ್ವಾತಂತ್ರ್ಯ ಸಂಘರ್ಷದ ಆಕರ್ಷಣೆಯೇ ಅವನಿಗೆ ಹಿತವಾಗಿತ್ತು. ಮೈಸೂರಿನಲ್ಲಿ ವೀರೇಂದ್ರ ವಿದ್ಯಾರ್ಥಿಗಳನ್ನುದ್ದೇಶಿಸಿ ಮಾಡಿದ ಭಾಷಣವನ್ನು ಕೇಳಲು ವಿವಿಧ ಕಾಲೇಜುಗಳ

ವಿದ್ಯಾರ್ಥಿಗಳು ನೆರೆಯುತ್ತಾರೆ. ಅವರನ್ನುದ್ದೇಶಿಸಿ ಸ್ವಾತಂತ್ರ್ಯ ಸಮರಕ್ಕೆ ಧುಮುಕುವಂತೆ ಕರೆ ನೀಡುತ್ತಾನೆ.

ವಿದ್ಯಾರ್ಥಿಗಳು ಕಾಲೇಜಿಗೆ ಹೋಗದಂತೆ ವೀರೇಂದ್ರನ ತಂಡ ಪಿಕೆಟಿಂಗ್ ನಡೆಸುತ್ತದೆ. ಸಂಜೆ ಕಾಲೇಜಿನ ಮೈದಾನದಿಂದಲೇ ವಿದ್ಯಾರ್ಥಿಗಳ ಮೆರವಣಿಗೆ ಹೊರಡುತ್ತದೆ. ಅಹಿಂಸಾತ್ಮಕವಾಗಿ ಆರಂಭವಾದ ಮೆರವಣಿಗೆ ಹಿಂಸೆಯಲ್ಲಿ ಕೊನೆಗೊಳ್ಳುತ್ತದೆ. ಪೊಲೀಸರ ಲಾಠಿ ಚಾರ್ಜಿಗೆ ಹಲವು ಸ್ವಯಂಸೇವಕರು ನೆಲಕ್ಕುರುಳುತ್ತಾರೆ.

ಈ ವಿದ್ಯಾರ್ಥಿಗಳ ತಂಡವು ಶ್ರೀರಂಗಪಟ್ಟಣದ ಸೇತುವೆಯನ್ನು ಸ್ಫೋಟಿಸುವ ಯೋಜನೆಯನ್ನು ಹಾಕಿಕೊಂಡಿರುತ್ತಾರೆ. ಆದರೆ ಅವರ ಯೋಜನೆಯು ವಿಫಲವಾಗುತ್ತದೆ. ರಾಮಾನುಜ ಎಂಬ ವಿದ್ಯಾರ್ಥಿ ಪೊಲೀಸರ ಕೈಗೆ ಸಿಕ್ಕಿ ಬೀಳುತ್ತಾನೆ. ೧೯೪೨ರ ಚಳುವಳಿಯಲ್ಲಿ ಅಸಂಖ್ಯಾತ ವಿದ್ಯಾರ್ಥಿನಿಯರು ಕೂಡಾ ಭಾಗವಹಿಸಿದ್ದರು. ಹಲವು ಸಾವಿರ ವಿದ್ಯಾರ್ಥಿ ವಿದ್ಯಾರ್ಥಿನಿಯರ ಗುಂಪು ಕೋರ್ಟ್ ಆವರಣಕ್ಕೆ ಮುತ್ತಿಗೆ ಹಾಕುತ್ತದೆ. ನಂಜಿನಿ ಎಂಬ ವಿದ್ಯಾರ್ಥಿನಿ ಆಂಗ್ಲ ಮುಖ್ಯ ನ್ಯಾಯಾಧೀಶನ ಮೋಟಾರಿನ ಮುಂದುಗಡೆ ಹಾರಾಡುತ್ತಿದ್ದ ಯೂನಿಯನ್ ಜಾಕ್ ಧ್ವಜವನ್ನು ಕಿತ್ತು ಸಣ್ಣ ತ್ರಿವರ್ಣ ಧ್ವಜವನ್ನು ಸಿಕ್ಕಿಸುತ್ತಾಳೆ. ಹೀಗೆ ವಿದ್ಯಾರ್ಥಿಗಳು ೧೯೪೨ರ ಚಳವಳಿಯಲ್ಲಿ ಪ್ರಮುಖ ಪಾತ್ರವನ್ನು ನಿರ್ವಹಿಸುತ್ತಾರೆ.

ಸೇಂದಿ ಅಂಗಡಿ ಪಿಕೆಟಿಂಗ್ ನಡೆಸುತ್ತಾರೆ, ತಾಳೆ ಮರಗಳನ್ನು ಕಡಿದು ಹಾಕುತ್ತಾರೆ, ಹಳ್ಳಿಹಳ್ಳಿಗಳಿಗೆ ತೆರಳಿ ಪೋಸ್ಟರುಗಳನ್ನು ಬರೆದು ಹಾಕಿ ಅವಕಾಶ ಸಿಕ್ಕ ಕಡೆಗಳಲ್ಲಿ ಭಾಷಣಗಳನ್ನು ಮಾಡುತ್ತಾ ಸ್ವಾತಂತ್ರ್ಯ ಚಳುವಳಿಯ ಕುರಿತು ಜನಜಾಗೃತಿಯನ್ನು ಉಂಟುಮಾಡುತ್ತಾರೆ.

ಚಳವಳಿಯಲ್ಲಿ ತೊಡಗಿಕೊಂಡ ವಿದ್ಯಾರ್ಥಿ ನಾಯಕ ವೀರೇಂದ್ರನನ್ನು ಪೊಲೀಸರು ಬೆನ್ನಟ್ಟುತ್ತಾರೆ. ಅವನು ಪದೇ ಪದೇ ತನ್ನ ವಾಸ್ತವ್ಯವನ್ನು ಬದಲಾಯಿಸುತ್ತಾ ಇರುತ್ತಾನೆ. ಚಳವಳಿಗಾರರು ಕೆಲವೊಂದು ಸಂದರ್ಭದಲ್ಲಿ ಗೊರಿಲ್ಲಾ ಮಾದರಿಯ ಯುದ್ಧ ವಿಧಾನವನ್ನು ಬಳಸಿಕೊಂಡರು. ಕೆಲವು ದಿನಗಳ ಕಾಲ ರಂಗಾಪುರ ಎಂಬ ಊರಿನಲ್ಲಿ ಸ್ವತಂತ್ರ ಸರಕಾರವನ್ನು ರಚಿಸಿದರು. ಆದರೆ ಮಿಲಿಟರಿ ಪಡೆ ಬಂದು ಊರಿನ ಚಳವಳಿಯನ್ನು ಅಡಗಿಸಿ ಊರನ್ನು ತನ್ನ ವಶಕ್ಕೆ ತೆಗೆದುಕೊಳ್ಳುತ್ತಾರೆ. ಸಿಪಾಯಿಗಳ ಆಧುನಿಕ ಶಸ್ತ್ರಾಸ್ತ್ರಗಳ ಎದುರು ಚಳವಳಿಗಾರರ ಯಾವ ಯುದ್ಧವು ಪ್ರಯೋಜನಕ್ಕೆ ಬರುವುದಿಲ್ಲ. ಅಧಿಕ ಸಂಖ್ಯೆಯ ಪಾಶವೀ ಶಕ್ತಿಯ ಎದರು ಸ್ವಾತಂತ್ರ್ಯವೀರರು ತಲೆ ತಗ್ಗಿಸಬೇಕಾಗುತ್ತದೆ. ಚಳುವಳಿಗಾರರ ಸ್ಥಿತಿ ತೀರಾ ಶೋಚನೀಯವಾಗಿರುತ್ತದೆ. ಅನ್ನ, ಆಹಾರ, ವಸತಿ, ನಿದ್ದೆ ಎಲ್ಲದರಲ್ಲೂ ಕೊರತೆಯನ್ನು ಅವರು ಅನುಭವಿಸುತ್ತಾರೆ. ಕೊನೆಗೆ ಒಂದು ದಿನ ವೀರೇಂದ್ರನು ಕೂಡ ಪೊಲೀಸರ ಕೈದಿಯಾಗಿ ಸೆರೆಮನೆ ಸೇರುತ್ತಾನೆ. ತನ್ನ ಆಪ್ತ ಸ್ನೇಹಿತರ ಸಾವು, ಜೀವದ ಗೆಳತಿ ನಂಜಿನಿಯ ಸಾವು, ಸೆರೆಮನೆಯ ವಾಸ ವೀರೇಂದ್ರನನ್ನು ಹದಗೆಡಿಸುತ್ತದೆ. ಆರೋಗ್ಯ ದಿನದಿಂದ ದಿನಕ್ಕೆ

ಕ್ಷೀಣಿಸುತ್ತದೆ. ಒಂದು ದಿನ ಯಾವುದೋ ಕಾರಣಕ್ಕೆ ಬಂಧಿಗಳು ಪೊಲೀಸ್ ಠಾಣೆಯಲ್ಲಿ ಗದ್ದಲವೆಬ್ಬಿಸುತ್ತಾರೆ. ಪೊಲೀಸ್ ಅಧಿಕಾರಿಗಳಿಗೂ ಕೈದಿಗಳಿಗೂ ಕೈ ಕೈ ಮಿಲಾಯಿಸಿತು. ಇದರಲ್ಲಿ ನಿಜವಾಗಿ ವೀರೇಂದ್ರ ಶಾಮೀಲಾಗಿರಲಿಲ್ಲ. ಆದರೆ ಅಧಿಕಾರಿಯೊಬ್ಬ ಸಿಡಿಸಿದ ಬಂದೂಕಿಗೆ ವೀರೇಂದ್ರನೂ ಬಲಿಯಾಗುತ್ತಾನೆ.

ಹೀಗೆ ವಿದ್ಯಾರ್ಥಿ ನಾಯಕನಾಗಿ ಚಳವಳಿಯನ್ನು ಮುಂದುವರಿಸಿದ ವೀರೇಂದ್ರ ಚಳವಳಿಯಲ್ಲಿ ತನ್ನೆಲ್ಲಾ ಆಪ್ತ ಸ್ನೇಹಿತರನ್ನು ಕಳೆದುಕೊಳ್ಳುತ್ತಾನೆ. ತಾನು ಪ್ರೀತಿಸುತ್ತಿದ್ದ ನಂಜನಿಯನ್ನೂ ಕಳೆದುಕೊಳ್ಳುತ್ತಾನೆ. ಕೊನೆಗೆ ಭಾರತ ಮಾತೆಯ ಪವಿತ್ರ ಪಾದಾರವಿಂದಕ್ಕೆ ತನ್ನನ್ನೇ ಬಲಿಕೊಡುತ್ತಾನೆ.

**ಔದಾರ್ಯದ ಉರುಳಲ್ಲಿ**

ಶಿವರಾಮ ಕಾರಂತರು ರಚಿಸಿದ ಈ ಕಾದಂಬರಿಯು ಒಂದರ್ಥದಲ್ಲಿ ಅವರ ಅನುಭವ ಕಥನವಾಗಿದೆ. ಯಾಕೆಂದರೆ ೧೯೩೦ರ 'ಉಪ್ಪಿನ ಸತ್ಯಾಗ್ರಹ'ದ ಸಮಯದಲ್ಲಿ ಅವರು ಹೋರಾಟದಲ್ಲಿ ಪರೋಕ್ಷವಾಗಿ ಪಾಲ್ಗೊಂಡು ಜನಜಾಗೃತಿಯನ್ನು ಮೂಡಿಸಲು ಊರೂರು ಸುತ್ತುತ್ತಿದ್ದರು ಎಂಬುದಾಗಿ ಅವರೇ ತಮ್ಮ 'ಸ್ಮೃತಿ ಪಟಲದಿಂದ' ಕೃತಿಯಲ್ಲಿ ಹೇಳಿಕೊಂಡಿದ್ದಾರೆ.

ದಕ್ಷಿಣಕನ್ನಡ ಜಿಲ್ಲೆಯಲ್ಲಿ ಪರೋಪಕಾರದ ಸೋಗನ್ನು ಧರಿಸಿ ಹುಟ್ಟಿ ಬೆಳೆದ ಕೆಲವು ಸಂಸ್ಥೆಗಳು ಹಾಗೂ ಅವುಗಳ ನಿಜಬಣ್ಣದ ಚಿತ್ರಣವೂ ಇದರಲ್ಲಿದೆ. ಹೀಗೆ ಅಸಹಕಾರ ಚಳುವಳಿಯ ವಿವಿಧ ಮುಖ, ಜನರ ಮುಖವಾಡ, ಸಾಮಾಜಿಕ ಸಮಸ್ಯೆ, ಹೀಗೆ ಈ ಕಾದಂಬರಿಯು ನಿಜವಾದ ಹೋರಾಟಗಾರ ಎದುರಿಸಬೇಕಾಗಿದ್ದ ವಿವಿಧ ಸಮಸ್ಯೆಗಳನ್ನು ಬಿಚ್ಚಿಡುತ್ತದೆ. ಇಲ್ಲಿ ಬರುವ ರಾಧಕೃಷ್ಣನ ಪಾತ್ರದ ಮೂಲಕ ನಿಜವಾದ ಸ್ವಾತಂತ್ರ್ಯ ಹೋರಾಟಗಾರನೊಬ್ಬ ಎದುರಿಸಬೇಕಾದ ಹಲವು ಸಮಸ್ಯೆಗಳನ್ನು ಕಾರಂತರು ತೆರೆದಿಡುತ್ತಾರೆ. ಗಾಂಧೀಜಿಯ ತತ್ವಕ್ಕೆ ಬಾಯಿಯಲ್ಲಿ ಮಾತ್ರ ಸಹಾನುಭೂತಿ ತೋರಿಸುವ ಆದರೆ ಬದುಕಿನಲ್ಲಿ ಅದನ್ನು ಅನುಷ್ಠಾನಕ್ಕೆ ತರಲು ಪ್ರಯತ್ನಿಸದ ಹಲವಾರು ಜನರು ನಮ್ಮ ಸಮಾಜದಲ್ಲಿದ್ದರು.

ಹಿರಿಯ ತಲೆಮಾರಿನ ಜನರು ಗಾಂಧಿ ತತ್ವವನ್ನು ವಿರೋಧಿಸುತ್ತಿದ್ದರು. ಆದರೆ ಅವರ ಮಕ್ಕಳು ಗಾಂಧೀಜಿಯ ಹೋರಾಟಕ್ಕೆ ಬೆಂಬಲ ಸೂಚಿಸುತ್ತಿದ್ದರು. ರಾಧಕೃಷ್ಣ ಹಾಗೂ ಅವನ ಸ್ನೇಹಿತರು ಗಾಂಧಿಯ ಕರೆಗೆ ಓಗೊಟ್ಟು ಸ್ವರಾಜ್ಯಕ್ಕೋಸ್ಕರ ತಮ್ಮ ಕಾಲೇಜು ವಿದ್ಯಾಭ್ಯಾಸವನ್ನು ಕೈಬಿಡುತ್ತಾರೆ. ಹಳ್ಳಿಯ ಜನರಿಗೆ ಸ್ವರಾಜ್ಯದಲ್ಲಿ ವಿಶ್ವಾಸವಿರಲಿಲ್ಲ. ಕೆಲವರಿಗಂತೂ ತಮ್ಮನ್ನು ಯಾರು ಆಳುತ್ತಿದ್ದಾರೆಂಬ ಕನಿಷ್ಠ ಜ್ಞಾನವೂ ಇರಲಿಲ್ಲ.

ರಾಧಕೃಷ್ಣ ಅವರನ್ನು ಹುಡುಕಿ ಹುಡುಕಿ ಕೊನೆಗೆ ಮಂಜಯ್ಯನವರ ಮನೆ ಸೇರಿಕೊಳ್ಳುತ್ತಾನೆ. ಮಂಜಯ್ಯನವರು ಬ್ರಾಹ್ಮಣರು ಹಾಗೂ ಆ ಊರಿನಲ್ಲಿ ಅತ್ಯಂತ ಶ್ರೀಮಂತರಾಗಿದ್ದರು. ಅವರು ಅವನನ್ನು ಗೌರವಿಸಿ ಉಪಚರಿಸುತ್ತಾರೆ. ಅಲ್ಲಿಂದ ನೇರ ರಾಧಕೃಷ್ಣ

ಬೈಂದೂರಿಗೆ ಬರುತ್ತಾರೆ. ಬೈಂದೂರಿನಲ್ಲಿ ರಾಧಕೃಷ್ಣನಿಗೆ ನಿರೀಕ್ಷಿತ ಪ್ರತಿಫಲವಾಗಲಿ ಸಹಕಾರವಾಗಲಿ ದೊರಕುವುದಿಲ್ಲ. ಬೈಂದೂರಿನಲ್ಲಿ ಯಾರಿಗೂ ಕಾಂಗ್ರೆಸ್ಸಿಗೆ ಸೇರುವ ಹುರುಪಾಗಲಿ, ಸ್ವರಾಜ್ಯ ಫಂಡಿಗೆ ಹಣ ದಾನ ಮಾಡುವ ಉತ್ಸಹವಾಗಲಿ ಇರುವುದಿಲ್ಲ. ಗಾಂಧೀಜಿ ಹೇಳಿದಂತೆ ಸರಕಾರಿ ಕೆಲಸಗಳನ್ನು ನಂಬಿದವರು ಅದನ್ನು ಬಿಡಲು ಸಿದ್ಧರಿರಲಿಲ್ಲ. ಡಾ.ಕೃಷ್ಣಪ್ಪನವನರು ರಾಧಕೃಷ್ಣನ ಮಾತಿಗೆ ಹೇಳುತ್ತಾರೆ– "ನಾನೂ ಬಿಡಬಹುದಿತ್ತು. ನಮ್ಮ ಶಾಂತಿಯನ್ನೂ, ಮಕ್ಕಳನ್ನೂ ಕಾಡಿಗೆ ಅಟ್ಟಿದ ಮೇಲೆ"[೨]. ಈ ಮಾತಿನಿಂದ ಹೆಚ್ಚಿನ ಸರಕಾರಿ ನೌಕರರಿಗೆ ಸ್ವರಾಜ್ಯಕ್ಕಿಂತ ಅವರ ಸಂಸಾರದ ಭದ್ರತೆ ಮುಖ್ಯವಾಗಿತ್ತು. ಹೀಗೆ ರಾಧಕೃಷ್ಣ ಯಾವುದೇ ಊರಿಗೆ ಹೋದರೂ ನಿರೀಕ್ಷಿತ ಪ್ರತಿಫಲ ದೊರಕುವುದಿಲ್ಲ. ಗಾಂಧೀಜಿಯ ಉಪದೇಶವನ್ನು ಕೇಳುವವರಿದ್ದರೆ ಹೊರತು ಅನುಷ್ಠಾನಕ್ಕೆ ತರುವವರು ವಿರಳವಾಗಿದ್ದರು.

ಈ ಕಾದಂಬರಿಯ ಇನ್ನೊಂದು ಪ್ರಮುಖ ಪಾತ್ರ ಮಂಗಳೂರಿನ ದಯಾನಂದ ರಾಯರು. ಇವರು ರಾಧಕೃಷ್ಣನ ಮಾರ್ಗದರ್ಶಕರು. ಈ ಪಾತ್ರವು ಕಾರ್ನಾಡ್ ಸದಾಶಿವರಾಯರ ಪಾತ್ರವೇ ಆಗಿದೆ. ದಯಾನಂದರಾಯರು ರಾಧಕೃಷ್ಣನಿಗೊಂದು ಭೂಮಿಯನ್ನು ದಾನ ನೀಡಿ, ಅಲ್ಲಿ ದಲಿತ ಆಶ್ರಮವೊಂದನ್ನು ಕಟ್ಟಲು ಸೂಚಿಸುತ್ತಾರೆ. ದಯಾನಂದ ರಾಯರ ಕೆಲಸಕ್ಕೂ ಮಂಗಳೂರಿನಲ್ಲಿ ಹೇಳಿಕೊಳ್ಳುವ ಪ್ರೋತ್ಸಾಹವೇನೂ ದೊರಕಲಿಲ್ಲ. ಬಹಳಷ್ಟು ಜನರಿಗೆ ತಮ್ಮ ಸಂಸಾರದ ಕಷ್ಟ ಸುಖಗಳು ಮುಖ್ಯವಾಗಿದ್ದವೇ ಹೊರತು ದೇಶದ ಆಗು–ಹೋಗುಗಳು ಮುಖ್ಯವಾಗಿರಲಿಲ್ಲ. ಮಂಗಳೂರಿನಲ್ಲಿ ದಯಾನಂದ ರಾಯರನ್ನು ಹೊರತುಪಡಿಸಿದರೆ ಹೇಳಿಕೊಳ್ಳುವ ಮುಂದಾಳುಗಳು, ಜನರ ಮನಸ್ಸನು ಸ್ವಾತಂತ್ರ್ಯದ ಕಡೆಗೆ ತಿರುಗಿಸಬಲ್ಲ ಮುಖಂಡರು ಯಾರು ಕೂಡಾ ಕಂಡುಬರಲಿಲ್ಲ.

ಪ್ರಭುದೇವನಂತಹ ಪತ್ರಕರ್ತರು ರಾಧಕೃಷ್ಣನ ಸಮಾಜಸೇವೆಯ ಹೆಸರಿನಲ್ಲಿ ಹಣ ಮಾಡುತ್ತಾರೆ. ನಿಜವಾದ ಕಾಳಜಿಯುಳ್ಳ, ಗಾಂಧಿ ತತ್ವಗಳ ಮೇಲೆ ನಂಬಿಕೆಯುಳ್ಳ ರಾಧಾಕೃಷ್ಣನಂತಹ ಯುವಕರು ಆರ್ಥಿಕ ಬಿಕ್ಕಟ್ಟಿನಿಂದ ಮೂಲೆಗುಂಪಾಗುವುದನ್ನು ಡಾ. ನಂದ, ಪ್ರಭುದೇವನಂತಹವರು ಸ್ವಾತಂತ್ರ್ಯ ಹಾಗೂ ಸಮಾಜದ ಕಳಕಳಿಯಿಲ್ಲದಿದ್ದರೂ ಸಮಾಜದಲ್ಲಿ ಹಣ, ಕೀರ್ತಿ, ಗೌರವ ಮನ್ನಣೆ ಗಳಿಸುವುದನ್ನು ಕಾಣಬಹುದು. ಪ್ರಭುದೇವನಂತಹ ಕೆಲವರು ಗಾಂಧಿತತ್ವಗಳನ್ನು ವಿರೋಧಿಸಿ ಸಮಾಜವಾದಿ ತತ್ವವನ್ನು ಬೆಂಬಲಿಸತೊಡಗಿದರು. ಡಾ. ನಂದರಂತಹ ಸ್ವಾರ್ಥಿಗಳು ಕಾಂಗ್ರೆಸ್ಸಿನಲ್ಲಿದ್ದರು. ದೇಶಸೇವೆಯ ನೆಪದಲ್ಲಿ ತಮ್ಮ ವರ್ಚಸ್ಸನ್ನು ಜನರ ನಡುವೆ ಹೆಚ್ಚಿಸಿಕೊಳ್ಳುವುದೇ ಅವರ ಗುರಿಯಾಗಿತ್ತು.

ರಾಧಕೃಷ್ಣ ಗಾಂಧೀಜಿಯವರ ಸತ್ಯಾಗ್ರಹಕ್ಕೆ ಬೆಂಬಲ ನೀಡಿ ಜನರನ್ನು ಸಂಘಟಿಸಲು 'ವೀರವಾಣಿ' ಎಂಬ ರಹಸ್ಯ ಪತ್ರಿಕೆಯನ್ನು ಪ್ರಕಟಿಸುತ್ತಾನೆ. ಕರಾವಳಿ ಜಿಲ್ಲೆಯಲ್ಲಿ ಉಪ್ಪಿನ ಸತ್ಯಾಗ್ರಹ ಬಹಳ ತೀವ್ರಗತಿಯಲ್ಲಿ ಬೆಳೆಯಿತು. ಜೈಲುಗಳೆಲ್ಲ ತುಂಬಿ ಹೋದುವು. ಖಾದಿ ಧರಿಸಿದವರನ್ನೆಲ್ಲಾ ಪೊಲೀಸರು ಥಳಿಸಲಾರಂಭಿಸಿದರು. ಮಂಗಳೂರಿನಲ್ಲಿ ಬೆಂಕಿಯಂತೆ

ಹೊತ್ತಿಕೊಂಡ ಸತ್ಯಾಗ್ರಹ ಬಹಳ ಬೇಗನೆ ನಂದಿಹೋಯಿತು. ಆದರೆ ಉತ್ತರ ಕನ್ನಡದಲ್ಲಿ ಅದರ ತೀವ್ರತೆ ಕಡಿಮೆಯಾಗಲಿಲ್ಲ. ರಾಧಕೃಷ್ಣ ಅಲ್ಲಿಗೆ ಹೋಗಲು ನಿರ್ಧರಿಸುತ್ತಾನೆ.

ಅಂಕೋಲಾದಲ್ಲಿ ಎಲ್ಲರೂ ಸತ್ಯಾಗ್ರಹದಲ್ಲಿ ಭಾಗವಹಿಸುತ್ತಿದ್ದರು. ಸ್ತ್ರೀ, ಪುರುಷ ಮಕ್ಕಳಾದಿಯಾಗಿ ಪ್ರತಿಯೊಬ್ಬರು ಕೂಡ ದೇಶದ ಸ್ವಾತಂತ್ರ್ಯಕ್ಕೆ ತಮ್ಮದೇ ಆದ ಕೊಡುಗೆಯನ್ನು ನೀಡಿದರು. ರಾಧಕೃಷ್ಣ ಘಟ್ಟದ ಕೆಳಗಿನ ನಾಗೇನಹಳ್ಳಿ ಎಂಬಲ್ಲಿ ಬಿಡಾರ ಹೂಡಿದನು. ಸ್ವಾತಂತ್ರ್ಯಕ್ಕಾಗಿ ಸರ್ವಸ್ವವನ್ನೂ ಕಳೆದುಕೊಂಡವರಿಗೆ ಸಾಂತ್ವನ ನೀಡಲು ಬಯಸಿದನು. ಅವರು ಸಲ್ಲಿಸಿದ ತ್ಯಾಗಕ್ಕೆ ಪಶ್ಚ್ಯಾತ್ತಾಪ ಪಡದಂತೆ ಹಿತವಚನ ನೀಡುವುದು ತನ್ನ ಕರ್ತವ್ಯವೆಂದು ನಿರ್ಧರಿಸುತ್ತಾನೆ.

**ಸೆರೆಮನೆಯ ಶೂರ**

ವಾಸುದೇವಾಚಾರ್ಯ ಬುರ್ಲಿ ಅವರು ರಚಿಸಿದ ಈ ಕಾದಂಬರಿ ಇದು. ಈ ಕಾದಂಬರಿಯು ವಿಕ್ರಮ ಶಾಸ್ತ್ರಿ ಎಂಬ ಸ್ವಯಂಸೇವಕ ಜೈಲಿನಲ್ಲಿ ಬರೆದ ದಿನಚರಿಯಂತಿದೆ. ಇದು ೧೯೪೨ರ ಕ್ರಾಂತಿಯನ್ನು ಕುರಿತ ಚಿತ್ರಣವಾಗಿದೆ. ವಿಕ್ರಮ ಎಂಬ ಸ್ವಾತಂತ್ರ್ಯ ವೀರನನ್ನು ಹಿಡಿಯುವುದಕ್ಕೆ ಅವನ ಮನೆ ಮುಂದೆ ಪೊಲೀಸರು ಕಾವಲು ಕಾಯುತ್ತಿದ್ದರು. ವಿಕ್ರಮನು ಗಂಗೂನ ಮೂಲಕ ತನ್ನ ದಿನಚರಿಯನ್ನು ತೆಗೆದಿಟ್ಟು ಸೆರೆಮನೆ ಸೇರುತ್ತಾನೆ.

ಅವನಿಗೆ ಜೈಲು ಸಾಕ್ಷಾತ್ ನರಕದ ಅನುಭವವನ್ನು ನೀಡುತ್ತದೆ. ಎಲ್ಲೆಂದರಲ್ಲಿ ದುರ್ನಾತ, ಸೊಳ್ಳೆಗಳ ಕಾಟ, ಕತ್ತಲ ಕೂಪ. ಹಾಸಲು ಹೊದೆಯಲು ಏನೇನೂ ಇಲ್ಲ. ಯಾಕಾದರೂ ತಾನು ಚಳುವಳಿಗೆ ಸೇರಿದೆನೋ ಎಂದು ಪಶ್ಚತ್ತಾಪ ಪಡುತ್ತಾನೆ ವಿಕ್ರಮ. ಸ್ವಾತಂತ್ರ್ಯಕ್ಕೋಸ್ಕರ ಹೋರಾಡಿದ ಕೈದಿಗಳನ್ನು ಕಠೋರವಾಗಿ ನಡೆಸಿಕೊಳ್ಳುತ್ತಿದ್ದರು.

ಜೈಲಿನಲ್ಲಿದ್ದ ಕೈದಿಗಳ ಬಾಯಿ ಬಿಡಿಸಲು ಪೊಲೀಸರು ಎಷ್ಟೇ ಕಠೋರವಾದ ಶಿಕ್ಷೆಯನ್ನು ನೀಡಿದರೂ ಅವರು ಬಾಯಿ ಬಿಡುತ್ತಿರಲಿಲ್ಲ. ಹಳ್ಳಿ ಹಳ್ಳಿಗಳಲ್ಲಿ ರೈತ ಚಳವಳಿ ಕೂಡ ಜೋರಾಗಿ ನಡೆಯುತ್ತದೆ. ಚಳವಳಿಯ ಸುದ್ದಿಯನ್ನು ಸರಕಾರಕ್ಕೆ ತಿಳಿಸಿಕೊಟ್ಟ ಆ ಊರಿನ ಕುಲಕರ್ಣಿಯೊಬ್ಬನ ಕೈಯನ್ನೇ ಚಳವಳಿಗಾರು ಕಡಿದು ಹಾಕುತ್ತಾರೆ. ೧೯೪೨ರ ಚಳುವಳಿ ಮಾತ್ರ ಗಾಂಧೀಜಿಯ ಹಿಂಸಾ ತತ್ವಕ್ಕೆ ವ್ಯತಿರಿಕ್ತವಾಗಿಯೇ ನಡೆಯುತಿತ್ತು.

ಕೆಲವೊಂದು ಹಳ್ಳಿಯಲ್ಲಿ ಜನರು ಸ್ವತಂತ್ರ ಸರಕಾರವನ್ನು ಸ್ಥಾಪಿಸುತ್ತಾರೆ. ಮಾಮಲೇದಾರರ ಬಾಯಲ್ಲಿ ಕೂಡಾ ವಂದೇ ಮಾತರಂ ಹೇಳಿಸಿ, ಗಾಂಧಿ ಟೋಪಿಯನ್ನು ಹಾಕಿಸುತ್ತಾರೆ ಆ ಹಳ್ಳಿಯವರು. ಮರುದಿನ ಆ ಹಳ್ಳಿಗೆ ಪೊಲೀಸರು ಬಂದು ಊರನ್ನು ಮುತ್ತಿಗೆ ಹಾಕುತ್ತಾರೆ. ಪೊಲೀಸ್ ವಾಹನವನ್ನೇ ಸುಟ್ಟು ಹಾಕುತ್ತಾರೆ ಆ ಹಳ್ಳಿಯವರು. ಕೊನೆಗೆ ಆ ಊರಿಗೆ ಮಿಲಿಟರಿ ಮಂದಿಯನ್ನು ಕರೆಸುತ್ತಾರೆ ಸರಕಾರದವರು. ಅವರು ಊರನಲ್ಲೆಲ್ಲ ದಾಂಧಲೆ ನಡೆಸಿ ಹೆಣ್ಣುಮಕ್ಕಳನ್ನು ಹಾಳು ಮಾಡುತ್ತಾರೆ.

ಈ ರೀತಿಯಾಗಿ ಜೈಲಿನಲ್ಲಿದ್ದ ವಿಕ್ರಮ ಶಾಸ್ತ್ರಿ ಚಳವಳಿಯ ಕುರಿತು ಮೆಲುಕು ಹಾಕುತ್ತಾನೆ. ಜೈಲಿನಲ್ಲಿದ್ದ ಇತರ ರಾಜಕೀಯ ಕೈದಿಗಳ ಮೂಲಕ ಬೇರೆ ಬೇರೆ ಕಡೆಯಲ್ಲಿ ಚಳುವಳಿ ನಡೆದ ವಿಷಯ ತಿಳಿದುಕೊಳ್ಳುತ್ತಾನೆ. ಗಡ್ಡದ ಪೊಲೀಸ್ ಸಾಹೇಬನೊಬ್ಬ ಹಳ್ಳಿ ಹಳ್ಳಿಗಳಲ್ಲಿ ನಡೆದ ಚಳುವಳಿಯ ಕತೆಯನ್ನು ವಿಕ್ರಮನಿಗೆ ತಿಳಿಸುತ್ತಾನೆ. ಹೆಣ್ಣುಮಕ್ಕಳು ಕೂಡ ಚಳುವಳಿಯಲ್ಲಿ ತೋರಿದ ಶೌರ್ಯ ಹಾಗೂ ತ್ಯಾಗವನ್ನು ವಿವರಿಸುತ್ತಾನೆ.

ಕೆಲವೊಂದು ಪೊಲೀಸರು ಹೊಟ್ಟೆ ಪಾಡಿಗೋಸ್ಕರ ಸರಕಾರಿ ನೌಕರಿಯಲ್ಲಿದ್ದರೂ ಅವರಲ್ಲಿ ಮಾನವೀಯತೆಯಿದ್ದ ಚಿತ್ರಣವು ಇಲ್ಲಿ ಅನಾವರಣಗೊಂಡಿದೆ. ಕೆಲವು ಪೊಲೀಸರಿಗಂತೂ ತಮ್ಮ ಹುದ್ದೆಯ ಬಗ್ಗೆ ತೀವ್ರ ಅಸಮಧಾನವಿತ್ತು. "ಒಂದು ಪಾಯಿಖಾನೀ ಕಲ್ಲಾಗಿ ಕಂಡವರ ಕಾಲ್ತುಳಿತ ತಾಳ್ಬಹುದು. ಕಲ್ಲಿನಕಿಂತಾ ಕಲ್ಲ ಎದೀ ಪೊಲೀಸಾಗ್ಬಾರ್ದು"[3] ಎಂಬುದು ಗಡ್ಡದ ಸಾಹೇಬ ಪೊಲೀಸ್ ಕಾನ್ಸ್‌ಸ್ಟೇಬಲ್‌ನ ಅಭಿಮತ. ಮಾನವೀಯತೆಯುಳ್ಳ ಪೊಲೀಸರು ಕೆಲವೊಬ್ಬರು ಅಂದಿನ ಬ್ರಿಟಿಷ್ ಸರಕಾರದಲ್ಲಿದ್ದರು. ಭಾರತೀಯ ಪೊಲೀಸ್ ಬಲವನ್ನು ನಂಬಿಯೇ ಬ್ರಿಟಿಷ್ ಸರಕಾರ ಅಷ್ಟು ಕಾಲ ರಾಜ್ಯವಾಳಿದ್ದು.

೧೯೪೨ರಲ್ಲಿ ಜೈಲು ಸೇರಿದವರಲ್ಲಿ ಒಬ್ಬ ಮುಸಲ್ಮಾನ ಮೌಲಿಯ್ಯೂ ಇದ್ದನು. ಅವನು ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿ ಜೈಲು ಸೇರಿದ್ದನು. ಸ್ವಾತಂತ್ರ್ಯ ವೀರರು ಗಾಂಧೀಜಿ ಹೇಳಿದ ಪ್ರಾರ್ಥನೆ, ಉಪವಾಸ, ನೂಲುವುದನ್ನು ಜೈಲಿನಲ್ಲಿಯೂ ಮುಂದುವರಿಸಿಕೊಂಡು ಬಂದರು.

ವಿಕ್ರಮ ಶಾಸ್ತ್ರಿಯು ಜೈಲನ್ನು ಕೂಡಾ ಸಹ್ಯವಾಗಿಸಿಕೊಂಡು ಬಾಳಲು ಕಲಿತನು. ಜೈಲಿನಲ್ಲಿ ಕೂಡಾ ಅವನು ಕೈದಿಗಳಿಗೆ ರಾಮಾಯಣ, ಮಹಾಭಾರತವನ್ನು ಹೇಳಿಕೊಡುತ್ತಿದ್ದನು. ಅವನು ಸಾಹಿತಿಯಾದ ಕಾರಣ ಅವನ ಮಾತು-ಕತೆಗಳನ್ನು ಕೇಳಲು ಎಲ್ಲರೂ ಉತ್ಸುಕರಾಗಿದ್ದರು. ಸೆರೆಮನೆಯಲ್ಲಿ ಎಲ್ಲರ ಕೈ ನೋಡಿ ಶಾಸ್ತ್ರ ಹೇಳುತ್ತಿದ್ದನು. ಆದುದರಿಂದ ಬಹಳ ಮಂದಿ ಅವನ ಬಳಿ ತಮ್ಮ ಕೈ ತೋರಿಸಿ ಭವಿಷ್ಯ ಕೇಳಲು ಬರುತ್ತಾರೆ. ಒಟ್ಟಿನಲ್ಲಿ ಹೇಳುವುದಾದರೆ, 'ಸೆರೆಮನೆಯ ಶೂರ' ಕಾದಂಬರಿಯು ವಿಕ್ರಮ ಶಾಸ್ತ್ರಿಯು ಜೈಲಿನಲ್ಲಿ ಬರೆದ ದಿನಚರಿಯಂತಿದೆ.

**ಪುರುಷಾರ್ಥ**

ಈ ಕಾದಂಬರಿಯನ್ನು ಶ್ರೀರಂಗ ಅವರು ರಚಿಸಿದ್ದಾರೆ. ೧೯೪೭ ಸ್ವಾತಂತ್ರ್ಯೋತ್ಸವದಂದು ಕಾದಂಬರಿಯ ನಾಯಕನಾದ ಮಾಧವ ಸ್ವತಂತ್ರ ಭಾರತದ ಭವಿಷ್ಯವನ್ನು ನೆನೆದು ಕೊರಗುತ್ತಾ ಇಹಲೋಕ ಯಾತ್ರೆಯನ್ನು ಮುಗಿಸುತ್ತಾನೆ. ಅವನು ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದ್ದು ನಿಜವಾದ ಹೋರಾಟಗಾರರಿಗೆ ಸ್ವತಂತ್ರ ಭಾರತದಲ್ಲಿ ಮನ್ನಣೆ ಸಿಗುವುದಿಲ್ಲೆಂಬ ಸತ್ಯವನ್ನು ಮನಗಾಣುತ್ತಾನೆ.

೧೯೪೭ರಲ್ಲಿ ದೇಶಕ್ಕೆ ಸ್ವಾತಂತ್ರ್ಯ ಬಂದ ದಿನ ಮೂವರು ಗೆಳೆಯರು ತಮ್ಮ ಹಿಂದಿನ ದಿನಗಳನ್ನು ಜ್ಞಾಪಿಸಿಕೊಳ್ಳುತ್ತಾರೆ. ಇಲ್ಲಿ ಮೂವರ ಜೀವನ ವಿಧಾನ ಬೇರೆ ಬೇರೆಯಾಗಿದೆ. ೧೯೪೭ರಲ್ಲಿ ಸ್ವಾತಂತ್ರ್ಯದ ಮೆರವಣಿಗೆ ಸಾಗುವಾಗ ಮಾಧವನ ಯೋಚನೆ ೨೭ ವರುಷಗಳ ಹಿಂದಕ್ಕೆ ಹೋಗುತ್ತದೆ.

೧೯೨೦ರಲ್ಲಿ ಗಾಂಧೀಜಿಯ ಅಸಹಕಾರ ಚಳುವಳಿ ಆರಂಭವಾಗುತ್ತದೆ. ಅನಂತ, ಮಾಧವ ಕೂಡ ಕಾಲೇಜು ಬಿಟ್ಟು ಚಳುವಳಿ ಸೇರುವುದೇ? ಎಂಬ ಯೋಚನೆಯಾಗುತ್ತದೆ. ಚಳುವಳಿಯ ಪರಿಣಾಮದ ಬಗ್ಗೆ ಚರ್ಚೆಯಾಗುತ್ತದೆ. "ಸಹಕಾರ ಮಾಡುವವರು ಚಳುವಳಿ ಮಾಡಿದರೆ ಅಸಹಕಾರವಾದೀತು, ನಾನು- ನೀನು ಕಾಲೇಜು ಬಿಟ್ಟರೆ ವಕೀಲರು ವಕೀಲಿಯನ್ನು ಬಿಟ್ಟರೆ ಬ್ರಿಟಿಷರ ಆಡಳಿತಕ್ಕೆ ಧಕ್ಕೆ ತಗಲುವುದು ಹೇಗೆ?"[೪] ಎಂಬಂತಹ ಮೂಲಭೂತ ಪ್ರಶ್ನೆಯೊಂದನ್ನು ಅನಂತ ಮಾಧವನಲ್ಲಿ ಎತ್ತುತ್ತಾನೆ. ಬ್ರಿಟಿಷ್ ಸರಕಾರ ನಡೆಯುತ್ತಿದ್ದುದೇ ಬುದ್ಧಿವಂತರಾದ ಭಾರತೀಯರಿಂದಾಗಿ. ಒಂದುವೇಳೆ ಸರಕಾರಕ್ಕೆ ಸಹಕಾರ ನೀಡುತ್ತಿದ್ದ ನೌಕರರೇನಾದರೂ ಚಳುವಳಿಯಲ್ಲಿ ಭಾಗವಹಿಸುತ್ತಿದ್ದರೆ ಸ್ವಾತಂತ್ರ್ಯ ೧೦ ವರುಷಕ್ಕೆ ಮೊದಲೇ ಬರುತ್ತಿತ್ತೇನೋ?

ಅಸಹಕಾರ ಚಳವಳಿಯ ಜೊತೆಯಲ್ಲಿ ಮಾಧವ ಕಾಲೇಜು ಬಿಡುವ ನಿರ್ಧಾರ ಮಾಡಿದರೂ ಹಮ್ಮು ಮತ್ತು ಅನಂತ ಕಾಲೇಜು ಬಿಡುವ ನಿರ್ಧಾರ ಮಾಡುವುದಿಲ್ಲ. ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿ ಅವನು ತನ್ನ ಸಂಸಾರ ಸುಖವನ್ನು ಕಳೆದುಕೊಳ್ಳುತ್ತಾನೆ. ಹಸಿವೆ ನೀರಡಿಕೆಗಳ ಪರಿವೆಯಿಲ್ಲದೆ ಊರೂರು ಅಲೆಯುತ್ತಾನೆ. ಪ್ರತಿಯೊಂದು ಕಡೆ ಸಭೆ, ಎಲ್ಲಿ ನೋಡಿದರಲ್ಲಿ ಉತ್ಸಾಹ, ವಿದೇಶಿ ಬಟ್ಟೆಗಳ ಹೋಮ ನಡೆಯುತ್ತದೆ. ಸಾತಂತ್ರ್ಯ ಚಳವಳಿ ದೇಶದ ತುಂಬೆಲ್ಲ ಹರಡುತ್ತದೆ. ಹೆಸರಾಂತ ಮುಂದಾಳುಗಳು ಹಳ್ಳಿ ಹಳ್ಳಿಗಳಿಗೆ ಹೋಗಿ ಜನತೆಯ ದೇಶಾಭಿಮಾನವನ್ನು ಬಡಿದೆಬ್ಬಿಸುತ್ತಾರೆ. ಹಳ್ಳಿ ಹಳ್ಳಿಗಳಿಗೆ ಹೋದ ಮಾಧವನಿಗೆ ನಿಜವಾದ ದೇಶದ ದರ್ಶನವಾಗುತ್ತದೆ. ಇತಿಹಾಸ ಕಲಿಸದೆ ಇದ್ದ, ಯಾವ ಉಪನ್ಯಾಸಕರು ಹೇಳದೆ ಇರುವ ನಿಜವಾದ ದೇಶದ ಚಿತ್ರಣವು ಮಾಧವನಿಗೆ ದೊರಕುತ್ತದೆ. ಓದು ಬರಹ ಬಾರದೆ ಆತ್ಮಾಭಿಮಾನವನ್ನು ಸಾಲಕ್ಕಾಗಿ ಕಳೆದುಕೊಂಡ ಹಳ್ಳಿಗರ ದರ್ಶನವಾಗುತ್ತದೆ. ನಿಜವಾಗಿ ನಾವು ಕಲಿಯಬೇಕಾದುದು ಇವರ ಇತಿಹಾಸವನ್ನು ಎಂದುಕೊಳ್ಳುತ್ತಾನೆ.

ಸ್ವಾತಂತ್ರ್ಯದ ಚಳವಳಿಯಲ್ಲಿ ಮಾಧವ ಪ್ರಮುಖ ಪಾತ್ರ ವಹಿಸುತ್ತಾನೆ. ಆದರೆ ೧೯೨೦ರ ಡಿಸೆಂಬರ್ ಪ್ರಾರಂಭಕ್ಕೆ ಸರಕಾರವು ಮಾಧವನನ್ನು ಬಂಧಿಸುತ್ತದೆ. ಒಂದು ವರುಷದ ಸೆರೆಮನೆ ವಾಸ ಅವನ ದೇಹ, ಬುದ್ಧಿಯನ್ನು ಜಡಗೊಳಿಸುತ್ತದೆ.

ಮಾಧವನ ಸ್ನೇಹಿತ ಹಮ್ಮುವಿಗೆ ಮಾತ್ರ ಗಾಂಧಿ ತತ್ವದ ಮೇಲೆ ನಂಬಿಕೆಯಿಲ್ಲ. ಅಹಿಂಸಾವಾದದ ಮೂಲಕ ಸ್ವರಾಜ್ಯ ಲಭಿಸುತ್ತದೆಂದು ಅವನು ನಂಬಲಿಲ್ಲ. ಮಾಧವನ ಸ್ನೇಹಿತ ಶ್ರೀಧರ ನಿಜವಾಗಿ ಗಾಂಧೀಜಿಯ ರಾಮರಾಜ್ಯದ ಕನಸು ನನಸಾಗಿದೆಯೇ? ಹಾಗಾದರೆ ಈ

ಉತ್ಸಾಹ ಯಾರಿಗಾಗಿ? ಎಂದು ೧೯೪೭ರ ಸ್ವಾತಂತ್ರ್ಯದ ಮೆರೆವಣಿಗೆಯನ್ನು ನೋಡಿ ಭಾವಿಸುತ್ತಾನೆ.

ಮಾಧವ ೧೯೪೨ರ ಸ್ವಾತಂತ್ರ್ಯ ಚಳವಳಿಯ ಕುರಿತು ಕೂಡ ವಿಶ್ಲೇಷಣೆ ಮಾಡುತ್ತಾನೆ. ಮುಂದಾಳುಗಳೆಲ್ಲ ಶಾಂತ ರೀತಿಯಿಂದ ಜೈಲಿಗೆ ಹೋದರು. ಹೊರಗಿದ್ದವರು ಸರಿಯಾದ ಮಾರ್ಗದರ್ಶನವಿಲ್ಲದೆ ತಮಗೆ ತಿಳಿದಂತೆ ಮಾಡಿದರು. ಹೊರಗಿದ್ದ ಚಳವಳಿಗಾರರು ಮಾತ್ರ ಮನೆ, ಮಠ, ಆಸ್ತಿ, ಪಾಸ್ತಿ, ಪ್ರಾಣ ಎಲ್ಲವನ್ನು ಕಳೆದಕೊಂಡರು.

ಶ್ರೀಧರ ನಿಜವಾಗಿಯೂ ಸ್ವಾತಂತ್ರ್ಯ ಎಂಬ ಪದವನ್ನು ಸರಿಯಾಗಿ ಅರ್ಥ ಮಾಡಿಕೊಂಡಿದ್ದಾನೆ. ಬ್ರಿಟಿಷರು ಹೇಳಿದ 'ಅಧಿಕಾರದ ಹಸ್ತಾಂತರ' ಎಂಬ ಪದ ಎಷ್ಟೊಂದು ನಿಜವಾದದು. 'ಬ್ರಿಟಿಷರ ಕೈಯಿಂದ ಭಾರತದ ಶ್ರೀಮಂತರ ಕೈಗೆ'. ಸ್ವಾತಂತ್ರ್ಯಕ್ಕಾಗಿ ತಮ್ಮ ಭವಿಷ್ಯವನ್ನೇ ಮುಡುಪಾಗಿಟ್ಟ ಮಾಧವನಂತವರು ಮಾತ್ರ ತಿನ್ನಲು ತುತ್ತು ಅನ್ನಕ್ಕಾಗಿ ಕೂಡಾ ಪರದಾಡಬೇಕಾಗುತ್ತದೆ.

ಚಳುವಳಿಯ ಸಮಯಕ್ಕೆ ಇಂಗ್ಲೇಂಡಿಗೆ ಹೋಗಿ ಐ.ಸಿ.ಯಸ್ ಪಾಸು ಮಾಡಿದ ಅನಂತನಿಗೆ ಸ್ವತಂತ್ರ ಭಾರತದಲ್ಲಿ ಕೂಡಾ ಉನ್ನತ ಹುದ್ದೆ ದೊರಕುತ್ತದೆ. ಹೀಗೆ ಮಾಧವ ಅವನ ಗೆಳೆಯ ಶ್ರೀಧರ ದೂರದಲ್ಲಿದ್ದರೂ ೧೯೪೭ನೇ ಸ್ವಾತಂತ್ರ್ಯದ ದಿವಸ ತಮ್ಮ ಹಿಂದಿನ ದಿನಗಳನ್ನು ಮೆಲುಕು ಹಾಕುತ್ತಾರೆ. ಸ್ವತಂತ್ರ ಭಾರತವು ನಿಜವಾದ ಸ್ವಾತಂತ್ರ್ಯ ಹೋರಾಟಗಾರರಲ್ಲಿ ಒಂದು ಬಗೆಯ ನಿರಾಶೆಯನ್ನು ಉಂಟು ಮಾಡುತ್ತದೆ.

ಮಾಧವನ ಸ್ನೇಹಿತ ಅನಂತ ಬ್ರಿಟಿಷ್ ಸರಕಾರದಲ್ಲಿ ಉನ್ನತ ಹುದ್ದೆಯಲ್ಲಿದ್ದವನು ಮಾಧವನ ದೇಶಸೇವೆಯ ಬಗ್ಗೆ ಒಂದು ವಿಚಿತ್ರ ತಿರಸ್ಕಾರವನ್ನು ಬೆಳೆಸಿಕೊಂಡನು. ಇನ್ನೊಬ್ಬ ಸ್ನೇಹಿತ ಹನುಮಂತ ಶ್ರೀಮಂತರ ಜೊತೆ ಸೇರಿಕೊಂಡು ಅವರಿಗೆ ಬೇಕಾದಂತೆ ಮಾತನಾಡಿ ಶಾಸನ ಸಭೆಯ ಸದಸ್ಯನಾಗಿದ್ದನು. ಆದರೆ ತನ್ನ ಜೀವಮಾನವನ್ನೆಲ್ಲಾ ಸ್ವಾತಂತ್ರ್ಯಕ್ಕಾಗಿ ಮುಡಿಪಾಗಿಟ್ಟ ಮಾಧವ ನಿರುದ್ಯೋಗಿಯಾಗಿದ್ದನು. ತಾನು ಜೈಲಿನಲ್ಲಿರಬೇಕಾದರೆ ತನ್ನ ಹೆಂಡತಿಯನ್ನು ಕಳೆದುಕೊಂಡನು. ಮಾಧವನಂತಹ ಹೋರಾಟಗಾರರಿಗೆ ಸ್ವಾತಂತ್ರ್ಯ ಆಶಾದಾಯಕವಾಗಿರಲಿಲ್ಲ. ದೇಶದ ವಿಚ್ಛೇದನೆ, ಹೋರಾಟಕ್ಕೆ ದೊರಕದ ಮನ್ನಣೆ ಅವನನ್ನು ಜರ್ಝರಿತನನ್ನಾಗಿ ಮಾಡುತ್ತದೆ. ದೇಶ ಸೇವೆಯು ಅವನ ಪಾಲಿಗೆ ನಿರುದ್ಯೋಗ, ನಿರಾಶೆಯನ್ನೇ ತಂದುಕೊಟ್ಟಿತು. ಸ್ವಾತಂತ್ರ್ಯ ಸಂಭ್ರಮದಲ್ಲಿ ದೇಶ ಮೈಮರೆತಿರುವಾಗ ಸ್ವಾತಂತ್ರ್ಯ ಸೇನಾನಿಯಾದ ಮಾಧವ ಇಹಲೋಕದ ಯಾತ್ರೆಯನ್ನು ಮುಗಿಸುತ್ತಾನೆ. ನಿಜವಾದ ಹೋರಾಟಗಾರರಿಗೆ ಸ್ವತಂತ್ರ ಭಾರತದಲ್ಲಿ ಸ್ಥಾನಮಾನವಿಲ್ಲವೆಂಬ ಸತ್ಯವನ್ನು ಅವನ ಸಾವು ತಿಳಿಸಿಕೊಡುತ್ತದೆ.

**ವಿಜಯಯಾತ್ರೆ**

ವಿ.ಎಂ. ಇನಾಂದರ್ ಅವರು ರಚಿಸಿದ ಈ ಕಾದಂಬರಿ ಕೂಡ 'ಪುರುಷಾರ್ಥ' ಕಾದಂಬರಿಯ ವಸ್ತುವನ್ನು ಹೋಲುತ್ತದೆ. ವಿಜಯನು ದೇಶದ ಸ್ವಾತಂತ್ರ್ಯಕ್ಕಾಗಿ ದುಡಿದ ವ್ಯಕ್ತಿಯಾಗಿದ್ದನು. ಹದಿನೈದು ವರ್ಷಗಳ ಕಾಲ ದೇಶಕ್ಕಾಗಿ ತನ್ನ ದೇಹವನ್ನು ತ್ಯಜಿಸಿ ಇಂದು ಬದುಕುವುದಕ್ಕೂ ಅಸಾಧ್ಯವೆನಿಸಿ ಆಸ್ಪತ್ರೆ ಸೇರಿದ್ದನು. ಆದರೆ ಆತನ ಈ ಪರಿಶ್ರಮ ಯಾರಿಂದಲೂ ಗುರುತಿಸಲ್ಪಟ್ಟಿಲ್ಲ. ಇಂತಹ ಅದೆಷ್ಟೋ ಸಾಮಾನ್ಯ ಜನರು ಯಾರ ಗಮನಕ್ಕೂ ಬಾರದೆ, ಯಾರಿಂದಲೂ ಗುರುತಿಸಲ್ಪಡದೆ ದೇಶ ಸೇವೆಯನ್ನು ಮಾಡಿದ್ದಾರೆ.

ಆಸ್ಪತ್ರೆಯಲ್ಲಿ ಮಲಗಿಕೊಂಡ ವಿಜಯನ ಮನಸ್ಸು ಗೊಂದಲದ ಗೂಡಾಗಿದೆ. ಸ್ವತಂತ್ರ ಭಾರತದಲ್ಲೂ ಸಾಮಾನ್ಯ ಜನರು ಸುಖವಾಗಿರಲಾರರೆಂಬ ಸತ್ಯವನ್ನು ಅವನು ಅಂದೇ ಮನಗಾಣುತ್ತಾನೆ. ಸ್ವತಂತ್ರ ಭಾರತದಲ್ಲಿ ಅಪಾತ್ರರಿಗೆ ಮನ್ನಣೆ ದೊರೆತು ನಿಜವಾಗಿಯೂ ಸ್ವಾತಂತ್ರ್ಯಕ್ಕೋಸ್ಕರ ಹೋರಾಡಿದವರು ಮೂಲೆಗುಂಪಾಗುತ್ತಾರೆಂಬ ನೋವು ಅವನನ್ನು ಬಾಧಿಸುತ್ತದೆ. ಕಾದಂಬರಿಯುದ್ಧಕ್ಕೂ ವಿಜಯನ ಮನಸ್ಸಿನ ದ್ವಂದ್ವ, ನಿರಾಸೆ, ತುಂಬಿಕೊಂಡಿದೆ. ತನ್ನ ಕೆಲಸವನ್ನು ತಾನು ನಿರ್ವಂಚನೆಯಿಂದ ಮಾಡಿದ ತೃಪ್ತಿಯೊಂದು ಕಡೆಯಾದರೆ, ನಿಜವಾದ ಸ್ವಾತಂತ್ರ್ಯ ಹೋರಾಟಗಾರರಿಗೆ ಸ್ವತಂತ್ರ ಭಾರತದಲ್ಲಿ ಮನ್ನಣೆ ಸಿಗಲಿಲ್ಲವೆಂಬ ದುಃಖ ಇನ್ನೊಂದು ಕಡೆ ಅವನನ್ನು ಕಾಡುತ್ತದೆ.

ದೇಶಕ್ಕೆ ಸ್ವಾತಂತ್ರ್ಯ ವಿಜಯೋತ್ಸವ. ಆದರೆ ೧೫ ವರ್ಷಗಳಲ್ಲಿ ಮೂರು ಬಾರಿ ದೇಶಕ್ಕಾಗಿ ಸೆರೆಮನೆಯನ್ನು ಸೇರಿದ ವಿಜಯ ೧೯೪೭ ಆಗಸ್ಟ್ ೧೫ರಂದೇ ಪ್ರಾಣ ಬಿಡುತ್ತಾನೆ. ಪ್ರೇಯಸಿ ಮನೋರಮೆ ಆತನಿಗೋಸ್ಕರ ೯ ತಿಂಗಳು ಮಾಡಿದ ಆರೈಕೆ ವ್ಯರ್ಥವಾಗುತ್ತದೆ. ಈ ವಿಜಯನ **'ವಿಜಯ ಯಾತ್ರೆ'** ಮಸಣಕ್ಕೆ ಸಾಗುತ್ತದೆ. ಸ್ವತಂತ್ರ ಭಾರತಕ್ಕೋಸ್ಕರ ಅಂದು ಪ್ರಾಣತೆತ್ತ ಲಕ್ಷಾಂತರ ಜನರ ಪ್ರಾಣಕ್ಕೆ ಇಂದು ಸ್ವತಂತ್ರ ಭಾರತಲ್ಲಿ ಮನ್ನಣೆ ದೊರೆತಿದೆಯೇ? ಎಂಬ ಪ್ರಶ್ನೆ ನಮ್ಮೆಲ್ಲರ ಮನಸ್ಸಿನಲ್ಲಿ ಉದ್ಭವವಾಗುತ್ತದೆ.

**ಅಮರ ಆಗಸ್ಟ್**

ಅ.ನ.ಕೃ ಅವರ ಈ ಕಾದಂಬರಿಯ ವಸ್ತುವು ಒಂದು ರೀತಿಯಲ್ಲಿ ಸಿಂಹಾವಲೋಕನ ಕ್ರಮವನ್ನೊಳಗೊಂಡಿದೆ. ಭೈರಪ್ಪನ ಗೆಳೆಯನಾದ ರಾಮಮೂರ್ತಿ ಹಾಸ್ಟೆಲಿನಲ್ಲಿ ಕಾಲೇಜು ಕಲಿಯುತ್ತಿರುವ ವಿದ್ಯಾರ್ಥಿ. ಅವನು ಭೈರಪ್ಪನ ಮನೆಗೆ ಬರುತ್ತಾನೆ. ಬೈರಪ್ಪನ ಚಿಕ್ಕಪ್ಪ ರಂಗಪ್ಪ ಎಂಬುವವರು ರಾಮಮೂರ್ತಿಗೆ ನಂದಿಗ್ರಾಮದ ಕಥೆಯನ್ನು ಹೇಳುತ್ತಾರೆ.

ಭೈರಪ್ಪನ ದೊಡ್ಡಪ್ಪ ದೊಡ್ಡೇಗೌಡರು ಊರಿಗೆಲ್ಲಾ ತುಂಬಾ ಬೇಕಾದವರಾಗಿದ್ದರು. ಗಾಂಧೀಜಿಯ ತತ್ವವನ್ನು ಅಕ್ಷರಶಃ ಪಾಲಿಸುತ್ತಿದ್ದರು. ನೇಕಾರ ಜನಾಂಗದವರಿಗೆ ಬಡ್ಡಿ ರಹಿತ ಸಾಲವನ್ನು ಕೊಟ್ಟು ಅವರ ವೃತ್ತಿ ಅಭಿವೃದ್ಧಿ ಕಾಣಲು ಕಾರಣರಾಗಿದ್ದರು. ಹಿಂದು – ಮುಸ್ಲಿಂ

ಐಕ್ಯತೆಯನ್ನು ಹೆಚ್ಚಿಸಿದ್ದರು. ಮಸೀದಿಯ ರಿಪೇರಿಗೆ ಧನಸಹಾಯ ಮಾಡಿ ಮುಸ್ಲಿಮರ ಪ್ರೀತಿಗೂ ಕಾರಣರಾಗಿದ್ದರು. ನಂದಿ ಗ್ರಾಮದಲ್ಲಿ ಮಾನಪ್ಪನ ಸಲಹೆಯಂತೆ ದೊಡ್ಡಗೌಡರು ಹೊಲೆಯರಿಗೊಂದು ಬಾವಿ ತೋಡಿಸಿದರು. ರಂಗಪ್ಪ ತಾನು ಮದುವೆಯಾಗುವುದಿಲ್ಲವೆಂದು ನಿರ್ಧರಿಸಿದರು.

ಭೈರಪ್ಪನ ಅಣ್ಣ ಮಾನಪ್ಪ ಮತ್ತು ಪುಟ್ಟುಸ್ವಾಮಿ ದೇಶದ ಸ್ವಾತಂತ್ರ್ಯ ಕುರಿತು ವಿಚಾರ ಮಾಡುತ್ತಾರೆ, ಹಳ್ಳಿ ಹಳ್ಳಿಗಳಲ್ಲೂ ಸ್ವಾತಂತ್ರ್ಯದ ಕಹಳೆಯನ್ನ ಮೊಳಗಿಸಲು ಪ್ರಯತ್ನಿಸುತ್ತಾರೆ. ಗಾಂಧೀಜಿಯವರ ಅಹಿಂಸಾ ಮಾರ್ಗ ಮತ್ತು ಅಸಹಕಾರ ಮಾರ್ಗವನ್ನು ಸ್ವಾತಂತ್ರ್ಯ ಚಳುವಳಿಯಲ್ಲಿ ಬಳಸಿಕೊಳ್ಳಲು ನಿರ್ಧರಿಸುತ್ತಾರೆ. ಗಾಂಧೀಜಿಯ ವಿಚಾರದಲ್ಲಿ ಮಾನಪ್ಪ ಹಾಗೂ ಪುಟ್ಟುಸ್ವಾಮಿಯ ಅಭಿಪ್ರಾಯದಲ್ಲಿ ಭೇದವಿದ್ದರೂ ಕೂಡ ದೇಶದ ಸ್ವಾತಂತ್ರ್ಯಕ್ಕೆ ಪ್ರಥಮ ಆದ್ಯತೆಯನ್ನು ಇಬ್ಬರೂ ನೀಡುತ್ತಾರೆ. ಗಾಂಧೀಜಿಯ ಆಶಯದಂತೆ ನಂದಿಗ್ರಾಮದಲ್ಲಿ ಈ ಇಬ್ಬರು ತರುಣರ ನೇತೃತ್ವದಲ್ಲಿ ಹರಿಜನೋದ್ಧಾರ, ಅಕ್ಷರಾಭ್ಯಾಸ, ಜನಜಾಗೃತಿ, ಮುಂತಾದ ಹಲವಾರು ವಿಧಾಯಕ ಕಾರ್ಯಕ್ರಮಗಳು ರೂಪುಗೊಂಡವು. ಇವರ ಪ್ರಯತ್ನದಿಂದ ಹರಿಜನ ಕೇರಿಯಲ್ಲಿ ಮಹತ್ವದ ಬದಲಾವಣೆಯಾಯಿತು. ಜನರು ಮದ್ಯ ಮಾಂಸ ತ್ಯಜಿಸಿದರು, ಶುಚಿತ್ವಕ್ಕೆ ಹೆಚ್ಚಿನ ಮಹತ್ವವನ್ನು ನೀಡಿದರು.

ದೇಶದ ಸ್ಥಿತಿ ದಿನದಿಂದ ದಿನಕ್ಕೆ ಮತ್ತಷ್ಟು ಉಲ್ಬಣಗೊಳ್ಳುತ್ತಿತ್ತು. ನಂದಿಗ್ರಾಮದಲ್ಲಿ ಮಾನಪ್ಪ ಹಾಗೂ ಪುಟ್ಟುಸ್ವಾಮಿಯ ನೇತೃತ್ವದಲ್ಲಿ ಸೇವಾದಳವೊಂದು ಸಿದ್ಧವಾಯಿತು. ೧೯೪೨ ಆಗಸ್ಟಿನಲ್ಲಿ ಗಾಂಧೀಜಿಯವರು 'ಮಾಡು ಇಲ್ಲವೇ ಮಡಿ' ಚಳುವಳಿಗೆ ಕರೆಕೊಟ್ಟರು. ಆಗಸ್ಟ್ ೯ರಂದು ಗಾಂಧೀಜಿಯ ಬಂಧನವಾಗುತ್ತದೆ. ಇಡೀ ದೇಶಕ್ಕೆ ದೇಶವೇ ರಣರಂಗವಾಗಿ ಪರಿವರ್ತನೆಯಾಗುತ್ತದೆ. ಭಾರತೀಯ ಜನತೆಯಲ್ಲಿ ಸಂಚರಿಸುತ್ತಿದ್ದ ನವಶಕ್ತಿಯನ್ನು ಬ್ರಿಟಿಷರು ಗಮನಿಸಲಿಲ್ಲ. ಮದ್ದುಗುಂಡು, ಫಾಶಿ ಶಿಕ್ಷೆ, ಲಾಠಿ ಪ್ರಯೋಗದ ಮೂಲಕ ಭಾರತೀಯರನ್ನು ಬಗ್ಗು ಬಡಿಯಲು ಪ್ರಯತ್ನಿಸಿದರು. ಭಾರತ ರಣರಂಗವಾಯಿತು. ಸೈನ್ಯದಲ್ಲಿ ಕೂಡಾ ಅಸಹಕಾರ ಕಾಣಲಾರಂಭಿಸಿತು. ಇದು ಬ್ರಿಟಿಷ್ ಸರಕಾರದ ಎದೆ ನಡುಗಿಸಿತು.

ಪುಟ್ಟುಸ್ವಾಮಿ ಮತ್ತು ಮಾನಪ್ಪನ ನಾಯಕತ್ವದಲ್ಲಿ ನಂದಿಗ್ರಾಮ ರಣರಂಗವಾಯಿತು. ಪ್ರಾಣ ಕೊಡುವುದಕ್ಕೂ ಜನರು ಮುಂದೆ ಬಂದರು. ನಂದಿಗ್ರಾಮದಲ್ಲಿ ಸಂಜೆಗತ್ತಲು ಕವಿದೊಡನೆ ಮಾದ, ರಂಗ, ಇಲೆಕ್ಟ್ರಿಕ್ ತಂತಿ ಕಡಿದರು. ಟೆಲಿಗ್ರಾಫ್ ತಂತಿ ಕತ್ತರಿಸಿದರು. ಪೊಲೀಸ್ ಸ್ಟೇಷನ್‌ಗೆ ಬೆಂಕಿ ಹಾಕಿದರು. ಪೊಲೀಸರು ಮಾನಪ್ಪನನ್ನು ಬಂಧಿಸಿದರು. ನಂದಿಗ್ರಾಮದಲ್ಲಾಗುವ ಅನಾಹುತಕ್ಕೆ ಪುಟ್ಟುಸ್ವಾಮಿ, ಮಾನಪ್ಪನೇ ಕಾರಣವೆಂದು ಆರೋಪಿಸಿ ಛಡಿಯೇಟು ನೀಡಿದರು. ಎಲ್ಲಿಂದಲೋ ಬಂದ ಗುಂಡೊಂದು ಇನ್ಸ್‌ಪೆಕ್ಟರ್ ಎದೆಯನ್ನು ಸೀಳಿತು. ಪೊಲೀಸಿನವರು ಹಾರಿಸಿದ ಗುಂಡೊಂದು ಮಾನಪ್ಪನ ಎದೆಯನ್ನು ಸೀಳಿ ರಕ್ತ ಚಿಮ್ಮಿಸಿತು.

ಮಾನಪ್ಪ, ಮುಟ್ಟುಸ್ವಾಮಿ ಇಬ್ಬರೂ ಜೊತೆಯಾಗಿ ಗುಂಡೇಟಿಗೆ ಬಲಿಯಾಗಿ ಪ್ರಾಣ ಕಳೆದುಕೊಂಡರು. ರಂಗೇಗೌಡರು, ಉಳಿದ ಊರಿನ ಜನರೆಲ್ಲರೂ ಜೈಲುಪಾಲಾದರು. ಊರಿನಲ್ಲಿದ್ದ ದೊಡ್ಡ ದೊಡ್ಡ ಮನೆಗಳನ್ನು ಪೊಲೀಸರು ಕೆಡವಿದರು. ಶಾಂತಿ ಸಮೃದ್ಧಿಯಿಂದ ಕೂಡಿದ ನಂದಿಗ್ರಾಮ ಸ್ಮಶಾನ ಸದೃಶ್ಯವಾಯಿತು

**ಹಬ್ಬಿದ ಬಳ್ಳಿ**

ಕೃಷ್ಣಮೂರ್ತಿ ಪುರಾಣಿಕ ಅವರು ರಚಿಸಿದ ಈ ಕಾದಂಬರಿಯು ಒಂದೆರಡು ತಲೆಮಾರಿನ ಸಾಮಾಜಿಕ ಚಿತ್ರಣವನ್ನು ನೀಡುತ್ತಲೇ ಮೂರನೇ ತಲೆಮಾರಿನ ಜನರಿಗೆ ಸ್ವಾತಂತ್ರ್ಯ ಚಳುವಳಿಯು ಪ್ರೇರಣೆ ನೀಡಿ ಅವರು ಹೋರಾಟಕ್ಕೆ ಧುಮುಕುವುದನ್ನು ತಿಳಿಸುತ್ತದೆ.

ಗಂಗೇನ ಹಳ್ಳಿಗೆ ವಿಶ್ವೇಶ್ವರಭಟ್ಟರು ಕುಟುಂಬ ಸಮೇತರಾಗಿ ಬಂದು ನೆಲೆಯೂರುತ್ತಾರೆ. ಊರ ಜನರೆಲ್ಲರೂ ಇವರನ್ನು ಅತ್ಯಂತ ಪೂಜ್ಯನೀಯವಾಗಿ ಕಾಣುತ್ತಾರೆ. ವಿಶ್ವೇಶ್ವರ ಭಟ್ಟರಿಂದಾಗಿ ಊರಿನಲ್ಲಿ ಅನೇಕ ಧಾರ್ಮಿಕ ಕಾರ್ಯಕ್ರಮಗಳು ಜರುಗುತ್ತವೆ. ಊರು ಸುಧಾರಣೆಯಾಗುತ್ತದೆ. ಹೊಲೆಯರಿಗೆ ಅವರದ್ದೇ ಆದ ಬಾವಿಯ ನಿರ್ಮಾಣವಾಗುತ್ತದೆ. ಹಿಂದು ಮುಸ್ಲಿಂ ಸಾಮರಸ್ಯ ಹೆಚ್ಚುತ್ತದೆ. 'ಮುಸ್ಲೀಂ ದೇವರಿಗೆ ಹಿಂದು ಪೂಜಾರಿ, ಹಿಂದುಗಳು ಮುಸ್ಲೀಂ ದೇವರಿಗೆ ನಡೆದುಕೊಳ್ಳುವುದು' ಇಂತಹ ಸಾಮರಸ್ಯವನ್ನು ನಾವು ಗಂಗೇನಹಳ್ಳಿಯಲ್ಲಿ ಕಾಣಬಹುದಾಗಿತ್ತು. ವಿಶ್ವೇಶ್ವರ ಭಟ್ಟರು ತಮ್ಮ ಸ್ವಾರ್ಥವನ್ನು ತ್ಯಾಗ ಮಾಡಿ ಊರಿನ ಹಿತಕ್ಕಾಗಿ ದುಡಿಯುತ್ತಾರೆ. ಊರಿನ ರಕ್ಷಣೆ, ಪೋಷಣೆ, ನೈತಿಕತೆ, ಆರೋಗ್ಯ, ಧಾರ್ಮಿಕ ಅವಶ್ಯಕತೆ ಹೀಗೆ ಎಲ್ಲವನ್ನೂ ಪೂರೈಸುತ್ತಾರೆ. ಅವರು ಒಂದು ವ್ಯಕ್ತಿಯಾಗದೆ ಒಂದು ಶಕ್ತಿಯಾಗಿ ಇಡೀ ಊರಿನ ಬದಲಾವಣೆಗೆ ಕಾರಣರಾಗುತ್ತಾರೆ. ಅವರ ಧರ್ಮಪತ್ನಿಯು ಈ ಕಾರ್ಯದಲ್ಲಿ ಅವರೊಂದಿಗೆ ಕೈ ಜೋಡಿಸುತ್ತಾರೆ.

ವಿಶ್ವೇಶ್ವರ ಭಟ್ಟರ ಕಾಲದಲ್ಲಿ ಒಂದಾಗಿ ಬಾಳಿದ ಗಂಗೇನ ಹಳ್ಳಿ ಅವರ ಮಕ್ಕಳ ಕಾಲದಲ್ಲಿ ಎರಡು ಬಣಗಳಾಗುತ್ತವೆ. ಹಳ್ಳಿಯಲ್ಲಿ ಮೊದಲಿದ್ದ ಪ್ರೀತಿ, ವಾತ್ಸಲ್ಯ, ಬಾಂಧವ್ಯ ನಶಿಸಿ ಹೋಗಿ ಸ್ವಾರ್ಥ ತುಂಬಿಕೊಳ್ಳುತ್ತದೆ. ವಿಶ್ವೇಶ್ವರ ಭಟ್ಟರ ಮಕ್ಕಳಿಗೆ ಊರಿನಲ್ಲಿ ಯಾವ ಮನ್ನಣೆಯೂ ದೊರಕುವುದಿಲ್ಲ. ಜೊತೆಯಾಗಿ ಸಂಸಾರ ನಡೆಸುವುದು ಕಷ್ಟವಾಗಿ ಕೊನೆಗೆ ಬೇರೆ ಬೇರೆ ಊರುಗಳಲ್ಲಿ ನೆಲೆಯನ್ನು ಕಂಡುಕೊಳ್ಳಬೇಕಾಗುತ್ತದೆ.

ವಿಶ್ವೇಶ್ವರ ಭಟ್ಟನ ಮೊಮ್ಮಗ ರಾಮಾಶಾಸ್ತ್ರಿ. ಶಾಲೆಯಲ್ಲಿ ಮೇಷ್ಟ್ರು. ಅವರು ತನ್ನ ವಿದ್ಯಾರ್ಥಿಗಳಲ್ಲಿ ದೇಶ ಸೇವೆಯ ಕೆಚ್ಚನ್ನು ತುಂಬುತ್ತಾರೆ. ಮುಂದಿನ ಹೋರಾಟಕ್ಕೆ ಜನರನ್ನು ಅಣಿಗೊಳಿಸುತ್ತಾರೆ. "ಸತ್ಯದ ಹೋರಾಟದಲ್ಲಿ ಅಹಿಂಸೆಯೇ ದಿವ್ಯವಾದ ಅಸ್ತ್ರ. ಸತ್ಯಾಗ್ರಹವೇ ಬತ್ತಳಿಕೆ. ಇದರ ಮುಂದೆ ಹಿಂಸೆ ನಿಲ್ಲಲಾರದು. ಅದು ಕ್ರೂರವಾಗಬಹುದು. ಆದರೆ ಹಿಂಸೆ ಎಂದಿಗೂ ಸತ್ಯವನ್ನು ಜಯಿಸಲಾರದು".[೫] ಎಂಬುದಾಗಿ ರಾಮಾಶಾಸ್ತ್ರಿಗಳು ಆ ಊರಿನ ಜನರಿಗೆ

ಬೋಧಿಸತೊಡಗುತ್ತಾರೆ. ಅವರ ಈ ಉಪದೇಶವು ಅವ್ಯಾಹತವಾಗಿ ೨೦ ವರ್ಷಗಳವರೆಗೆ ಸಾಗಿತು. ಅವರ ಈ ದಿವ್ಯವಾಣಿ ಗಂಗೇನಹಳ್ಳಿಗೆ ಮಾತ್ರ ಸೀಮಿತವಾಗಿರದೆ ಇಡೀ ನಾಡಿಗೆ ವ್ಯಾಪಿಸಿತು.

ಅದೇ ಸಮಯಕ್ಕೆ ಸರಿಯಾಗಿ ಗಾಂಧೀಜಿಯವರು ಭಾರತ ಮಾತೆಯ ಉದ್ಧಾರಕ್ಕಾಗಿ ವಿದ್ಯೆಯ ಮೋಹವನ್ನು ತೊರೆಯಿರಿ. ನಿಮ್ಮ ತಾಯಿಯ ಮೊರೆಯನ್ನು ಕೇಳಿ ಹಳ್ಳಿಗಳಿಗೆ ಹೋಗಿ ಚಳುವಳಿಯನ್ನು ಆರಂಭಿಸಿ ಎಂಬುದಾಗಿ ಅವರು ಕರೆ ನೀಡಿದರು. ಈ ಕರೆಗೆ ರಾಮಾಶಾಸ್ತ್ರಿಗಳ ಹಿರಿಯ ಮಗ ವಾಸುದೇವ ಸ್ಪಂದಿಸುತ್ತಾನೆ. ನಾಡಿನ ಬಿಡುಗಡೆಗಾಗಿ ಸಂದರ್ಭ ಬಂದರೆ ಪ್ರಾಣಾರ್ಪಣೆಗೂ ಹಿಂದೆ ಸರಿಯುವುದಿಲ್ಲವೆಂದು ವಿಶ್ವೇಶ್ವರ ಭಟ್ಟರ ಮರಿಮಗನಾದ ವಾಸುದೇವ ತೀರ್ಮಾನಿಸುತ್ತಾನೆ. ಇವನ ನಾಯಕತ್ವದಲ್ಲಿ ಗಂಗೇನಹಳ್ಳಿಯಲ್ಲಿ ಯುವಕರ ಸಮಿತಿ ಸ್ಥಾಪನೆಯಾಗುತ್ತದೆ. ಹಳ್ಳಿಗಳಲ್ಲಿ ಪ್ರಭಾತಪೇರಿ, ಸ್ವಾತಂತ್ರ್ಯದ ಕುರಿತು ಜನಜಾಗೃತಿ ಉಂಟಾಗುತ್ತದೆ. ವಾಸುದೇವನ ವಿಲಕ್ಷಣ ವಾಗ್ವೈಖರಿಗೆ ಮನಸೋತ ಹಳ್ಳಿಯ ಯುವಕರು ತಂಡ ತಂಡವಾಗಿ ಹೋರಾಟದಲ್ಲಿ ಭಾಗವಹಿಸುತ್ತಾರೆ.

ಹೀಗೆ ಸ್ವಾತಂತ್ರ್ಯ ಹೋರಾಟಕ್ಕಾಗಿ ಜನರನ್ನು ತರಬೇತುಗೊಳಿಸುವ ಕಾರ್ಯ ಹಳ್ಳಿಗಳಲ್ಲಿ ವಾಸುದೇವನಿಂದ ಆರಂಭವಾಯಿತು. ಅಧಿಕಾರಿಗಳ ಕಣ್ಣನ್ನು ಈ ಹಳ್ಳಿ ಚುಚ್ಚತೊಡಗುತ್ತದೆ. ವಾಸುದೇವ ಸರಕಾರಕ್ಕೆ ಹಾಗೂ ಪೊಲೀಸರಿಗೆ ಬೇಕಾದ ವ್ಯಕ್ತಿಯಾಗುತ್ತಾನೆ. ಸ್ವದೇಶಿ ಚಳವಳಿ, ಹೆಂಡ ಕುಡಿಯಬೇಡಿರೆಂದು ವಿನಂತಿ, ಪರದೇಶಿ ವಸ್ತುಗಳ ಬಹಿಷ್ಕಾರ– ಹೀಗೆ ಸಮಾಜ ಸುಧಾರಣೆಯ ಜೊತೆ ಜೊತೆಯಲ್ಲಿ ಸ್ವಾತಂತ್ರ್ಯ ಚಳುವಳಿ ವಾಸುದೇವನ ನೇತೃತ್ವದಲ್ಲಿ ಗಂಗೇನಹಳ್ಳಿಯಲ್ಲಿ ನಡೆಯುತ್ತದೆ.

ಹಿಂದು ಮುಸ್ಲಿಂ ಭೇದ ಭಾವವು ಹಳ್ಳಿಗಳಿಗೂ ವ್ಯಾಪಿಸುತ್ತದೆ. ವಾಸುದೇವನು ಹಳ್ಳಿಯಲ್ಲಿ ಪ್ರಸಿದ್ಧಿಯಾಗುತಿದ್ದಂತೆ ಅವನಿಗೆ ಶತ್ರುಗಳು ಕೂಡಾ ಹುಟ್ಟಿಕೊಳ್ಳುತ್ತಾರೆ. ವಾಸುದೇವನ ತಮ್ಮ ಜಯದೇವ ಕೂಡಾ ಚಳವಳಿಯಲ್ಲಿ ಭಾಗವಹಿಸಿದರು. ಜಯದೇವನ ಪ್ರೇಯಸಿ ಸುಂದರಾ ಕೂಡಾ ಚಳವಳಿಗೆ ಧುಮುಕುತ್ತಾಳೆ. ಇವಳ ತಂದೆ ಪೊಲೀಸ್ ಅಧಿಕಾರಿಯಾಗಿದ್ದರು. ಯುವಕ ಯುವತಿಯರೆಲ್ಲರೂ ಈ ಸ್ವಾತಂತ್ರ್ಯದ ಅಲೆಯಲ್ಲಿ ತೇಲಿಹೋಗುತ್ತಾರೆ. ಹೀಗೆ ವಿಶ್ವೇಶ್ವರ ಭಟ್ಟರ ಇಡೀ ವಂಶವೇ ಚಳವಳಿಗೆ ಧುಮುಕುತ್ತದೆ. ವಾಸುದೇವ ಭೂಗತನಾಗಿ ಕೆಲಸ ಮಾಡುತ್ತಾನೆ. ಆದರೂ ಪೊಲೀಸರ ಕೆಂಗಣ್ಣು ಅವನ ಮೇಲಿರುತ್ತದೆ. ಹಳ್ಳಿ ಹಳ್ಳಿಗಳಲ್ಲಿ ಅಸಹಕಾರ ಆಂದೋಲನ ಹಾಗೂ ಸ್ವಾತಂತ್ರ್ಯ ಚಳವಳಿಯನ್ನು ಹಬ್ಬಿದ ವಾಸುದೇವ ಕೊನೆಗೂ ಪೊಲೀಸರ ಗುಂಡಿಗೆ ಬಲಿಯಾಗುತ್ತಾನೆ. ಹೀಗೆ ಭಾರತ ಮಾತೆಯ ಪದತಲದಲ್ಲಿ ವಿಶ್ವೇಶ್ವರ ಭಟ್ಟರ ಹಬ್ಬಿದ ಬಳ್ಳಿ ಹೂ ಬಿಡುತ್ತದೆ.

## ಹೇಮಂತಗಾನ

ವ್ಯಾಸರಾಯ ಬಲ್ಲಾಳರ ಈ ಕಾದಂಬರಿಯು ಪತ್ರಿಕೆಯೊಂದು ಸ್ವಾತಂತ್ರ್ಯ ಹೋರಾಟದಲ್ಲಿ ತನ್ನ ಪಾತ್ರವನ್ನು ನಿರ್ವಹಿಸಿದ ಬಗೆ, ಬಡವರ್ಗದ ಅನಂತನಂತಹ ಯುವಕರಲ್ಲಿ ತುಂಬಿದ ಹೋರಾಟದ ಕಿಚ್ಚನ್ನು ಅನಾವರಣಗೊಳಿಸುತ್ತದೆ. ೧೯೪೨ರ ಕ್ರಾಂತಿಯಲ್ಲಿ ಅನಂತ ಪಾಲ್ಗೊಳ್ಳುತ್ತಾನೆ. ತನ್ನ ಕಾಲೇಜು ವಿದ್ಯಾಭ್ಯಾಸವನ್ನು ಮೊಟಕುಗೊಳಿಸುತ್ತಾನೆ. 'ಕಹಳೆ' ಎಂಬ ಪತ್ರಿಕೆಯನ್ನು ಪ್ರಾರಂಭಿಸುತ್ತಾನೆ. ಪತ್ರಿಕೆಗೆ ಸರಿಯಾದ ಪ್ರೋತ್ಸಾಹವು ದೊರೆಯದೆ ಆರ್ಥಿಕ ಮುಗ್ಗಟ್ಟನ್ನು ಎದುರಿಸಬೇಕಾಗುತ್ತದೆ. ಅನಂತನ ಕ್ರಾಂತಿಯ ಜ್ವಾಲೆಯು ಅವನ ಸಾವಿನೊಂದಿಗೆ ಕೊನೆಗೊಳ್ಳುತ್ತದೆ.

## ಚಿರಸ್ಮರಣೆ

ನಿರಂಜನರ 'ಚಿರಸ್ಮರಣೆ' ಕಾದಂಬರಿಯು ಕಯ್ಯೂರಿನ ರೈತ ಹೋರಾಟದ ಕಥೆಯನ್ನೊಳಗೊಂಡಿದೆ. ಇದೊಂದು ಕೇವಲ ಕಾಲ್ಪನಿಕ ಕಾದಂಬರಿಯಲ್ಲ. ಕಯ್ಯೂರಿನ ಹೋರಾಟಕ್ಕೆ ಸಂಬಂಧಿಸಿದಂತೆ ೬೦ ಜನರನ್ನು ಬಂಧಿಸಿ ಮಂಗಳೂರಿಗೆ ತಂದಿದ್ದರು. ವಿಚಾರಣೆಯೆಂಬ ನಾಟಕದ ಬಳಿಕ ಅವರಲ್ಲಿ ನಾಲ್ಕು ಮಂದಿಗೆ ಮರಣದಂಡನೆಯಾಗುತ್ತದೆ. ಇದೊಂದು ನೈಜ ಘಟನೆ ಮತ್ತು ನಿರಂಜನರು ಸ್ವತಃ ಪತ್ರಕರ್ತರಾದ ಕಾರಣ ಆ ಕೈದಿಗಳನ್ನು ಭೇಟಿಯಾಗಿ ಮಾಹಿತಿ ಸಂಗ್ರಹಿಸಿ ಈ ಕಾದಂಬರಿಯನ್ನು ರಚಿಸಿದರು. ಆದುದರಿಂದ ಇದೊಂದು ಅತ್ಯಂತ ಮಹತ್ವದ ಕೃತಿಯಾಗಿದೆ.

ಕಮ್ಯುನಿಸ್ಟ್ ಪಕ್ಷದ ಸಮಾಜವಾದ ಹಾಗೂ ಸಮತಾವಾದಕ್ಕೆ ಮಾರುಹೋದ ಅಪ್ಪು, ಚಿರುಕಂಡ, ಅಬೂಬಕರ್ ಮುಂತಾದ ಯುವಕರು ಬ್ರಿಟಿಷರ ಪ್ರತಿನಿಧಿಗಳಾದ ಜಮೀನ್ದಾರ ವರ್ಗದ ದೌರ್ಜನ್ಯವನ್ನು ಪ್ರತಿಭಟಿಸುತ್ತಾರೆ. ಇಲ್ಲಿ ಬರುವ ಶಾಲಾ ಮಾಸ್ತರ ಪಾತ್ರ ಅತ್ಯಂತ ಪ್ರಮುಖವಾದುದು. ಇವರೇ ಅಪ್ಪು ಮತ್ತು ಚಿರಕುಂಡ ಈ ಮಟ್ಟಕ್ಕೆ ಬೆಳೆಯಲು ಕಾರಣಕರ್ತರು. ಮಾಸ್ತರ ಮೂಲಕ ಅಪ್ಪು ಮತ್ತು ಚಿರಕಂಡನಿಗೆ ಪಂಡಿತರ ಪರಿಚಯವಾಗುತ್ತದೆ. ಅವರು ಕಮ್ಯುನಿಸ್ಟ್ ಪಕ್ಷದ ತತ್ವವನ್ನು ಪ್ರಚಾರ ಮಾಡುತ್ತಿದ್ದರು. ರೈತರಿಗಾಗುತ್ತಿರುವ ಅನ್ಯಾಯಕ್ಕೆ ಪರಿಹಾರವೆಂದರೆ ಹಳ್ಳಿ ಹಳ್ಳಿಗಳಲ್ಲಿ ರೈತರಲ್ಲಿ ಜಾಗೃತಿಯನ್ನು ಮೂಡಿಸಿ ರೈತ ಸಂಘವನ್ನು ಸ್ಥಾಪಿಸುವುದು, ಆ ಸಂಘದ ಮೂಲಕ ರೈತ ಕ್ರಾಂತಿಯನ್ನು ಮಾಡಿ ರೈತರನ್ನು ಶೋಷಣೆಯಿಂದ ಮುಕ್ತಗೊಳಿಸುವುದು ಇವರ ಯೋಜನೆಯಾಗಿತ್ತು. ಇನ್ನೂ ಬಾಲಕರಾಗಿದ್ದ ಅಪ್ಪು ಮತ್ತು ಚಿರಕುಂಡ ಸ್ವತಃ ರೈತರು. ಅದರಲ್ಲಿಯೂ ಚಿರಕಂಡನ ತಂದೆ ಜಮೀನ್ದಾರನಲ್ಲಿ ಮಾಡಿದ್ದ ಸಾಲಕ್ಕಾಗಿ ತನ್ನ ಭೂಮಿಯನ್ನೇ ಕಳೆದುಕೊಂಡಿದ್ದನು. ಆ ಸಮಯದಲ್ಲಿ ಜಮೀನ್ದಾರರ ಆಹಂಕಾರವಂತೂ ಮುಗಿಲು ಮುಟ್ಟಿತ್ತು. ರೈತರಿಗೆ ಅವರು ಕೊಟ್ಟ ಸಾಲ ಕೇವಲ ಅವರ ಬಡ್ಡಿಗೆ ಸಂದಾಯವಾಗುತ್ತಿತ್ತೇ ಹೊರತು ಅಸಲು ಹಾಗೆ ಇರುತ್ತಿತ್ತು. ಸಾಲದ ನೆಪದಲ್ಲಿ ರೈತರ ಭೂಮಿಯನ್ನು ಕಸಿದುಕೊಳ್ಳುವುದು, ಅವರು ಬೆಳೆದ ಪೈರನ್ನು ತಮ್ಮ ಮನೆಗೆ ಸಾಗಿಸುವುದು,

ಅವರಿಂದ ತರಕಾರಿ ಧವಸ ಧಾನ್ಯ ಮುಂತಾದ ಕಾಣಿಕೆಗಳನ್ನು ಆಗಾಗ ವಸೂಲು ಮಾಡುವುದು ಇವೆಲ್ಲಾ ಮಾಮುಲು ವಿಷಯವಾಗಿತ್ತು. ರೈತರ ಪಾಡು ಯಾರಿಗೂ ಬೇಡವಾಗಿತ್ತು. ಅಪ್ಪು, ಚಿರುಕಂಡ ಇದನೆಲ್ಲಾ ಕಣ್ಣಾರೆ ಕಂಡುದು ಮಾತ್ರವಲ್ಲದೆ ತಮ್ಮ ಬದುಕಿನಲ್ಲಿ ಅನುಭವಿಸಿದ್ದರು.

"ದುಡಿಯುವ ಜನರಲ್ಲಾ ಒಂದಾದರೆ ಸುಲಿಯುವ ಜನರೆಲ್ಲ ಸೋತುಹೋಗುತ್ತಾರೆ. ನಮ್ಮನ್ನು ಬಿಗಿದಿರುವ ಬೇಡಿಗಳು ಪುಡಿಪುಡಿಯಾಗುತ್ತವೆ. ನಮ್ಮ ರೈತರೆಲ್ಲ ಎಚ್ಚರವಾಗ್ಬೇಕು.... ಹಳ್ಳಿ ಹಳ್ಳಿಗಳಲ್ಲಿ ರೈತಸಂಘ ಸ್ಥಾಪನೆಯಾಗಬೇಕು"[೬] ರೈತರು ಸಂಘಟನೆಯ ಮೂಲಕ ಹೋರಾಡಬೇಕೆಂಬುದು ಪಂಡಿತರ ಉದ್ದೇಶವಾಗಿತ್ತು. ಆ ಸಂಘದ ಮೂಲಕ ಜನಜಾಗೃತಿಯನ್ನುಂಟುಮಾಡುವುದು, ರಾಜಕೀಯ ಜ್ಞಾನ ಪಡೆಯುವುದು, ಅದಕ್ಕೋಸ್ಕರ ಹಳ್ಳಿಗೊಂದು ಪತ್ರಿಕೆಯನ್ನು ತರಿಸಿ ರೈತರಿಗೆ ಓದಿ ಹೇಳುವ ಕೆಲಸವನ್ನು ಮಾಸ್ತರರು ಮಾಡುತ್ತಾರೆ. ಜನಸಂಘಟನೆಯ ಮೂಲಕ ಸ್ವಾತಂತ್ರ್ಯ ಗಳಿಸುವುದು ಅವರ ಧ್ಯೇಯವಾಗಿತ್ತು. ದೇಶದಾದ್ಯಂತ ಇವರ ಪರವಾಗಿ ಹೋರಾಟ ನಡೆಯುತ್ತದೆ. ಆದರೆ ಪರಕೀಯ ಸರಕಾರವು ದೇಶೀಯವಾದ ಯಾವ ಹೋರಾಟಕ್ಕೂ ಸೊಪ್ಪು ಹಾಕದೆ ಅಪ್ಪು, ಚಿರುಕಂಡ, ಅಬುಬಕರ್ ಹಾಗೂ ಕುಟ್ಟಿಕೃಷ್ಣನ್ ಈ ನಾಲ್ವರನ್ನು ಗಲ್ಲಿಗೇರಿಸುತ್ತದೆ. ತನ್ನ ವಿರುದ್ಧವಾಗಿ ನಡೆಯುವ ನ್ಯಾಯಪರವಾದ ಹೋರಾಟವೆಲ್ಲವೂ ಬ್ರಿಟಿಷ್ ಸರಕಾರದ ದೃಷ್ಟಿಯಿಂದ ಹಾಗೂ ಅವರ ಕೃಪಾಕಟಾಕ್ಷದಲ್ಲಿ ಬದುಕುತ್ತಿರುವ ದೇಶದ್ರೋಹಿಗಳ ದೃಷ್ಟಿಯಲ್ಲಿ ಘೋರ ಅಪರಾಧವಾಗುತ್ತದೆ.

**ಮಗಳ ಮದುವೆ:**

ಆನಂದಕಂದ ಅವರ 'ಮಗಳ ಮದುವೆ' ಕಾದಂಬರಿಯು ಸಂಕ್ರಮಣಾವಸ್ಥೆಯೊಂದು ಸಮಾಜದಲ್ಲಿ ಉಂಟು ಮಾಡುವ ಗೊಂದಲ ತಲ್ಲಣಗಳನ್ನು ಕಟ್ಟಿಕೊಡುತ್ತಲೇ ೧೯೩೦ರ ಉಪ್ಪಿನ ಸತ್ಯಾಗ್ರಹದ ಸಮಯದಲ್ಲಿ ಹಳ್ಳಿಗಳಲ್ಲಿ ಸ್ವಾತಂತ್ರ್ಯ ಚಳುವಳಿಯ ಕುರಿತು ಉಂಟಾದ ಜನಜಾಗೃತಿಯ ಚಿತ್ರಣವನ್ನು ಓದುಗರ ಮುಂದಿಡುತ್ತದೆ.

೨೦ನೇ ಶತಮಾನವು ಭಾರತೀಯ ಸಾಮಾಜಿಕ ವ್ಯವಸ್ಥೆಯಲ್ಲಿ ಒಂದು ಸಂಕ್ರಮಣ ಕಾಲ. ಇಂಗ್ಲಿಶ್‌ಷ್ ಶಿಕ್ಷಣವನ್ನು ಪಡೆದುಕೊಂಡು ಆಧುನಿಕರೆನಿಸಿಕೊಂಡ ಮಂದಿ ಒಂದೆಡೆಯಾದರೆ ಇನ್ನೂ ತಮ್ಮ ಸಂಪ್ರದಾಯ, ಆಚಾರ, ವಿಚಾರಗಳನ್ನೇ ನಂಬಿ ಕೂತಿರುವ ಮಂದಿ ಇನ್ನೊಂದು ಕಡೆ. ಮದುವೆಯಂತಹ ವಿಚಾರಗಳಲ್ಲೂ ಈ ಸಂಕ್ರಮಣ ಕಾಲ ಗೊಂದಲಕ್ಕೆ ಎಡೆಮಾಡಿಕೊಟ್ಟಿದೆ.

ಕಾವೇರಿ ಎಂಬ ಹೆಣ್ಣುಮಗಳನ್ನು ವರ ನೋಡಲಿಕ್ಕೆ ಬರುವ ಸಂದರ್ಭದಿಂದ ಈ ಕಾದಂಬರಿ ಆರಂಭವಾಗುತ್ತದೆ. ಕೆಲವು ಹುಡುಗರು ಇಂಗ್ಲಿಷ್ ವಿದ್ಯೆ ಕಲಿತ ಹುಡುಗಿಯರನ್ನೇ ಅಪೇಕ್ಷಿಸುತ್ತಾರೆ. ತೀರಾ ಸಂಪ್ರದಾಯನಿಷ್ಠ ಕುಟುಂಬದ ಹೆಣ್ಣುಮಕ್ಕಳು ಇಂಗ್ಲಿಷ್ ವಿದ್ಯೆಯನ್ನು ಕಲಿತಿರಲಿಲ್ಲ. ಸಂಕ್ರಮಣಾವಸ್ಥೆಯೊಂದು ಸಾಮಾಜಿಕ ವ್ಯವಸ್ಥೆಯಲ್ಲಿ ಉಂಟುಮಾಡುವ

ತಲ್ಲಣಗಳನ್ನು, ಬದಲಾವಣೆಗಳನ್ನು ಈ ಕಾದಂಬರಿಯಲ್ಲಿ ಚಿತ್ರಿಸಲಾಗಿದೆ. ೧೯೩೦– ಉಪ್ಪಿನ ಸತ್ಯಾಗ್ರಹ ಮಾಡುತ್ತಿದ್ದ ಕಾಲವದು. ಕೆಲವು ಮಂದಿ ಯುವಕರು ಗಾಂಧಿ ಹೇಳಿದ ಉಪ್ಪಿನ ಕಾಯಿದೆ ಭಂಗ ಚಳವಳಿಯಲ್ಲಿ ತಮ್ಮನ್ನು ತಾವು ಸಮರ್ಪಿಸಿಕೊಂಡಿದ್ದರು. ಆದರೆ ಕೆಲವು ಮಂದಿ 'ಇದೊಂದು ಹುಚ್ಚು', ಉಪ್ಪಿನ ಕಾಯಿದೆ ಭಂಗ ಮಾಡಿದ ತಕ್ಷಣ 'ಸ್ವರಾಜ್ಯ' ಬರುತ್ತದೆಯೇ? ಎಂಬುದಾಗಿ ಮೂಗು ಮುರಿಯುತ್ತಿದ್ದರು. ಗಾಂಧೀಜಿಯ ಮಾತು ಕೇಳುವವರು ಹುಚ್ಚರು ಎಂಬ ಭಾವನೆ ಕೆಲವರಲ್ಲಿತ್ತು.

ರತ್ನಾಕರ ಎನ್ನುವವನು ಸ್ವಯಂಸೇವಕರ ನಾಯಕ. ನಗರದಲ್ಲೊಂದು 'ಸ್ವರಾಜ್ಯ ಭವನ' ನಿರ್ಮಾಣ ಹೊಂದಿದೆ. ಎಲ್ಲ ಸ್ವಯಂಸೇವಕರು ರಾಷ್ಟ್ರ ಸೇವಾವ್ರತದ ದೀಕ್ಷೆಯನ್ನು ಪಡೆದವರು. ದೇಶಕ್ಕಾಗಿ ಮಾಡಬೇಕಾದ ತ್ಯಾಗದ ಸಂದರ್ಭವನ್ನರಿತು ಎಲ್ಲರೂ ತಮ್ಮ ಜೀವನಾಧರವಾದ ಉದ್ಯೋಗ, ಕೃಷಿ, ಶಾಲಾ ಕಾಲೇಜುಗಳನ್ನು ಬಿಟ್ಟು ಹೋರಾಟಕ್ಕೆ ಧುಮುಕುತ್ತಾರೆ. ಆದರೆ ರತ್ನಾಕರ ಇವರಲ್ಲಿ ಅತೀ ಬುದ್ಧಿವಂತನೂ ಜ್ಞಾನಿಯೂ ಆಗಿದ್ದನು. ಉಪ್ಪಿನ ಸತ್ಯಾಗ್ರಹದಲ್ಲಿ ಕೂಡಾ ರತ್ನಾಕರನು ಪ್ರಮುಖ ಪಾತ್ರವನ್ನು ವಹಿಸುತ್ತಾನೆ.

ಗಾಂಧೀಜಿಯ ಬಂಧನವಾದ ಕೂಡಲೇ ಚಳವಳಿ ತಣ್ಣಗಾಗುತ್ತದೆ. ನಮ್ಮ ಭಾರತೀಯರ ಸ್ವಭಾವವನ್ನು ಈ ಕಾದಂಬರಿ ಬಹಳ ಸೊಗಸಾಗಿ ಚಿತ್ರಿಸುತ್ತದೆ. ಭಾರತೀಯರು ಯಾವುದೇ ತ್ಯಾಗಕ್ಕೂ ಸಿದ್ಧರು. ಆದರೆ ಅವರಿಗೊಬ್ಬ ಮುಂದಾಳು ಬೇಕು. ಮುಂದಾಳುವಿಲ್ಲದಿದ್ದರೆ ಸ್ವತಂತ್ರವಾಗಿ ಯಾವ ಕೆಲಸವನ್ನೂ ಮಾಡಲಾರರು. ಅದನ್ನು ಬ್ರಿಟಿಷರು ಚೆನ್ನಾಗಿ ಮನಗಂಡಿದ್ದರು. ಅದಕ್ಕಾಗಿ ಪ್ರತಿಯೊಂದು ಚಳವಳಿ ಆರಂಭವಾದ ಕೂಡಲೆ ಅವರು ಗಾಂಧೀಜಿಯವರನ್ನು ಬಂಧಿಸುತಿದ್ದರು.

ಮುದ್ದಾಪುರ ಎಂಬ ಹಳ್ಳಿಯಲ್ಲಿ ರತ್ನಾಕರನ ಸ್ನೇಹಿತ ರಂಗಣ್ಣ ಕೂಡ ಅನೇಕ ವಿಧಾಯಕ ಕಾರ್ಯಕ್ರಮಗಳನ್ನು ಕೈಗೊಂಡು ಆ ಊರನ್ನೊಂದು ಮಾದರಿ ಹಳ್ಳಿಯನ್ನಾಗಿ ರೂಪಿಸಿದ್ದನು. ರಂಗಣ್ಣ ಆ ಊರಿಗೆ ಮುಖಂಡನಂತಿದ್ದನು. ಅಂತಹ ರಂಗಣ್ಣನಿಗೆ ರತ್ನಾಕರನು ಕುಮುದ ಎಂಬ ಮುಗ್ಧ ಹುಡುಗಿಯ ಜೊತೆಯಲ್ಲಿ ಮದುವೆಯನ್ನು ನಿಶ್ಚಯಿಸುತ್ತಾನೆ. ಮದುವೆಯಾಗುವುದಿಲ್ಲವೆಂದು ದುಃಖಿತರಾದ ತಂದೆ ತಾಯಿಗೆ ಇದು ಬಹಳ ಸಂತೋಷದ ವಿಷಯವಾಗಿರುತ್ತದೆ.

ಆಧುನಿಕ ಶಿಕ್ಷಣವನ್ನು ಪಡೆದುಕೊಂಡ ಯುವಕರು ಇಂಗ್ಲಿಷ್ ವಿದ್ಯಾಭ್ಯಾಸ ಪಡೆದ ಯುವತಿಯನ್ನು ಬಯಸುತ್ತಿದ್ದರೆ, ಯುವತಿಯರು ಕೂಡಾ ಸರಕಾರಿ ನೌಕರಿಯಲಿರುವ, ಕೈತುಂಬ ಸಂಬಳ ತರುವ, ಪಟ್ಟಣದಲ್ಲಿ ವಾಸವಾಗಿರುವ ಯುವಕರನ್ನು ಬಯಸುತ್ತಿದ್ದರು. ಇಲ್ಲಿ ಕುಮುದ ಮಾತ್ರ ಹಳ್ಳಿಯ ಯುವಕ ರಂಗಣ್ಣನನ್ನು ಮದುವೆಯಾಗಲು ಒಪ್ಪಿಕೊಳ್ಳುತ್ತಾಳೆ. ರಂಗಣ್ಣ ವಿದ್ಯಾವಂತನಾಗಿದ್ದರೂ ಸರಳ ಜೀವಿ. ಅವನು ಕೂಡಾ ಕುಮುದಳನ್ನು ಸಂತೋಷದಿಂದ ವರಿಸಲು ಒಪ್ಪಿಕೊಳ್ಳುತ್ತಾನೆ.

ಕೆಲವೊಂದು ಸರಕಾರಿ ನೌಕರರು, ಹಾಗೂ ಪೋಲೀಸ್ ಅಧಿಕಾರಿಗಳು ಕೂಡ ದೇಶಭಕ್ತರಿಗೆ ಸಹಾಯ ಮಾಡುತ್ತಿದ್ದರು. ರತ್ನಾಕರನ ಬಂಧನಕ್ಕೆ ಸರಕಾರ ಬಲೆ ಬೀಸಿದೆಯೆಂದು ಹಾಗೂ ಅವನನ್ನು ಹುಡುಕಲು ಪೋಲೀಸ್ ಇಲಾಖೆ ೨೦೦೦ ರೂಪೈ ಇನಾಮು ಘೋಷಿಸಿದೆಯೆಂದು ಹನುಮಂತಪ್ಪ ಎಂಬ ಪೋಲೀಸ್ ಕಾನ್‌ಸ್ಟೇಬಲ್ ರತ್ನಾಕರನಿಗೆ ತಿಳಿಸುತ್ತಾನೆ. ಇದರಿಂದ ರತ್ನಾಕರ ತಪ್ಪಿಸಿಕೊಳ್ಳುವುದಕ್ಕೆ ಸುಲಭವಾಗುತ್ತದೆ. ಸ್ವರಾಜ್ಯ ಚಳುವಳಿಗೆ ಅವನು ಮುಖ್ಯಸ್ಥನಾದ ಕಾರಣ ಏನಾದರೂ ಮಾಡಿ ಅವನನ್ನು ಹಿಡಿದೇ ತೀರಬೇಕೆಂದು ಪೋಲೀಸ್ ಇಲಾಖೆ ನಿರ್ಧರಿಸುತ್ತದೆ. ಆದರೆ ಸದ್ಯಕ್ಕಂತು ಹನಮಂತಪ್ಪನ ಉಪಕಾರದಿಂದ ರತ್ನಾಕರ ತಪ್ಪಿಸಿಕೊಳ್ಳುತ್ತಾನೆ.

## ಶ್ರದ್ಧಾಂಜಲಿ

ರಾಜಾರಾಮ್ ಮಜಲೀಕರ ಅವರ ಈ ಕಾದಂಬರಿಯಲ್ಲಿ ಮುಖ್ಯವಾಗಿ ಮೂರು ಮಜಲುಗಳನ್ನು ನಾವು ಕಾಣುತೇವೆ. ಕಾಲೇಜು ವಿದ್ಯಾರ್ಥಿಗಳಾದ ರಮೇಶ ಹಾಗೂ ರೋಹಿಣಿ ಚಳುವಳಿಗೆ ದುಮುಕಿದ್ದು, ಹಿರೇಹಳ್ಳಿ ಸಿದ್ಧಪ್ಪನವರ ಮೂಲಕ ತಮ್ಮ ಚಳುವಳಿಯ ಕೇಂದ್ರ ಸ್ಥಾನವನ್ನಾಗಿ ಹಿರೇಹಳ್ಳಿಯನ್ನ ಆರಿಸಿಕೊಂಡದ್ದು, ಹಿರೇಹಳ್ಳಿಯಲ್ಲಿ ತೀವ್ರಗೊಂಡ ಹೋರಾಟ ಕೊನೆಗೆ ದುರಂತದಲ್ಲಿ ಕೊನೆಗಾಣುವುದು. ಇಡೀ ಹಿರೇಹಳ್ಳಿಯು ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿ ತಮ್ಮ ಸರ್ವಸ್ವವನ್ನು ತ್ಯಾಗ ಮಾಡುವುದು ವಿಶೇಷವಾಗಿದೆ.

ಅನಾಥನಾದ ರಮೇಶ ಬಾಬುರಾಯರ ಸಾಕುಮಗನಾಗುತ್ತಾನೆ. ಕಾಲೇಜು ಶಿಕ್ಷಣವನ್ನು ಪಡೆದುಕೊಳ್ಳುತ್ತಾನೆ. ರಾಷ್ಟ್ರಭಕ್ತಿಯನ್ನು ಮೈಗೂಡಿಸಿಕೊಳ್ಳುತ್ತಾನೆ. ಗಾಂಧಿ, ನೆಹರೂ, ತಿಲಕ್, ಮುಂತಾದವರ ತ್ಯಾಗ ಬಲಿದಾನದ ಕಥೆಯನ್ನು ತಿಳಿದುಕೊಳ್ಳುತ್ತಾನೆ. ತಾನೂ ಅವರಂತೆ ದೇಶಸೇವೆ ಮಾಡಬೇಕೆಂದು ತೀರ್ಮಾನಿಸುತ್ತಾನೆ.

ಮಹಾತ್ಮರ ರಾಷ್ಟ್ರೀಯ ಚಳವಳಿ ದೇಶದ ಮೂಲೆ ಮೂಲೆಗೆ ವ್ಯಾಪಿಸಿದ ಕಾಲವದು. ನಾಡಿಗೆ ನಾಡೇ ಮಹಾತ್ಮರ ಕರೆಗೆ ಓಗೊಟ್ಟಿತು. ಬಾಲಕರು, ವೃದ್ಧರು, ಬಾಲಕಿಯರು, ತರುಣರು, ಎಲ್ಲರೂ ಚಳುವಳಿಯಲ್ಲಿ ಸೇರಿದರು. ಕಾಲೇಜಿಗೂ ಇದರ ಗಾಳಿ ವ್ಯಾಪಿಸಿತು. ಕಾಲೇಜಿಗೆ ಕಾಲೇಜೇ ಈ ಸಂಗ್ರಾಮದಲ್ಲಿ ಧುಮುಕಿತು. 'ಕ್ವಿಟ್ ಇಂಡಿಯಾ' 'ಬ್ರಿಟಿಷರೆ ಇಲ್ಲಿಂದ ತೊಲಗಿರಿ', ಮಹಾತ್ಮ ಗಾಂಧೀಕೀ ಜೈ' ಮುಂತಾದ ಘೋಷಣೆಗಳು ಮುಗಿಲು ಮುಟ್ಟುತ್ತದ್ದವು.

ರೋಹಿಣಿ ಮತ್ತು ರಮೇಶ ಹೂನಳಿ ಸಿದ್ಧಪ್ಪನವರ ಹಳ್ಳಿಗೆ ತೆರಳಿ ಆ ಹಳ್ಳಿಯನ್ನು ತನ್ನ ಕಾರ್ಯಕ್ಷೇತ್ರವನ್ನಾಗಿ ಮಾಡಿಕೊಳ್ಳುತ್ತಾರೆ. ಇವರು ಈ ಹಳ್ಳಿಗೆ ಬಂದುದು ಅವರಿಗೆಲ್ಲಾ ಸಂತೋಷವನ್ನುಂಟು ಮಾಡುತ್ತದೆ. ರಮೇಶ ರೋಹಿಣಿಯರು ಆ ಹಳ್ಳಿಯ ಮುಗ್ಧ ಜನರಿಗೆ ಪೂಜ್ಯರೆನಿಸಿಕೊಳ್ಳುತ್ತಾರೆ. ಆ ಹಳ್ಳಿಯ ಜನರೆಲ್ಲರೂ ಅನಕ್ಷರಸ್ಥರಾಗಿದ್ದರು. ಆದರೂ ಚಳುವಳಿಯಲ್ಲಿ ಭಾಗವಹಿಸುವ ಮನಸ್ಸಿತ್ತು. ಈಗ ರಮೇಶ, ರೋಹಿಣಿ ಏನು ಹೇಳಿದರೂ ತಾವು

ಕೇಳಲು ಸಿದ್ಧವೆನ್ನುತ್ತಾರೆ. ಹಳ್ಳಿಯ ಜನರಲ್ಲಿ ಹುದುಗಿರುವ ಜೀವಶಕ್ತಿಯನ್ನು ಬಡಿದೆಬ್ಬಿಸಲು ಅವರಿಗೊಬ್ಬ ಮುಖಂಡನ ಅವಶ್ಯಕತೆಯಿತ್ತು. ಹಳ್ಳಿಯ ಜನರಿಗೆ ಗಾಂಧೀಜಿಯ ಮೇಲೆ ಅಚಲ ವಿಶ್ವಾಸವಿತ್ತು. ರೋಹಿಣಿ ಮತ್ತು ರಮೇಶ ಹಳ್ಳಿಯ ಜನರಲ್ಲಿ ಜಾಗೃತಿ ಹಾಗೂ ಅಕ್ಷರ ಜ್ಞಾನವನ್ನು ಮೂಡಿಸಲು ದಿನಾಲೂ ಎರಡು ಗಂಟೆ ಮೀಸಲಿಡಲು ನಿರ್ಧರಿಸಿದರು.

ರಮೇಶ ಗುಪ್ತವಾಗಿ ಇತರ ಹಳ್ಳಿಗಳನ್ನು ಸಂದರ್ಶಿಸುತ್ತಾನೆ. ಜನ ಸಂಘಟನೆಯಲ್ಲಿ ತೊಡಗುತ್ತಾನೆ. ಆಗಸ್ಟ್ ೯, ೧೯೪೨ರಲ್ಲಿ ಗಾಂಧೀಜಿಯ ಬಂಧನವಾದ ನಂತರ ಚಳವಳಿ ತೀವ್ರವಾಗುತ್ತದೆ. ಅಹಿಂಸೆಯಿಂದಲೇ ಚಳವಳಿಗೆ ಮುನ್ನುಗ್ಗಲು ರಮೇಶ ಜನರಿಗೆ ತಿಳಿ ಹೇಳುತ್ತಾನೆ. ರೋಹಿಣಿಯ ಜೊತೆಯಲ್ಲಿ ಆ ಊರಿನ ಶ್ರೀಮಂತ ಬಸಪ್ಪ ನಾಯಕರ ಮಗಳು ರುದ್ರಮ್ಮ ಕೂಡಾ ಬಹಿರಂಗ ಹೋರಾಟದಲ್ಲಿ ಪಾಲ್ಗೊಳ್ಳುವ ಪ್ರತಿಜ್ಞೆ ಮಾಡುತ್ತಾಳೆ. ರುದ್ರಮ್ಮನ ಪ್ರತಿಜ್ಞೆಯನ್ನು ಕಂಡು ಅಲ್ಲಿರುವ ಪ್ರತಿಯೊಬ್ಬರೂ ಪ್ರತಿಜ್ಞೆ ಮಾಡುತ್ತಾರೆ.

ಆ ಊರಿನ ಕುಲಕರ್ಣಿ ರಂಗಣ್ಣ ಮಾತ್ರ ಚಳುವಳಿಗೆ ವಿರೋಧಿಯಾಗಿದ್ದನು. ಅವನು ರಮೇಶ ಮತ್ತು ರೋಹಿಣಿಯರ ವಿಚಾರವನ್ನು ರಾವ್‌ಸಾಹೇಬ್ ಭಡಕಲ್ ಶಿವರಾಯರಿಗೆ ತಿಳಿಸುತ್ತಾನೆ. ರಮೇಶ ರೋಹಿಣಿ ಮತ್ತು ಇತರ ಚಳವಳಿಗಾರರು ತಮ್ಮ ಸ್ಥಳ ಬದಲಾಯಿಸಿ 'ನಾರಾಯಣ ಬೆಟ್ಟ' ಎಂಬ ಕಾಡುಪ್ರದೇಶಕ್ಕೆ ಬರುತ್ತಾರೆ. ಪೊಲೀಸರ ಕ್ಯಾಂಪು ಹಿರೇಹಳ್ಳಿಗೆ ಮುತ್ತಿಗೆ ಹಾಕಿ ಊರಿನ ಪ್ರತಿಯೊಂದು ಮನೆಯನ್ನು ಶೋಧಿಸಿತು.

ರಮೇಶ, ರೋಹಿಣಿಯ ತಂದೆ ಡಿ.ಎಸ್.ಪಿ ಶಾಮರಾಯರ ಮನೆಗೆ ಫೌಜುದಾರನ ವೇಷದಲ್ಲಿ ಹೋಗಿ ಮೂರು ಪಿಸ್ತೂಲುಗಳನ್ನು ಎತ್ತಿಕೊಂಡು ಬರುತ್ತಾನೆ. ಇದು ಅವರ ಕೋಪವನ್ನು ಇನ್ನಷ್ಟು ಕೆರಳಿಸುತ್ತದೆ. ಸ್ವತಃ ಶಾಮರಾಯರೇ ಕಾಂಗ್ರೆಸ್ ಮುಖಂಡರನ್ನು ಹಾಗೂ ರಮೇಶನನ್ನು ಬೇಟೆಯಾಡಲು ನಿರ್ಧರಿಸುತ್ತಾರೆ. ರಮೇಶನ ನೇತೃತ್ವದಲ್ಲಿ ಹುಲ್ಲೂರಿನಲ್ಲಿ ಹಫ್ತಾ ವಸೂಲಿ ಮಾಡಿದ ಹಣವನ್ನು ಅಲ್ಲಿಂದ ಲಪಟಾಯಿಸಿ ಅನಾಥಾಶ್ರಮಗಳಿಗೆ ಹಾಗೂ ಸೇವಾ ಸಂಘಕ್ಕೆ ಕೊಡಲು ನಿರ್ಧರಿಸುತ್ತಾರೆ.

ದ್ರೋಹಿಯಾದ ರಂಗಪ್ಪ ಕುಲಕರ್ಣಿಯು ರಮೇಶ ಹಾಗೂ ಆ ಹಳ್ಳಿಯ ಕಾಂಗ್ರೆಸ್ ಮುಖಂಡರ ಸುಳಿವನ್ನು ಪೊಲೀಸರಿಗೆ ನೀಡುತ್ತಾನೆ. ಅವರು ನಾರಯಣ ಬೆಟ್ಟವನ್ನು ಸುತ್ತುತ್ತಾರೆ. ಅನೇಕ ಮಂದಿ ಅವರ ವಶವಾಗುತ್ತಾರೆ. ರುದ್ರಮ್ಮ ಕೂಡ ಪೊಲೀಸರ ಕೈಗೆ ಸಿಕ್ಕಿ ಬೀಳುತ್ತಾಳೆ. ಪೊಲೀಸರು ಅವಳೊಂದಿಗೆ ಅಸಭ್ಯವಾಗಿ ವರ್ತಿಸುತ್ತಾರೆ. ಕೊನೆಗೆ ಆಕೆ ತನ್ನ ಮಾನವನ್ನು ಕಾಪಾಡಲು ಪೊಲೀಸರ ಬಂದೂಕಿನಿಂದ ತನ್ನನ್ನು ತಾನು ಸ್ಫೋಟಿಸಿಕೊಳ್ಳುತ್ತಾಳೆ. 'ಹೆಣ್ಣುಮಕ್ಕಳು ಮಾನ ಹೋಗುವ ಸಂದರ್ಭ ಬಂದಾಗ ಆತ್ಮಹತ್ಯೆ ಮಾಡಿಕೊಳ್ಳಬೇಕೆಂಬ' ಗಾಂಧೀಜಿಯವರ ಮಾತನ್ನು ಅವಳು ಅಕ್ಷರಶಃ ಪಾಲಿಸುತ್ತಾಳೆ.

ಕತ್ತರೆ ಲೈನಿನ ಹಫ್ತಾ ವಸೂಲಿಯನ್ನು ರಮೇಶ ಹಾಗೂ ಅವನ ಗುಂಪು ದೋಚಿಕೊಂಡು ಪರಾರಿಯಾಗುತ್ತಾರೆ. ಇವರ ಕುರಿತಾಗಿ ಪೋಲೀಸರು ಅಪಪ್ರಚಾರ ಮಾಡುತ್ತಾರೆ. ಸ್ವಾತಂತ್ರ್ಯ ಚಳುವಳಿಗಾರರನ್ನು ಇವರು ದರೋಡೆಕೋರರೆಂದು ಪತ್ರಿಕೆಗಳಲ್ಲಿ ಚಿತ್ರಿಸುತ್ತಾರೆ. ಶಿವರಾಮ ಭಡಕ್ಕಲ್ ಎಂಬ ಪೋಲೀಸ್ ಅಧಿಕಾರಿ ಹರಡಿಸುತ್ತಿದ್ದ 'ವಿಶ್ವಾಮಿತ್ರ' ಎಂಬ ಪತ್ರಿಕೆ ಕೇವಲ ಕಾಂಗ್ರೆಸ್ ಕಾರ್ಯಕರ್ತರ ಮೇಲೆ ಸುಳ್ಳು ಆರೋಪ ಮಾಡುವುದಕ್ಕೆ ಮೀಸಲಾಗಿತ್ತು.

೧೯೪೨ರ ಚಳವಳಿಯಲ್ಲಿ ಭೀಕರ ಸಾವು-ನೋವುಗಳು ತಲೆದೋರುತ್ತವೆ. ಪೋಲೀಸರು ಹಾಗೂ ಸರಕಾರ ಚಳವಳಿಯನ್ನು ಹತ್ತಿಕ್ಕಲು ಯಾವ ಮಟ್ಟದ ಕ್ರೌರ್ಯ ಹಾಗೂ ನೀಚತನವನ್ನು ಮಾಡಲು ಹೇಸುತ್ತಿರಲಿಲ್ಲ. ಹಿರೇಹಳ್ಳಿಯಲ್ಲಿ ಸರಕಾರ ಹೆಣಗಳ ರಾಶಿಯನ್ನೇ ಒಟ್ಟುತ್ತಿತ್ತು. ಪೋಲೀಸರ ಅತ್ಯಾಚಾರದಿಂದ ಸತಿಶಿರೋಮಣಿಯರಾದ ಹೆಣ್ಣುಮಕ್ಕಳು ಆತ್ಮಹತ್ಯೆ ಮಾಡಿಕೊಂಡರು. ಆ ಹಳ್ಳಿಯ ಮುಖಂಡ ಬಸಪ್ಪ ನಾಯಕರ ಪತ್ನಿಯನ್ನು ಕೂಡಾ ಪೋಲೀಸರು ಕೆಡಿಸಿದ ಕಾರಣ ಆಕೆ ಕೂಡಾ ಆತ್ಮಹತ್ಯೆ ಮಾಡಿಕೊಂಡಳು. ಹಿರೇಹಳ್ಳಿಯ ಬಸಪ್ಪ ನಾಯಕರ ಮನೆಯನ್ನೊಳಗೊಂಡಂತೆ ಎಲ್ಲಾ ಮನೆಗಳನ್ನು ಸರಕಾರ ಲಿಲಾವಿಗೆ ಹಾಕಿತು. ಆದರೆ ಕುಲಕರ್ಣಿ ರಂಗಪ್ಪನನ್ನು ಬಿಟ್ಟು ಇನ್ನು ಯಾರೂ ಕೂಡಾ ಲಿಲಾವಿಗೆ ಬರಲಿಲ್ಲ. ಬಸಪ್ಪ ನಾಯಕರ ಸಮಸ್ತ ಆಸ್ತಿ ಕೇವಲ ೬೦ ರೂಪಾಯಿಗೆ ರಂಗಪ್ಪನ ಪಾಲಾಯಿತು.

ಈ ಸ್ವಾತಂತ್ರ್ಯಕ್ಕಾಗಿ ದೇಶದ ಜನತೆ ರಕ್ತ ಕಾಣಿಕೆಯನ್ನೇ ಕೊಟ್ಟಿದೆ. ರಮೇಶನ ಗುಂಪೆಲ್ಲವೂ ಪೋಲೀಸರ ಗುಂಡಿಗೆ ಆಹುತಿಯಾಗುತ್ತದೆ. ಹೀಗೆ ಒಂದು ಕಾಲದಲ್ಲಿ ನಂದನವನದಂತೆ ಶೋಭಿಸುತ್ತಿದ್ದ ಹಿರೇಹಳ್ಳಿ ಸ್ಮಶಾನವಾಗಿ ಮಾರ್ಪಾಡು ಹೊಂದುತ್ತದೆ.

**ವೀರಪಾಂಡ್ಯ ಕಟ್ಟಬೊಮ್ಮ**

ಮತ್ತೂರು ಕೃಷ್ಣಮೂರ್ತಿಯವರು ತಮ್ಮ ಈ ಕಾದಂಬರಿಯಲ್ಲಿ ೧೮ನೇ ಶತಮಾನದಲ್ಲಿ ದಕ್ಷಿಣ ಭಾರತದಲ್ಲಿ ನಡೆದ ಸ್ವತಂತ್ರ್ಯ ಹೋರಾಟದ ಕತೆಯನ್ನು ಕಟ್ಟಿಕೊಡುತ್ತಾರೆ. ಕಟ್ಟಬೊಮ್ಮ ಬ್ರಿಟಿಷರ ವಿರುದ್ಧ ಹೋರಾಡಿದ ಪಾಂಚಾಲ ಕುರುಚಿಯ ದೊರೆ. ಇವನ ವಂಶಜರು ಆಂಧ್ರದಿಂದ ಬಂದವರು. ಅವರ ವಂಶದ ಮೊದಲ ದೊರೆಯನ್ನು ಗಟ್ಟಬೊಮ್ಮು ಎಂದು ಕರೆಯುತ್ತಿದ್ದರು. ಅದೇ ಬರಬರುತ್ತಾ 'ಗಟ್ಟಮೊಮ್ಮು' ಎಂದಾಯಿತು.

"ರಾಷ್ಟ್ರವೀರ ಕಟ್ಟಬೊಮ್ಮುವಿನ ದೇಶಭಕ್ತಿ, ಸ್ವಾತಂತ್ರ್ಯ ಪ್ರೇಮ, ನಾಡಿನ ಪ್ರತಿಯೊಬ್ಬರಿಗೂ ಸ್ಫೂರ್ತಿನೀಡಬೇಕು, ಪ್ರತಿಯೊಬ್ಬರಿಗೂ ಆದರ್ಶವಾಗಿರಬೇಕು. ಅವನ ಕಾರ್ಯನಿಷ್ಠೆ, ಆತನ ಕತೆ ನಮ್ಮ ದೇಶದ ಎಲ್ಲಾ ಭಾಷೆಗಳಲ್ಲಿ ಇರಬೇಕು. ಪ್ರತಿಯೊಬ್ಬನೂ ಅವನ ಕತೆಯನ್ನು ಓದಬೇಕು"[೬]ಎಂಬುದಾಗಿ ನಮ್ಮ ದೇಶದ ಪ್ರಥಮ ರಾಷ್ಟ್ರಪತಿ ಬಾಬು ರಾಜೇಂದ್ರ ಪ್ರಸಾದರು ಹೇಳಿದ್ದರು.

ಮಕ್ಕಳಿಲ್ಲದ ಜಗವೀರ ಪಾಂಡ್ಯ ತನ್ನ ರಾಜ್ಯವನ್ನು ಅವನ ಮೆಚ್ಚಿನ ನಾಯಕ 'ಗಟ್ಟಬೊಮ್ಮು'ವಿಗೆ ಒಪ್ಪಿಸುತ್ತಾನೆ. ಈ ಗಟ್ಟಮೊಮ್ಮುವಿನ ವಂಶದ ೪೭ನೇ ತಲೆಮಾರು ವೀರಪಾಂಡ್ಯ ಕಟ್ಟಬೊಮ್ಮನ್. ಈತ ಹುಟ್ಟಿದ್ದು ೧೭೬೦. ೧೭೯೦ರಲ್ಲಿ ಇವನು ಪಟ್ಟಕ್ಕೆ ಬರುತ್ತಾನೆ. ಆಗ ಇಡೀ ದೇಶ ಆರ್ಕಾಟ್ ನವಾಬನ ಆಳ್ವಿಯಲ್ಲಿತ್ತು. ೧೭೯೨ರಲ್ಲಿ ನವಾಬ ಈಸ್ಟ್ ಇಂಡಿಯಾ ಕಂಪೆನಿಯೊಂದಿಗೆ ಒಂದು ರಹಸ್ಯ ಒಪ್ಪಂದವನ್ನು ಮಾಡಿಕೊಂಡನು.

ಈ ಒಪ್ಪಂದದ ಪ್ರಕಾರ ನವಾಬ ತನಗೆ ಸೇರಬೇಕಾದ ಕಪ್ಪವನ್ನು ವಸೂಲು ಮಾಡಲು ಕಂಪನಿಗೆ ಅಧಿಕಾರ ಕೊಡುತ್ತಾನೆ. ಕಂಪನಿ ಸರಕಾರ ಎಲ್ಲಾ ರಾಜರಿಂದ ಬಲಾತ್ಕಾರವಾಗಿ ಕಪ್ಪ ವಸೂಲು ಮಾಡುತ್ತದೆ. ವ್ಯಾಪಾರಿ ಸಂಸ್ಥೆಯೊಂದಕ್ಕೆ ಇಂತಹ ಅಧಿಕಾರವನ್ನು ವಹಿಸಿಕೊಟ್ಟ ಭಾರತೀಯ ಮೊದಲ ರಾಜ ಈ ನವಾಬ. ಎಲ್ಲರ ಕೈಯಿಂದ ಹಿಂಸಿಸಿ, ಬೆದರಿಸಿ ಕಪ್ಪ ವಸೂಲಿ ಮಾಡುತ್ತಿದ್ದ ಕಂಪೆನಿ ವೀರಪಾಂಡ್ಯನನ್ನು ಕಪ್ಪ ಕೊಡಲು ಆಗ್ರಹಿಸುತ್ತಾರೆ. ೧೭೯೮ರವರೆಗೆ ಕಂಪೆನಿ ಸರಕಾರ ಕಟ್ಟಬೊಮ್ಮುವಿನ ಕೈಯಿಂದ ಕಪ್ಪ ವಸೂಲಿ ಮಾಡಲು ಶಕ್ತಿ ಮೀರಿ ಪ್ರಯತ್ನಿಸುತ್ತಾರೆ. 'ಯುದ್ಧಕ್ಕೆ ಬರುತ್ತೇವೆಂದು' ಬೆದರಿಸುತ್ತಾರೆ. ಆದರೂ ಬೊಮ್ಮುವನ್ನು ತಮ್ಮ ಬಲೆಗೆ ಬೀಳಿಸಲು ಕಂಪೆನಿ ಸರಕಾರಕ್ಕೆ ಸಾಧ್ಯವಾಗಲಿಲ್ಲ.

ಕಂಪೆನಿ ಸರಕಾರದವರು ಭಾರತೀಯರ ಯಾದವೀಕಲಹದ ಲಾಭ ಪಡೆದು ಕೆಲವು ಪಾಳೆಯಗಾರರನ್ನು ಹಣದಾಸೆ, ಲಂಚ ತೋರಿಸಿ ತಮ್ಮ ಕಡೆಗೆ ಸೆಳೆದುಕೊಂಡರು. ಹೀಗೆ ವೀರಪಾಂಡ್ಯನಿಗೆ ದ್ರೋಹ ಮಾಡಲು ಮುಂದಾದವರಲ್ಲಿ ಪಾಂಚಾಲ ಕುರುಚಿಯ ಪಕ್ಕದ ಎಟ್ಟಯಾಪುರದ ಎಟ್ಟಪ್ಪ ನಾಯಕ ಒಬ್ಬನು. ಇವನು ವೀರಪಾಂಡ್ಯನ ವಿರುದ್ಧ ಬ್ರಿಟಿಷರಿಗೆ ಪಿತೂರಿ ಮಾಡಲು ಸುರು ಮಾಡಿದನು. ಬ್ರಿಟಿಷರಿಗೆ ಮತ್ತು ಬೊಮ್ಮುವಿಗೆ ಯುದ್ಧನಡೆಯಿತು. ಸೋತ ಕಟ್ಟಬೊಮ್ಮು ತಪ್ಪಿಸಿಕೊಳ್ಳುತ್ತಾನೆ. ಆದರೆ ಪುದುಕೋಟೆಯ ಪಾಳೆಯಗಾರ ತೊಂಡಮಾನ್ ಉಪಾಯವಾಗಿ ಕಟ್ಟಬೊಮ್ಮುವನ್ನು ತನ್ನ ಅರಮನೆಗೆ ಕರದೊಯ್ದು ಕಂಪೆನಿಯವರಿಗೆ ಸೆರೆಹಿಡಿಯಲು ಸಹಾಯ ಮಾಡುತ್ತಾನೆ. ಅಂದು ಕಟ್ಟಬೊಮ್ಮು–"ಪರಂಗಿಯ ವೀರರೆ, ನೀವು ಎಲ್ಲಿಯವರೆಗೆ ಈ ನಮ್ಮ ರಾಜ್ಯದ ಆಳರಸರಾಗಿರುವಿರೋ ಏನೋ! ಏಕಾಧಿಪತ್ಯ ನಡೆಸುವಿರೋ ಏನೋ! ಸ್ವಂತ ಜನರನ್ನೇ ಶತ್ರುವಿಗೆ ತೋರಿಸಿಕೊಡುವ ದ್ರೋಹಿಗಳು ನಮ್ಮ ನಾಡಿನಲ್ಲಿರುವ ತನಕ ನಿಮಗೆ ಅಪಜಯವೆಂಬುದೇ ಇರುವುದಿಲ್ಲ".[೮] ಎಂದು ಹೇಳುತ್ತಾನೆ. ೧೭೯೯ರಲ್ಲಿ ವೀರಪಾಂಡ್ಯ ಹೇಳಿದ ಆ ಮಾತು ೧೯೪೭ರ ವರೆಗೂ ನಿಜವಾಯಿತು. ಬ್ರಿಟಿಷರ ಎದುರು ಭಾರತೀಯರ ಪ್ರತಿಯೊಂದು ಸೋಲಿನ ಹಿಂದೆ ಕೂಡ ಭಾರತೀಯ ದೇಶದ್ರೋಹಿಯೊಬ್ಬನ ಕೈವಾಡವಿತ್ತು.

ಬ್ರಿಟಿಷ್ ಸೇನಾಧಿಪತಿ ಬ್ಯಾನರ್‌ಮ್ಯಾನಿನ ಆಜ್ಞೆಯಂತೆ ಕಯತ್ತಾರಿನಲ್ಲಿ ಕಟ್ಟಬೊಮ್ಮುವನ್ನು ಹುಣಿಸೆ ಮರದಲ್ಲಿ ಗಲ್ಲಿಗೇರಿಸುತ್ತಾರೆ. ಬೊಮ್ಮುವಿನ ನಂತರ ಅವನ ತಮ್ಮ ಮೂಕದೊರೆ ಅನೇಕ ಮಂದಿ ಬೆಂಬಲಿಗರೊಂದಿಗೆ ಹೋರಾಟವನ್ನು ಮುಂದುವರಿಸುತ್ತಾನೆ. ಆದರೆ ಬ್ರಿಟಿಷರ

ಅಪರಿಮಿತವಾದ ಆಧುನಿಕ ಶಸ್ತ್ರಾಸ್ತ್ರಗಳನ್ನೊಳಗೊಂಡ ಸೈನ್ಯದೆದುರು ಇವನ ಹೋರಾಟವು ನೆಲಕಚ್ಚುತ್ತದೆ. ಕೊನೆಗೆ ಬ್ರಿಟಿಷರಿಂದ ತಲೆಮರೆಸಿಕೊಳ್ಳುತ್ತಾನೆ. ಅವನು ಎಲ್ಲಿ ಹೋದನೆಂಬುದು ಕೊನೆಯವರೆಗೂ ಯಾರಿಗೂ ತಿಳಿಯುವುದೇ ಇಲ್ಲ. ಹೀಗೆ ಬ್ರಿಟಿಷರ ವಿರುದ್ಧ ಮೊದಲಬಾರಿಗೆ ಹೋರಾಟದ ಕಿಡಿಯನ್ನು ಆರಂಭಿಸಿದ ದಕ್ಷಿಣ ಭಾರತದ ದೊರೆ ಕಟ್ಟಬೊಮ್ಮು.

**ಆತ್ಮಾರ್ಪಣೆ**

ಪ.ಸು.ಭಟ್ಟ ಅವರು ರಚಿಸಿದ ಈ ಕಾದಂಬರಿಯು ಸ್ವಾತಂತ್ರ್ಯ ಹೋರಾಟದಲ್ಲಿ 'ಸಶಸ್ತ್ರ ಕ್ರಾಂತಿ'ಯ ಪಾತ್ರವನ್ನು ತಿಳಿಸುತ್ತದೆ. ಭಾರತದ ಕ್ರಾಂತಿಕಾರಿ ಇತಿಹಾಸದಲ್ಲಿ ಲಾಹೋರ್ ಪ್ರಮುಖ ಪಾತ್ರ ವಹಿಸಿದೆ. ೧೯೩೧ ಮಾರ್ಚ್ ತಿಂಗಳ ೨೩ನೇ ತಾರೀಖು ಲಾಹೋರ್ ಜೈಲಿನಲ್ಲಿ ಭಗತ್‌ಸಿಂಗ್, ರಾಜ್‌ಗುರು, ಸುಖದೇವ್ ಇವರನ್ನು ಗಲ್ಲಿಗೇರಿಸಲಾಗುತ್ತದೆ. ಬ್ರಿಟಿಷ್ ದಬ್ಬಾಳಿಕೆಯ ವಿರುದ್ಧ ಭೀಕರ ಪ್ರತಿಭಟನೆ ನಡೆಯುತ್ತದೆ. ಎಲ್ಲಿ ನೋಡಿದರಲ್ಲಿ ಹೆಣಗಳ ರಾಶಿ; ಬ್ರಿಟಿಷರ ದಬ್ಬಾಳಿಕೆಯನ್ನು ವಿರೋಧಿಸಿದ ಕುಶಿರಾಮ್ ಎಂಬ ಯುವಕ 'ಕ್ರಾಂತಿ ಚಿರಾಯುವಾಗಲಿ' ಎನ್ನುತ್ತಾ ಬ್ರಿಟಿಷರ ಗುಂಡೇಟಿಗೆ ಬಲಿಯಾಗುತ್ತಾನೆ.

೧೯೧೯ರಂದು ಜಲಿಯಾನ್‌ವಾಲಾಬಾಗ್ ಹತ್ಯಾಕಾಂಡದಲ್ಲಿ ೩೫೦ ಜನ ಮೃತರಾದರು, ೧೨೦೦ ಮಂದಿ ಗಾಯಗೊಂಡರು. ಲಾಲ್, ಪಾಲ್, ಬಾಲ್, ಈ ಮೂರು ಹೆಸರುಗಳು ಯುವಕರಿಗೆ ಸ್ಫೂರ್ತಿದಾಯಕವಾಗಿರುತ್ತದೆ. ಕಿಶೋರ್‌ದತ್, ಭಗತ್‌ಸಿಂಗ್, ಇವರು ವ್ಯವಸ್ಥಿತವಾದ ರೀತಿಯಲ್ಲಿ ಸಂಘಟನೆಯನ್ನು ನಡೆಸಲು ಯತ್ನಿಸುತ್ತಾರೆ. ಆದರೆ ಕ್ರಾಂತಿಕಾರಿಗಳನ್ನು ಕಾಡುವ ಪ್ರಮುಖ ಸಮಸ್ಯೆಯೆಂದರೆ ಹಣದ ಸಮಸ್ಯೆ. ಅವರು ಖೋಟಾ ನೋಟನ್ನು ತಯಾರಿಸಲು ಯೋಚಿಸುತ್ತಾರೆ. ಆದರೆ ಅವರ ಈ ಯೋಜನೆ ವಿಫಲವಾಗುತ್ತದೆ.

ಕಾಕೋರಿ ಮತ್ತು ಲಕ್ನೋಗಳ ನಡುವೆ ಆಲಮ್ ನಗರ ರೈಲ್ವೇ ಸ್ಟೇಷನ್ನಿಗೆ ಹತ್ತಿರದಲ್ಲಿ ಕ್ರಾಂತಿಕಾರಿಗಳು ಹಣದ ಟ್ರೆಜರಿಯನ್ನು ದೋಚುತ್ತಾರೆ, ಇದು ಇಡೀ ದೇಶದ ಯುವಜನಾಂಗದಲ್ಲಿ ಸಂಚಲನ ಮೂಡಿಸುತ್ತದೆ. ಕ್ರಾಂತಿಕಾರಿಗಳು ಕಾಶ್ಮೀರದಿಂದ ಬಂಗಾಲದವರೆಗೆ ಸಂಘಟಿತರಾಗಿ ತಮ್ಮ ಶಕ್ತಿಯನ್ನು ಬೆಳೆಸಿಕೊಳ್ಳುತ್ತಾರೆ. ಕ್ರಾಂತಿವೀರರ ಸಂಘಟನೆ ಇಡೀ ದೇಶದಾದ್ಯಂತ ಭರದಿಂದ ನಡೆಯುವುದು ಜನರಲ್ಲಿ ಮೂಡಿದ ದೇಶಪ್ರೇಮಕ್ಕೆ ಸಾಕ್ಷಿ. ಬ್ರಿಟಿಷರ ದಬ್ಬಾಳಿಕೆಯಿಂದ ಜನರು ಎಷ್ಟು ರೋಸಿಹೋಗಿದ್ದರೆಂಬುದನ್ನು ತಿಳಿಸುತ್ತದೆ. ಕಾಶ್ಮೀರದಿಂದ ಬಂಗಾಲದವರೆಗೂ, ಬನಾರಸ್ ಕಾಶಿ ಎಲ್ಲಾ ಕಡೆ ಸಂಘಟಿತರಾಗುತ್ತಾರೆ. ಕಾಶಿ ವಿದ್ಯಾಪೀಠದ ಕೆಲವು ಶಿಕ್ಷಕರು ಕೂಡಾ ಕ್ರಾಂತಿಕಾರಿಗಳಿಗೆ ಬೆಂಬಲ ನೀಡಿದ್ದರು.

ಕಾಂಗ್ರೆಸ್ ಇಬ್ಭಾಗವಾಗುತ್ತದೆ. ಸ್ವರಾಜ್ಯ ಪಕ್ಷವು ಕೇವಲ ಹೆಸರಿಗಷ್ಟೇ ಇತ್ತು. ಆದರೆ ಕ್ರಾಂತಿಕಾರಿಗಳ ಚಳುವಳಿಯು ಜನಕೋಟಿಯನ್ನು ಜಾಗೃತಗೊಳಿಸುತ್ತದೆ. ಕ್ರಾಂತಿಯೇ ದೇಶದ ಬಿಡುಗಡೆಗೆ ಹಾದಿಯೆಂದು ಜನರು ತಿಳಿಯುತ್ತಾರೆ. ಒಬ್ಬ ನಾಯಕನನ್ನು ನಂಬಿ

ಮುನ್ನಡೆಯುವುದು ಅಪಾಯಕಾರಿಯಾದುದರಿಂದ ಕ್ರಾಂತಿಕಾರರು ಪ್ರತಿಯೊಬ್ಬರು ತಮಗೆ ತಾವೇ ನಾಯಕರಾಗುತ್ತಾರೆ. ಒಬ್ಬೊಬ್ಬನ ಬಲಿದಾನವು ಕೂಡಾ ಇನ್ನು ಹತ್ತು ಜನ ನೇಣುಗಂಬವನ್ನೇರಲು ಪ್ರೋತ್ಸಾಹಿಸುತ್ತದೆ. **'ಹಿಂದುಸ್ಥಾನ್ ಸೋಷಿಯಲಿಸ್ಟ್ ರಿಪಬ್ಲಿಕನ್ ಪಾರ್ಟಿ'** ಕ್ರಾಂತಿಕಾರಿಗಳ ಗುಪ್ತಗಾಮಿ ಚಳುವಳಿಯನ್ನು ನಡೆಸುತಿತ್ತು.

ಆಗ್ರಾದಲ್ಲೂ ಕ್ರಾಂತಿ ತೀವ್ರ ಸ್ವರೂಪವನ್ನು ಪಡೆದುಕೊಳ್ಳುತ್ತದೆ. ಚಂದ್ರಶೇಖರ ಆಜಾದ್ ಪೋಲೀಸರಿಗೆ ಸಿಂಹಸ್ವಪ್ನವಾಗಿ ಕಾಡುತ್ತಾನೆ. ಎಲ್ಲೆಡೆಗೂ ಕ್ರಾಂತಿ ಹರಡಿ ಬ್ರಿಟಿಷ್ ಸಾಮ್ರಾಜ್ಯವನ್ನು ಹೊಡೆದೋಡಿಸಬೇಕೆಂಬುದು ಅವರ ಕನಸಾಗಿತ್ತು. ಆಗ್ರಾದಲ್ಲಿ ಬಾಂಬ್ ತಯಾರಿಕಾ ಕೇಂದ್ರವು ಭಗತ್‌ಸಿಂಗ್‌ನ ನೇತೃತ್ವದಲ್ಲಿ ಕಾರ್ಯಾಚರಣೆ ಮಾಡಲಾರಂಭಿಸುತ್ತದೆ. ಹಿಂಗ್ ಹಿಮಂಡಿ ಎಂಬಲ್ಲಿ ಪ್ರಚಂಡ ಶಕ್ತಿಯ ಬಾಂಬ್ ತಯಾರಿಕೆ, ಗುಂಡು ಹಾರಿಸಲು ತರಬೇತಿ, ಆತ್ಮರಕ್ಷಣೆ, ಮುಂತಾದ ಶಿಕ್ಷಣವನ್ನು ಇಲ್ಲಿ ನೀಡಲಾಗುತ್ತದೆ. ಪರಕೀಯ ಸರಕಾರವನ್ನು ಕಿತ್ತೊಗೆಯಲು ಕ್ರಾಂತಿಕಾರಿಗಳು ತಮ್ಮ ಜೀವದ ಹಂಗು ತೊರೆದು ಸಕಲ ಪ್ರಯತ್ನವನ್ನೂ ಮಾಡಿದರು.

ಸೈಮನ್ ಕಮಿಷನ್ ಭಾರತಕ್ಕೆ ಬಂದಾಗ ಅದನ್ನು ತೀವ್ರವಾಗಿ ವಿರೋಧಿಸುತ್ತಾರೆ. ಶಾಂತಿಯುತ ಮೆರವಣಿಗೆ ನಡೆಯುತ್ತಿದ್ದ ಸಂದರ್ಭದಲ್ಲಿ ಪೋಲೀಸರ ಆಕ್ರೋಶಕ್ಕೆ ಲಾಲಾ ಲಜಪತರಾಯ್ ಬಲಿಯಾಗುತ್ತಾರೆ. ಇದು ಕ್ರಾಂತಿಯ ಕಿಡಿ ಇಡೀ ಭಾರತದಲ್ಲಿ ಹಬ್ಬಲು ಕಾರಣವಾಗುತ್ತದೆ. "ನನ್ನ ಮೇಲೆ ಬಿದ್ದ ಪ್ರತಿಯೊಂದು ಏಟೂ ಕೂಡಾ ಭಾರತದಲ್ಲಿನ ಬ್ರಿಟಿಷ್ ಸಮ್ರಾಜ್ಯದ ಶವಪೆಟ್ಟಿಗೆಯ ಮೇಲೆ ಹೊಡೆದ ಮೊಳೆಗಳಾಗುತ್ತವೆ" ಎಂಬ ಲಾಲ್ ಅವರ ಮಾತು ಸತ್ಯವಾಗುತ್ತದೆ.

೧೯೨೮ರಲ್ಲಿ ಲಾಲಾಜಿಯ ಮರಣದ ಸೇಡಿಗಾಗಿ ಸ್ಯಾಂಡರ್ಸ್‌ನ ಹತ್ಯೆಯಾಗುತ್ತದೆ. ೧೯೨೯ರಂದು ಭಗತ್‌ಸಿಂಗ್ ಅಸೆಂಬ್ಲಿಯಲ್ಲಿ ಬಾಂಬ್ ಸಿಡಿಸಿ ದಸ್ತಗಿರಿಗೊಳಗಾಗುತ್ತಾನೆ. ಮೇಜರ್ ಸೂರ್ಯಸೇನನ ನಾಯಕತ್ವದಲ್ಲಿ ಸುಮಾರು ೧೨೫ ಮಂದಿ ಕ್ರಾಂತಿವೀರರು ಚಿತಗಾಂಗ್ ಶಸ್ತ್ರಾಗಾರದ ಮೇಲೆ ಧಾಳಿ ನಡೆಸಿದರು. ಇಬ್ಬರು ಶಾಲಾಬಾಲಕಿಯರು ತಿಪೆರಾ ಜಿಲ್ಲಾಧಿಕಾರಿಯನ್ನು ಗುಂಡಿಟ್ಟು ಕೊಂದರು. ಪೋಲೀಸರ ಜೊತೆಯಲ್ಲಿನ ಹೋರಾಟದಲ್ಲಿ ಆಜಾದ್ ಮೃತನಾದ. ಇದು ಕ್ರಾಂತಿಕಾರಿಗಳಿಗೆ ಕರಾಳದಿನವಾಗುತ್ತದೆ. ಹೀಗೆ ದೇಶದ ತುಂಬಾ ಹರಡಿದ ಕ್ರಾಂತಿ ಹೋರಾಟದ ಕಿಚ್ಚು, ಬ್ರಿಟಿಷರ ಬಲವನ್ನು ಮುರಿಯಲು ಕ್ರಾಂತಿವೀರರು ನಡೆಸುವ ವಿವಿಧ ಪ್ರಯತ್ನಗಳು ಈ ಕಾದಂಬರಿಯಲ್ಲಿ ಸಮರ್ಪಕವಾಗಿ ಮೂಡಿಬಂದಿದೆ.

**ಕನಸು–ನನಸು**

ರಾವ್‌ಬಹದ್ದೂರು ಅವರ ಈ ಕಾದಂಬರಿಯು ಸ್ವಾತಂತ್ರ್ಯ ಹೋರಾಟಕ್ಕೆ ಜನರ ಮಿಶ್ರಪ್ರತಿಕ್ರಿಯೆ ಹಾಗೂ ಹೋರಾಟದ ಚಿತ್ರಣವನ್ನು ಕಟ್ಟಿಕೊಡುತ್ತದೆ. ಬ್ರಿಟಿಷ್ ಸರಕಾರವನ್ನು ನಿರಾಕರಿಸುವ ಜನರು ಇರುವಂತೆ ಅದನ್ನು ಓಲೈಸುವ ಜನರೂ ಇದ್ದರು. ಸದಾನಂದ ಸ್ವಾಮೀಜಿ

ಸ್ವಾತಂತ್ರ್ಯ ಹೋರಾಟಗಾರರಿಗೆ ಸಹಾಯ ಮಾಡುತ್ತಾನೆ. ಸ್ವಾತಂತ್ರ್ಯ ದಕ್ಕಿಸಿಕೊಳ್ಳಲು ಮಠ – ಮಾನ್ಯಗಳು ಕೂಡಾ ತಮ್ಮ ಸೇವೆಯನ್ನು ನೀಡಿವೆ. ಸತ್ಯಾಗ್ರಹಿಗಳ ತಂಡದಲ್ಲಿಯೇ ಕೆಲವು ಗೂಢಚಾರಿಗಳು ಬಂದು ಸೇರಿಕೊಂಡಿದ್ದರು. ಅಂಥವರಲ್ಲಿ ರಾಮಪಾಂಡೆ ಕೂಡಾ ಒಬ್ಬನಾಗಿದ್ದನು.

ಮುಖಂಡರನ್ನು ಬಂಧಿಸಿದರೂ ಕೂಡಾ ಚಳವಳಿ ಮುಂದುವರಿದಿತ್ತು. ವಿದ್ಯಾರ್ಥಿಗಳು ಹೆಚ್ಚಿನ ಸಂಖ್ಯೆಯಲ್ಲಿ ಪಿಕೆಟಿಂಗ್, ಕರನಿರಾಕರಣೆಯಲ್ಲಿ ತೊಡಗಿದ್ದರು. ಭೂಗತರಾಗಿ ಚಳವಳಿಯಲ್ಲಿ ತೊಡಗಿಸಿಕೊಂಡವರನ್ನು ಪತ್ತೆ ಹಚ್ಚುವುದು ಪೊಲೀಸರಿಗೆ ಕಷ್ಟಸಾಧ್ಯವಾಯಿತು. ಪೊಲೀಸರು ತಮ್ಮ ಮೇಲಾಧಿಕಾರಿಗಳಿಗೆ ಸಲ್ಲಿಸುವ ವರದಿ ಹೀಗಿದೆ–"ನಮ್ಮ ಯುಕ್ತಿ ಪ್ರಯುಕ್ತಿಗಳು ವಿಫಲವಾಗಿವೆ. ಭೂಗತ ಕಾರ್ಯಕರ್ತರು ಎಲ್ಲಿರುವರು? ಯಾರ ಆಶ್ರಯದಲ್ಲಿರುವರು? ಅವರು ಕರನಿರಾಕರಣೆಯ ಚಳುವಳಿಯ ಸಂಘಟನೆಯನ್ನು ಯಾವ ಕಾಲಕ್ಕೆ ಯಾವ ಸ್ಥಳದಲ್ಲಿ ಯಾರ ಸಂಪರ್ಕದಿಂದ ನಡೆಸುವರು? ಇದರ ಸುಳಿವು ಕೂಡಾ ಹತ್ತದಂತಹ ಸ್ಥಿತಿ ಇದೆ".[೧೦] ವೇಷಾಂತರದಲ್ಲಿ ಯಾರಿಗೂ ಸಂಶಯವೇ ಹತ್ತದಂತೆ ಮಾಧು, ಸದಾನಂದ ಸ್ವಾಮೀಜಿ ದಕ್ಷಿಣ ಭಾರತದಲ್ಲಿ ಚಳುವಳಿ ಮುಂದುವರಿಸಿದರು. ದುಂಡು ಮೇಜಿನ ಪರಿಷತ್ತು ಮುರಿದು ಬೀಳುತ್ತದೆ. ಗಾಂಧೀಜಿ, ನಹರೂ ಮುಂತಾದ ಪ್ರಮುಖರ ಬಂಧನವಾಗುತ್ತದೆ. ಕಾರವಾರ ಜಿಲ್ಲೆಯಲ್ಲಿ ಕರನಿರಾಕರಣೆಯ ಆಂದೋಲನ ಉಗ್ರರೂಪ ತಾಳುತ್ತದೆ.

ಕೆಲವು ಜನರ ಮನಸ್ಸಿನಲ್ಲಿ ಚಳುವಳಿಗೆ ಸೇರುವುದೇ ರಾಜದ್ರೋಹ, ಕುಟುಂಬಘಾತಕ, ಮಹಾಪರಾಧ, ಎಂಬ ಅಭಿಪ್ರಾಯವಿತ್ತು. ಸ್ವಾತಂತ್ರ್ಯ ಬಂದರೂ ದೇಶಕ್ಕಾಗಿ ಮನೆ–ಮಠ ಕಳೆದುಕೊಂಡವರ ಸ್ಥಿತಿಯೇನೂ ಸುಧಾರಿಸುವುದಿಲ್ಲ ಎಂಬ ಸತ್ಯವನ್ನು ಕೂಡಾ ಈ ಕಾದಂಬರಿ ತೆರೆದಿಡುತ್ತದೆ.



**ಈಸೂರಿನ ಚಿರಂಜೀವಿಗಳು**

ಆರ್. ಬಸವರಾಜ್ ಅವರ 'ಈಸೂರಿನ ಚಿರಂಜೀವಿಗಳು' ಕಾದಂಬರಿಯು ೧೯೪೨ರಲ್ಲಿ ಈಸೂರಿನಂತಹ ಸಣ್ಣ ಊರಿನಲ್ಲಿ ನಡೆದ ಘಟನೆಯನ್ನು ಕಟ್ಟಿಕೊಟ್ಟಿದೆ. ಬ್ರಿಟಿಷರ ದಬ್ಬಾಳಿಕೆಯ ವಿರುದ್ಧ ದಂಗೆದ್ದು ಗಲ್ಲುಶಿಕ್ಷೆಗೂ ಈ ಊರಿನ ಯುವಕರು ಬಲಿಯಾಗುತ್ತಾರೆ. ಭರಮಣ್ಣನಂತಹ ಒಬ್ಬ ಸಾಮಾನ್ಯ ವ್ಯಕ್ತಿ ತನ್ನ ಕೀರ್ತನೆಯ ಮೂಲಕ ಹಳ್ಳಿ ಹಳ್ಳಿಗಳಲ್ಲಿ ಕ್ರಾಂತಿ ಜ್ವಾಲೆಯನ್ನು ಹಬ್ಬಿಸುತ್ತಾನೆ. ಅಲ್ಲಿಯ ಜನರು ಈಸೂರನ್ನು ಸ್ವತಂತ್ರ ಊರೆಂಬುದಾಗಿ ಘೋಷಿಸುತ್ತಾರೆ. ಬಾಲಕ ಜಯಣ್ಣನನ್ನು ಅಮಲ್ದಾರನನ್ನಾಗಿಯೂ, ಮಲ್ಲಣ್ಣನನ್ನು ಸಬ್‌ಇನ್ಸ್‌ಪೆಕ್ಟರನ್ನಾಗಿಯೂ ನೇಮಿಸುತ್ತಾರೆ. ಊರಿನ ಹೆಣ್ಣುಮಕ್ಕಳು ಕೂಡ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಆಸಕ್ತಿ ವಹಿಸುತ್ತಾರೆ. ಗಾಂಧೀಜಿಯ ತತ್ವವನ್ನು ಪಾಲಿಸುವುದು ನಮ್ಮೆಲ್ಲರ ಕರ್ತವ್ಯವೆಂಬುದು ಅವರ ಭಾವನೆಯಾಗಿತ್ತು.

೧೯೪೨ನೇ ಸೆಪ್ಟೆಂಬರ್ ೨೬ರ ಶನಿವಾರ ಈಸೂರಿನ ಜನರು ಬ್ರಿಟಿಷರ ವಿರುದ್ಧ ಹೋರಾಡುತ್ತಾರೆ. ಶಿಕಾರಪುರಕ್ಕೆ ಸಂಪರ್ಕವನ್ನು ಒದಗಿಸುವ ಸೇತುವೆಯನ್ನು ಮುರಿಯುವ, ಹಲವಾರು ನಿರ್ಣಯಗಳನ್ನು ಕೈಗೊಳ್ಳುತ್ತಾರೆ. ೧೯೪೨ ಸೆಪ್ಟೆಂಬರ್ ೨೮ರಂದು ಈಸೂರಿನಲ್ಲಿ ಭಾರತೀಯ ಸ್ವಾತಂತ್ರ್ಯ ಸಂಗ್ರಾಮದ ಇತಿಹಾಸದಲ್ಲೊಂದು ರಕ್ತಸಿಕ್ತ ಅಧ್ಯಾಯಕ್ಕೆ ನಾಂದಿಯಾಗುತ್ತದೆ. ಆ ದಿನ ಸಬ್‌ಇನ್ಸ್‌ಪೆಕ್ಟರು ಕೆಂಚೇಗೌಡರು ಈಸೂರಿನ ಜನತೆಯ ಮೇಲೆ ಗುಂಡು ಹಾರಿಸಿದರು. ಕೊನೆಗೆ ಊರಿನ ಜನರೆಲ್ಲರೂ ಸೇರಿ ಸಬ್‌ನ್ಸ್‌ಪೆಕ್ಟರ್ ಕೆಂಚೇಗೌಡ ಹಾಗೂ ಅಮಲ್ದಾರ ಚೆನ್ನಕೃಷ್ಣಯ್ಯನವರ ಹೆಣವನ್ನು ಉರುಳಿಸುತ್ತಾರೆ. ಈ ಘಟನೆಯಿಂದಾಗಿ ಈಸೂರು ಬ್ರಿಟಿಷ್ ಸರಕಾರದ ಕೆಂಗಣ್ಣಿಗೆ ಗುರಿಯಾಗುತ್ತದೆ. ಯಾವುದೇ ಸಾಕ್ಷಿ ಪುರಾವೆಯಿಲ್ಲದಿದ್ದರೂ ಕೂಡ ಈಸೂರಿನ ಬಹಳಷ್ಟು ಜನರ ಬಂಧನವಾಗುತ್ತದೆ.

ಈಸೂರಿನಲ್ಲಿ ಕ್ರಾಂತಿ ಕಹಳೆ ಹಬ್ಬುತ್ತದೆ. ಹಳ್ಳಿ ಹಳ್ಳಿಗಳಿಂದ ಗಂಡಸರು, ಹೆಂಗಸರು, ಮಕ್ಕಳು ಕೈಯಲ್ಲಿ ಕತ್ತಿ, ಗುರಾಣಿ, ಕುಡುಗೋಲು ಹಿಡಿದುಕೊಂಡು ಈಸೂರಿನತ್ತ ಬರುತ್ತಿದ್ದರು. ಆದರೆ ಕೆಲವು ದೇಶದ್ರೋಹಿಗಳಿಂದಾಗಿ ಕ್ರಾಂತಿಯು ಅರ್ಧದಲ್ಲಿ ನಂದಿಹೋಗುತ್ತದೆ. ಈಸೂರಿನ ೧೧ ಜನ ಪ್ರಜೆಗಳಿಗೆ ಮರಣದಂಡನೆಯನ್ನು ವಿಧಿಸುತ್ತಾರೆ. ಈಸೂರಿನ ಜನತೆ ನ್ಯಾಯವನ್ನು ಕೋರಿ ಹೈಕೋರ್ಟು ಮೆಟ್ಟಲೇರುತ್ತಾರೆ. ಇದರ ಫಲವಾಗಿ ಆರು ಜನರ ಪ್ರಾಣ ಉಳಿಯುತ್ತದೆ. ಉಳಿದ ಐವರಾದ ಗುರಪ್ಪ, ಮಲ್ಲಪ್ಪ, ಶಂಕರಪ್ಪ, ಹಾಲಪ್ಪ ಹಾಗೂ ಸೂರ್ಯನಾರಾಯಣಾಚಾರ್– ಈ ಐದು ಮಂದಿಗೆ ಮರಣ ದಂಡನೆ ಕಾಯಂ ಆಗುತ್ತದೆ.

೧೯೪೩ ಎಪ್ರಿಲ್ ೬, ೭, ೮ ಕನ್ನಡ ನಾಡಿನ ಇತಿಹಾಸದಲ್ಲಿ ಮರೆಯಲಾಗದ ದಿನಗಳು. ಈ ಮೂರೂ ದಿನಗಳಲ್ಲಿ ಈಸೂರಿನ ವೀರರೈವರು ಭಾರತಮಾತೆಯ ಬಿಡುಗಡೆಗೋಸ್ಕರ ನೇಣಿಗೆ ತಲೆಯೊಡ್ಡಿದರು. ಐವರು ಯೋಧರಿಗೆ ಮರಣದಂಡನೆಯಾದರೂ ಕೂಡ ಈಸೂರು ಸ್ವಾತಂತ್ರ್ಯ ಹೋರಾಟವನ್ನು ನಿಲ್ಲಿಸಲಿಲ್ಲ. ಮತ್ತೆ ವೀರಭದ್ರ ದೇವರ ಗುಡಿಯಲ್ಲಿ ಸಭೆ ಸೇರಿ ಸ್ವಾತಂತ್ರ್ಯಕ್ಕಾಗಿ ಹೋರಾಡಲು ನಿರ್ಣಯಿಸುತ್ತಾರೆ. ಮರಣ ದಂಡನೆಯಂತಹ ಘೋರ ಶಿಕ್ಷೆ ಕೂಡಾ ಈಸೂರಿನ ಜನತೆಯ ಹೃದಯದಲ್ಲಿ ಹೊತ್ತಿ ಉರಿಯುವಂತಹ ಸ್ವಾತಂತ್ರ್ಯದ ಕಿಚ್ಚನ್ನು ನಂದಿಸುವಲ್ಲಿ ವಿಫಲವಾಯಿತು.

**ಶತದ್ರು ದಂಡೆಗೆ**

ಭಾರತೀಸುತ ಅವರ ಈ ಕಾದಂಬರಿಯಲ್ಲಿ ಸ್ವರೂಪರಾಣಿ ಎಂಬ ಹೆಣ್ಣುಮಗಳು ದೇಶಪ್ರೇಮಿಯಾದ ಅಮರನಿಗೆ ಸುಶ್ರೂಷೆ ಮಾಡುತ್ತಾಳೆ. ಅವನಿಗೋಸ್ಕರ ಒಂದು ವರ್ಷ ಜೈಲು ಸೇರುತ್ತಾಳೆ. ಅವನಿಂದ ತಾನು ಕಷ್ಟ ಕಾರ್ಪಣ್ಯಗಳನ್ನು ಎದುರಿಸಬೇಕೆಂದು ತಿಳಿದು ಕೂಡಾ ಅವನ ಕೈ ಹಿಡಿಯುತ್ತಾಳೆ.

ಅಮರನು ಸ್ವರೂಪರಾಣಿಯ ಜೊತೆಯಲ್ಲಿ ಪಂಜಾಬಿನ ಮುನ್ಷಿರಾಮ್ ಎಂಬ ಗಲ್ಲಿಯಲ್ಲಿ ವಾಸ ಮಾಡುತ್ತಾನೆ. ಜನರ ಕಷ್ಟಗಳನ್ನು ಅರ್ಥ ಮಾಡಿಕೊಳ್ಳಬೇಕಾದರೆ ಅವರೊಂದಿಗೆ ವಾಸ ಮಾಡಬೇಕೆಂಬುದು ಅವನ ವಾದವಾಗಿತ್ತು. ಆ ಕೊಳಚೆಯಲ್ಲಿ ವಾಸ ಮಾಡುತ್ತಿದ್ದ ಜನರನ್ನು ಉದ್ಧಾರ ಮಾಡಲು ಪ್ರಯತ್ನಿಸಿದನು.

ಪಂಜಾಬಿನ ಹಿಂದು ಮುಸ್ಲಿಮರ ನಡುವೆ ಐಕ್ಯತೆಯಿತ್ತು, ಸಹೋದರತ್ವ ಭಾವವಿತ್ತು. ಆದರೆ ಮುಸ್ಲೀಂ ಲೀಗ್ ಮತ್ತು ಹಿಂದು ಮಹಾಸಭೆ ಇವರಡೂ ದೇಶವನ್ನು ಒಡೆಯಲು ಹವಣಿಸುತ್ತಿರುವ ದುಷ್ಟ ಶಕ್ತಿಗಳು. ಮುಸ್ಲೀಂ ಲೀಗ್ 'ಡೈರೆಕ್ಟ್ ಆಕ್ಷನ್ ಡೇ'ಗೆ ಕರೆ ಕೊಡುತ್ತದೆ. ಹಿಂಸೆ, ಅತ್ಯಾಚಾರ, ಹಾಗೂ ರಕ್ತಪಾತದಿಂದ ಪಾಕಿಸ್ತಾನವನ್ನು ಕಸಿದುಕೊಳ್ಳಬೇಕೆಂಬ ಆಲೋಚನೆ ಲೀಗಿನದ್ದು. ಲೀಗು ಕರೆಕೊಟ್ಟ 'ಬೇಡಿಕೆಯ ದಿನವು' ಶಾಂತವಾಗಿ ನಡೆಯಲಿಲ್ಲ. ಬಂಗಾಳದಲ್ಲಿ ಲೀಗಿನ ಮಂತ್ರಿಮಂಡಲ ಹಿಂಸೆ, ಅತ್ಯಾಚಾರ ಮತ್ತು ರಕ್ತಪಾತಕ್ಕೆ ಪ್ರೋತ್ಸಾಹವನ್ನು ಕೊಟ್ಟಿತು. ಕಲ್ಕತ್ತ, ನೌಖಾಲಿ, ಮತ್ತಿತರ ಊರುಗಳಲ್ಲಿ ಕೊಲೆ, ಸುಲಿಗೆ, ಮನೆಗಳಿಗೆ ಕಿಚ್ಚನಿಕ್ಕುವುದು, ಸ್ತ್ರೀಯರ ಮಾನಹರಣ ಮತ್ತು ಅಪಹರಣ ಇತ್ಯಾದಿ ದ್ವೇಷ ಕೃತ್ಯಗಳು ಅನಿರ್ಭಾಧಿತವಾಗಿ ನಡೆದವು. ಆವರು ಮನುಷ್ಯತ್ವವನ್ನು ಮರೆತು ತಮ್ಮ ಸಹೋದರರ ರಕ್ತವನ್ನು ಹರಿಸುವ ಪೈಶಾಚಿಕ ಕೃತ್ಯಗಳಲ್ಲಿ ವಿಕೃತ ಆನಂದವನ್ನು ಪಡೆದುಕೊಂಡರು. ವಿವೇಕ ನಷ್ಟವಾಯಿತು. ದ್ವೇಷದ ಕಿಡಿಯಲ್ಲಿ ಬುದ್ಧಿ ವಿವೇಚನೆಯನ್ನು ಕಳೆದುಕೊಂಡಿತು. ಗಾಂಧೀಜಿ ಈ ನರಮೇಧವನ್ನು ನಿಲ್ಲಿಸಲು ನೌಖಾಲಿಯಲ್ಲಿ ಪಾದಯಾತ್ರೆಯನ್ನು ಕೈಗೊಂಡರು. ಪೈಶಾಚಿಕ ಕೃತ್ಯಗಳಲ್ಲಿ ಮೈಮರೆತಿದ್ದವರನ್ನು ತಿರುಗಿ ಮನುಷ್ಯರನ್ನಾಗಿಸುವ ಪ್ರಯತ್ನದಲ್ಲಿ ತೊಡಗಿದರು.

ಬಂಗಾಲದಲ್ಲಿ ಹಿಂದುಗಳ ಮೇಲಾದ ಅತ್ಯಾಚಾರಗಳಿಗೆ ಸೇಡು ತೀರಿಸಿಕೊಳ್ಳಲು ಬಿಹಾರದ ಹಿಂದುಗಳು ಯೋಚಿಸಿದರು. ಅವರು ಮುಯ್ಯಿಗೆ ಮುಯ್ಯಿಯೆಂದು ಬಿಹಾರದ ಮುಸ್ಲಿಮರ ಮೇಲೆರಗಿ ಅವರ ಮನೆ– ಮಠಗಳಿಗೆ ಕಿಚ್ಚನಿಕ್ಕಿದರು. ಮುಸ್ಲಿಮರನ್ನು ಕೊಲೆಗೈದರು. ಸಂತ್ರಸ್ತರಾದ ಬಿಹಾರದ ಮುಸ್ಲಿಮರು ಮನೆ–ಮಠಗಳನ್ನು ತೊರೆದು ಓಡಿದರು.

ಬಂಗಾಳದ ವಿಷಗಾಳಿ ಪಂಜಾಬಿಗೆ ತಲುಪಿತು. ಪಂಜಾಬಿನ ಮುಸ್ಲಿಮರು ಮತ್ತು ಹಿಂದುಗಳು ಪರಸ್ಪರ ಹಿಂಸೆ, ಸೇಡು ತೀರಿಸಿಕೊಳ್ಳುವ ಯೋಚನೆ ಮಾಡಿದರು. ಆರ್ಯಸಮಾಜದವರು, ರಾಷ್ಟ್ರೀಯ ಸ್ವಯಂಸೇವಕ ದಳ, ಮತ್ತು ಅಕಾಲಿಗಳು ತಮ್ಮ ಕಡೆಯ ಜನರನ್ನು ಪ್ರಚೋದಿಸತೊಡಗಿದರು. ಪಂಜಾಬಿಗೆ ಪಂಜಾಬೇ ಹೊತ್ತಿ ಉರಿಯತೊಡಗಿತು. ಲೀಗಿನ ಚಟುವಟಿಕೆಯಲ್ಲಿ ಭಾಗವಹಿಸದೆ ಇದ್ದ ಕಾಂಗ್ರೆಸ್ಸಿನಲ್ಲಿ ಗುರುತಿಸಿಕೊಂಡಿರುವ ಮುಸ್ಲಿಮರು ಕೂಡಾ ಕೊಲೆಯಾಗುತ್ತಿದ್ದರು. ಹೀಗೆ ಮತಾಂಧತೆಯ ದಳ್ಳುರಿಯಲ್ಲಿ ಇಡೀ ಪಂಜಾಬೇ ಹೊತ್ತಿ ಉರಿಯುತ್ತಿರುವಾಗ ಅಮರನು ಈ ಜ್ವಾಲೆಗೆ ಬಲಿಯಾಗುತ್ತಾನೆ. ಒಬ್ಬಂಟಿಯಾದ ಸ್ವರೂಪರಾಣಿ ತನ್ನ ಮಾವನ ಜೊತೆಯಲ್ಲಿ ಗಂಡನ ಮನೆಯಲ್ಲಿ ಆಶ್ರಯವನ್ನು ಪಡೆದುಕೊಳ್ಳುತ್ತಾಳೆ. ಆದರೆ ಈ ದ್ವೇಷದ ಬೆಂಕಿಯ ಕಿಡಿಯಿಂದಾಗಿ ಅವಳ ಅತ್ತೆ–ಮಾವ ಬಾಣಂತಿಯಾದ ಸ್ವರೂಪರಾಣಿಯನ್ನು

ಕಟ್ಟಿಕೊಂಡು ಊರುಬಿಡಬೇಕಾಗುತ್ತದೆ. ಆದರೆ ಹಸಿ ಬಾಣಂತಿ ತೀವ್ರವಾದ ರಕ್ತಸ್ರಾವಕ್ಕೊಳಗಾಗಿ ದಾರಿ ಮಧ್ಯದಲ್ಲಿ ಪ್ರಾಣವನ್ನು ಬಿಡುತ್ತಾಳೆ. ಮಗು ಮಾತ್ರ ಉಳಿದುಕೊಳ್ಳುತ್ತದೆ. ಹೀಗೆ ಭಾರತ ಪಾಕಿಸ್ತಾನ ವಿಭಜನೆಯು ಹೆಣದ ರಾಶಿಯನ್ನೆ ಒಟ್ಟುತ್ತದೆ.

ಸ್ವಾತಂತ್ರ್ಯ ಎನ್ನುವುದು ಅಂದು ಪಾಕಿಸ್ತಾನದಲ್ಲಿ ವಾಸವಾಗಿದ್ದ ಹಿಂದು ಮತ್ತು ಸಿಖ್ಖರಿಗೆ ದುಸ್ವಪ್ನವಾಯಿತು. ಅವರು ಕಂಡ ಸ್ವರಾಜ್ಯದ ಕನಸು ನುಚ್ಚುನಾರಾಯಿತು. ಉತ್ತಮಚಂದನೆಂಬ ರೈತ ತಾನು ಮಜೀದಿಯಾ ಎಂಬ ಹಳ್ಳಿಯನ್ನು ತೊರೆಯುವಾಗ ಲಾಲಚಂದರಲ್ಲಿ ಹೇಳುವ ಮಾತು ಅರ್ಥಗರ್ಭಿತವಾಗಿದೆ– "ಅಂಗ್ರೇಜಿ ಸರಕಾರ ಬೇಡ, ಸ್ವರಾಜ್ಯ ಬೇಕೆಂದು ನೀವು ಚಳುವಳಿ ಹೂಡಿದಿರಿ. ಸೆರೆಮನೆಗೂ ಹೋಗಿ ಬಂದಿರಿ. ನಾವು ನಿಮಗೆ ಬೆಂಬಲ ಕೊಟ್ಟೆವು. ಅಂಗ್ರೇಜಿ ಸರಕಾರ ಹೋಯಿತು. ಸ್ವರಾಜ್ಯ ಬಂತು. ಅದು ನಮ್ಮಂತವರನ್ನು ಊರುಬಿಟ್ಟು ಪರದೇಶಕ್ಕೆ ಓಡಿಹೋಗುವಂತೆ ಮಾಡಿತು."[೧೧]

ಪಾಕಿಸ್ತಾನದ ವಿವಿಧ ಹಳ್ಳಿಗಳಿಂದ ಜನರು ಮೋಟಾರು, ಕತ್ತೆ, ಕುದುರೆ ಹೀಗೆ ಬಗೆ ಬಗೆಯ ವಾಹನಗಳ ಮೇಲೆ ಭಾರತಕ್ಕೆ ವಲಸೆ ಬರುವ ಚಿತ್ರಣ ಸಾಮಾನ್ಯವಾಗಿತ್ತು. ಆದರೂ ಅಂಥ ಪರಿಸ್ಥಿತಿಯಲ್ಲೂ ಹಳ್ಳಿ ಹಳ್ಳಿಗಳಲ್ಲಿ ನೆಲೆಸಿರುವ ಹಿಂದು, ಸಿಖ್ ಹಾಗೂ ಮುಸ್ಲಿಮರ ನಡುವೆ ಪ್ರೀತಿ, ಸಹೋದರತ್ವ ಇತ್ತು. ನಿಯಾಸುದ್ದೀನರ ಬೇಗಂ ಲಾಲಚಂದರ ಮೊಮ್ಮಗನಿಗೆ ಚಿನ್ನದ ಹಾರವೊಂದನ್ನು ಕಾಣಿಕೆಯಾಗಿ ನೀಡುವುದು ಹಳ್ಳಿಯ ಹಿಂದು ಮುಸ್ಲಿಮರ ವಿಶ್ವಾಸಕ್ಕೆ ಕನ್ನಡಿ ಹಿಡಿದಂತಿದೆ.

ದೇಶ ವಿಭಜನೆಯ ದುರಂತ ಚಿತ್ರಣ, ಸ್ವರಾಜ್ಯ ಬಂದರೂ ಹುಟ್ಟಿದ ನಾಡನ್ನು ತೊರೆದು ಹೋಗಬೇಕಾದ ಅನಿವಾರ್ಯತೆ, ನಾಡು ಹೋಳಾಗುವುದು ಮಾತ್ರವಲ್ಲದೆ ಲಕ್ಷಾಂತರ ಜನರ ರಕ್ತಾಭಿಷೇಕವನ್ನು ಭಾರತಾಂಬೆ ಕಾಣಬೇಕಾಯಿತು ಎಂಬ ವಿಷಾದದೊಂದಿಗೆ ಈ ಕಾದಂಬರಿ ಕೊನೆಗೊಳ್ಳುತ್ತದೆ.

**ಮೆರವಣಿಗೆ**

ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರ ಈ ಕಾದಂಬರಿಯು 'ಮಲ್ಲಿಗೆಹಳ್ಳಿ' ಯಲ್ಲಾಗುವ ಹಲವಾರು ಬದಲಾವಣೆಗಳನ್ನು ತಿಳಿಸುತ್ತ ಸ್ವಾತಂತ್ರ್ಯ ಹೋರಾಟದಲ್ಲಿ ಈ ಪುಟ್ಟ ಹಳ್ಳಿಯು ಭಾಗವಹಿಸುವ ಚಿತ್ರಣವನ್ನು ಕಟ್ಟಿಕೊಡುತ್ತದೆ.

ಒಂದು ಕಾಲದಲ್ಲಿ ಹಳ್ಳಿಯ ಮಕ್ಕಳು ಸಂಸ್ಕೃತ ವಿದ್ಯೆಯನ್ನು ಕಲಿತು ವಿದ್ಯಾವಂತರಾಗಿರುತ್ತಿದ್ದರು. ರಾಮಾಯಣ, ಮಹಾಭಾರತದ ತತ್ವಗಳಿಂದ ತಮ್ಮ ಬದುಕನ್ನು ಶ್ರೀಮಂತಗೊಳಿಸುತ್ತಿದ್ದರು. ಆದರೆ ಕ್ರಮೇಣ ಇಂಗ್ಲೀಷ್ ವಿದ್ಯಾಭ್ಯಾಸ ಆರಂಭವಾಯಿತು. ಇದರ ಪರಿಣಾಮವಾಗಿ ಜನರು ತಿಳಿದುಕೊಳ್ಳುವ ಸಾಮರ್ಥ್ಯ ಕಡಿಮೆಯಾಯಿತು . ಇಂಗ್ಲೀಷ್ ವಿದ್ಯೆಯು ಗುಲಾಮಿ ಪ್ರವೃತ್ತಿ, ಸ್ವಾರ್ಥ ಮುಂತಾದ ಗುಣಗಳನ್ನೇ ಜನರಲ್ಲಿ ಬೆಳೆಸಿತು. ಒಂದು

ಕಾಲದಲ್ಲಿ ವಿದ್ಯಾವಂತರ ನಗರವೆಂದು ಪ್ರಸಿದ್ಧಿ ಪಡೆದ ಮಲ್ಲಿಗೆ ಹಳ್ಳಿ ಈಗ ಒಂದು ಕುಗ್ರಾಮವಾಗಿ ಮಾರ್ಪಾಡು ಹೊಂದುತ್ತದೆ. ಇಂಗ್ಲಿಷ್ ವಿದ್ಯೆಯಿಂದಾಗಿ ನಾವು "ವಿದ್ಯೆಯನ್ನು ಮಾರಾಟಕ್ಕಿಡುವ" ಒಂದು ಸಂಸ್ಕೃತಿಯನ್ನು ಬೆಳೆಸಿಕೊಂಡೆವು.

ಹಳ್ಳಿಗಳಲ್ಲಿ ಹೆಚ್ಚಾಗಿ ಏಕೋಪಾಧ್ಯಾಯ ಶಾಲೆಗಳೇ ಇದ್ದವು. ಅಂತಹ ಶಾಲೆಯಲ್ಲಿ ಸುದರ್ಶನ ತನ್ನ ವಿದ್ಯಾಭ್ಯಾಸವನ್ನು ಮುಂದುವರಿಸುತ್ತಾನೆ. ಸುದರ್ಶನ ಅತ್ಯಂತ ಚುರುಕು ಹುಡುಗ. ಅನೇಕ ತರಳೆಗಳ ಮೂಲಕ ಮಾಸ್ತರರನ್ನು ಪೀಡಿಸುತ್ತಿದ್ದನು. ಅವನು ಓದಿ ಬಿ.ಎ ಮುಗಿಸಿ ಗಾಂಧೀಜಿಯವರ ಪ್ರಭಾವಕ್ಕೆ ಒಳಗಾಗುತ್ತಾನೆ. ಅವರ ಸಬರಮತಿ ಸೇವಾಶ್ರಮವನ್ನು ಸೇರಿ ಅನೇಕ ಗುಡಿ ಕೈಗಾರಿಕೆಗಳ ತರಬೇತಿಯನ್ನು ಪಡೆದುಕೊಳ್ಳುತ್ತನೆ. ೧೯೨೦ರ ವೇಳೆಗೆ ಸುದರ್ಶನನಿಂದಾಗಿ ಮಲ್ಲಿಗೆಹಳ್ಳಿಯಲ್ಲಿ ಸ್ವಾತಂತ್ರ್ಯದ ಹೊಸ ಅಧ್ಯಾಯವೊಂದು ಆರಂಭವಾಗುತ್ತದೆ. ಸ್ವದೇಶಿ ಚಳವಳಿ, ಖಾದಿಯ ಮಹತ್ವ, ಗಾಣದ ಮೂಲಕ ಸ್ವತಃ ಎಣ್ಣೆಯನ್ನು ತಯಾರಿಸುವುದು, ಹೀಗೆ ಮಲ್ಲಿಗೆ ಹಳ್ಳಿಯಲ್ಲಿ ಮೂಲೆ ಸೇರಿದ ಗ್ರಾಮೋದ್ಯೋಗಕ್ಕೊಂದು ಹೊಸರೂಪವನ್ನು ಕೊಡುತ್ತಾನೆ. ಆದರೆ ಅದಕ್ಕೆ ಮತ್ತೆ ಜನರನ್ನು ಸಿದ್ಧಗೊಳಿಸಲು ಸುದರ್ಶನ ಪಟ್ಟ ಪಾಡಂತೂ ಹೇಳತೀರದು. ಸುದರ್ಶನ ನಿಧಾನವಾಗಿ ಮೂಲೆ ಸೇರಿದ ಎಲ್ಲಾ ಗ್ರಾಮ ಕೈಗಾರಿಕೆಗಳನ್ನು ಪುನರಾರಂಭಿಸುತ್ತಾನೆ. ಅವನ ಪರಿಶ್ರಮದ ಕಾರಣವಾಗಿ ಮಲ್ಲಿಗೆಹಳ್ಳಿಯಲ್ಲಿ ಆ ವರ್ಷ ಮಳೆ ಆಗದಿದ್ದರೂ ಜನರ ಕೈಯಲ್ಲಿ ನಾಲ್ಕು ಕಾಸು ಕುಣಿದಾಡುತ್ತಿತ್ತು. ಸುದರ್ಶನನ ಜೊತೆಯಲ್ಲಿ ಇತರ ಪದವೀಧರು ಕೈ ಜೋಡಿಸುತ್ತಾರೆ. ಹಳ್ಳಿ ಹಳ್ಳಿಗಳ ಪುನರುಜ್ಜೀವನ ಹಾಗೂ ಸ್ವಾವಲಂಬನೆ ಸರಕಾರದ ದೃಷ್ಟಿಯಲ್ಲಿ ರಾಜದ್ರೋಹವೇ ಆಗಿತ್ತು. ಈ ರೀತಿಯ ಸ್ವದೇಶಿ ಚಳವಳಿಯನ್ನು ಇದು ಸರಕಾರವನ್ನು ತಲೆಕೆಳಗೆ ಮಾಡುವ ಚಳವಳಿ ಎಂದು ಸರಕಾರ ಭಾವಿಸುತ್ತದೆ.

ಈ ನಡೆವೆ ಭಾರತದ ಸ್ವಾತಂತ್ರ್ಯ ಚಳವಳಿಯಲ್ಲಿ ಅನೇಕ ಮಹಾನ್ ಘಟನೆಗಳು ನಡೆಯುತ್ತವೆ. ಸೈಮನ್ ಕಮಿಷನ್‌ನ ಪ್ರತಿಭಟನೆ, ಉಪ್ಪಿನ ಸತ್ಯಾಗ್ರಹ, ಇತ್ಯಾದಿ. ಸುದರ್ಶನನಿಂದಾಗಿ ಮಲ್ಲಿಗೆ ಹಳ್ಳಿ ಸರಕಾರದ ಕೆಂಗಣ್ಣಿಗೆ ಗುರಿಯಾಗುತ್ತದೆ. ಕರ್ನಾಟಕದಲ್ಲಿಯೂ ಅಂಕೋಲ, ಸಿರಸಿ, ಸಿದ್ಧಾಪುರ ಮುಂತಾದ ಕಡೆಗಳಲ್ಲಿ ಚಳುವಳಿ ಜೋರಾಗಿಯೇ ನಡೆಯುತ್ತದೆ.

ಸರಕಾರದ ಕೆಂಗಣ್ಣಿಗೆ ಗುರಿಯಾದ ಸುದರ್ಶನನ ದಸ್ತಗಿರಿಯಾಗುತ್ತದೆ. ಪೊಲೀಸರ ದೌರ್ಜನ್ಯ, ಜೈಲಿನ ಅನುಭವ, ಜೈಲಿನಲ್ಲಿ ಹಲವು ಗಣ್ಯರನ್ನು ಭೇಟಿಯಾದ ಬಗೆ ಇವುಗಳ ಸವಿಸ್ತಾರವಾದ ಚಿತ್ರಣವನ್ನು ಈ ಕಾದಂಬರಿ ನೀಡುತ್ತದೆ. ೧೯೪೩ರಲ್ಲಿ ಸುದರ್ಶನನಿಗೆ ಬಿಡುಗಡೆಯಾಗುತ್ತದೆ. ಆದರೆ ಭಾರತ ಮಾತೆಗೆ ಬಿಡುಗಡೆಯೆಂದೋ ಎಂದು ಸುದರ್ಶನ ಚಿಂತಿಸುತ್ತಾನೆ.

## ಮಾಡಿ ಮಡಿದವರು

ಬಸವರಾಜ ಕಟ್ಟಿಮನಿಯವರು ಬರೆದ ಈ ಕಾದಂಬರಿಯು ೧೯೪೬ರಲ್ಲಿ ಮೊದಲ ಬಾರಿಗೆ ಪ್ರಕಟವಾಯಿತು. ೧೯೪೨ರ 'ಚಲೇಜಾವ್' ಚಳುವಳಿಯ ಸಂದರ್ಭಲ್ಲಿ ಬೆಳಗಾವಿಯ ಜನತೆಯೆಲ್ಲವೂ ಒಟ್ಟಾಗಿ ಸಂಘಟಿತರಾಗಿ ನಡೆಸಿದ ಹೋರಾಟದ ಕತೆಯಾಗಿದೆ. ಗಾಂಧೀಜಿಯವರ 'ಮಾಡು ಇಲ್ಲವೇ ಮಡಿ' ಕರೆಗೆ ಓಗೊಟ್ಟು ಬ್ರಿಟಿಷರ ದಬ್ಬಾಳಿಕೆಯ ವಿರುದ್ಧ ಹೋರಾಡುತ್ತಾ ಹೋರಾಡುತ್ತಾ ಪ್ರಾಣವನ್ನೇ ಅರ್ಪಿಸಿದ ವೀರರ ಕಥೆಯಾಗಿದೆ.

ಹೇಮಾ ಎಂಬ ಕಾಲೇಜು ವಿದ್ಯಾರ್ಥಿನಿ ಪುಣೆಯಲ್ಲಿ ವ್ಯಾಸಂಗ ಮಾಡುತ್ತಿದ್ದಾಗ ಗಾಂದೀಜಿಯವರ ಚಲೇಜಾವ್ ಚಳವಳಿಯಿಂದ ಆಕರ್ಷಿತಳಾಗಿ ಬೆಳಗಾವಿ ಕಡೆಗೆ ರೈಲಿನಲ್ಲಿ ಹೊರಟಿರುತ್ತಾಳೆ. ಅವಳ ತಂದೆ ಶಾಮರಾಯರು ಆಕೆ ಚಳುವಳಿ ಸೇರುವುದನ್ನು ಎಷ್ಟೇ ವಿರೋಧಿಸಿದರೂ ಆಕೆಯ ನಿರ್ಧಾರವನ್ನು ಬದಲಿಸಲು ಸಾಧ್ಯವಾಗಲಿಲ್ಲ. ರೈಲಿನಲ್ಲಿ ಆಕೆಗೆ ಹೋರಾಟಗಾರನಾದ ಶೇಖರನ ಪರಚಯ ಆಗುತ್ತದೆ ಆತನ ಒಪ್ಪಿಗೆ ಪಡೆದು ತಾನೂ ಅವರ ಜೊತೆ ಸೇರಿಕೊಂಡು ಹೋರಾಟಗಾರ್ತಿಯಾಗುತ್ತಾಳೆ. ಅದೇ ರೈಲಿನಲ್ಲಿ ತನ್ನ ಕಾಲೇಜು ಸಹಪಾಠಿ ಹಳ್ಳೂರಿನ ಬಾಬಾಸಾಹೇಬ ದೇಸಾಯರ ಮಗ ವಿಶ್ವನಾಥನೂ ಇರುತ್ತಾನೆ. ಅವನಿಗೆ ಚಳುವಳಿ ಹೋರಾಟದ ಬಗ್ಗೆ ಅಷ್ಟೊಂದು ಆಸಕ್ತಿಯಿರದಿದ್ದರೂ ಆಕೆಯ ಮೇಲಿನ ಅನುರಾಗದಿಂದ ತಾನೂ ಚಳುವಳಿಗೆ ಧುಮುಕುತ್ತಾನೆ. ಕಲ್ಲಾಪುರದ ಶೇಖರ, ಪೈಲ್ವಾನ್ ಸಂಗಣ್ಣ, ಲಾವಣಿಕಾರ ಶಂಕರಪ್ಪ, ಹೇಮಾ, ವಿಶ್ವನಾಥ– ಹೀಗೆ ಹಲವಾರು ಮಂದಿ ಹೋರಾಟಗಾರರನ್ನು ಸಂಘಟಿಸುತ್ತಾ, ಲಾವಣಿಗಳ ಮೂಲಕ ದೇಶಪ್ರೇಮದ ಕಿಚ್ಚನ್ನು ಉರಿಸುತ್ತಾ, ಕರಪತ್ರಗಳ ಮೂಲಕ ಹೋರಾಟದ ಕುರಿತು ಜನರಿಗೆ ಉತ್ಸಾಹವನ್ನು ತುಂಬುತ್ತಾ, ಸರಕಾರದ ಯಂತ್ರಗಳನ್ನು ನಾಶಮಾಡುತಾರೆ. ಬ್ರಿಟಿಷ್ ಸರಕಾರದ ಬಲ ಕುಸಿಯುವಂತೆ ಮಾಡುತ್ತಾರೆ. ಮೊದಮೊದಲು ಅಹಿಂಸಾತ್ಮಕವಾಗಿಯೇ ನಡೆದ ಈ ಪ್ರತಿಭಟನೆ ಕೊನೆಗೆ ಅನಿವಾರ್ಯವಾಗಿ ಹಿಂಸೆಯ ರೂಪವನ್ನು ತಾಳುತ್ತದೆ. ಹೋರಾಡುತ್ತಲೇ ಬ್ರಿಟಿಷರ ಗುಂಡಿಗೆ ಎದೆಯೊಡ್ಡಿ ಮಡಿಯುತ್ತಾರೆ.

ಹೋರಾಟದ ವಸ್ತುವನ್ನೇ ಒಳಗೊಂಡ ಈ ಕಾದಂಬರಿಯಲ್ಲಿ ಬರುವ ಜೀವಂತಿಕೆಯಿರುವ ಪಾತ್ರಗಳು, ಮುದುಕ–ಮುದುಕಿಯರಲ್ಲೂ ಇರುವ ಹೋರಾಟದ ಕಿಚ್ಚು, ಹೇಮಾಳಂತಹ ಹದಿಹರೆಯದ ಯುವತಿಯಲ್ಲಿರುವ ಆತ್ಮಸಂಯಮವು ಓದುಗರನ್ನು ತನ್ಮಯಗೊಳಿಸುತ್ತದೆ.

**ಹೆಜ್ಜೆ**

ವ್ಯಾಸರಾಯ ಬಲ್ಲಾಳರು ೨೦೦೦ನೇ ಇಸವಿಯಲ್ಲಿ ಈ ಕಾದಂಬರಿಯನ್ನು ಪ್ರಕಟಿಸಿದ್ದಾರೆ. ಈ ಕಾದಂಬರಿಯಲ್ಲಿ ೧೮೫೫ರಿಂದ ೧೯೫೮ರವರೆಗಿನ ಸಾಮಾಜಿಕ, ಶೈಕ್ಷಣಿಕ, ಆರ್ಥಿಕ ಮತ್ತು ರಾಜಕೀಯ ಸಂಗತಿಗಳು ಚಿತ್ರಿತವಾಗಿವೆ.

ನೂರಾರು ಪಾತ್ರಗಳು, ಊರುಗಳು, ರಾಜಕೀಯ ಚರಿತ್ರೆಯಲ್ಲಿ ಮತ್ತು ಗಾಂಧೀಜಿ ಬದುಕಿನಲ್ಲಿ ದಾಖಲಾದ ಸಂಗತಿಗಳನ್ನು ಈ ಕಾದಂಬರಿ ಒಳಗೊಂಡಿದೆ. ಅನೇಕ ಚಾರಿತ್ರಿಕ ಪುರುಷರ ಹೆಸರುಗಳು, ನೆಹರೂ, ಹಿಟ್ಲರ್, ಜಿನ್ನಾ, ತಿಲಕ್, ಕಾಂಗ್ರೆಸ್ಸಿಗರು, ಕಮ್ಯುನಿಸ್ಟರು, ಮುಸ್ಲೀಂಲೀಗಿನವರು, ಹರಿಜನರು ದೇವಸ್ಥಾನಕ್ಕೆ ಪ್ರವೇಶಿಸುವುದು, ಅವರಿಗೆ ಶಿಕ್ಷಣ, ಅವರು ಎಂಜಲು ತಿನ್ನುವುದನ್ನು ವಿರೋಧಿಸುವುದು, ಕೇಶಮುಂಡನ ನಿಲ್ಲಿಸುವುದು, ವಿಧವಾ ವಿವಾಹ, ಮಹಾ ಮಡಿವಂತಿಕೆಯ ಬ್ರಾಹಣರು ಕ್ರಮೇಣ ಸುಧಾರಣೆಗೊಂಡು ಮನುಷ್ಯರಾಗುವುದು, ಬ್ರಾಹ್ಮಣರು ಜುಟ್ಟು ಕತ್ತರಿಸಿ ಹೋಟೆಲಿಡುವುದು, . . . ಹೀಗೆ ಭಾರತವಿಟ್ಟ ಅನೇಕ ಹೆಜ್ಜೆಗಳನ್ನು ಈ ಕಾದಂಬರಿಯಲ್ಲಿ ಕಾಣುತ್ತೇವೆ.

ಕಟ್ಟಾ ಸಂಪ್ರದಾಯಸ್ಥರಾದ ತರ್ಕತೀರ್ಥ ಶ್ರೀಕಂಠಶಾಸ್ತ್ರಿಗಳ ಎರಡನೆಯ ಸೊಸೆ ಸಾವಿತ್ರಿ ವಿದ್ಯಾವಂತೆ, ಬುದ್ಧಿವಂತೆ, ಹಿಂದಿ ಇಂಗ್ಲಿಷೆರೆಡರಲ್ಲೂ ಪ್ರವೀಣೆ. ಮಹಾ ಗಾಂಧಿ ಭಕ್ತೆ. ಗಾಂಧೀಜಿ ಉಡುಪಿಗೆ ಬಂದಾಗ ತನ್ನ ಚಿಕ್ಕಪ್ಪನ ಜೊತೆಯಲ್ಲಿ ಹೋಗಿ ಅವರಿಗೆ ಹಾರ ಹಾಕಿದುದು ಅವಳ ಬದುಕಿನ ಸ್ಮರಣೀಯ ಘಟನೆ. ಅವರ ದರ್ಶನ ಮಾತ್ರದಿಂದಲೇ ಅವಳು ಗಾಂಧೀಜಿಯ ಆರಾಧಕಳಾಗುತ್ತಾಳೆ. ಗಾಂಧೀಜಿಯ ಯಾವ ಧೋರಣೆಯಲ್ಲಿಯೂ ಅವಳಿಗೆ ದ್ವಂದ್ವವಿರಲಿಲ್ಲ. ಗಾಂಧೀಜಿಯ ಒಂದು ಭಾವಚಿತ್ರವನ್ನು ಮದುವೆಯಾಗಿ ಗಂಡನ ಮನೆಗೆ ಬರುವಾಗ ತಂದಿರುತ್ತಾಳೆ. ಅದನ್ನು ತನ್ನ ಪೆಟಾರಿಯಲ್ಲಿಟ್ಟುಕೊಂಡಿರುತ್ತಾಳೆ. ಆದರೆ ಅವಳ ಮಾವ ಶ್ರೀಕಂಠಶಾಸ್ತ್ರಿಗಳಿಗೆ ತನ್ನ ಸೊಸೆಯ ಮೇಲೆ ಅಪಾರ ಪ್ರೀತಿ, ಅವಳ ಸೌಂದರ್ಯ ಹಾಗೂ ಬುದ್ಧಿವಂತಿಕೆಯ ಕುರಿತು ಗೌರವವಿದ್ದರೂ ಕೂಡಾ ಅವಳ ಗಾಂಧಿಭಕ್ತಿ ಹಿಡಿಸುವುದಿಲ್ಲ. ಅವರ ದೃಷ್ಟಿಯಲ್ಲಿ ಗಾಂಧಿಯೆಂದರೆ– 'ಕಲಿ ಪುರುಷ, ಕರ್ಮ ಚಾಂಡಾಲ, ನಮ್ಮ ಧರ್ಮವನ್ನು ಹಾಳು ಮಾಡಲು ಬಂದ ರಾಕ್ಷಸ'. ಆದುದರಿಂದ ಅವರು ಗಾಂಧಿ ಫೋಟೋವನ್ನು ತನ್ನ ಸೊಸೆ ಇಟ್ಟುಕೊಂಡಿರುವುದನ್ನು ವಿರೋಧಿಸುತ್ತಾರೆ. ಆದರೆ ತನ್ನ ತಮ್ಮನ ಮಗಳು ಶಾಂಭವಿ ವಿಧವೆಯಾದ ಸಂದರ್ಭದಲ್ಲಿ ಸಾವಿತ್ರಿಯ ಮಾತಿಗೆ ಬೆಲೆ ಕೊಟ್ಟು ಅವಳ ಕೇಶ ಮುಂಡನವನ್ನು ಮಾಡಗೊಡುವುದಿಲ್ಲ.

ಸಾವಿತ್ರಿ ದಲಿತರ ಹುಡುಗ ಕೆಂಚನಿಗೆ ಗಾಂಧಿ ಟೋಪಿ ತಂದು ಕೊಟ್ಟದ್ದು ಮನೆಯಲ್ಲಿ ಎಲ್ಲರ ವಿರೋಧಕ್ಕೆ ಕಾರಣವಾಗುತ್ತದೆ. ಹೊಲೆಯರನ್ನು ದೇವಸ್ಥಾನಕ್ಕೆ ಕಳುಹಿಸುವ ಪಿತೂರಿ ತಮ್ಮ ಮನೆಯಲ್ಲೇ ನಡೆಯುತ್ತಿದೆಯೆಂದು ವಿದ್ಯಾಧರನ ಅಣ್ಣ ಗಂಗಾಧರ ಸಾವಿತ್ರಿಯನ್ನು ದೂರುತ್ತಾನೆ.

ಸಾವಿತ್ರಿಯ ಗಂಡ ವಿದ್ಯಾಧರ ಅವಳಿಂದಾಗಿ ಅಭೂತಪೂರ್ವ ಬದಲಾವಣೆಯನ್ನು ಹೊಂದುತ್ತಾನೆ. ಪತ್ನಿ ಸಾವಿತ್ರಿಯಿಂದ ಪ್ರೇರಿತಳಾಗಿ ಸಮಾಜಶಾಸ್ತ್ರ, ಇತಿಹಾಸ, ಅರ್ಥಶಾಸ್ತ್ರ, ಜಪಾನ್, ರಷ್ಯಾ, ಮುಂತಾದ ದೇಶಗಳ ಚರಿತ್ರೆಯನ್ನು ತಿಳಿದುಕೊಳ್ಳುತ್ತಾನೆ. ದಲಿತರ ಹುಡುಗ ಕೆಂಚನಿಗೆ ಪಾಠ ಹೇಳಿಕೊಟ್ಟು ತಂದೆ ಶ್ರೀಕಂಠಶಾಸ್ತ್ರಿ, ತಾಯಿ, ಅಣ್ಣ ಎಲ್ಲರ ವಿರೋಧವನ್ನು ಕಟ್ಟಿಕೊಳ್ಳುತ್ತಾನೆ. ಜುಟ್ಟು ಕತ್ತರಿಸಿಕೊಳ್ಳುತ್ತಾನೆ. ಹೆಚ್ಚು ಓದುತ್ತಾನೆ, ಜನಿವಾರವನ್ನು ತೆಗೆದು ಹಾಕುತ್ತಾನೆ, ಮನೆಯಲ್ಲಿ ಇವರಿಬ್ಬರ ನಡವಳಿಕೆಯ ಬಗ್ಗೆ ವಿರೋಧ ಹೆಚ್ಚಾದಾಗ ಸಾವಿತ್ರಿಯೊಂದಿಗೆ ಮುಂಬಯಿಗೆ ಹೋಗುತ್ತಾನೆ. ಗಾಂಧಿವಾದ ಒಂದುಕಡೆ, ಕಮ್ಯುನಿಸಂ ಇನ್ನೊಂದು ಕಡೆ ಹೀಗೆ ತೊಳಲಾಡುತ್ತಾ ಸಂಬಳವಿಲ್ಲದೆ ಹುಡುಗರಿಗೆ ಪಾಠ ಹೇಳಿಕೊಡುತ್ತಾನೆ. ೧೯೪೨ರ ಚಲೇಜಾವ್ ಚಳವಳಿಯಲ್ಲಿ ಪೊಲೀಸರ ಗುಂಡಿಗೆ ಆಹುತಿಯಾಗುತ್ತಾನೆ.

ಸಾವಿತ್ರಿಯ ಪ್ರಭಾವದಿಂದ, ವಿದ್ಯಾಧರನ ಶಿಕ್ಷಣದಿಂದ ಹೆಚ್ಚು ಹೆಚ್ಚು ಹರಿಜನರು ಶಾಲೆಗೆ ಸೇರುತ್ತಾರೆ. ಕೆಂಚ ಮೆಟ್ರಿಕ್ ಮುಗಿಸಿ ಮುನಿಸಿಪಾಲಿಟಿಯಲ್ಲಿ ಕೆಲಸಕ್ಕೆ ಸೇರುತ್ತಾನೆ. ನೀಟಾಗಿ ಕ್ರಾಪು ಮಾಡಿಕೊಂಡು, ಬಿಳಿಯ ಷರಟು ಹಾಕಿಕೊಂಡು ಲುಂಗಿ ಸುತ್ತಿಕೊಂಡು ಕೆಂಚನ ಉಡುಪಿನಲ್ಲಿ ಸಹ ಕ್ರಾಂತಿಕಾರಕ ಬದಲಾವಣೆಯಾಗುವುದಕ್ಕೆ ಸಾವಿತ್ರಿಯ ಮೂಲಕ ಹರಿದು ಬಂದ ಗಾಂಧಿಯ ಪ್ರಭಾವ ಕಾರಣವಾಗುತ್ತದೆ.

ತನ್ನ ಗಂಡ ತೀರಿದ ಮೇಲೆ ಸಾವಿತ್ರಿ ಕಾಲೇಜು ಸೇರಿ ಬಿ.ಎ, ಎಂ.ಎ ಓದಿದರೂ ಉದ್ದಕ್ಕೂ ಸ್ವಾತಂತ್ರ್ಯ ಹೋರಾಟಗಾರರ ಸಂಪರ್ಕದಲ್ಲಿರುತ್ತಾಳೆ. ತನಗೆ ಗೊತ್ತೇ ಇಲ್ಲದ ಭೂಗತ ಸ್ವಾತಂತ್ರ್ಯ ಹೋರಾಟಗಾರರಿಗೆ ರಾತ್ರಿ ತನ್ನ ಮನೆಯಲ್ಲಿ ಆಶ್ರಯ ನೀಡುತ್ತಾಳೆ. ಮುಂಬಯಿಯಲ್ಲಿ ಆಕೆಗೆ ರಫಿ, ಮಖನ್‌ಲಾಲ್ ಮುಂತಾದವರ ಆತ್ಮೀಯ ಸಂಬಂಧ ಬೆಳೆಯುತ್ತದೆ.

೧೯೪೮ರಲ್ಲಿ ಗಾಂಧಿಯನ್ನು ಕೊಂದ ಸುದ್ದಿಯನ್ನು ಕೇಳಿ ಬಿಕ್ಕಿ ಬಿಕ್ಕಿ ಅಳುತ್ತಾಳೆ. ಅದೇ ಸಮಯಕ್ಕೆ ಸರಿಯಾಗಿ ಅವಳ ಮಾವ ಶ್ರೀಕಂಠಶಾಸ್ತ್ರಿಗಳು ತಮ್ಮ ಕುಟುಂಬದಲ್ಲಿ ಸತ್ತ ಎಲ್ಲರ ಚಿತಾಭಸ್ಮವನ್ನು ಹರಿದ್ವಾರದಲ್ಲಿ ಬಿಡಲಿಕ್ಕೆ ಬರುತ್ತಾರೆ. ಅವರ ವೇಷಭೂಷಣದಲ್ಲಿ ಅಗಾಧವಾದ ಬದಲಾವಣೆಗಳಾಗಿರುತ್ತದೆ. ತಲೆಯ ಮೇಲೆ ಗಾಂಧಿ ಟೋಪಿಯನ್ನು ಹಾಕಿಕೊಂಡಿರುತ್ತಾರೆ. ಅದನ್ನು ನೋಡಿದ ಸಾವಿತ್ರಿ, ಇನ್ನೂ ಅಳುತ್ತಿದ್ದಂತೆಯೇ– "ಗಾಂಧಿ ಇನ್ನಿಲ್ಲ ಮಾವಯ್ಯ. . . . . ಗಾಂಧಿ ಇನ್ನಿಲ್ಲ... ಟೊಪ್ಪಿ ಮಾತ್ರ ಇದೆ" ಎಂದಳು. ಹೀಗೆ ಕತೆ ಮುಗಿಯುತ್ತದೆ.

**ಹಿಂದಿರುಗಿ ಬರಲಿಲ್ಲ**

ಈ ಕಾದಂಬರಿ ಕೂಡಾ ೧೯೪೨ರಲ್ಲಿ 'ಮಾಡು ಇಲ್ಲವೆ ಮಡಿ' ಕರೆಗೆ ಒಗೊಟ್ಟ ಒಬ್ಬ ವಿದ್ಯಾರ್ಥಿಯ ಕಥೆ. ಸ್ವಾತಂತ್ರ್ಯಕ್ಕಾಗಿ ಕೋಟ್ಯಾಂತರ ಜನರ ಬಲಿದಾನವಾದರೂ ಕೂಡಾ ಸ್ವತಂತ್ರ ಭಾರತದಲ್ಲಿ ಮತ್ತೆ ಮುಂದುವರಿದ ದಾರಿದ್ರ್ಯ, ಅನಾರೋಗ್ಯ, ಅಜ್ಞಾನ, ಇದರ ವಿರುದ್ಧ ಹೋರಾಡುವ ಜಯದೇವ ಎಂಬ ವಿದ್ಯಾರ್ಥಿಯ ಕಥೆಯಾಗಿದೆ.

ಎರಡನೇ ಮಹಾಯುದ್ಧದ ಸಮಯದಲ್ಲಿ ರಾಜ್ಯದಲ್ಲಿ ಬರಗಾಲಪೀಡಿತವಾಗಿದ್ದರೂ ಸರಕಾರ ಯುದ್ಧನಿಧಿಯನ್ನು ಸಂಗ್ರಹಿಸುತಿತ್ತು. ಕೂಲಿಕಾರ್ಮಿಕರು ಕೂಡಾ ಯುದ್ಧನಿಧಿಯನ್ನು ಕೊಡಲೇಬೇಕಿತ್ತು. ಇಂತಹ ಸರಕಾರದ ಕ್ರೂರಮುಖ, ಶೋಷಣೆಯ ವಿವಿಧ ಮಜಲುಗಳನ್ನು ಅನಾವರಣಗೊಳಿಸುತ್ತದೆ.

**ಬೇಡಿ ಕಳಚಿತು ದೇಶ ಒಡೆಯಿತು**

ಇದೊಂದು ಕೋಚೆಯವರ ಬೃಹತ್ ಕೃತಿ. ಸ್ವಾತಂತ್ರ್ಯ ಸಂಗ್ರಾಮವೆಂಬ ಮಹಾಗಾಥೆಯ ಸಮಗ್ರ ಚಿತ್ರಣವನ್ನೊಳಗೊಂಡಿದೆ. ಭಾರತದಲ್ಲಿ ಮಾತ್ರವಲ್ಲದೆ ವಿದೇಶಗಳಲ್ಲೂ ಸ್ವಾತಂತ್ರ್ಯ ಸಂಗ್ರಾಮ ಪ್ರತಿಧ್ವನಿಸಿದುದನ್ನು ಈ ಕೃತಿ ಅನಾವರಣಗೊಳಿಸುತ್ತದೆ. ಸ್ವಾತಂತ್ರ್ಯ ಚಳುವಳಿಯ ಅಖಂಡ ಚಿತ್ರಣ, ಗಾಂಧೀಜಿಯವರ ವ್ಯಕ್ತಿತ್ವ, ಸ್ವಾತಂತ್ರ್ಯ ಗಳಿಕೆಯಲ್ಲಿ ಬೋಸರ ಪಾತ್ರ, ಮುಂತಾದ ಮಹತ್ವದ ಕೃತಿ ಇದಾಗಿದೆ. ಭಾರತದ ಸ್ವಾತಂತ್ರ್ಯವು ಇಂಗ್ಲೇಂಡ್, ಅಮೇರಿಕಾ, ಜಪಾನ್, ಜರ್ಮನಿ, ಬರ್ಮಾದಲೂ ಯಾವ ರೀತಿಯಲ್ಲಿ ಯಾವ ಪ್ರಮಾಣದಲ್ಲಿ ನಡೆದಿತ್ತೆಂಬುದನ್ನು ಅಧ್ಯಯನ ನಡೆಸಿದ ಕೃತಿ ಇದಾಗಿದೆ.

ಕರ್ನಾಟಕದಲ್ಲಿ ನಡೆದ ಸ್ವಾತಂತ್ರ್ಯ ಹೋರಾಟದಲ್ಲಿ ಸಾವಿರಾರು ಜನ ಪಾಲ್ಗೊಂಡಿದ್ದಾರೆ. ಅವರಲ್ಲಿ ಕೆಲವರು ಪ್ರಖ್ಯಾತ ನಾಯಕರು. ಬಹುಜನ ಅಪ್ರಖ್ಯಾತ ಹಣತೆಗಳು. ಈ ಸ್ವಾತಂತ್ರ್ಯವೆಂಬ ಜ್ವಾಲೆಯಲ್ಲಿ ಭಸ್ಮವಾದ ಸಾಮಾನ್ಯ ಜನರ ತ್ಯಾಗ ಅಪರಿಮಿತವಾದುದು. ಈ ಸ್ವಾತಂತ್ರ್ಯ ಸಮರದಲ್ಲಿ ಭಾಗಿಯಾದವರು ಕೇವಲ ರಾಜಕಾರಣಿಗಳು, ಕಾಂಗ್ರೆಸ್ಸಿಗರು, ಇತರ ಪಕ್ಷಗಳು ಮಾತ್ರವಲ್ಲ; ಭಗತ್‌ಸಿಂಗ್ ಗುಟ್ಟಾಗಿ ತಪ್ಪಿಸಿಕೊಂಡು ಹೋಗಲು ಸಹಾಯ ಮಾಡಿದ ಒಬ್ಬ ಅನಾಮಧೇಯ ಟಾಂಗಾವಾಲಾನಿಂದ ಹಿಡಿದು ಕವಿಗಳು, ಧರ್ಮಗುರುಗಳು, ಕೀರ್ತನಕಾರರು, ಅಧ್ಯಾಪಕರು, ವಿದ್ಯಾರ್ಥಿಗಳು, ಸರ್ಕಾರಿ ನೌಕರರು, ಭೂಗತ ಚಳವಳಿಗಾರರಿಗೆ ರಾತ್ರೋರಾತ್ರಿ ಅನ್ನಯಿಟ್ಟ ಹೆಸರಿಲ್ಲದ ಮಹಿಳೆಯರು, ಉತ್ತರ ಕನ್ನಡ ಜಿಲ್ಲೆಯ ಗಿರಿಜನರು, ಕಾರ್ಮಿಕರು, ಕೃಷಿಕರು, . . . . . ಅಸಂಖ್ಯಾತ ಅನಾಮಧೇಯ ಯೋಧರ ಪಾತ್ರವನ್ನು ನಿರೂಪಿಸುವ ಪ್ರಾಮಾಣಿಕ ಪ್ರುಯತ್ನವನ್ನು ಲೇಖಕರು ಮಾಡಿದರು. ಸ್ವಾತಂತ್ರ್ಯ ಚಳುವಳಿಯಲ್ಲಿ ಇಂತಹ ಸಣ್ಣ ಸಣ್ಣ ಘಟನೆಗಳಿಗೂ ಕೂಡಾ ಪ್ರಾಮುಖ್ಯತೆಯಿದೆ.

**ಮಂಗಳೂರು ಕ್ರಾಂತಿ**

ಪ್ರಭಾಕರ ನೀರುಮಾರ್ಗ ಅವರ 'ಮಂಗಳೂರು ಕ್ರಾಂತಿ' ಕೂಡಾ 'ಕಲ್ಯಾಣಪ್ಪನ ದಂಡು' ಬ್ರಿಟಿಷರ ವಿರುದ್ಧ ಹೋರಾಡಿದ್ದ ಕತೆಯನ್ನೇ ತಿಳಿಸುತ್ತದೆ.

## ಹಳ್ಳ ಬಂತು ಹಳ್ಳ

ಶ್ರೀನಿವಾಸ ವೈದ್ಯ ಅವರು ರಚಿಸಿದ ಈ ಕಾದಂಬರಿಯು ೧೮೫೭ರಿಂದ ೧೯೪೭ರ ಚಳುವಳಿವರೆಗಿನ ವಿವಿಧ ಏಳುಬೀಳುಗಳ ಕಥೆಯನ್ನು ಅನಾವರಣಗೊಳಿಸುವಲ್ಲಿ ಯಶಸ್ವಿಯಾಗಿದೆ. ಸಣ್ಣ ಊರಾದ ನವಲಗುಂದ ಹಾಗೂ ನರಗುಂದದಲ್ಲಿ ನಡೆದ ಸ್ವಾತಂತ್ರ್ಯ ಹೋರಾಟದ ಕಥೆಯನ್ನು ಈ ಕಾದಂಬರಿ ಹೇಳುವುದರ ಜೊತೆಜೊತೆಯಲ್ಲಿ ಅಂದಿನ ಸಾಮಾಜಿಕ ವ್ಯವಸ್ಥೆಯತ್ತಲೂ ಬೆಳಕು ಚೆಲ್ಲುತ್ತದೆ. ಗಾಂಧೀಜಿಯವರ ಪ್ರಭಾವವು ನವಲಗುಂದದ ಯುವಕರ ಮೇಲೆ ಬೀರುವ ಪರಿಣಾಮ, ಅಲ್ಲಿಯ ಜನರು ಸ್ವಾತಂತ್ರ್ಯ ಹೋರಾಟಕ್ಕೆ ಧುಮುಕುವ ಪರಿ, ಬ್ರಿಟಿಷರ ವಿರುದ್ಧ ಕರಪತ್ರಗಳು ಆರಂಭಗೊಂಡು ಅವು ಸುತ್ತಮುತ್ತಲಿನ ಎಲ್ಲಾ ಊರುಗಳಿಗೂ ತಲುಪುವ ಬಗೆಯೆಲ್ಲವನ್ನೂ ಈ ಕಾದಂಬರಿಯು ಸಮರ್ಥವಾಗಿ ಬಿಂಬಿಸುತ್ತದೆ.

ಒಂದು ಶತಮಾನದ ಕತೆಯನ್ನೊಳಗೊಂಡ ಈ ಕಾದಂಬರಿ ನೂರಾರು ಆಚಾರ, ಸಂಪ್ರದಾಯಗಳು, ಮನಷ್ಯನ ದೌರ್ಬಲ್ಯಗಳು, ಮಾಧ್ವ ಸಂಪ್ರದಾಯದ ರೀತಿ ನೀತಿಗಳು, ಸಾಮಾಜಿಕ ಸಮಸ್ಯೆ, ಲೌಕಿಕ ಅಲೌಕಿದ ಪ್ರಶ್ನೆಗಳನ್ನೊಳಗೊಂಡಿದೆ. ಒಂದು ವಿಚಿತ್ರವಾದ ಆಕಸ್ಮಿಕವಾದ ಸಂದರ್ಭದಿಂದಲೇ ಈ ಕಾದಂಬರಿ ಆರಂಭವಾಗುತ್ತದೆ. ಕಾನ್ಪುರ ಮೂಲದ ಒಬ್ಬ ಬ್ರಾಹ್ಮಣ ಅಚಾನಕ್ಕಾಗಿ ಒಂದು ಪರಿಸ್ಥಿತಿಯ ಒತ್ತಡದಿಂದ ಇಲ್ಲಿಯ ಸಂಪ್ರದಾಯದೊಳಕ್ಕೆ ಸೇರಿಕೊಳ್ಳುತ್ತಾನೆ. ಅದು ಈ ಕಾದಂಬರಿಯ ಮುಂದಿನ ಎಲ್ಲಾ ಕಥಾನಕಕ್ಕೂ ಮೂಲವಾಗುತ್ತದೆ. ಪರಕೀಯ ನಾಡು-ಕುಲಗಳಿಂದ ಬಂದ ಕಮಲಪಂತನನ್ನು ಸಾವಿತ್ರಿ ಮದುವೆಯಾಗಿ ತಮ್ಮೂರಿನವನನ್ನಾಗಿ ಮಾಡಿಕೊಳ್ಳುತ್ತಾಳೆ. ಈ ಕಮಲ ಪಂತನ ವಂಶದಿಂದಲೇ ಮುಂದೆ ಕತೆ ಬೆಳೆಯುತ್ತಾ ಹೋಗುತ್ತದೆ.

ಅನೇಕ ಸಾಮಾಜಿಕ ಸತ್ಯಗಳನ್ನು ತನ್ನೊಳಗೆ ಅಡಗಿಸಿಕೊಂಡ ಈ ಕಾದಂಬರಿಯು ಸ್ವಾತಂತ್ರ್ಯ ಸಂಗ್ರಾಮದ ವಿವಿಧ ಆಯಾಮ, ಅದು ಮುಂದಿನ ಪೀಳಿಗೆಯನ್ನು ಆವರಿಸಿಕೊಳ್ಳುವ ರೀತಿ, ಈ ಸ್ವಾತಂತ್ರ್ಯಕ್ಕೆ ಕಮಲಪಂತನ ವಂಶಸ್ಥರು ಕೂಡಾ ಧುಮುಕುವ ಚಿತ್ರಣವನ್ನು ತೆರೆದಿಡುತ್ತದೆ.

ಕಂಪೆನಿ ಸರಕಾರದ ವಿರುದ್ಧ ಉತ್ತರದಲ್ಲಿ ದಂಗೆಯೆದ್ದು ನಾನಾಸಾಹೇಬ ಸೋತು ಓಡಿಹೋಗಿದ್ದನು. ಇತ್ತ ನರಗುಂದದ ಬಾಬಸಾಹೇಬ, ಪೊಲಿಟಕಲ್ ಏಜೆಂಟ್ ಮ್ಯಾನ್ಸನ್‌ನನ್ನು ಕೊಚ್ಚಿ ಕೊಂದು ಕಂಪೆನಿ ಸರಕಾರದ ವಿರುದ್ಧ ಯುದ್ಧ ಸಾರಿದ್ದನು. ಆಮೇಲೆ ಇಂಗ್ಲೀಷರ ದಂಡು ನರಗುಂದಕ್ಕೆ ಮುತ್ತಿಗೆ ಹಾಕಿತ್ತು. ಧಾರವಾಡದ ಕಲೆಕ್ಟರ್ ಓಜಿಲ್ವೆ ಕಂಪೆನೀ ಸೈನಿಕರೊಂದಿಗೆ ನರಗುಂದವನ್ನು ಕೊಳ್ಳೆ ಹೊಡೆದು ಲೂಟಿ ಮಾಡಿದ್ದನು. ಆ ಕಾಲದಲ್ಲಿ ನರಗುಂದ, ನವಲಗುಂದ, ಯಮನೂರು, ಅಣ್ಣಿಗೇರಿ, ಕಾಲವಾಡ, ಬ್ಯಾಹಟ್ಟಿ ಎಲ್ಲಾ ಹೊತ್ತಿ ಉರೀಲಿಕ್ಕೆ ಹತ್ತಿದವು. ಧಾರವಾಡದಿಂದ ನರಗುಂದದವರೆಗಿನ ಹಳ್ಳಿಗಳನ್ನು ಸೈನಿಕರು ಸುಟ್ಟು

ಹಾಕಿದರು. ಉಳಿದ ಊರುಗಳು ಸ್ಮಶಾನದಂತಿದ್ದವು. ಹಾಡು ಹಗಲು ಸಹಿತ ಮನೆಬಿಟ್ಟು ಹೊರಗೆ ಬರುತ್ತಿರಲಿಲ್ಲ. ಇಡೀ ದೇಶವನ್ನು ಸ್ವಾತಂತ್ರ್ಯ ಸಂಗ್ರಾಮಕ್ಕೋಸ್ಕರ ಒಟ್ಟುಗೂಡಿಸಲು ಪೇಶ್ವೆ ನಾನಾಸಾಹೇಬ ಪ್ರಯತ್ನಿಸುತ್ತಿದ್ದ ಕಾಲವದು. ನರಗುಂದದ ಬಾಬಾಸಾಹೇಬನನ್ನು ಬೆಳಗಾವಿಯಲ್ಲಿ ಗಲ್ಲಿಗೇರಿಸಲಾಯಿತು.

೧೮೫೭ರ ಘಟನೆಯ ನಂತರ ಸುಮಾರು ೪೦-೫೦ ವರುಷಗಳ ಕಾಲ ದೇಶದಲ್ಲಿ ಹೇಳಿಕೊಳ್ಳುವಂತಹ ದೊಡ್ಡ ಮಟ್ಟದ ಪ್ರತಿಭಟನೆಯೇನೂ ಆಗಲಿಲ್ಲ. ೧೯೨೦ರ ಸುಮಾರಿಗೆ ಕಾಂಗ್ರೆಸ್ಸಿನವರು ಚಳವಳಿಯನ್ನು ಆರಂಭಿಸುತ್ತಾರೆ. ವಾಸುದೇವಾಚಾರ್ಯರ ಮಗ ರಾಮು ಕೂಡಾ ಚಳವಳಿಗೆ ಧುಮುಕುತ್ತಾನೆ. ಹುಬ್ಬಳ್ಳಿ ಧಾರವಾಡದಲ್ಲಿ ನಡೆಯುವ ಘಟನೆಗಳು ನವಲಗುಂದದ ಮೇಲೆ ಪರಿಣಾಮ ಬೀರುತ್ತದೆ. ಸಣ್ಣ ಊರಾದ ನವಲಗುಂದ ಸ್ವಾತಂತ್ರ್ಯ ಚಳುವಳಿಗೆ ತನ್ನದೇ ಆದ ಕೊಡುಗೆಯನ್ನು ನೀಡುತ್ತದೆ. ಗಾಂಧೀಜಿಯವರ ಪ್ರಭಾವ ಈ ಪುಟ್ಟ ಪಟ್ಟಣಕ್ಕೂ ವ್ಯಾಪಿಸುತ್ತದೆ. ರಾಮು ನವಲಗುಂದದ ತುಂಬಾ ಚಳುವಳಿಯ ತತ್ವವನ್ನು ಪ್ರಚಾರ ಮಾಡುತ್ತಾನೆ.

ಬ್ರಿಟಿಷ್ ಸರಕಾರದ ವಿರುದ್ಧ ಕರಪತ್ರಗಳು ಧಾರವಾಡದಿಂದ ಆರಂಭಗೊಂಡು ಸುತ್ತಲಿನ ಎಲ್ಲಾ ಊರುಗಳನ್ನು ತಲುಪುತ್ತವೆ. ನವಲಗುಂದದ ಜನರು ಕೂಡ ಸ್ವಾತಂತ್ರ್ಯ ಚಳುವಳಿಯಿಂದ ಪ್ರೇರೇಪಿತರಾಗುತ್ತಾರೆ, ಉಪ್ಪು ತಯಾರಿಸುತ್ತಾರೆ. ಇಲ್ಲಿಯ ಜನರಲ್ಲಿ ಕೂಡಾ ದೇಶೀಯ, ಅಂತರಾಷ್ಟ್ರೀಯ ಪ್ರಜ್ಞೆ ಮೂಡಲಾರಂಭಿಸುತ್ತದೆ.

ರಾಮುವಿನ ಸಲುವಾಗಿ ವಾಸುದೇವಾಚಾರ್ಯರು ಕೂಡ ಪೋಲೀಸ್ ದೌರ್ಜನ್ಯಕ್ಕೆ ಒಳಗಾಗಬೇಕಾಗುತ್ತದೆ. ೧೯೪೨ರಲ್ಲಿ ದೇಶ ಭಕ್ತಿಯ ಒಂದು ಅಭೂತಪೂರ್ವವಾದ ಅಲೆಯು ಸಮಸ್ತ ರಾಷ್ಟ್ರವನ್ನು ವ್ಯಾಪಿಸುತ್ತದೆ. ಮೇಲ್ವರ್ಗ, ಕೆಳವರ್ಗ, ಹಿಂದುಗಳು, ಮುಸ್ಲಿಮರು, ಪುರುಷರು, ಸ್ತ್ರೀಯರು, ಸಂಪ್ರದಾಯ ನಿಷ್ಠರು, ಸೌಮ್ಯವಾದಿಗಳು, ಉದಾರಿಗಳು ಎಲ್ಲರೂ ಈ ಅಲೆಯ ಒಡೆತಕ್ಕೆ ಒಳಗಾಗುತ್ತಾರೆ. ೧೯೪೨ರ ಆಗಸ್ಟ್ ೯ರ ಕ್ರಾಂತಿಯ ಕಿಚ್ಚು ದೇಶದ ಉದ್ದಗಲಕ್ಕೂ ವ್ಯಾಪಿಸುತ್ತದೆ. ಈ ಸ್ವಾತಂತ್ರ್ಯ ಸಮರದ ಜ್ವಾಲೆಯಲ್ಲಿ ಪಂತರ ಮನೆಯ ರಾಮು ಬಲಿಯಾಗುತ್ತಾನೆ. ೧೯೪೨ರ ಚಳವಳಿ ಹಿಂಸೆಗೆ ತಿರುಗುತ್ತದೆ. 'ಮಾಡು ಇಲ್ಲವೆ ಮಡಿ' ಎಂಬ ಸಂದೇಶವು ಜನರನ್ನು ಬಡಿದೆಬ್ಬಿಸುತ್ತದೆ.

ಇತ್ತ ಪಂತರ ವಾಸುದೇವಾಚಾರ್ಯರು ಕೂಡಾ ಇಹಲೋಕದ ಯಾತ್ರೆಯನ್ನು ಮುಗಿಸುತ್ತಾರೆ. ಪಂತರ ಮನೆಯಲ್ಲಿ ಅವರ ಮಗಳು ಪಾರ್ವತಿ, ತಮ್ಮನ ಮಗ ರಾಮು ಹೀಗೆ ದುರಂತಗಳು ಸಂಭವಿಸುತ್ತವೆ. ಸಮಾಜದ ವಿವಿಧ ಆಯಾಮಗಳನ್ನು, ಮಜಲುಗಳನ್ನು, ಕಾಲಕಾಲಕ್ಕೆ ಆಗುವ ಬದಲಾವಣೆಗಳನ್ನು ಈ ಕಾದಂಬರಿ ಚಿತ್ರಿಸುವುದರೊಂದಿಗೆ ಸ್ವಾತಂತ್ರ್ಯ ಚಳವಳಿಯ ತೀವ್ರತೆಯ ಅಲೆಯೊಂದು ಇಡೀ ದೇಶವನ್ನೇ ವ್ಯಾಪಿಸುವ ರೀತಿಯನ್ನು ಕೂಡಾ ಅನಾವರಣಗೊಳಿಸುತ್ತದೆ.

**ಸ್ವಾತಂತ್ರ್ಯದ ಓಟ**

ದೇಶ ವಿಭಜನೆಯ ಚಿತ್ರಣವು ಸಾಮಾನ್ಯ ಜನರ ಮೇಲೆ ಬೀರಿದ ಭಾವನಾತ್ಮಕ ಪರಿಣಾಮವನ್ನು ಬೊಳುವಾರ್ ಮಹಮ್ಮದ್ ಕುಂಞ ಅವರ ಈ ಕಾದಂಬರಿ ಅನಾವರಣಗೊಳಿಸುತ್ತದೆ. "ದೇಶ ವಿಭಜನೆ ಎನ್ನುವುದು ರಾಷ್ಟ್ರನಾಯಕರಿಗೆ ಕತ್ತರಿಯಲ್ಲಿ ಭೂಪಟವನ್ನು ಕತ್ತರಿಸಿದಷ್ಟು ಸುಲಭದ್ದು. ಆದರೆ ಅನುಭವಿಸುವ ಜನಕ್ಕೆ ಅದೊಂದು ಮಹಾ ನರಕ."[೨೨] ದೇಶ ಒಂದಾಗಿದ್ದಾಗ ಜನ ಸಾಮಾನ್ಯರು ಬಂಧು ಬಳಗದ ಪ್ರಜ್ಞೆಯಲ್ಲಿ ಬಾಳು ಕಟ್ಟಿಕೊಂಡಿದ್ದವರು, ದೇಶ ವಿಭಜನೆಯಾದ ತಕ್ಷಣ ಮಾನವೀಯತೆಯೆನ್ನುವುದು ಮರೆತು ಹೋಗಿ ದ್ವೇಷದ ಕಿಚ್ಚಿನಲ್ಲಿ ಎರಡೂ ಹೊತ್ತಿ ಉರಿಯುತ್ತವೆ. ಇಂತಹ ದುರಂತದ ನಡುವೆಯೂ ಧರ್ಮಾಂಧತೆಯನ್ನು ಮೀರಿ ಮೆರೆಯುವ ಚಾಂದ್‌ಆಲಿ ಎಂಬ ಯುವಕನ ಮಾನವೀಯತೆಯನ್ನು ಈ ಕಾದಂಬರಿ ಚಿತ್ರಿಸುತ್ತದೆ.

**ಸ್ವಾತಂತ್ರ್ಯ ಚಳುವಳಿ ಕುರಿತ ಕಾದಂಬರಿಕಾರರ ದೃಷ್ಟಿಕೋನಗಳು**

ಸ್ವಾತಂತ್ರ್ಯ ಚಳುವಳಿಗೆ ಸೇರಿದ ಕೃತಿಗಳ ಕುರಿತು ಒಟ್ಟಾರೆಯಾಗಿ ಹೇಳುವುದಾದರೆ ಧೋರಣೆಯಲ್ಲಿ ಕೃತಿಯಿಂದ ಕೃತಿಗೆ ಭಿನ್ನತೆ ಕಂಡುಬರುತ್ತದಾದರೂ ಈ ಎಲ್ಲಾ ಕಾದಂಬರಿಗಳು ಒಂದು ಆದರ್ಶಲೋಕವನ್ನು ಸೃಷ್ಟಿಸುತ್ತದೆ. ಸ್ವಾತಂತ್ರ್ಯ ಚಳುವಳಿಯ ಕುರಿತಂತೆ ರಚನೆಗೊಂಡಿರುವ ಬೆರಳೆಣಿಕೆಯ ಕೃತಿಗಳನ್ನು ಹೊರತುಪಡಿಸಿದರೆ ಬಹಳಷ್ಟು ಕೃತಿಗಳು ಸ್ವಾತಂತ್ರ್ಯ ದೊರಕಿದ ನಂತರವೇ ರಚನೆಗೊಂಡದ್ದು. ಈ ಕಾದಂಬರಿಕಾರರು ಕೆಲವರು ಸ್ವಾತಂತ್ರ್ಯ ಹೋರಾಟದಲ್ಲಿ ಪ್ರತ್ಯಕ್ಷವಾಗಿ ಭಾಗವಹಿಸಿದ್ದರೆ, ಇನ್ನು ಕೆಲವರು ಹೋರಾಟವನ್ನು ಹತ್ತಿರದಿಂದ ಬಲ್ಲವರು. ಸ್ವಾತಂತ್ರ್ಯ ದೊರಕಿದ ನಂತರ ರಾಜಕೀಯ ಮುಖಂಡರ ಮೇಲಾಟ, ಸ್ವಾರ್ಥ, ಅಧಿಕಾರಕ್ಕಾಗಿ ನಡೆಸುವ ಕುಟಿಲೋಪಾಯ ಇವೆಲ್ಲವನ್ನೂ ನೋಡಿದಾಗ ನಿಜವಾಗಿ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗಿಯಾದ ಜನಸಾಮಾನ್ಯರಿಗೆ, ಮಹಿಳೆಯರಿಗೆ ಸ್ವತಂತ್ರ ಭಾರತದಲ್ಲಿ ಮನ್ನಣೆ ಸಿಗಲಿಲ್ಲವೆಂಬ ಭಾವನಾತ್ಮಕ ಕೊರಗು ಕೆಲಸ ಮಾಡಿರುವುದನ್ನು ನಾವು ಕಾಣಬಹುದು. ವಿ.ಎಂ. ಇನಾಂದರ್ ಅವರ 'ವಿಜಯ ಯಾತ್ರೆ'ಯಲ್ಲಿ ಕೂಡಾ ನಾವು ಈ ಭಾವನೆಯನ್ನೇ ಕಾಣುತ್ತೇವೆ. ಅವರ 'ಮೂರಾಬಟ್ಟೆ' ಕಾದಂಬರಿಯ ಮುನ್ನುಡಿಯಲ್ಲಿ ಕಂಡು ಬರುವ ಹಾಗೆ ಗಾಂಧೀಜಿಯ ವ್ಯಕ್ತಿತ್ವದ ಪ್ರಭಾವ, ಪ್ರೇರಣೆಯು ಎಂತಹ ಬಡತನದಲ್ಲಿರುವ ವ್ಯಕ್ತಿಯ ಮೇಲೆ ಕೂಡ ಬಿದ್ದು ಅವರು ದೇಶಕ್ಕೋಸ್ಕರ ಚಿಂತಿಸುವ ಹಾಗೆ ಮಾಡುತ್ತದೆ. ಅಂತಹ ಸಾಮೂಹಿಕ ಪ್ರೇರಣೆಯನ್ನು ಯುವಕರಿಗೆ ನೀಡಿ ಮುನ್ನಡೆಸುವ ಮುಖಂಡರು ಇಂದು ಸ್ವತಂತ್ರ ಭಾರತದಲ್ಲಿ ಇಲ್ಲ ಎಂಬ ನೋವನ್ನೂ ನಾವು ಈ ಕಾದಂಬರಿಕಾರರ ಮನದಾಳದಲ್ಲಿ ಗುರುತಿಸಬಹುದು.

ಸ್ವಾತಂತ್ರ್ಯ ಹೋರಾಟವೆಂದರೆ ನಮಗೆ ಗೊತ್ತಿರುವ ಹಾಗೆ ಕೇವಲ ಗಾಂಧಿ–ತಿಲಕ್ ಮುಂತಾದವರಿಂದ ನಡೆದ ಹೋರಾಟ ಮಾತ್ರವಲ್ಲ; ಅಥವಾ ಕೇವಲ ಭಾರತ ದೇಶದಲ್ಲಷ್ಟೇ

ಇದು ಘಟಿಸಲಿಲ್ಲ, ಜಗತಿನಾದ್ಯಂತ ಈ ಹೋರಾಟ ಪ್ರತಿಧ್ವನಿಸಿತು. ಇಲ್ಲಿ ಪ್ರತಿಯೊಂದು ಸಣ್ಣಮಟ್ಟ ಪಾತ್ರಗಳು ಕೂಡಾ ಪ್ರಮುಖವಾದುವು ಎಂಬುದನ್ನು ಕೋ.ಚೆನ್ನಬಸಪ್ಪನವರ 'ಬೇಡಿ ಕಳಚಿತು, ದೇಶ ಒಡೆಯಿತು' ಕಾದಂಬರಿಯ ಮುನ್ನುಡಿಯಲ್ಲಿ ಹೇಳಿಕೊಂಡಿದ್ದಾರೆ. ಅಲ್ಲದೆ ಲೇಖಕರಿಗೆ ಈ ಕಾದಂಬರಿಗೆ ಅಗತ್ಯವಾಗಿ ಬೇಕಾದ ಸ್ವಾತಂತ್ರ್ಯ ಚಳುವಳಿಗೆ ಸಂಬಂಧಿಸಿದಂತೆ ಕೆಲವು ಪ್ರಮುಖ ಘಟನೆಗಳನ್ನು ಕುರಿತ ಇತಿಹಾಸವು ಅಮೇರಿಕದ ಟೆಕ್ಸಾಸ್ ವಿಶ್ವವಿದ್ಯಾನಿಲಯದಲ್ಲಿ ದೊರೆಯುತ್ತದೆ. ಆದುದರಿಂದ ಇದೊಂದು ಸ್ವಾತಂತ್ರ್ಯ ಹೋರಾಟದ ಸಮಗ್ರ ಚಿತ್ರಣವನ್ನು ನೀಡುವ ಸಮಗ್ರ ಕಾದಂಬರಿಯಾಗಿದೆ.

ಅ.ನ.ಕೃ ಅವರು ತಮ್ಮ 'ಅಮರ ಆಗಸ್ಟ್' ಕಾದಂಬರಿಯ ಮುನ್ನುಡಿಯಲ್ಲಿ ಕೂಡ ಸ್ವಾತಂತ್ರ್ಯ ಪೂರ್ವದಲ್ಲಿದ್ದ ಸೌಹಾರ್ದತೆ, ಐಕ್ಯತೆ, ಸಮಾನತೆ, ಇಂದು ನಮಗೆ ಅಗತ್ಯವಾಗಿದೆ. ಕರ್ನಾಟಕದಾದ್ಯಂತ ಸಹಸ್ರಾರು ತರುಣ ತರುಣಿಯರು ಸ್ವಾತಂತ್ರ್ಯ ಯಜ್ಞಕ್ಕೆ ತಮ್ಮ ಪ್ರಾಣವನ್ನೇ ಅರ್ಪಿಸಿದರು. ಮೈಲಾರ ಮಹಾದೇವಪ್ಪ, ವಾಲಿ ಚೆನ್ನಪ್ಪ, ಕಾನಕಾನ ಹಳ್ಳಿ ವೆಂಕಟರಾಮಯ್ಯ, ಬುರ್ಲಿ ಬಿಂದು ಮಾಧವ, ಮೊದಲಾದ ರಾಷ್ಟ್ರ ಸೇವಕರ ಸೇವೆಯನ್ನು ಗಮನದಲ್ಲಿಟ್ಟುಕೊಂಡು ಈ ಕೃತಿಯನ್ನು ರಚಿಸಲಾಗಿದೆ ಎಂಬ ಅಂಶವನ್ನು ಪ್ರಸ್ತಾಪಿಸಿದ್ದಾರೆ.

ನಿರಂಜನರ 'ಚಿರಸ್ಮರಣೆ' ಯ ಕುರಿತು ಅವರೇ ತಮ್ಮ ಮುನ್ನುಡಿಯಲ್ಲಿ ಹೇಳುವಂತೆ "ಇದೊಂದು ಕಾದಂಬರಿ. ಚರಿತ್ರೆಯಲ್ಲ. ಈ ಕೃತಿಯಲ್ಲಿ ನಾನು ಮಾಡಿರುವುದು ಕಯ್ಯೂರಿನ ಹೋರಾಟದ ಅಂತಸ್ಸತ್ವವನ್ನು– ಆ ಕಾಲಾವಧಿಯ ಚೇತನವನ್ನು– ಕಲೆಯನ್ನು ಸೆರೆಹಿಡಿಯುವ ಯತ್ನ. 'ಚಿರಸ್ಮರಣೆ'ಯ ಅನೇಕ ಪಾತ್ರಗಳು ನಿಜಜೀವನದಿಂದಲೇ ಕಾದಂಬರಿಯ ಪುಟಗಳಿಗೆ ನಡೆದುಬಂದಿವೆ. ಆದರೆ ಇಲ್ಲಿನ ಪಾತ್ರ ನಿರ್ವಹಣೆಗಾಗಿ ರಂಗಸಜ್ಜಿಕೆಯ ವೇಷಭೂಷಣಗಳನ್ನು ಅವು ನಿರಾಕರಿಸಿಲ್ಲ. ಇನ್ನು ಕೆಲವು ಪಾತ್ರಗಳನ್ನು ನಾನು ಕಡೆದದ್ದು ನನ್ನ ಕಲ್ಪನೆಯ ಮೂಸೆಯಲ್ಲಿ." ಇದೊಂದು ನೈಜ ಘಟನೆಯ ಚಿತ್ರಣವು ಕಲ್ಪನೆಯ ಮೂಸೆಯಲ್ಲಿ ಮೂಡಿಬಂದಿದೆ. ಅವರು 'ಕಲ್ಯಾಣಸ್ವಾಮಿ' ಕಾದಂಬರಿಯಲ್ಲಿ ಕೂಡ ೧೮೫೭ಕ್ಕೆ ಮೊದಲೇ ದಕ್ಷಿಣ ಕರ್ನಾಟಕದಲ್ಲಿ ಬ್ರಿಟಿಷರನ್ನು ಓಡಿಸುವ ಪ್ರಯತ್ನ ನಡೆದಿದೆ ಎಂದು ಮುಂದಿನ ಪೀಳಿಗೆಯವರಿಗೆ ತಿಳಿಯಪಡಿಸುವ ಕೊಂಡಿಯಾಗಿ ಕೆಲಸ ಮಾಡುವ ಉದ್ದೇಶವನ್ನು ಹೊಂದಿದ್ದಾರೆ.

ಭಾರತೀಸುತರು ತಮ್ಮ 'ಶತದ್ರುದಂಡೆಗೆ' ಕಾದಂಬರಿಯಲ್ಲಿ ಕೋಮುವಾದದಿಂದ ದೇಶ ಹೊತ್ತಿ ಉರಿಯುತ್ತಿದ್ದರೂ ಹಿಂದು ಮುಸ್ಲಿಮರ ನಡುವೆಯಿದ್ದ ಆತ್ಮೀಯ ಬೆಸುಗೆ, ಭಾವನಾತ್ಮಕ ಸಂಬಂಧವನ್ನು ನಿರೂಪಿಸುವ ಪ್ರಯತ್ನವನ್ನು ನಾವಿಲ್ಲಿ ಕಾಣಬಹುದು.

ಗೊರೂರು ರಾಮಸ್ವಾಮಿಯವರು ತಮ್ಮ 'ಮೆರವಣಿಗೆ' ಕಾದಂಬರಿಯನ್ನು ೧೯೪೨ನೇ ಹೋರಾಟದಲ್ಲಿ ಭಾಗವಹಿಸಿ ೧೫ ತಿಂಗಳು ಜೈಲಿನಲ್ಲಿದ್ದ ಕಾಲಾವಧಿಯಲ್ಲಿ ಬರೆದರು. ಅವರು ಈ ಕೃತಿಯಲ್ಲಿ ತಮ್ಮ ನೈಜ ಅನುಭವವನ್ನು ಪಡಿಮೂಡಿಸಿದ್ದಾರೆ. ಸೆರೆಮನೆಯ ಬಂಧನದ

ಸಂಕುಚಿತ ವಾತಾವರಣ, ಲಾಠಿಚಾರ್ಜು, ಉಪವಾಸ, ಅಧಿಕಾರಶಾಹಿಯ ಅಟ್ಟಹಾಸ, ಕೈಕೋಳ, ನಿಲುಬೇಡಿ, ತಿಕಡಿ ಅಥವಾ ಛಡಿಯೇಟು, ಫಾಸಿ- ಹೊರಗಡೆ ಬ್ರಿಟಿಷ್ ಆಡಳಿತದ ಸರ್ವಾಧಿಕಾರ, ಸೆರೆಯಾಳುಗಳಿಗೆ ತಮ್ಮ ಕುಟುಂಬದ ಚಿಂತೆ- ಈ ಎಲ್ಲಾ ವಿಚಾರಗಳನ್ನು ಚಿತ್ರಿಸುವ ಉದ್ದೇಶವನ್ನು ಈ ಕಾದಂಬರಿ ಈಡೇರಿಸಿದೆ ಎಂಬುದಾಗಿ ತಮ್ಮ ಮುನ್ನುಡಿಯಲ್ಲಿ ಹೇಳಿಕೊಂಡಿದ್ದಾರೆ.

ಕಟ್ಟೀಮನಿಯವರ 'ಮಾಡಿ ಮಡಿದವರು' ಕಾದಂಬರಿ ಜನಸಾಮಾನ್ಯರ ಹೋರಾಟದ ಚಿತ್ರಣವನ್ನು ನೀಡುತ್ತಲೇ ಎಲ್ಲೋ ಒಂದು ಕಡೆ ಕಾದಂಬರಿಕಾರರಿಗೆ ಕಾಂಗ್ರೆಸ್ಸಿನ ಹಿರಿಯ ಮುಖಂಡರ ಬಗೆಗಿದ್ದ ಅಸಮಧಾನವನ್ನು ಹೊರಹಾಕುವ ಪ್ರಯತ್ನ, ಹಾಗೂ ಹಿರಿಯ ಮುಖಂಡರು ೧೯೪೨ರಲ್ಲಿ ಕೆಲವರು ಜೈಲಿನಲ್ಲಿದ್ದರೆ ಇನ್ನು ಕೆಲವರು ಸರಕಾರಿ ಅಧಿಕಾರಿಗಳ ಮನೆಯಲ್ಲಿಯೇ ಹಾಯಾಗಿದ್ದರು. ಆದರೆ ಹೋರಾಟವನ್ನು ನಿಜವಾಗಿಯೂ ಮನ್ನಡಿಸಿದವರು ಹಳ್ಳಿಯ ರೈತರು ಹಾಗೂ ಸಾಮಾನ್ಯ ಜನರು ಎಂಬ ನಿಲುವನ್ನು ನಾವು ಕಾಣಬಹುದು.

ವಿ.ಎಂ ಇನಾಂದರ್ ಅವರ 'ವಿಜಯ ಯಾತ್ರೆ' ಮತ್ತು ಶ್ರೀರಂಗರ 'ಪುರುಷಾರ್ಥ ಇವೆರಡೂ ಕಾದಂಬರಿಗಳಲ್ಲಿ ಕಂಡು ಬರುವ ವಿಶೇಷವೆಂದರೆ ಇಲ್ಲಿಯ ಕಥಾನಾಯಕರು ೧೯೪೭ ಸ್ವಾತಂತ್ರ್ಯ ದಿನಾಚರಣೆಯಂದೇ ಸ್ವತಂತ್ರ ಭಾರತದ ಭವಿಷ್ಯವನ್ನು ಮನಗಾಣುತ್ತಾರೆ. ನಿಜವಾದ ಹೋರಾಟಗಾರರಿಗೆ ಸ್ವತಂತ್ರ ಭಾರತದಲ್ಲಿ ಮನ್ನಣೆ ಸಿಗುವುದಿಲ್ಲೆಂಬ ಕೊರಗು ಇಬ್ಬರು ನಾಯಕರನ್ನೂ ಕಾಡುತ್ತದೆ. ಆ ಇಬ್ಬರೂ ನಾಯಕರು ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿ ತಮ್ಮ ಆರೋಗ್ಯವನ್ನು ಕಳೆದುಕೊಂಡಿದ್ದಾರೆ. ಭಾರತ ಸ್ವತಂತ್ರವಾದ ದಿನವೇ ಆ ಎರಡೂ ಕಾದಂಬರಿಯ ನಾಯಕರು ಇಹಲೋಕದ ಯಾತ್ರೆಯನ್ನು ಮುಗಿಸುತ್ತಾರೆ. ಇಬ್ಬರು ಲೇಖಕರ ಮನದಾಳದಲ್ಲಿ ಕೂಡ ಸ್ವತಂತ್ರ ಭಾರತದಲ್ಲಿ ನಿಜವಾದ ಹೋರಾಟಗಾರರಿಗೆ, ದೇಶಕ್ಕೋಸ್ಕರ ತಮ್ಮ ಬದುಕನ್ನೇ ತ್ಯಾಗ ಮಾಡಿದವರಿಗೆ ಮನ್ನಣೆ ದೊರಕುವುದಿಲ್ಲ; ಅನುಕೂಲ ಪರಿಸ್ಥಿತಿಯಲ್ಲಿ ಮುಂದೆ ಬಂದು ಹೋರಾಟಗಾರರಂತೆ ಸೋಗು ಹಾಕಿಕೊಂಡವರು ಸ್ವತಂತ್ರಭಾರತದಲ್ಲಿ ಮನ್ನಣೆಗೊಳಗಾಗುತ್ತಾರೆಂಬ ನೋವು ಮಡುಗಟ್ಟಿದಂತೆ ಕಂಡುಬರುತ್ತದೆ.

ಸಾಮಾನ್ಯವಾಗಿ ಸ್ವಾತಂತ್ರ್ಯ ಹೋರಾಟಕ್ಕೆ ಸಂಬಂಧಿಸಿದಂತೆ ರಚಿತವಾದ ಎಲ್ಲಾ ಕಾದಂಬರಿಕಾರರ ದೃಷ್ಟಿಕೋನದಲ್ಲಿ ಮುಖ್ಯವಾಗಿ ಕಂಡು ಬರುವ ಅಂಶಗಳೆಂದರೆ ಇತಿಹಾಸದಲ್ಲಿ ಗೌಣವಾದ ವಿಷಯಗಳನ್ನು ಮುಂಚೂಣಿಗೆ ತರುವುದು, ಕೆಲವೊಂದು ತ್ಯಾಗ ಬಲದಾನಗಳಿಗೆ ಇರಬಹುದಾದ ಪ್ರೇರಣೆ ಮತ್ತು ಪ್ರಭಾವಗಳನ್ನು ಗುರುತಿಸುವುದು, ಸ್ವಾತಂತ್ರ್ಯ ಚಳುವಳಿಯನ್ನು ಕನ್ನಡ ಸಹೃದಯರಿಗೆ ಆತ್ಮೀಯವಾಗಿಸುವುದು, ಸಂಕ್ರಮಣಾವಸ್ಥೆಯೊಂದು ಸಮಾಜದಲ್ಲಿ ಉಂಟುಮಾಡಿದ ಬದಲಾವಣೆ ಮತ್ತು ತಲ್ಲಣಗಳನ್ನು ಗುರುತಿಸುವುದಾಗಿದೆ. ಇದೊಂದು ಜನಸಾಮಾನ್ಯರ ಹಾಗೂ ಮಹಿಳೆಯರ ಹೋರಾಟ. ಆದರೆ ಸ್ವತಂತ್ರ ಭಾರತದಲ್ಲಿ ಅವರಿಗೆ ಸಿಗಬೇಕಾದ ಮನ್ನಣೆಯಾಗಲಿ. ಸ್ಥಾನಮಾನವಾಗಲಿ, ಗೌರವವಾಗಲಿ ದೊರಕಲಿಲ್ಲವೆಂಬ

ನೋವನ್ನು ಕಾಣುತ್ತೇವೆ. ಇನ್ನು ಕೆಲವು ಕಾದಂಬರಿಗಳು ಸ್ವಾತಂತ್ರ್ಯ ಹೋರಾಟದಲ್ಲಿ ಕರ್ನಾಟಕದ ಸಾಂಸ್ಕೃತಿಕ ಚರಿತ್ರೆ ಎಲ್ಲೋ ಒಂದು ಕಡೆ ಮರೆಯಾಗಿದೆ. ಅದನ್ನು ಕಾದಂಬರಿಗಳ ಮೂಲಕ ಪುನರ್ ನಿರ್ಮಿಸುವ ಕೆಲಸವನ್ನು ಮಾಡುವ ಒಂದು ನಿಲುವಿಗೆ ಬದ್ಧವಾಗಿರುವಂತೆ ಕಂಡು ಬರುತ್ತದೆ. ಸಾಮೂಹಿಕ ಪ್ರೇರಣೆಯನ್ನು ಉಂಟುಮಾಡಿದ ಗಾಂಧೀಜಿಯ ವ್ಯಕ್ತಿತ್ವದ ತೇಜಸ್ಸು ಸ್ವತಂತ್ರ ಭಾರತದಲ್ಲಿ ನಿಧಾನವಾಗಿ ಮರೆಯಾಗುತ್ತಿರುವ ನೋವು ಹಾಗೂ ಅದನ್ನು ನಮ್ಮ ಮುಂದಿನ ಪೀಳಿಗೆಗೆ ರವಾನಿಸಬೇಕಾದ ಅನಿವಾರ್ಯತೆಯು ತಮ್ಮ ನೈತಿಕ ಹೊಣೆಗಾರಿಕೆ ಎಂಬ ಒಂದು ಧೋರಣೆ ಕೂಡ ಈ ಎಲ್ಲಾ ಕಾದಂಬರಿಗಳ ಒಟ್ಟು ಅಧ್ಯಯನದಿಂದ ನಮಗೆ ತಿಳಿದುಬರುತ್ತವೆ.

*****

## ಟಿಪ್ಪಣಿಗಳು

೧. ಶಿವರಾಮ ಪಡಿಕ್ಕಲ್, ನಾಡು-ನುಡಿಯ ರೂಪಕ, ಪು. ೩೫
೨. ಶಿವರಾಮ ಕಾರಂತ, ಔದಾರ್ಯದ ಉರುಳಲ್ಲಿ, ಪು- ೩೮
೩. ವಾಸುದೇವಾಚಾರ್ಯ ಬುರ್ಲಿ , ಸೆರೆಮನೆಯ ಶೂರ ಪು. ೯೦
೪. ಶ್ರೀರಂಗ, ಪುರುಷಾರ್ಥ ಪು-೨
೫. ಕೃಷ್ಣಮೂರ್ತಿ ಪುರಾಣಿಕ, ಹಬ್ಬಿದ ಬಳ್ಳಿ, ಪು- ೧೩೬
೬. ನಿರಂಜನ, ಚಿರಸ್ಮರಣೆ ಪು- ೫೦
೭. ಮತ್ತೂರು ಕೃಷ್ಣಮೂರ್ತಿ, ವೀರಪಾಂಡ್ಯ ಕಟ್ಟಬೊಮ್ಮ, ಪು. ಮುನ್ನುಡಿ
೮. ಮತ್ತೂರು ಕೃಷ್ಣಮೂರ್ತಿ, ವೀರಪಾಂಡ್ಯ ಕಟ್ಟಬೊಮ್ಮ ಪು-೪೪
೯. ಪ.ಸು.ಭಟ್ಟ ಎಂ.ಎ. ಆತ್ಮಾರ್ಪಣೆ ಪು- ೯೮
೧೦.ರಾವ್ ಬಹದ್ದೂರು, ಕನಸು-ನನಸು ಪು- ೧೦೮
೧೧.ಭಾರತೀಸುತ, ಶತದ್ರು ದಂಡೆಗೆ ಪು.ಸಂ- ೨೬೩
೧೨.ಭಾರತೀಸುತ, ಶತದ್ರು ದಂಡೆಗೆ ಪು.ಸಂ- ೨೬೩
೧೩.ಬೊಳುವಾರು ಮಹಮ್ಮದ ಕುಂಞ, ಸ್ವಾತಂತ್ರ್ಯದ ಓಟ ಪು- ೩೪

# ಅಧ್ಯಾಯ - ೪

# ಕನ್ನಡ ಕಾದಂಬರಿಗಳಲ್ಲಿ ಸ್ವಾತಂತ್ರ್ಯ ಚಳವಳಿಯ ವಿವಿಧ ನಿರೂಪಣೆ

ಹಲವಾರು ಕನ್ನಡ ಸಾಹಿತಿಗಳು ಒಂದಲ್ಲ ಒಂದು ವಿಧದಲ್ಲಿ ಸ್ವಾತಂತ್ರ್ಯ ಚಳುವಳಿಯ ಭಾಗವಾಗಿದ್ದರು. ಬಸವರಾಜ ಕಟ್ಟೀಮನಿ, ಶಿವರಾಮ ಕಾರಂತ, ಗೊರೂರು ರಾಮಸ್ವಾಮಿ ಅಯ್ಯಂಗಾರ್, ವಿ.ಎಂ ಇನಾಂದರ್ ಮುಂತಾದವರು ಸ್ವಾತಂತ್ರ್ಯಹೋರಾಟವನ್ನು ಹತ್ತಿರದಿಂದ ಕಂಡದ್ದು ಮಾತ್ರವಲ್ಲ, ಸ್ವತಃ ಈ ಹೋರಾಟದಲ್ಲಿ ಭಾಗವಹಿಸಿದ್ದರು. ಜೈಲು ಶಿಕ್ಷಯನ್ನು ಕೂಡ ಅನುಭವಿಸಿದ್ದರು. ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರ 'ಮೆರವಣಿಗೆ' ಎಂಬ ಕಾದಂಬರಿಯು ೧೯೪೩ರಲ್ಲಿ ಅವರು ಜೈಲಿನಲ್ಲಿ ಅನುಭವಿಸಿದ ಅವರ ಅನುಭವ ಕಥಾನಕವಾಗಿದೆ. ಈ ಕಾದಂಬರಿಗಳು ಒದಗಿಸುವ ಹೋರಾಟದ ಚಿತ್ರಣಗಳು ಕೇವಲ ಕಾಲ್ಪನಿಕವಾದುದಲ್ಲ; ಸತ್ಯ ಘಟನೆಯನ್ನು ಆಧರಿಸಿದುದು. ಆದುದರಿಂದ ಈ ಮಾಹಿತಿಗಳು ಇತಿಹಾಸದ ಅಧ್ಯಯನದ ದೃಷ್ಟಿಯಿಂದಲೂ ಪ್ರಮುಖವಾದುದು.

ಇತಿಹಾಸದಲ್ಲಿ ಉಲ್ಲೇಖಗೊಳ್ಳದೆ ಇರುವ ಹಲವಾರು ಸಾಮಾನ್ಯ ಜನರ ಅಸಾಮಾನ್ಯ ತ್ಯಾಗ, ಹೋರಾಟದ ಚಿತ್ರಣವು ನಮಗೆ ಈ ಕಾದಂಬರಿಗಳ ಅಧ್ಯಯನದಿಂದ ತಿಳಿದುಬರುತ್ತದೆ. ಹೋರಾಟದ ವಿವಿಧ ಮಜಲುಗಳನ್ನು ಈ ಕಾದಂಬರಿಗಳು ಚಿತ್ರಿಸಿವೆ. ಜನಸಾಮಾನ್ಯರ ವಿಭಿನ್ನ ಧೋರಣೆಗಳು, ಹೋರಾಟ ಪಡೆದುಕೊಳ್ಳುತ್ತಿದ್ದ ತಿರುವುಗಳನ್ನು ಈ ಕಾದಂಬರಿಗಳು ಪ್ರತಿಬಿಂಬಿಸುತ್ತವೆ. ಭಾರತದಲ್ಲಿ ಮಾತ್ರವಲ್ಲದೆ ನಮ್ಮ ಸ್ವಾತಂತ್ರ್ಯ ಹೋರಾಟದ ಕಹಳೆಯು

ವಿದೇಶದಲ್ಲೂ ಮೊಳಗಿದ ರೀತಿಯನ್ನು ಕೊ. ಚೆನ್ನಬಸಪ್ಪನವರ 'ಬೇಡಿ ಕಳಚಿತು ದೇಶ ಒಡೆಯಿತು' ಕಾದಂಬರಿಯು ಸಮರ್ಥವಾಗಿ ಚಿತ್ರಿಸುತ್ತದೆ. ಹೆಣ್ಣುಮಕ್ಕಳು ಕೂಡಾ ಈ ಹೋರಾಟದ ಪ್ರಮುಖ ಅಂಗವಾಗಿದ್ದರು. ಅಷ್ಟು ಮಾತ್ರವಲ್ಲದೆ ನೇರವಾಗಿ ಹೋರಾಟದಲ್ಲಿ ಭಾಗವಹಿಸಿದವರಷ್ಟೇ ಅಲ್ಲದೆ ತಮ್ಮ ಮಗನನ್ನೋ, ಗಂಡನನ್ನೋ, ಸಹೋದರನನ್ನೋ ದೇಶಸೇವೆಗೆ ಅರ್ಪಿಸಿ ತಾವು ಕಷ್ಟವನ್ನು ಅನುಭವಿಸಿದ ವಯೋವೃದ್ಧರ ಹಾಗೂ ನಮ್ಮ ಹೆಣ್ಣುಮಕ್ಕಳ ತ್ಯಾಗವೇನೂ ಕಡಿಮೆಯಾದುದಲ್ಲ ಎಂಬ ಸತ್ಯವು ಈ ಕಾದಂಬರಿಗಳ ಅಧ್ಯಯನದಿಂದ ತಿಳಿದು ಬರುತ್ತದೆ. ದೇಶ ವಿಭಜನೆಯ ದುರಂತ, ಹರಿದ ರಕ್ತದ ಹೊಳೆ, ಅತ್ಯಾಚಾರ, ಲಕ್ಷೋಪಲಕ್ಷ ಮಂದಿಯ ಮಾರಣಹೋಮ, ಬ್ರಿಟಿಷರು ಹೊತ್ತಿಸಿದ ಕೋಮು ದ್ವೇಷಾಗ್ನಿಯು ಇಂದು ಕೂಡ ಉರಿಯುತ್ತಲೇ ಇರುವ ಹಲವಾರು ಸತ್ಯಗಳನ್ನು ಕಾದಂಬರಿಗಳು ಅನಾವರಣಗೊಳಿಸುತ್ತದೆ.

ದುರಂತಗಳನ್ನು ಮತ್ತೆ ಎದುರಿಸಬೇಕಾಗುತ್ತದೆ' ಎಂಬ ಉಕ್ತಿಯೊಂದಿದೆ. ಇತಿಹಾಸವೆಂಬುದು ನಮಗೊಂದು ರೀತಿಯಲ್ಲಿ ಮಾರ್ಗಸೂಚಿಯಿದ್ದಂತೆ. ಆದುದರಿಂದ ಸ್ವಾತಂತ್ರ್ಯದಂತಹ ಒಂದು ಮಹಾನ್ ಘಟನೆಯ ಇತಿಹಾಸವನ್ನು ವಿವಿಧ ಆಕರಗಳಿಂದ ಮತ್ತು ವಿವಿಧ ಮಜಲುಗಳಿಂದ ತಿಳಿಯುವುದು ಅತ್ಯಗತ್ಯ. ಕಾದಂಬರಿಯೆಂಬ ಜನಪ್ರಿಯ ಸಾಹಿತ್ಯ ಪ್ರಕಾರವು ಸ್ವಾತಂತ್ರ್ಯ ಹೋರಾಟದ ವಿವಿಧ ಘಟನೆಗಳನ್ನು ಸಾಮಾನ್ಯ ಜನರಿಗೆ ಅರ್ಥವಾಗುವಂತಹ ಶೈಲಿಯಲ್ಲಿ ನಿರೂಪಿಸಿವೆ. ಆದುದರಿಂದ ಸ್ವಾತಂತ್ರ್ಯ ಚಳವಳಿಯ ಒಟ್ಟಂದವನ್ನು ಗ್ರಹಿಸುವಲ್ಲಿ ಈ ಅಧ್ಯಯನವು ಅತ್ಯಂತ ಮಹತ್ವಪೂರ್ಣವಾದುದು.

ಸ್ವಾತಂತ್ರ್ಯ ಚಳುವಳಿಯಂತಹ ಮಹಾನ್ ಘಟನೆಯೊಂದಕ್ಕೆ ಜನಸಾಮಾನ್ಯರು, ಮಹಿಳೆಯರು, ಆಬಾಲವೃದ್ಧರಾದಿಯಾಗಿ ಪ್ರತಿಯೊಬ್ಬರು ಸ್ಪಂಧಿಸಿದ ಬಗೆಯನ್ನು ಹಲವಾರು ಕಾದಂಬರಿಗಳು ತೆರೆದಿಡುತ್ತವೆ. ಭಾರತದಂತಹ ಹಲವು ಜಾತಿ, ಮತ, ಧರ್ಮಗಳಿರುವ ದೇಶವನ್ನು ಒಗ್ಗೂಡಿಸುವುದು ಕಷ್ಟಸಾಧ್ಯವಾದ ಮಾತು. ಆದರೆ ೧೯೨೦ರಲ್ಲಿ ಸ್ವಾತಂತ್ರ್ಯ ಚಳವಳಿಗೆ ಗಾಂಧೀಜಿಯ ಪ್ರವೇಶವಾದ ನಂತರ ೧೯೪೭ರಲ್ಲಿ ಸ್ವಾತಂತ್ರ್ಯ ದೊರಕುವವರೆಗೂ ಗಾಂಧೀಜಿ ದೇಶದ ಏಕಮಾತ್ರ ನಾಯಕರಾಗಿ ಮೆರೆದುದು ವಿಶೇಷವೇ ಸರಿ.

ಸ್ವಾತಂತ್ರ್ಯ ಚಳುವಳಿಯ ಒಡಲಲ್ಲಿ ನೂರಾರು ಹೋರಾಟದ ಕತೆಗಳು, ಭಿನ್ನಾಭಿಪ್ರಾಯದ ನೆಲೆಗಳು, ಸಮಾಜ ಸುಧಾರಣೆ, ನವಸಾಕ್ಷರತೆ, ಭಿನ್ನಮತ ಇವೆಲ್ಲವೂ ಅಡಗಿವೆ. ಈ ಕುರಿತಂತೆ ಲಭ್ಯವಿರುವ ಪ್ರತಿಯೊಂದು ಕಾದಂಬರಿಯು ಸಹ ಇಂತಹ ಒಂದು ಐತಿಹಾಸಿಕ ಕಥಾನಕವನ್ನು ತೆರೆದಿಡುತ್ತವೆ.

## ಸ್ವಾತಂತ್ರ್ಯ ಚಳುವಳಿ ಕುರಿತ ಕಾದಂಬರಿಗಳಲ್ಲಿ ರಾಷ್ಟ್ರೀಯ ಪ್ರಜ್ಞೆ

ಕಾದಂಬರಿಯ ಉಗಮ ಹಾಗೂ ರಾಷ್ಟ್ರದ ಪರಿಕಲ್ಪನೆ ಇವು ವಸಾಹತುಶಾಹಿ ಆಡಳಿತದ ಕೂಸೆಂದು ಹೇಳಬಹುದು. ಆದುದರಿಂದ ಇವೆರಡಕ್ಕೂ ಪರಸ್ಪರ ಅಂತಃಸಂಬಂಧವಿದೆ. ರಾಷ್ಟ್ರದ ಪರಿಕಲ್ಪನೆಯು ಅಂದಿನ ಜನಮನದಲ್ಲಿ ಒಂದು ಬಗೆಯ ಪುಳಕ ಹಾಗೂ ರೋಮಾಂಚನವನ್ನುಂಟುಮಾಡಿತು. ಅದೊಂದು ಸಾಧಿಸಲೇ ಬೇಕಾಗಿದ್ದ ಗುರಿಯಾಗಿತ್ತು. ಆ ಕಾಲಘಟ್ಟದಲ್ಲಿ ರಚನೆಯಾದ ಕಾದಂಬರಿಗಳು ಕೂಡಾ ರಾಷ್ಟ್ರೀಯತೆಯ ಪರಿಕಲ್ಪನೆ ಹಾಗೂ ಅದನ್ನು ಪಡೆದುಕೊಳ್ಳಲು ಜನರು ಮಾಡಿದ ತ್ಯಾಗವನ್ನು ತನ್ನೊಡಲಲ್ಲಿಟ್ಟುಕೊಂಡೇ ರಚಿಸಲ್ಪಟ್ಟವು. ಆದುದರಿಂದ ಸ್ವಾತಂತ್ರ್ಯ ಚಳುವಳಿಯನ್ನು ಆಧರಿಸಿ ರಚಿತವಾದ ಎಲ್ಲಾ ಕಾದಂಬರಿಗಳಲ್ಲಿ ಒಂದಲ್ಲ ಒಂದು ರೀತಿಯಲ್ಲಿ ರಾಷ್ಟ್ರೀಯತೆಯ ಪರಿಕಲ್ಪನೆಯು ನಿರ್ವಚಿಸಲ್ಪಟ್ಟದ್ದನ್ನು ನಾವು ಕಾಣಬಹುದು.

### ಹೆಜ್ಜೆ

ವ್ಯಾಸರಾಯ ಬಲ್ಲಾಳರ 'ಹೆಜ್ಜೆ' ಕಾದಂಬರಿಯಲ್ಲಿ ಗಾಂಧೀಜಿಯ ದರ್ಶನ ಹಾಗೂ ತನ್ನ ಚಿಕ್ಕಪ್ಪ ಗಾಂಧಿಭಕ್ತ ಪಚ್ಚೆ ಶಂಕರನ ಸಹವಾಸವು ಸಾವಿತ್ರಿಯಲ್ಲಿ ರಾಷ್ಟ್ರೀಯ ಪ್ರಜ್ಞೆಯನ್ನು ಜಾಗೃತಗೊಳಿಸುತ್ತದೆ. ಮಾವ ಶ್ರೀಕಂಠಶಾಸ್ತ್ರಿ ಸಂಪ್ರದಾಯಸ್ಥ ಅರ್ಚಕರು. ವೈದಿಕ ತತ್ವಗಳನ್ನು ಚಾಚೂ ತಪ್ಪದೆ ಪಾಲಿಸುತ್ತಿದ್ದವರು. ಗಾಂಧಿಯೊಬ್ಬನು ತಮ್ಮ ಧರ್ಮವನ್ನು ಹಾಳುಮಾಡಲು ಬಂದವನೆಂಬುದು ಅವರ ಭಾವನೆ. ಅವಳ ಗಂಡ ವಿದ್ಯಾಧರನನ್ನು ಹೊರತುಪಡಿಸಿ ಉಳಿದವರು ಯಾರು ಕೂಡ ಗಾಂಧಿ ತತ್ವವನ್ನು ಒಪ್ಪಿದವರಲ್ಲ. ಇಂತಹ ಪರಿಸರದಲ್ಲಿಯೂ ಸಾವಿತ್ರಿ ಆ ಊರಿನ ಹರಿಜನರ ವಿದ್ಯಾಭ್ಯಾಸ, ಅವರ ಬದುಕಿನ ಬದಲಾವಣೆಗೋಸ್ಕರ ಶ್ರಮಿಸುತ್ತಾಳೆ. ಗಾಂಧಿವಾದದಿಂದ ಪ್ರೇರಿತಳಾದ ಅವಳ ಮಾತಿನಲ್ಲಿ ದೇಶಪ್ರೇಮ ಹಾಗೂ ಗಾಂಧೀಜಿಯ ಬಗೆಗಿನ ಅಭಿಮಾನವು ಕಾಣುತ್ತದೆ. ಶಾಸ್ತ್ರಿಗಳ ಮನೆಯಿಂದ ತನಗೆ ಮದುವೆಯ ಪ್ರಸ್ತಾಪ ಬಂದಾಗ ಅವಳು ಕೊಡುವ ಉತ್ತರವು ದೇಶಪ್ರೇಮ ಹಾಗೂ ಗಾಂಧೀಜಿಯ ಬಗೆಗಿದ್ದ ಗೌರವವನ್ನು ಪ್ರತಿನಿಧಿಸುತ್ತದೆ- "ನನಗೀಗ ಮದುವೆಯೇ ಬೇಡ ಅಪ್ಪಾ... ಏನು ಅವಸರ ಮಾಡ್ತಿದ್ದೀರ? ನನಗೆ ಕಾಲೇಜಿಗೆ ಹೋಗಬೇಕೂಂತಿದೆ... ನೀವು ಮಂಗಳೂರಿಗೆ ಕಳುಹಿಸಿ ಎಲ್ಲೆಲ್ಲೋ ಇರಿಸಿ ಕಾಲೇಜು ಓದಿಸುವ ಶಕ್ತಿ ನನಗಿಲ್ಲಾಂತಿದ್ರಿ, ಹೀಗಾಗಿ ಮನೆಯಲ್ಲೇ ಒಂದು ವರ್ಷ ಕಳೆದೆ. ಹಿಂದಿ ಮುಂದುವರೀತಾ ಇದೆ. ಆದರೆ ಅಪ್ಪಾ, ನನಗೆ ಸ್ವಲ್ಪ ಅವಕಾಶ ಕೊಡಿ. ನನಗೆ ಒಮ್ಮೆ ಸಾಬರಮತಿಗೆ ಹೋಗಬೇಕೂಂತಿದೆ- ಗಾಂಧೀಜಿಯನ್ನು ನೋಡೋದಕ್ಕೆ. ನೆಹರು ಆತ್ಮಚರಿತ್ರೆ ಓದ್ತಾ ಇದ್ದೇನೆ ಅಪ್ಪಾ. ಅವರನ್ನೂ ಸಾಧ್ಯವಾದರೆ ನೋಡಬೇಕೂಂತಿದೆ. ಸರೋಜಿನಿ ನಾಯ್ಡು ಅವರ ಪದ್ಯ ಇಂಗ್ಲೀಷ್ ಲೆಸನ್ನಲಿತ್ತು. ಇವರನ್ನೆಲ್ಲಾ ನೋಡೋ ಆಸೇನೂ ಇದೆ. ಅಪ್ಪಾ, ನನಗೆ ಮುಂದೆ ಕಲೀಬೇಕೂಂತಿದೆ... ನನ್ನ ದೇಶಕ್ಕಾಗಿ ನಾನು ಏನಾದರೂ ಮಾಡಬೇಕೂಂತಿದೆ. ನೀವು ನನ್ನನ್ನು ಮದುವೆಯಾಗಿ ಆ ಗೊಡ್ಡು ವೈದಿಕರ ಮನೆಯಲ್ಲಿ ಬಿದ್ದುಕೊಂಡಿರು ಅಂತೀರಾ.. ಬೇಡ ಅಪ್ಪಾ, ನನಗೆ ಮದುವೆ ಬೇಡ.."[೧] ಸಾವಿತಿಯಂತಹ ಹೆಣ್ಣುಮಗಳಲ್ಲಿ ಕೂಡ ಗಾಂಧಿತತ್ವದ ಪ್ರೇರಣೆಯಿಂದಾಗಿ ರಾಷ್ಟ್ರೀಯ ಪ್ರಜ್ಞೆ

ಮೊಳಕೆಯೊಡೆಯುವುದನ್ನು ನಾವು ಕಾಣಬಹುದು. ಸಾವಿತ್ರಿಯಿಂದಾಗಿ ಅವಳ ಗಂಡ ವಿದ್ಯಾಧರನಲ್ಲಿಯೂ ದೇಶಪ್ರೇಮ ಚಿಗುರುತ್ತದೆ. ಆ ದೇಶಪ್ರೇಮದ ಕಿಚ್ಚಿನಲ್ಲಿ ತನ್ನ ಗಂಡನೇ ಬಲಿಯಾದರೂ ಆಕೆ ಎದೆಗುಂದುವುದಿಲ್ಲ. ಕೊನೆಗೆ ಅವಳ ಮಾವನೂ ಗಾಂಧಿಟೊಪ್ಪಿಯನ್ನು ಹಾಕಿಕೊಂಡು ಮುಂಬಯಿಗೆ ಬರುತ್ತಾರೆ. ಸಾವಿತ್ರಿಯಿಂದ ಆರಂಭವಾದ ರಾಷ್ಟ್ರೀಯತೆಯ ಗಾಳಿಯು ಕೊನೆಗೆ ಕಟ್ಟಾ ಸಂಪ್ರದಾಯವಾದಿಯಾದ ಶ್ರೀಕಂಠ ಶಾಸ್ತ್ರಿಗಳ ಮನಸ್ಸನ್ನು ಪರಿವರ್ತಿಸುವ ಸಂಕೇತವಾಗಿ ಇಲ್ಲಿ ಗಾಂಧಿ ಟೋಪಿ ಮಹತ್ವವನ್ನು ಪಡೆದುಕೊಳ್ಳುತ್ತದೆ.

**ಮಾಡು ಇಲ್ಲವೇ ಮಡಿ**

ಬಸವರಾಜ ಕಟ್ಟೀಮನಿಯವರ 'ಮಾಡು ಇಲ್ಲವೇ ಮಡಿ' ಕಾದಂಬರಿಯಲ್ಲಿ ಹೇಮಾಳಂತಹ ಹೆಣ್ಣುಮಗಳು ಕೂಡ ಕಾಲೇಜನ್ನು ತ್ಯಜಿಸಿ ೧೯೪೨ರ ಚಳುವಳಿಗೆ ಧುಮುಕುತ್ತಾಳೆ. ಶೇಖರಪ್ಪ, ವಿಶ್ವನಾಥ, ಸಂಗಪ್ಪ, ಮುದುಕ ಬಾಳಪ್ಪ ಕೂಡಾ ತಮ್ಮ ಬದುಕನ್ನು ಚಳುವಳಿಗೆ ಅರ್ಪಿಸಿಕೊಳ್ಳುತ್ತಾರೆ. ಬೈಲಹೊಂಗಲದಲ್ಲಿ ಇವರಿಂದಾಗಿ ಚಳುವಳಿ ತೀವ್ರ ಸ್ವರೂಪವನ್ನು ಪಡೆದುಕೊಳ್ಳುತ್ತದೆ. ಬ್ರಿಟಿಷರ ವಿರುದ್ಧ ಹೋರಾಡಿದ ಕಿತ್ತೂರ ಚೆನ್ನಮ್ಮಳ ಸ್ಮರಣೆ ಮಾತ್ರದಿಂದಲೇ ಅವರಲ್ಲಿರುವ ರಾಷ್ಟ್ರೀಯ ಭಾವವು ಉದ್ದೀಪನಗೊಳ್ಳುತ್ತದೆ. ಕಿತ್ತೂರಿನಲ್ಲಿ ೧೦೦-೧೫೦ ವರ್ಷಗಳ ಹಿಂದಿನ ಹೋರಾಟದ ಕಿಡಿಯೊಂದು ಉರಿಯುತ್ತಲೇ ಇದ್ದು ಮುಂದಿನ ಹೋರಾಟಗಾರರಿಗೆ ಪ್ರೇರಣೆಯಾಗಿತ್ತು. ಐತಿಹಾಸಿಕ ಘಟನೆ, ತಮ್ಮ ತಾಯ್ನೆಲದ ಕುರಿತಾದ ಅಭಿಮಾನವೊಂದು ಈ ಚಳುವಳಿಗಾರರ ಪ್ರೇರಣಾಶಕ್ತಿಯಾಗಿ ಇಲ್ಲಿ ಕೆಲಸ ಮಾಡುವುದನ್ನು ನಾವು ಕಾಣುತ್ತೇವೆ. ಕಲ್ಲಾಪುರದ ಸ್ವಾಮೀಜಿ ಕೂಡಾ ಚಳುವಳಿಗಾರರಿಗೆ ಆಶ್ರಯವನ್ನು ನೀಡುತ್ತಾರೆ. ಸಂಸಾರ ವ್ಯಾಮೋಹದಿಂದ ಮುಕ್ತರಾಗಿ ಸನ್ಯಾಸ ಸ್ವೀಕರಿಸಿದರೂ ದೇಶದ ಕುರಿತಾದ ಪ್ರೀತಿಯಿಂದ ಮುಕ್ತರಾಗುವುದು ಅವರಿಂದ ಸಾಧ್ಯವಾಗಲಿಲ್ಲ.

ಹೇಮಾಳೊಂದಿಗೆ ಕರಪತ್ರವನ್ನು ಹಂಚಲು ಲಂಬಾಣಿ ಹೆಂಗಸರು ಸಹಕರಿಸುತ್ತಾರೆ. ಅನಕ್ಷರಸ್ಥರಾದ ಈ ಹೆಣ್ಣುಮಕ್ಕಳಿಗೆ ದೇಶದ ಆಗು-ಹೋಗುಗಳ ನಿಖರವಾದ ತಿಳುವಳಿಕೆಯಿಲ್ಲದಿದ್ದರೂ ಇಲ್ಲಿ ದೇಶಪ್ರೇಮವೆಂಬ ಗುಪ್ತವಾಹಿನಿಯೊಂದು ಎಲ್ಲರ ಹೃದಯದಲ್ಲಿ ಸದ್ದಿಲ್ಲದೆ ಪ್ರವಹಿಸುವುದನ್ನು ನಾವು ಕಾಣುತ್ತೇವೆ.

**ಸ್ವಾತಂತ್ರ್ಯದೆಡೆಗೆ**

ಕಟ್ಟೀಮನಿಯವರ ಈ ಕಾದಂಬರಿಯಲ್ಲಿ ಬಡ ಬಾಲಕ ಶೇಖರನ ಮನಸ್ಸಿನಲ್ಲಿ ಮೊಳೆತ ದೇಶಭಕ್ತಿಯನ್ನು ನಾವು ಕಾಣುತ್ತೇವೆ. ಚಳುವಳಿಗೆ ಸೇರಲು ಅವನ ತಂದೆಯ ಸರಕಾರಿ ನೌಕರಿ ಅವನಿಗೆ ಅಡ್ಡಿಯಾಗುತ್ತದೆ. ಇದಕ್ಕಾಗಿ ಶೇಖರ ತನ್ನ ಮನೆಯನ್ನೇ ತೊರೆಯುತ್ತಾನೆ.

ಬೆಳಗಾವಿಯ ಜನತೆಯಲ್ಲಿ ದೇಶಪ್ರೇಮವನ್ನು ಉದ್ಭವಿಸಲು ರಾಣಿ ಚೆನ್ನಮ್ಮಳೇ ಸ್ಫೂರ್ತಿಯಾಗುತ್ತಾಳೆ. ಗಾಂಧೀಜಿಯ ವ್ಯಕ್ತಿತ್ವವು ಹಳ್ಳಿಯ ಪ್ರತಿಯೊಬ್ಬ ಸಾಮಾನ್ಯ ಮನುಷ್ಯನ

ಹೃದಯವನ್ನೂ ಗೆದ್ದುದಲ್ಲದೆ ಅವರಲ್ಲಿ ದೇಶಪ್ರೇಮದ ಕಿಚ್ಚನ್ನು ಹಚ್ಚುತ್ತದೆ. ವಿದ್ಯಾವಂತರಿಂದ ಹಿಡಿದು ಬಂಡಿ ಹೊಡೆಯುವವರವರೆಗೂ ಬ್ರಿಟಿಷರನ್ನು ಭಾರತದಿಂದ ಹೊರದೂಡಿಸಬೇಕೆಂಬ ಬಯಕೆ ಆದಮ್ಯವಾಗಿತ್ತು. ದೇಶದ ಸ್ವಾತಂತ್ರ್ಯದ ವಿಚಾರ, ಗಾಂಧಿತತ್ವದ ಪರಿಚಯ ಬೆಳಗಾವಿಯ ಒಬ್ಬ ಕಟ್ಟಕಡೆಯ ಪ್ರಜೆಗೂ ಇತ್ತು.

ಶೇಖರನಿಗೆ ಕಿತ್ತೂರು ಎಂಬ ಹೆಸರೇ ರೋಮಾಂಚನವನ್ನು ಉಂಟುಮಾಡುತ್ತದೆ. ಚೆನ್ನಮ್ಮ, ಸಂಗೊಳ್ಳಿ ರಾಯಣ್ಣ ಇವರೆಲ್ಲರೂ ಬೆಳಗಾವಿಯ ಜನತೆಗೆ ದೇಶಪ್ರೇಮದ ಪ್ರತೀಕದಂತಿದ್ದರು. ಇವರು ಹುಟ್ಟು ಹಾಕಿದ ದೇಶಪ್ರೇಮದ ಆದರ್ಶವು ಶೇಖರನಂತಹ ಸಣ್ಣ ಹುಡುಗನಲ್ಲೂ ಭಾವುಕತೆಯನ್ನು ಉಂಟುಮಾಡಿತ್ತು. ಅವನು ತನ್ನ ಮನಸ್ಸಿನಲ್ಲಿ ತೀರಾ ಭಾವುಕನಾಗಿ ಹೀಗೆ ಯೋಚಿಸುತ್ತಾನೆ–"ನಮ್ಮ ಪ್ರೀತಿಯ ಕಿತ್ತೂರನ್ನು ನಾಶಮಾಡಿ ಸೇಡು ತೀರಿಸಿಕೊಂಡರಲ್ಲವೇ ಈ ಸರಕಾರದವರು? ಅಲ್ಲಿಯ ಅರಮನೆಯನ್ನೆಲ್ಲಾ ಹಾಳುಗೆಡವಿ, ಕೋಟೆಯ ಗೋಡೆಗಳನ್ನೆಲ್ಲಾ ನೆಲಸಮಗೊಳಿಸಿ ಮಣ್ಣುಗೂಡಿಸಿದರಲ್ಲವೇ! ಅರಮನೆ ಮುರಿದು ಹೋದರೇನು? ಕೋಟೆ ಹಾಳಾದರೇನು? ಕಿತ್ತೂರಿನ ಶೌರ್ಯ ಹಾಳಾದೀತೆ? ಇಂದಲ್ಲ ನಾಳೆ ಮತ್ತೆ ಮೇಲಕ್ಕೆದ್ದೀತು ಕಿತ್ತೂರು! ಅಲ್ಲಿನ ಮಣ್ಣಿನ ಒಂದೊಂದು ಕಣದಿಂದಲೂ ಒಬ್ಬೊಬ್ಬ ಚೆನ್ನವ್ವ ಹುಟ್ಟಿಕೊಂಡಾಳು! ಒಬ್ಬೊಬ್ಬ ಸಂಗೊಳ್ಳಿ ರಾಯಣ್ಣ ಹುಟ್ಟಿಕೊಂಡಾನು! ಹಿಂದಿನದಕ್ಕಿಂತಲೂ ಭವ್ಯವಾದ ಕೋಟೆ ಅಲ್ಲಿ ಮೆರೆದೀತು, ಅದರ ಮೇಲೆ ನಮ್ಮ ಬಾವುಟ ಡೌಲಿನಿಂದ ಹಾರಾಡೀತು."[೨] ಹೀಗೆ ಐತಿಹಾಸಿಕ ಘಟನೆಯೊಂದು ವರ್ತಮಾನದಲ್ಲಿ ರಾಷ್ಟ್ರಪ್ರೇಮದ ಉದ್ದೀಪನಕ್ಕೆ ಕಾರಣವಾಗುವುದನ್ನು ಕಾಣುತ್ತೇವೆ. ಪ್ರಾದೇಶಿಕ ಚರಿತ್ರೆಯು ಆ ಪ್ರದೇಶದ ಜನರ ಹೋರಾಟದ ಕಿಚ್ಚನ್ನು ಬಡಿದೆಬ್ಬಿಸುತ್ತದೆ.

**ರಕ್ತತರ್ಪಣ**

ತ.ರಾಸು ಅವರ ಈ ಕಾದಂಬರಿಯಲ್ಲಿ ಚಂದ್ರಶೇಖರನೆಂಬ ಯುವಕನು ಸ್ವಾತಂತ್ರ್ಯದ ಅರಿವೇ ಇಲ್ಲದಿದ್ದ ಸೋನಲಾಪುರವೆಂಬ ಹಳ್ಳಿಯಲ್ಲಿ ಜಾಗೃತಿಯನ್ನು ಮೂಡಿಸುತ್ತಾನೆ. ಸರಕಾರಿ ನೌಕರಿಯಲ್ಲಿದ್ದರೂ ಹೋರಾಟಗಾರನಾದ ಚಂದ್ರಶೇಖರನಿಗೆ ಊರ ಶಾನುಭೋಗ ಸೀತಾರಾಮಯ್ಯ ತನ್ನ ಮನೆಯಲ್ಲಿ ಆಶ್ರಯವನ್ನು ಕೊಡುವುದು, ಕೊನೆಗೆ ಜೈಲು ಪಾಲಾಗುವುದು ದೇಶಪ್ರೇಮದಿಂದಲೇ. ಚಂದ್ರಶೇಖರ ಹೇಳುತ್ತಿದ್ದ ದೇಶದ ಕ್ರಾಂತಿಯ ಕತೆ ಹಳ್ಳಿಯ ಯುವಕರ ಮನಸ್ಸಲ್ಲೂ ಕ್ರಾಂತಿಯ ಕಿಡಿಯನ್ನು ಉರಿಸುತ್ತದೆ. ಮೊದಮೊದಲು ಇವನ ಮಾತು ಕೇಳಿ ಅಸಹಾಯಕತೆಯಿಂದ ನಿಟ್ಟುಸಿರುಬಿಡುತ್ತಿದ್ದ ಹಳ್ಳಿಯ ಯುವಕರು ಬರಬರುತ್ತಾ ಬಿಸಿಯಾಗಿ 'ನಾವೂ ಒಂದು ಕೈ ತೋರಿಸೇ ಬಿಟ್ಟೇವು' ಎನ್ನುವ ಕಾವಿನ ಮಟ್ಟಕ್ಕೆ ಬಂದಿದ್ದರು. ವೀರಭದ್ರ, ಅಜ್ಜಿಗನಂತಹ ಯುವಕರು ಚಂದ್ರಶೇಖರನ ಜೊತೆ ಕೈ ಜೋಡಿಸಲು ಸಿದ್ಧರಾದರು. ಚಂದ್ರಶೇಖರ ತಾವು ಅನುಭವಿಸುವ ದಾಸ್ಯದ ಬಾಳನ್ನು ಆ ಹಳ್ಳಿಯ ಯುವಕರಿಗೆ ವಿವರಿಸಿದಾಗ ಅವರು ಆಂಜನೇಯನ ಪಾದ ಮುಟ್ಟಿ ಈ ರೀತಿಯಾಗಿ ಪ್ರಮಾಣ ಮಾಡುತ್ತಾರೆ–"ನಾನು ನಮ್ಮ ದೇಶಕ್ಕೋಸ್ಕರ ಪ್ರಾಣ

ಕೊಡಲಿಕ್ಕೂ ತಯಾರು. ಏನು ಬಂದ್ರೂ ಮೋಸ ಮಾಡಾಕಿಲ್ಲ, ಈ ಮಾತು ಸುಳ್ಳಾದ್ರೆ ಗೋತಾಯೀನ ತಿಂದ ಪಾಪ ಬರ್ಲಿ"[9]

ಈ ಕಾದಂಬರಿಯ ಘಟನೆ ನಡೆಯುವುದೊಂದು ಹಳ್ಳಿಯಲ್ಲಿ. ಸ್ವಾತಂತ್ರ್ಯದ ಕಲ್ಪನೆಯೇ ಇಲ್ಲದ ಹಳ್ಳಿಯ ಜನರು ಚಂದ್ರಶೇಖರನಂತಹ ಒಬ್ಬ ವ್ಯಕ್ತಿಯ ವ್ಯಕ್ತಿತ್ವಕ್ಕೆ ಹಾಗೂ ಮಾತಿಗೆ ತಲೆಬಾಗಿ ಭಾರತ ಮಾತೆಯ ಬಿಡುಗಡೆಗೆ ತಮ್ಮದೇ ಅದ ಕೊಡುಗೆಯನ್ನು ನೀಡುತ್ತಾರೆ. ದೇಶಕ್ಕೋಸ್ಕರ ಪ್ರಾಣವನ್ನೇ ಅರ್ಪಿಸಲು ಆಂಜನೇಯನ ಪಾದಮುಟ್ಟಿ ಪ್ರಮಾಣ ಮಾಡುವ ಯುವಕರ ಮನೋಶಕ್ತಿ ಅದ್ಭುತವಾದುದು. ಕುಡಿತದಂತಹ ದುಶ್ಚಟವನ್ನು ತೊರೆದು ಚಂದ್ರಶೇಖರನ ಬೆಂಗಾವಲಿಗೆ ನಿಂತ ಹುಸೇನ್‌ಸಾಬಿ, ಬಾಲಾಜಿಸಿಂಗ್‌ನಂತಹ ದುಷ್ಟನ ಮಾರಾಣಾಂತಿಕ ಹಿಂಸೆಯನ್ನು ಸಹಿಸಿ ಕೂಡಾ ಚಂದ್ರಶೇಖರನ ಸುಳಿವು ಕೊಡದಿರುವ ಅಜ್ಜಯ್ಯ, ಸರಕಾರಿ ಉದ್ಯೋಗದಲ್ಲಿದ್ದರೂ ಚಂದ್ರಶೇಖರನಿಗೆ ಸಹಾಯ ಮಾಡಿ ಜೈಲು ಪಾಲಾದ ಸೀತಾರಾಮಯ್ಯ, ಚಂದ್ರಶೇಖರನನ್ನು ಮಗನಂತೆ, ಸಹೋದರನಂತೆ ಸಲಹಿದ ಗೌರಜ್ಜಿ, ಲಕ್ಷ್ಮಿ... ಹೀಗೆ ಪ್ರತಿಯೊಂದು ಪಾತ್ರಗಳು ತಮ್ಮ ಕೈಲಾದ ದೇಶಸೇವೆಯನ್ನು ಮಾಡಿವೆ.

**ಬೇಡಿ ಕಳಚಿತು ದೇಶ ಒಡೆಯಿತು**

ಕೋ. ಚೆನ್ನಬಸಪ್ಪನವರ ಈ ಕಾದಂಬರಿಯು ಸ್ವಾತಂತ್ರ್ಯ ಚಳುವಳಿಯ ಸಮಗ್ರ ಚಿತ್ರಣವನ್ನು ನೀಡುತ್ತಲೇ ದೇಶದ ಮುಖ್ಯವಾಹಿನಿಯಿಂದ ದೂರವಿದ್ದಂತಹ ಅತೀಸಾಮಾನ್ಯ ವ್ಯಕ್ತಿಗಳ ಹೃದಯದಲ್ಲಿ ಕೂಡಾ ಮೊರೆತ ದೇಶಪ್ರೇಮದ ಚಿತ್ರಣವನ್ನು ನೀಡುತ್ತದೆ. ದೇವದಾಸಿಯಾದ ಬಸಕ್ಕ ಗಾಂಧೀಜಿಯ ಭಾಷಣ ಕೇಳಿ ತನ್ನ ವೃತ್ತಿಯನ್ನು ಬಿಟ್ಟು ದೇಶಸೇವೆಗೆ ಧುಮುಕುತ್ತಾಳೆ. ವಂದೇ ಮಾತರಂ ಬಸಕ್ಕನೆಂದು ಪ್ರಸಿದ್ಧಳಾಗುತ್ತಾಳೆ. ಮುಳುಗಿದೂರಿನ ಕೊಟ್ಟಪ್ಪ, ಮಲಿಯಜ್ಜ, ಖಾದರ್, ಕೊಟ್ಟೂರಿನ ದೇವೇಂದ್ರಪ್ಪ, ಮುಂತಾದ ವ್ಯಕ್ತಿಗಳು ಗಾಂಧೀಜಿಯಿಂದ ಪ್ರಭಾವಿತರಾಗಿ ದೇಶಸೇವೆಗೆ ತಮ್ಮ ಕೊಡುಗೆಯನ್ನು ನೀಡುತ್ತಾರೆ.

ರಮಣಯ್ಯನಂತಹ ವ್ಯಕ್ತಿ ಊರೂರು ಸುತ್ತಿ ಮಾಹಿತಿ ಸಂಗ್ರಹಿಸಿ ಬ್ರಿಟಿಷರ ವಿರುದ್ಧ ಕರಪತ್ರಗಳನ್ನು ಮಿಂಚಿನಂತೆ ಹಂಚುತ್ತಾನೆ. ವಿರೂಪಾಕ್ಷಿ ಉಪ್ಪಿನ ಮೇಲಿನ ತೆರಿಗೆಯನ್ನು ಖಂಡಿಸಿ ಜೀವಮಾನದುದ್ದಕ್ಕೂ ಉಪ್ಪು ತಿನ್ನುವುದನ್ನು ತ್ಯಜಿಸಿ 'ಉಪ್ಪಿನ ವಿರೂಪಾಕ್ಷಿ' ಎಂಬುದಾಗಿ ಪ್ರಸಿದ್ಧನಾಗುತ್ತಾನೆ. ಕೆಂಪಿಯಂತಹ ದಲಿತ ಹೆಣ್ಣುಮಗಳು ಆಜಾದ್ ಹಿಂದ್ ಸೈನ್ಯದಲ್ಲಿ ದಾದಿಯಾಗಿ ಸೇವೆ ಸಲ್ಲಿಸುತ್ತಾಳೆ. ಇವರೆಲ್ಲರು ಭಾರತ ಮಾತೆಯ ಬಿಡುಗಡೆಗೋಸ್ಕರ ತಮ್ಮ ಸುಖವನ್ನು ತ್ಯಾಗ ಮಾಡಿದರು. ಕೊಟ್ರಪ್ಪನಂತಹ ಬಡವ ಸತ್ಯಾಗ್ರಹದಲ್ಲಿ ಭಾಗವಹಿಸಿ ಜೈಲು ಪಾಲಾಗುತ್ತಾನೆ. ಆದರೆ ಅವನು ಹಿಂದಿರುಗಿ ಬಂದಾಗ ತನ್ನ ಮನೆ ಬಿದ್ದುಹೋಗಿತ್ತು, ತಿನ್ನುವುದಕ್ಕೆ ಹುಲ್ಲು ಇಲ್ಲದೆ ದನಕರುಗಳು ಸತ್ತು ಹೋಗಿದ್ದವು. ಅವನ ಮನೆಗೆ ಬಂದ ಹರಿಹರರಾಯರು ಅವನ ಮನೆಯ ದುಸ್ಥಿತಿಯನ್ನು ನೋಡಿ ಹೀಗೆ ಭಾವಿಸುತ್ತಾರೆ–"ಇವೆಲ್ಲ ಬಹು ಸಣ್ಣ ಅತಿ ಕ್ಷುಲ್ಲಕ ವಿಚಾರ. ಈ ಮಹಾನ್ ದೇಶದ ಸ್ವಾತಂತ್ರ್ಯ ಮಹಾಯಜ್ಞದಲ್ಲಿ ಇದೆಲ್ಲ ಯಾತರ ಗಣನೆ! ಆ ದೊಡ್ಡ ವಿಚಾರದ

ಮುಂದೆ ಇದು ತೀರಾ ಸಣ್ಣ ವಿಚಾರ. ಆದರೆ ಈ ಬಡ ಕುಟುಂಬಕ್ಕೆ ಇದು ಬಹು ದೊಡ್ಡ ಸಂಗತಿ."

ನಾಗಾ ಗುಡ್ಡಗಾಡು ಯುವತಿ ರಾಣಿ ಗೈದಿನ್‌ಲ್ಯೂ ಅವಳ ನೇತೃತ್ವದಲ್ಲಿ ನಾಗಾ ಬಂಡುಕೋರರು ಬ್ರಿಟಿಷರಿಗೆ ಸಿಂಹಸ್ವಪ್ನವಾಗಿ ಕಾಡುತ್ತಾರೆ. ಸ್ವಾತಂತ್ರ್ಯ ದೊರಕಿದರೂ ದೊರಕದಿದ್ದರೂ ಗುಡ್ಡಗಾಡು ಜನರ ಸ್ಥಿತಿ ಇಂದಿಗೂ ಸುಧಾರಣೆಯಾಗಲಿಲ್ಲ. ಆದರೆ ಇವರು ಕೂಡ ಬ್ರಿಟಿಷರನ್ನು ಬಗ್ಗುಬಡಿಯಲು ಕ್ರಾಂತಿಯಲ್ಲಿ ಭಾಗವಹಿಸಿದ್ದು ಅವರೊಳಗೆ ಮೊಳೆತ ದೇಶಪ್ರೇಮದ ಕಿಚ್ಚು ಆಶ್ಚರ್ಯವನ್ನು ಉಂಟುಮಾಡುತ್ತದೆ. ಹೇಮಾಕೂಟ ಬಸದಿಯ ಸ್ವಾಮಿ ಮುಕ್ತಾನಂದ ಅವರು ದೇಶಸೇವೆಯ ಸಂದೇಶವನ್ನು ಪರೋಕ್ಷವಾಗಿ ಸಾರುತ್ತಾರೆ. ಸ್ವಾಮಿ ವಿವೇಕಾನಂದರ ಸಂದೇಶವನ್ನು ಜನರಿಗೆ ತಿಳಿಸುತ್ತಾರೆ. ಸ್ವಾತಂತ್ರ್ಯ ಬಂದರೆ ತಮಗೇನೇನೂ ಲಾಭವಾಗದ ಸಾಮಾನ್ಯ ಜನರ ಹೃದಯ ಕೂಡಾ ದೇಶ ಭಕ್ತಿಯಿಂದ ತುಂಬಿತ್ತು. ಈ ಕಾದಂಬರಿಯಲ್ಲಿ ಬರುವ ಪ್ರತಿಯೊಂದು ಚಿಕ್ಕ ಪುಟ್ಟ ಪಾತ್ರ ಕೂಡಾ ತನ್ನ ತನುಮನಗಳಲ್ಲಿ ದೇಶ ಪ್ರೇಮದ ಆದರ್ಶವನ್ನು ತುಂಬಿಕೊಂಡಿರುವುದನ್ನು ಕಾಣುತ್ತೇವೆ.

**ಅಮರ ಆಗಸ್ಟ್**

ಅ.ನ.ಕೃ ಅವರ ಈ ಕಾದಂಬರಿಯಲ್ಲಿ ದೊಡ್ಡ ಗೌಡರು ಗಾಂಧಿತತ್ವವನು ಪಾಲಿಸುತ್ತಾರೆ. ಖಾದಿಗೆ ನೇಯ್ಗೆಗೆ ದೇವಾಂಗ ಜನಾಂಗದವರನ್ನು ಪ್ರೋತ್ಸಾಹಿಸುತ್ತಾರೆ. ಗಾಂಧೀಜಿಯವರ ಸ್ವದೇಶಿ ಚಳವಳಿಯನ್ನು ಪ್ರೋತ್ಸಾಹಿಸುತ್ತಾರೆ. ನಂದಿಗ್ರಾಮದ ದೇವಾಂಗ ಜನಾಂಗದವರಿಗೆ ಬಡ್ಡಿಯಿಲ್ಲದೆ ಸಾಲವನ್ನು ಕೊಡುತ್ತಾರೆ. ವಿಲಾಸಿ ಬಟ್ಟೆಯನ್ನು ತ್ಯಜಿಸಿ ತಾವೇ ಮೊದಲು ದೇವಾಂಗ ಜನಾಂಗದವರು ನೇಯ್ದ ಖಾದಿ ಬಟ್ಟೆಯನ್ನು ತೊಡುತ್ತಾರೆ. ಹೀಗೆ ಸ್ವದೇಶಿ ಚಳವಳಿಗೆ ಆ ಊರಿನಲ್ಲಿ ಮೇಲ್ಪಂಕ್ತಿ ಹಾಕುತ್ತಾರೆ. ಇವರನ್ನು ನೋಡಿ ಊರಿನ ಉಳಿದವರು ಕೂಡಾ ತಮ್ಮ ಊರಿನಲ್ಲೇ ತಯಾರಾದ ಬಟ್ಟೆಯನ್ನು ಕೊಂಡುಕೊಳ್ಳುತ್ತಾರೆ. ನಂದಿಗ್ರಾಮದಲ್ಲಿ ಮಾನಪ್ಪ ಹಾಗೂ ಪುಟ್ಟುಸ್ವಾಮಿಯ ನೇತೃತ್ವದಲ್ಲಿ ಹರಿಜನೋದ್ಧಾರ, ಅಕ್ಷರಾಭ್ಯಾಸ, ಜನಜಾಗೃತಿ, ಮುಂತಾದ ಹಲವಾರು ವಿಧಾಯಕ ಕಾರ್ಯಕ್ರಮಗಳು ರೂಪುಗೊಂಡವು. ಹರಿಜನ ಕೇರಿಯಲ್ಲಿ ಮಹತ್ವದ ಬದಲಾವಣೆಯಾಯಿತು. ಜನರು ಮದ್ಯ ಮಾಂಸವನ್ನು ತ್ಯಜಿಸಿದರು. ಶುಚಿತ್ವಕ್ಕೆ ಹೆಚ್ಚಿನ ಮಹತ್ವವನ್ನು ನೀಡಿದರು. ೧೯೪೨ರಲ್ಲಿ ಕೆಲವು ಕಡೆ ಸೈನ್ಯದ ಸಿಖ್ ಮತ್ತು ರಜಪೂತ ತುಕಡಿಯವರು ಜನತೆಯ ಮೇಲೆ ಗುಂಡು ಹಾರಿಸಲು ನಿರಾಕರಿಸುವುದು ಪರಕೀಯ ಸೈನ್ಯದಲ್ಲಿದ್ದರೂ ತನ್ನ ದೇಶಬಾಂಧವರ ಮೇಲೆ ಅವರಿಗಿರುವ ಪ್ರೀತಿಗೆ ಹಿಡಿದ ಕನ್ನಡಿಯಾಗಿದೆ.

**ಬಿಡುಗಡೆಯ ಬೆಲೆ**

ವಡೇಗನ ಹಳ್ಳಿ ಅಶ್ವಥನಾರಾಯಣರು ಬರೆದ 'ಬಿಡುಗಡೆಯ ಬೆಲೆ' ಕಾದಂಬರಿಯು ಲೇಖಕರ ಸ್ವಂತ ಅನುಭವದ ಮೇಲೆ ರಚಿತವಾಗಿದೆ. ಈ ಕಾದಂಬರಿಯು ಗ್ರಂಥಕರ್ತರು

ಸೆರೆಯೊಳಗಿರುವಾಗಲೇ ಬಿಡುಗಡೆಯಾಗಿದೆ. ರಾಷ್ಟ್ರೀಯ ಚಳುವಳಿಯಲ್ಲಿ ತೊಡಗಿದವನಿಗೆ ಪ್ರಾಪ್ತವಾಗುವ ವಿಶಿಷ್ಟ ರೀತಿಯ ಸಂಕಟಗಳೆನಿಸಿಕೊಳ್ಳಬಹುದಾದ ವರ್ಣನೆಯದೆ. ಇತಿಹಾಸದಲ್ಲಿ ಉಲ್ಲೇಖವಾಗದೆ ಹೋದ ನೂರಾರು ಸ್ವಯಂಸೇವಕರ ದಿನಚರಿಯ ಒಂದು ಕೈಪಿಡಿಯಂತಿದೆ ಈ ಕಾದಂಬರಿ. ಸಾವಿರ ಸಾವಿರ ಹಳ್ಳಿಯ ರೈತರು ಅರಣ್ಯ ಶಾಸನವನ್ನು ಉಲ್ಲಂಘಿಸಿ ಸತ್ಯಾಗ್ರಹದ ಯಶಸ್ಸಿಗೆ ಕಾರಣವಾಗುತ್ತಾರೆ. "ಅರೆಬೆತ್ತಲೆಯಾದ, ಅರೆಹೊಟ್ಟೆಯಾದ, ವಿದ್ಯಾಗಂಧವಿಲ್ಲದ ರೈತರು ಸಾವಿರಾರು ಜನ ಹೀಗೆ ಬಂದು ನಿಂತು ಯುಗ ಯುಗಾಂತರದಿಂದ ತಮ್ಮ ಪಾಲಿಗೆ ಬಂದ ದೌರ್ಜನ್ಯವನ್ನು ತಿರಸ್ಕರಿಸಲು ಹೊರಟಿದ್ದಾರೆ."[೫] ಎಂಬಂತೆ ಆ ರೈತರು ಕಾಣುತ್ತಿದ್ದರು. ಈ ಸ್ವಯಂಸೇವಕರು ಹಳ್ಳಿಯ ಪಟೇಲರ ಮನವೊಲಿಸಿ ಸುಮಾರು ೨೦-೨೫ ಮಂದಿಯ ರಾಜೀನಾಮೆಗೆ ಕಾರಣವಾಗುತ್ತಾರೆ.

**ಪ್ರತಿಸರಕಾರ**

ಮಿರ್ಜಿ ಅಣ್ಣರಾಯರ ಈ ಕಾದಂಬರಿಯಲ್ಲಿ ಸರಕಾರದ ಪರವಾಗಿದ್ದ ಜಮೀನ್ದಾರರ ಮಕ್ಕಳೇ ದೇಶಪ್ರೇಮಿಗಳಾಗುವುದನ್ನು ಕಾಣುತ್ತೇವೆ. ಸುಬ್ಬರಾವ್ ಬಹಳ ದೊಡ್ಡ ಜಮೀನ್ದಾರ. ಆದರೆ ಅವನ ಮಗ ಬಾಬಾ ಸಾಹೇಬನಿಗೆ ಪ್ರತಿಸರಕಾರದ ಬಗ್ಗೆ ಒಲವಿದೆ. ಪ್ರತಿಸರಕಾರದ ಸದಸ್ಯನಾದ ವಸಂತನ ಸ್ನೇಹಿತನಾಗಿದ್ದನು ಮತ್ತು ಅವನಿಗೆ ತನ್ನ ಮನೆಯಲ್ಲಿ ಆಶ್ರಯವನ್ನು ನೀಡಿದ್ದನು. ಪ್ರತಿಸರಕಾರದ ಕೆಲಸ ಕಾರ್ಯಗಳಿಗೆ ತಾನು ಬೆಂಬಲವನ್ನು ಸೂಚಿಸುತ್ತಿದ್ದನು. ಬಾಬಾ ಸಾಹೇಬ ಕೂಡಾ ಪ್ರತಿಸರಕಾರದ ಪ್ರತಿನಿಧಿಯಾಗಿದ್ದನು. ಬಾಬಾ ಸಾಹೇಬನ ಮನಸ್ಸು ಕೂಡಾ ದೇಶದ ಸ್ವಾತಂತ್ರ್ಯವನ್ನು ಕುರಿತು ಯೋಚಿಸುತ್ತದೆ. ಬ್ರಿಟಿಷ್ ಆಡಳಿತದಲ್ಲಿ ನಿಜವಾಗಿಯೂ ಬಾಬಾಸಾಹೇಬ ಸುಖವಾಗಿದ್ದನು. ಹೇರಳವಾದ ಆಸ್ತಿ ಬದುಕಿಗೆ ಏಕಮಾತ್ರ ವಾರಸುದಾರನಾಗಿದ್ದನು. ಆದರೂ ಅವನ ಮನಸ್ಸು ಬ್ರಿಟಿಷರಿಂದ ಭಾರತಮಾತೆಯ ಬಿಡುಗಡೆಯ ನಿಟ್ಟಿನಲ್ಲಿ ಕೆಲಸ ಮಾಡುತ್ತದೆ. ಹೀಗೆ ಬಹಳಷ್ಟು ಮಂದಿ ಜಮೀನ್ದಾರರ ಮಕ್ಕಳು ಕೂಡ ತಂದೆಗೆ ವಿರುದ್ಧವಾಗಿ ದೇಶಸೇವೆಗೆ ಧುಮುಕುತ್ತಾರೆ.

**ಸೆರೆಮನೆಯ ಶೂರ**

ವಾಸುದೇವಾಚಾರ್ಯ ಬುರ್ಲಿಯವರು ರಚಿಸಿದ 'ಸೆರೆಮನೆಯ ಶೂರ' ಎಂಬ ಕಾದಂಬರಿಯು ಕೂಡಾ ಜನರಲ್ಲಿ ದೇಶದ ಬಗ್ಗೆಯಿದ್ದ ನಿಷ್ಠೆಯನ್ನು ಪ್ರತಿನಿಧಿಸುತ್ತದೆ. ಗಾಂಧೀಜಿಯ ಮಾತಿನಿಂದ ಪ್ರೇರಿತರಾದ ಒಬ್ಬ ಸಾಮಾನ್ಯ ಕೈದಿ ಕೂಡ ಎಲ್ಲಾ ಸರಕಾರದ ವಿರೋಧಿ ಕೃತ್ಯವನ್ನು ತಾನೇ ಮಾಡಿದುದಾಗಿ ಹೇಳುತ್ತಿದ್ದನೇ ಹೊರತು ತನ್ನ ಜೊತೆಗಾರರ ವಿವರವನ್ನು ನೀಡುವುದಿಲ್ಲ. "ತಂತಿ ಕಡಿದರೆ, ರೈಲು ಕಂಬ ಕಿತ್ತರೆ, ಸ್ವರಾಜ್ಯದ ದಾರಿ ಸಿಗ್ತದ, ಬ್ರಿಟಿಷರು ಓಡಿ ಹೋಗ್ತಾರ, ಕ್ವಿಟ್ ಇಂಡಿಯಾ, ಕ್ವಿಟ್ ಇಂಡಿಯಾ!"[೬] ಎಂಬುದಾಗಿ ಪೊಲೀಸರ ಛಡಿಯೇಟಿಗೆ ಉರುಳುತ್ತಾನೆಯೇ ಹೊರತು ಯಾವುದೇ ಗುಟ್ಟನ್ನು ಬಿಟ್ಟುಕೊಡುವುದಿಲ್ಲ. ಮೂರು ವರ್ಷದ ಮುದ್ದು ಮಗುವೊಂದು ತನ್ನ ಬಾಲ ಭಾಷೆಯಲ್ಲಿ – "ಬ್ರಿಟಿಷರನ್ನು ಓಡಿದಲು ದೇಶಸೇವೆಗೆ ಏಳಿಲಿ, ಕಿತ್ ಇಂಡಿಯಾ, ಕಿತ್

ಇಂಡಿಯಾ ಎಂದು ಕೂಗಿಲಿ ನೌಕಲೆಲ್ಲ ಲಾಜೀನಾಮೆ ಕೊಡಲಿ... ಜಯ್ ಭಾರತ ಮಾತೆ, ಜಯ್ ಕಾಂಗ್ರೆಸ್ ! ! ಕಿತ್ ಇಂದಿಯಾ, ಕಿತ್ ಇಂದಿಯಾ ವಂದೆ ಮಾತಲಂ !."[೭] ಎಂದು ಕೂಗುವುದು ಎಂಥವರ ಹೃದಯದಲ್ಲೂ ದೇಶಭಕ್ತಿಯ ಕಿಡಿಯನ್ನು ಉರಿಸುವಂತಿತ್ತು.

೧೯೪೨ರ ಹೋರಾಟದಲ್ಲಿ ಒಬ್ಬ ಮುಸಲ್ಮಾನ ಮೌಲ್ವಿ ಜೈಲು ಸೇರಿದ್ದನು. ಅವನಲ್ಲಿ ರಾಷ್ಟ್ರಪ್ರೇಮದ ಜ್ಯೋತಿ ದೇದೀಪ್ಯಮಾನವಾಗಿ ಉರಿಯುತ್ತಿತ್ತು. ಗಡ್ಡದ ಪೋಲೀಸ್ ಸಾಹೇಬನು ಹೊಟ್ಟೆ ಪಾಡಿಗೋಸ್ಕರ ಪೊಲೀಸ್ ಇಲಾಖೆಯಲ್ಲಿದ್ದರೂ ಅವನು ರಾಜಕೀಯ ಕೈದಿಗಳಿಗೆ ಕೆಲವೊಂದು ವಿಚಾರಗಳಲ್ಲಿ ಸಹಾಯ ಮಾಡುತ್ತಿದ್ದನು. ಬೇರೆ ಬೇರೆ ಕಡೆ ನಡೆದ ಹೋರಾಟದ ಕತೆಯನ್ನು ರಾಜಕೀಯ ಕೈದಿಗಳಿಗೆ ತಿಳಿಸುತ್ತಿದ್ದನು. ಸ್ವತಃ ಜೇಲರನ ಮಗನೇ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗವಹಿಸಿ ಪೊಲೀಸ್ ಗುಂಡೇಟಿಗೆ ಬಲಿಯಾಗುತ್ತಾನೆ. ಕಲೆಕ್ಟರನ ಕಚೇರಿಯಲ್ಲಿ ಯೂನಿಯನ್ ಜಾಕ್ ಕಿತ್ತು ಆ ಸ್ಥಳದಲ್ಲಿ ಭರತದ ರಾಷ್ಟ್ರಧ್ವಜವನ್ನು ನಿಲ್ಲಿಸುವ ಪ್ರಯತ್ನದಲ್ಲಿ ಆತ ಗುಂಡೇಟಿಗೆ ಬಲಿಯಾಗುತ್ತಾನೆ. ಹೀಗೆ ವಿದ್ಯಾರ್ಥಿಗಳು ತಮ್ಮ ತಂದೆ ತಾಯಂದಿರಿಗೆ ವಿರುದ್ಧವಾಗಿ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗವಹಿಸುತ್ತಾರೆ.

**ಮಗಳ ಮದುವೆ**

ಬೆಟಗೇರಿ ಕೃಷ್ಣಶರ್ಮರ ಈ ಕಾದಂಬರಿಯು ೧೯೩೦ರ ಉಪ್ಪಿನ ಸತ್ಯಾಗ್ರಹಕ್ಕೆ ಸಂಬಂಧಿಸಿದ ಹೋರಾಟದ ಕತೆಯನ್ನೊಳಗೊಂಡಿದೆ. ಗಾಂಧೀಜಿಯವರ ನಾಯಕತ್ವದಲ್ಲಿ ಭಾರತದ ಜನರ ನಿದ್ರಿಸುತ್ತಿದ್ದ ಆತ್ಮಶಕ್ತಿಯನ್ನು ಎಚ್ಚರಿಸುವ ಕೆಲಸ ಆರಂಭವಾಗುತ್ತದೆ. ರತ್ನಾಕರನ ನೇತೃತ್ವದಲ್ಲಿ ನಗರದ ಹೊರವಲಯದಲ್ಲಿರುವ ಭವ್ಯವಾದ ಬಂಗಲೆಯೊಂದು ಸ್ವರಾಜ್ಯಭವನವಾಗಿ ರೂಪುಗೊಳ್ಳುತ್ತದೆ. ಈ ಭವನದಲ್ಲಿ ನೆಲೆಸಿದ ಕೆಲಸಗಾರರೂ ಸ್ವಯಂಸೇವಕರೂ ರಾಷ್ಟ್ರಸೇವಾವ್ರತದ ದೀಕ್ಷೆಯನ್ನು ಪಡೆದವರು. ದೇಶಕ್ಕಾಗಿ ಮಾಡಬೇಕಾದ ತ್ಯಾಗದ ಮಹತ್ವವನ್ನು ಅರಿತವರು. ಎಲ್ಲರು ತಮ್ಮ ತಮ್ಮ ಜೀವನಕ್ಕೆ ನೆಚ್ಚಿಕೊಂಡ ವ್ಯವಸಾಯ, ಉದ್ಯಮಗಳನ್ನೂ, ಶಾಲೆ ಕಾಲೇಜುಗಳ ಶಿಕ್ಷಣವನ್ನು ಬಿಟ್ಟು ಹೋರಾಟಕ್ಕಾಗಿ ಸಿದ್ಧರಾಗಿ ಬಂದವರು. ದೇಶದ ಸ್ವಾತಂತ್ರ್ಯದ ಎದುರು ಮನೆ-ಮಾರು, ಮಡದಿ ಮಕ್ಕಳು ಯಾವುದನ್ನೂ ಯಾರನ್ನೂ ಗಣಿಸದೆ ಸರಕಾರ ಕೊಡಬಹುದಾದ ಕಷ್ಟ-ನಷ್ಟಗಳನ್ನು ಸಹಿಸಲು ಸಿದ್ಧರಾಗಿ ಬಂದ ಗಟ್ಟಿಗರು.

ಮುದ್ದಾಪುರ ಎಂಬ ಹಳ್ಳಿಯಲ್ಲಿ ರಂಗಣ್ಣ ಎಂಬ ಯುವಕ ಬಿ.ಎ ಪದವೀಧರನಾಗಿದ್ದರೂ ಕೂಡಾ ಹಳ್ಳಿಯಲ್ಲೇ ನಿಂತು ಹಳ್ಳಿಯ ಜನರನ್ನು ಸುಧಾರಿಸುವ ಹಾಗೂ ಅವರು ಸ್ವಾವಲಂಬನೆಯಿಂದ ಬದುಕಲು ನೆರವಾಗುತ್ತಾನೆ. ರಂಗಣ್ಣನ ಇಂತಹ ದೇಶಪ್ರೇಮ ಕೂಡ ಯಾವ ಚಳುವಳಿಗಿಂತಲೂ ಕಡಿಮೆಯಾದುದಲ್ಲ. ಯಾಕೆಂದರೆ ಗಾಂಧೀಜಿಯ ವಿಧಾಯಕ ಕಾರ್ಯಕ್ರಮಗಳಲ್ಲಿ ಗ್ರಾಮೋದ್ಧಾರ ಹಾಗೂ ಸ್ವಾವಲಂಬನೆ ಸಹ ಬಹಳ ಪ್ರಮುಖವಾದುದು. ರಂಗಣ್ಣನ ಕೆಲಸವನ್ನು ನೋಡಿ ರತ್ನಾಕರನು-"ಕೇವಲ ಭಾವನಾಪರವಶವಾಗಿ ರಾಜಕೀಯ ಆಂದೋಲನದಲ್ಲಿ ಧುಮುಕಿ ಸರಕಾರದ ಸೆರೆಮನೆ ಸೇರುವುದು ನಿಜವಾದ ದೇಶಭಕ್ತಿಯಲ್ಲ;

ದೇಶದ ಜನಮನವನ್ನು ಸಂಸ್ಕಾರಗೊಳಿಸುವ ವಿಧಾಯಕ ಕಾರ್ಯವೇ ನಿಜವಾದ ದೇಶಭಕ್ತಿ !"[೮] ಎನ್ನುತ್ತಾನೆ. ಚಳವಳಿಗಾರರೆಲ್ಲಾ ಸೆರೆಮನೆ ಸೇರಿದರೆ ಭಾರತದ ಬೆನ್ನೆಲುಬಾದ ಹಳ್ಳಿಯ ಉದ್ಧಾರವನ್ನು ಮಾಡುವವರು ಯಾರು? ನಾಳೆ ದೇಶಕ್ಕೆ ಸ್ವಾತಂತ್ರ್ಯ ದೊರಕಿದಾಗ ಹಳ್ಳಿಗಳೆಲ್ಲ ಹಾಳು ಸುರಿಯುತ್ತಿದ್ದರೆ ಆ ಸ್ವಾತಂತ್ರ್ಯಕ್ಕೆ ಅರ್ಥವಾದರೂ ಏನಿದೆ? ಆದುದರಿಂದ ಜೈಲು ಸೇರಿದ ಮಾತ್ರಕ್ಕೆ ಅವರು ದೇಶಭಕ್ತರು, ಹಳ್ಳಿಯಲ್ಲೇ ಇದ್ದು ವಿಧಾಯಕ ಕಾರ್ಯಕ್ರಮಗಳನ್ನು ಮಾಡಿದವರು ದೇಶಭಕ್ತರಲ್ಲವೆಂಬುದಾಗಿ ನಾವು ತಿಳಿದರೆ ಅದು ನಮ್ಮ ತಪ್ಪು ಕಲ್ಪನೆಯಾಗುತ್ತದೆ.

**ಶ್ರದ್ಧಾಂಜಲಿ**

ರಾಜಾರಾಮ್ ಮಜಲೀಕರ್ ಅವರು ರಚಿಸಿದ 'ಶ್ರದ್ಧಾಂಜಲಿ' ಕಾದಂಬರಿಯು ೧೯೪೨ರ ಹೋರಾಟ ಹಾಗೂ ನರಮೇಧದ ಚಿತ್ರಣವನ್ನು ಅನಾವರಣಗೊಳಿಸುತ್ತಾ ಹೋಗುತ್ತದೆ. ಮಹಾತ್ಮರ ರಾಷ್ಟ್ರೀಯ ಚಳವಳಿ ಮೂಲೆ ಮೂಲೆಗೆ ವ್ಯಾಪಿಸಿದ ಕಾಲವದು. ನಾಡಿಗೆ ನಾಡೇ ಅವರ ಕರೆಗೆ ಓಗೊಟ್ಟಿತು. ಬಾಬುರಾಯರ ಸಾಕುಮಗ ರಮೇಶನೂ ಈ ಚಳವಳಿಯಲ್ಲಿ ಉತ್ಸಾಹದಿಂದ ಭಾಗವಹಿಸುತ್ತಾನೆ. ಹಳ್ಳಿ ಹಳ್ಳಿಗೆ ಹೋಗಿ ಚಳವಳಿಯ ಪ್ರಚಾರ ಮಾಡುತ್ತಾನೆ. ಮನೆಯ ಹೆಣ್ಣುಮಕ್ಕಳು ತಮ್ಮ ಎಲ್ಲಾ ದುಃಖವನ್ನು ಸಹಿಸಿಕೊಂಡು ಚಳವಳಿಯಲ್ಲಿ ಭಾಗವಹಿಸಲು ತಮ್ಮ ಮಕ್ಕಳಿಗೆ ಅನುಮತಿ ನೀಡುವುದು ಕೂಡ ಭಾರತ ಮಾತೆಯ ಬಿಡುಗಡೆಯ ಕಾಳಜಿಯಿಂದಲೇ ಆಗಿದೆ. ಮಾತೆಯರು ತಮ್ಮ ದುಃಖವನ್ನು ನುಂಗಿಕೊಂಡು ಮಕ್ಕಳು ಚಳುವಳಿಯಲ್ಲಿ ಭಾಗವಹಿಸಲು ಅನುಮತಿ ನೀಡುತ್ತಿದ್ದುದು ದೇಶಭಕ್ತಿಯ ಪರಾಕಾಷ್ಠೆಯೇ ಸರಿ. ಯಾಕೆಂದರೆ ಕೆಲವೊಂದು ಬಾರಿ ಚಳುವಳಿ ಸೇರಿದ ಮಕ್ಕಳು ಮನೆಗೆ ಜೀವಂತವಾಗಿ ಮರಳುತ್ತಾರೆಂಬ ಯಾವ ಖಾತ್ರಿಯು ಇರುತ್ತಿರಲಿಲ್ಲ. ಇಂತಹ ಮಹಾಮಾತೆಯರ ಹರಕೆ, ತ್ಯಾಗದಿಂದಲೇ ಭಾರತ ಮಾತೆ ಸ್ವತಂತ್ರಳಾಗಲು ಸಾಧ್ಯವಾಯಿತು.

ಕಾಲೇಜಿನಲ್ಲಿ ರಮೇಶನ ಭಾಷಣವನ್ನು ಕೇಳಿದ ಡಿ.ಎಸ್.ಪಿ. ಶಾಮರಾಯರ ಮಗಳು ರೋಹಿಣಿ ಕೂಡಾ ರಮೇಶನೊಂದಿಗೆ ಚಳವಳಿಯಲ್ಲಿ ಭಾಗವಹಿಸಲು ನಿರ್ಧರಿಸುತ್ತಾಳೆ. ಅಂದಿನ ಯುವಜನತೆಯಲ್ಲಿ ಕಂಡುಬರುವ ಸಾಮಾನ್ಯ ಗುಣವೆಂದರೆ ಅವರಿಗೆ ತಮ್ಮ ಸ್ವಂತ ಸುಖಕ್ಕಿಂತ ದೇಶದ ಬಿಡುಗಡೆ ಮುಖ್ಯವಾಗಿತ್ತು. ರೋಹಿಣಿಯ ತಾಯಿ ಗೋದಮ್ಮ ಕೂಡಾ ಗಂಡನ ಭಯವಿದ್ದರೂ ರೋಹಿಣಿ ಹಾಗೂ ರಮೇಶನಿಗೆ ಅಲ್ಪ ಸ್ವಲ್ಪ ಸಹಾಯವನ್ನು ಮಾಡುತ್ತಾಳೆ. ಭಾರತದ ಸ್ತ್ರೀಯರೆಲ್ಲರನ್ನೂ ಸ್ತ್ರೀತ್ವದ ಸಂಕೋಲೆಯಿಂದ ಬಂಧಿಸದಿದ್ದರೆ ಭಾರತಕ್ಕೆ ಸ್ವಾತಂತ್ರ್ಯ ಎಂದೋ ಸಿಗುತ್ತಿತ್ತು. ಯಾಕೆಂದರೆ ಪ್ರತಿಯೊಬ್ಬಳು ಭಾರತದ ಸ್ತ್ರೀಯರಲ್ಲೂ ಅಪಾರವಾದ ದೇಶಭಕ್ತಿ ಹುದುಗಿದೆ. ಶಾಮರಾಯರಂತಹ ಪೊಲೀಸ್ ಅಧಿಕಾರಿ ಕಾಂಗ್ರೆಸ್ ಹಾಗೂ ಚಳುವಳಿಯ ಕಡುವಿರೋಧಿಯಾಗಿದ್ದರೂ ಅವರ ಅಂತರಾತ್ಮ ತಾನು ಮಾಡುವುದು ತಪ್ಪು ಎಂದು ಎಚ್ಚರಿಸುತ್ತದೆ. 'ದೇಶಕ್ಕಾಗಿ ದುಡಿಯುವವರನ್ನು ತಡೆಯುವುದು ತಪ್ಪು ಎಂಬುದಾಗಿ ಅವರ ಆತ್ಮಸಾಕ್ಷಿ ಚುಚ್ಚುತ್ತಿತ್ತು.'

ಹೂನಳಿ ಸಿದ್ಧಪ್ಪ ಹಳ್ಳಿಯ ಒಬ್ಬ ಸಾಮಾನ್ಯ ರೈತ. ಆದರೂ ಅವರು ಹಳ್ಳಿಯ ಜನರಲ್ಲಿ ದೇಶದ ಕುರಿತು ಜಾಗೃತಿಯನ್ನು ಮೂಡಿಸಲು ಪ್ರಯತ್ನಿಸುತ್ತಿದ್ದರು. ಆ ಊರಿನ ಜನರು ಅನಕ್ಷರಸ್ಥರಾದರೂ ಚಳುವಳಿಯಲ್ಲಿ ಭಾಗವಹಿಸುವ ಮನಸ್ಸಿತ್ತು. ರೋಹಿಣಿ ಮತ್ತು ರಮೇಶ ಆ ಹಳ್ಳಿಯ ಜನರನ್ನು ಸಂಪೂರ್ಣವಾಗಿ ಚಳುವಳಿಗೆ ಸಿದ್ಧಗೊಳಿಸುತ್ತಾರೆ. ಹೂನಳಿಯಲ್ಲಿಯೇ ಅತ್ಯಂತ ಶ್ರೀಮಂತರಾಗಿದ್ದ ಬಸಪ್ಪನಾಯ್ಕರು ತಮ್ಮ ಭವ್ಯ ಬಂಗಲೆಯಲ್ಲಿ ರೋಹಿಣಿ ಮತ್ತು ರಮೇಶನಿಗೆ ಆಶ್ರಯ ನೀಡುತ್ತಾರೆ. ರಮೇಶ ಹಳ್ಳಿಗಳಿಗೆ ಹೋಗಿ ಸಂಘಟನೆ, ಸ್ವಚ್ಛತೆ, ಶಿಸ್ತು, ಸೇವೆಗಳ ಕುರಿತಾಗಿ ಅರಿವು ಮೂಡಿಸುತ್ತಿದ್ದನು. ಬಸಪ್ಪನಾಯಕರ ಮಗಳು ರುದ್ರಮ್ಮ ಕೂಡಾ ಚಳುವಳಿಯಲ್ಲಿ ಭಾಗವಹಿಸುತ್ತಾಳೆ. ಕೊನೆಗೆ ಪೊಲೀಸರ ಕೆಂಗಣ್ಣಿಗೆ ಗುರಿಯಾದ ಆ ಹಳ್ಳಿ ಸಂಪೂರ್ಣವಾಗಿ ನಿರ್ನಾಮವಾಗುತ್ತದೆ. ಬಸಪ್ಪನಾಯಕರು ತಮ್ಮ ಹೆಂಡತಿ, ಮಗಳು, ಮನೆ, ಆಸ್ತಿ, ಸರ್ವಸ್ವವನ್ನು ಭಾರತ ಮಾತೆಯ ಪದತಲಕ್ಕೆ ಅರ್ಪಿಸುತ್ತಾರೆ. ರಾಷ್ಟ್ರಭಕ್ತಿಯ ಎದುರು ಅವರಿಗೆ ಉಳಿದುದೆಲ್ಲವೂ ತೃಣಸಮಾನವಾಗುತ್ತದೆ. ನಾವಿಂದು ಅನುಭವಿಸುವ ಸ್ವಾತಂತ್ರ್ಯಕ್ಕಾಗಿ ದೇಶದ ಜನತೆ ರಕ್ತಕಾಣಿಕೆಯನ್ನೇ ಕೊಟ್ಟಿದೆ. ರಮೇಶನ ಗುಂಪೆಲ್ಲವೂ ಪೊಲೀಸರ ಗುಂಡಿಗೆ ಆಹುತಿಯಾಗುತ್ತದೆ. ಹೀಗೆ ಒಂದು ಕಾಲದಲ್ಲಿ ನಂದನವನದಂತೆ ಶೋಭಿಸುತ್ತಿದ್ದ ಹಿರೇಹಳ್ಳಿ ಸ್ಮಶಾನವಾಗಿ ಮಾರ್ಪಾಡುಹೊಂದುತ್ತದೆ.

### ಹಬ್ಬಿದ ಬಳ್ಳಿ

ಕೃಷ್ಣಮೂರ್ತಿ ಪುರಾಣಿಕ ಅವರು ರಚಿಸಿದ 'ಹಬ್ಬಿದ ಬಳ್ಳಿ' ಕಾದಂಬರಿಯಲ್ಲಿ ವಿಶ್ವೇಶ್ವರ ಭಟ್ಟರ ಮೊಮ್ಮಗ ರಾಮಾಶಾಸ್ತ್ರಿ ಶಾಲೆಯಲ್ಲಿ ಮೇಷ್ಟ್ರು. ಸರಕಾರಿ ಉದ್ಯೋಗದಲ್ಲಿದ್ದರೂ ಅನೇಕ ಮಂದಿ ಶಾಲಾ ಉಪಾಧ್ಯಾಯರು ತಮ್ಮ ವಿದ್ಯಾರ್ಥಿಗಳಲ್ಲಿ ದೇಶಪ್ರೇಮದ ಕಿಚ್ಚನ್ನು ಹೊತ್ತಿಸಿದ್ದಾರೆ. ಪ್ರತಿಯೊಂದು ಕಾದಂಬರಿಯಲ್ಲೂ ಇಂತಹ ಒಬ್ಬರು ಉಪಾಧ್ಯಾಯರ ಪಾತ್ರವನ್ನು ನಾವು ಕಾಣಬಹುದು. ಹೊಟ್ಟೆ ಪಾಡಿಗೋಸ್ಕರ ಸರಕಾರಿ ಶಾಲೆಗಳಲ್ಲಿ ಉಪಾಧ್ಯಾಯ ವೃತ್ತಿಯನ್ನು ಕೈಗೊಂಡಿದ್ದರೂ ತಮ್ಮ ವಿದ್ಯಾರ್ಥಿಗಳನ್ನು ದೇಶಸೇವೆಗಾಗಿ ಹುರಿದುಂಬಿಸಿದರು. ಬ್ರಿಟಿಷರು ನಮ್ಮನ್ನು ನಡೆಸಿಕೊಳ್ಳುತ್ತಿದ್ದ ರೀತಿ, ಭಾರತೀಯರಲ್ಲಿ ತೋರುತ್ತಿದ್ದ ತಾರತಮ್ಯ, ಶೋಷಣೆಯ ವಿವಿಧ ಮುಖಗಳನ್ನು ತಮ್ಮ ವಿದ್ಯಾರ್ಥಿಗಳಿಗೆ ಮನದಟ್ಟು ಮಾಡಿ ಮುಂದಿನ ಹೋರಾಟಕ್ಕೆ ಅವರನ್ನು ಸಜ್ಜುಗೊಳಿಸುತ್ತಿದ್ದರು. ಅಂತಹ ಉಪಾಧ್ಯಾಯರ ಪೈಕಿ ರಾಮಶಾಸ್ತ್ರಿ ಒಬ್ಬರು. ಅವರು "ನಾವು ಯಾರಿಗೂ ಹೆದರುವ ಅವಶ್ಯಕತೆಯಿಲ್ಲ. ಶೋಷಣೆಯನ್ನು ಪ್ರತಿಭಟಿಸಿರಿ. ನಾವೆಲ್ಲರೂ ಒಂದು ಎಂದು ಭಾವಿಸಿರಿ. ಮನಷ್ಯರಾಗಿ ಬಾಳಿರಿ, ಮನಷ್ಯನನ್ನು ಗೌರವಿಸಿರಿ. ಮಾನವೀಯತೆಯನ್ನು ಅರಿತುಕೊಳ್ಳಿರಿ. ಭಯವನ್ನು ಬೇರುಸಹಿತ ಕಿತ್ತೊಗೆದು ಮನುಷ್ಯರಾಗಿ ಬಾಳಿರಿ" ಎಂಬುದಾಗಿ ತನ್ನ ಶಿಷ್ಯಂದಿರಿಗೆ ಬೋಧಿಸತೊಡಗಿದರು. ಈ ವಾಣಿ ಭಾರತ ದೇಶದ ಮೂಲೆ ಮೂಲೆಗಳಲ್ಲೂ ಅನೇಕರ ಹೃದಯದಲ್ಲಿ, ಅನೇಕರ ನುಡಿಗಳಲ್ಲಿ ಮೊಳಗಿತು. ಜನರು ಮಂತ್ರ ಮುಗ್ಧರಾದವರಂತೆ ಈ ದಿವ್ಯವಾಣಿಯನ್ನು ಅಂತಃಕರಣದಲ್ಲಿ ಅಳವಡಿಸಿಕೊಳ್ಳಹತ್ತಿದರು. ಹೀಗೆ ಮುಂದಿನ ಹೋರಾಟಕ್ಕೆ ಜನರನ್ನು ತಯಾರು ಮಾಡಹತ್ತಿದರು.

ಹೋರಾಟಕ್ಕೆ ಮುಂದಿನ ಪೀಳಿಗೆಯನ್ನು ಸಜ್ಜುಗೊಳಿಸುವುದು ತಾವು ಸ್ವತಃ ಹೋರಾಡುವುದಕ್ಕಿಂತಲೂ ಹೆಚ್ಚಿನದು. ಅಂತಹ ಕೆಲಸವು ಅಂದು ಭಾರತದ ಅನೇಕ ಶಾಲೆಗಳಲ್ಲೂ ನಡೆಯುತ್ತಿತ್ತು. ಅದೇ ಸಮಯಕ್ಕೆ ಗಾಂಧೀಜಿಯವರು ಶಾಲಾ ಕಾಲೇಜುಗಳನ್ನು ತೊರೆದು ವಿದ್ಯಾರ್ಥಿಗಳೆಲ್ಲರೂ ಹೋರಾಟಕ್ಕೆ ಸಿದ್ಧರಾಗಬೇಕೆಂದು ಘೋಷಿಸಿದರು. ರಾಮಾಶಾಸ್ತ್ರಿಗಳ ಹಿರಿಯ ಮಗ ವಾಸುದೇವನೂ ಈ ಹೋರಾಟಕ್ಕೆ ಧುಮುಕುತ್ತಾನೆ. ಇವನಿಂದಾಗಿ ಗಂಗೇನಹಳ್ಳಿಯಲ್ಲಿ ಕೂಡ ಸ್ವಾತಂತ್ರ್ಯದ ಕಹಳೆಯು ಮೊಳಗಲು ಆರಂಭವಾಗುತ್ತದೆ. ಹೀಗೆ ಪ್ರತಿಯೊಂದು ಊರಿನಲ್ಲೂ ಗಾಂಧೀಜಿಯ ತತ್ವದಿಂದ ಪ್ರೇರಿತರಾದ ಯುವಕರು ಹೋರಾಟವನ್ನು ಸಂಘಟಿಸುತ್ತಾರೆ. ವಾಸುದೇವನ ಈ ಕಾರ್ಯವು ಗಂಗೇನಹಳ್ಳಿಯಿಂದ ಇತರ ಹಳ್ಳಿಗಳಿಗೆ ವ್ಯಾಪಿಸುತ್ತದೆ.

ವಾಸುದೇವನ ತಮ್ಮ ಜಯದೇವ ಕೂಡಾ ಅಣ್ಣನ ಹೋರಾಟದಲ್ಲಿ ಕೈಜೋಡಿಸುತ್ತಾನೆ. ಇಲ್ಲಿ ಕೂಡಾ ಪೊಲೀಸ್ ಅಧಿಕಾರಿಯ ಮಗಳು ಸುಂದರಾ ಜಯದೇವನ ಜೊತೆಯಲ್ಲಿ ಹೋರಾಟದಲ್ಲಿ ಭಾಗವಹಿಸುವುದು ವಿಶೇಷ. ಸುಂದರಾ, ರೋಹಿಣಿಯಂತಹ ಹೆಣ್ಣುಮಕ್ಕಳಿಗೆ ತಮ್ಮ ತಂದೆಯ ಅಧಿಕಾರಕ್ಕಿಂತ ತಮ್ಮ ದೇಶದ ಬಿಡುಗಡೆಯ ಮೇಲೆ ಹೆಚ್ಚು ಕಾಳಜಿಯಿದ್ದಂತೆ ಕಂಡುಬರುತ್ತದೆ. ವಾಸುದೇವ ವೇಷ ಬದಲಿಸಿ ಹಳ್ಳಿ ಹಳ್ಳಿಹಳ್ಳಿಗಳಲ್ಲಿ ಸುತ್ತಿ ೧೯೪೨ರ ಚಳವಳಿಯನ್ನು ತೀವ್ರಗೊಳಿಸುತ್ತಾನೆ, ಇವನು ಪೊಲೀಸರಿಗೆ 'ಕನಸಿನ ಭೂತವಾಗಿ' ಕಾಡುತ್ತಾನೆ.

**ಮೆರವಣಿಗೆ**

ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರ 'ಮೆರವಣಿಗೆ' ಕಾದಂಬರಿಯಲ್ಲಿ ಸುದರ್ಶನ ಮಲ್ಲಿಗೆ ಹಳ್ಳಿಯ ಸ್ವಾತಂತ್ರ್ಯ ಹೋರಾಟದಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತಾನೆ. ಗಾಂಧೀಜಿಯ ಸಾಬರ್ಮತಿ ಆಶ್ರಮದಲ್ಲಿದ್ದುಕೊಂಡು ನೂಲುವುದು, ಎಣ್ಣೆ ತೆಗೆಯುವುದು, ಕಾಗದವನ್ನು ತಯಾರಿಸುವುದು ಮುಂತಾದ ವಿಷಯಗಳನ್ನು ಕಲಿತುಕೊಂಡು ಸ್ವಾವಲಂಬನೆಯ ಮಹತ್ವವನ್ನು ತಿಳಿಸುತ್ತಾನೆ. ಅವನ ಮಾವ ಅನಂತು ಈ ಕೆಲಸದಲ್ಲಿ ನೇರವಾಗಿ ಭಾಗವಹಿಸುವುದಿಲ್ಲ. ಕೆಲವೊಮ್ಮೆ ಅಸಮಧಾನವನ್ನು ವ್ಯಕ್ತಪಡಿಸುತ್ತಾನೆ. ಆದರೂ ಕೂಡಾ ಅವನು ಸುದರ್ಶನನ ಈ ಎಲ್ಲಾ ವಿಧಾಯಕ ಕಾರ್ಯಕ್ರಮಗಳನ್ನು ಸಹಿಸಿಕೊಳ್ಳಲು ಕಾರಣ ಅವನ ಹೃದಯದಲ್ಲಿ ಕೂಡ ಎಲ್ಲೋ ಒಂದು ಕಡೆ ಮನೆ ಮಾಡಿದ್ದ ದೇಶಭಕ್ತಿ. ಬಿ.ಎ ಪಾಸಾದ ಸುದರ್ಶನ ಚುರುಕು ಹುಡುಗ. ಮನಸ್ಸು ಮಾಡಿದರೆ ಸರಕಾರಿ ಉದ್ಯೋಗ ದೊರಕುತ್ತಿತ್ತು. ಮದುವೆಯಾದ ತನ್ನ ತಂಗಿಗೆ ಮದುವೆ ಮಾಡಬೇಕಿತ್ತು, ವಿಧವೆಯಾಗಿ ಮಾವನ ಮನೆಯ ಹಂಗಿನಲ್ಲಿರುವ ತಾಯಿಯನ್ನು ನೋಡಿಕೊಳ್ಳಬೇಕಿತ್ತು, ತನ್ನ ತಂದೆ ಮಾಡಿದ ಸಾಲವನ್ನು ತೀರಿಸುವ ಹೊಣೆಗಾರಿಕೆ ಅವನ ಮೇಲಿತ್ತು. ಆದರೆ ಇವೆಲ್ಲಕ್ಕಿಂತ ಅವನಿಗೆ ದೇಶಸೇವೆಯೇ ಮುಖ್ಯವಾಗುತ್ತದೆ. ಮಾವನ ಒತ್ತಾಯಕ್ಕೆ ಮಣಿದು ಮದರಾಸಿನ ಒಂದು ಕಾರ್ಖಾನೆಯಲ್ಲಿ ಕೆಲಸಕ್ಕೆ ಸೇರುತ್ತಾನೆ. ಒಳ್ಳೆಯ ಸಂಬಳವು ದೊರಕುತ್ತದೆ. ಆದರೆ ಅವನಿಗೆ ಈ ಕೆಲಸವು ರುಚಿಸಲಿಲ್ಲ. ತನ್ನ ಸ್ವಾರ್ಥಕ್ಕೋಸ್ಕರ ದೇಶಸೇವೆಯನ್ನು ತ್ಯಜಿಸಿದ್ದು ಅವನ ಖಿನ್ನತೆಗೆ ಕಾರಣವಾಗುತ್ತದೆ. ಒಂದು ರೀತಿಯಲ್ಲಿ ಮಾನಸಿಕ

ರೋಗಿಯಾಗಿ ಮಾರ್ಪಾಡು ಹೊಂದುತ್ತಾನೆ. ಅವನ ರೋಗದ ಕಾರಣದಿಂದ ಅವನು ಕೆಲಸ ಬಿಟ್ಟು ಮರಳಿ ಮಲ್ಲಿಗೆ ಹಳ್ಳಿಗೆ ಬರುತ್ತಾನೆ. ಅವನಿಗೆ ಹಿಡಿದ ಹುಚ್ಚು ದೇಶಭಕ್ತಿಯ ಹುಚ್ಚು. ಮಲ್ಲಿಗೆ ಹಳ್ಳಿಗೆ ಮರಳಿದ ತಕ್ಷಣ ಸುದರ್ಶನ ಚೇತರಿಸಿಕೊಂಡು ಮತ್ತೆ ವಿಧಾಯಕ ಕಾರ್ಯಕ್ರಮಗಳನ್ನು ಆರಂಭಿಸುತ್ತಾನೆ.

ಸುದರ್ಶನನ ಗ್ರಾಮೋದ್ಧಾರವು ಸರಕಾರದ ದೃಷ್ಟಿಯಲ್ಲಿ ರಾಜದ್ರೋಹವಾಗುತ್ತದೆ. ಅವನು ಸ್ಥಾಪಿಸಿದ ಸ್ವರಾಜ್ಯ ಆಶ್ರಮವನ್ನು ಪೊಲೀಸರು ಮುತ್ತಿಗೆ ಹಾಕುತ್ತಾರೆ. ಆ ಸಂದರ್ಭದಲ್ಲಿ ಸರಕಾರಿ ಅಧಿಕಾರಿಯಾದ ಪಟೇಲ ಬೊಮ್ಮೇಗೌಡ ಸುದರ್ಶನನಿಗೆ ತನ್ನ ಮನೆಯಲ್ಲಿ ಆಶ್ರಯ ಕೊಡುತ್ತಾನೆ. ತನ್ನ ಪಟೇಲತನಕ್ಕೆ ರಾಜೀನಾಮೆ ಕೊಡುತ್ತಾನೆ. ಸ್ವಾತಂತ್ರ್ಯ ಚಳವಳಿಯ ಸಂದರ್ಭದಲ್ಲಿ ಹೀಗೆ ಅನೇಕ ಮಂದಿ ಪಟೇಲರು ತಮ್ಮ ಪಟೇಲತನಕ್ಕೆ ರಾಜೀನಾಮೆ ಕೊಟ್ಟು ಹೋರಾಟದಲ್ಲಿ ಪಾಲ್ಗೊಳ್ಳುತ್ತಾರೆ. ಬೊಮ್ಮೇಗೌಡನ ಆಸ್ತಿ ಬದುಕನ್ನು ಕೂಡಾ ಸರಕಾರ ಹರಾಜು ಹಾಕುತ್ತದೆ.

ಮಲ್ಲಿಗೆ ಹಳ್ಳಿಯಲ್ಲಿ ಕೂಡಾ ಚಳವಳಿಗಾರರು ತಮ್ಮ ಮನೆ ಮಠವನ್ನು ಕಳೆದುಕೊಳ್ಳುತ್ತಾರೆ. ಆದರೆ ಅವರು ತಮ್ಮ ಆಸ್ತಿ, ಬದುಕಿನ ಕುರಿತು ತಲೆ ಕೆಡಿಸಿಕೊಳ್ಳುವುದಿಲ್ಲ. ಸ್ವಾತಂತ್ರ್ಯ ದೊರಕಿದರೆ ಆಸ್ತಿ ಬದುಕೆಲ್ಲವನ್ನು ಮರಳಿ ಸಂಪಾದಿಸಬಹುದು ಎಂಬ ಭಾವನೆ ಆ ಜನರಿಗಿತ್ತು. ಗಾಂಧೀಜಿಯ ಮಾತಿಗೆ ಇವರು ಪ್ರಬಲವಾಗಿಯೇ ಪ್ರತಿಸ್ಪಂಧಿಸಿದರು. ತಮ್ಮ ಮನೆ ಮಠ ಎಲ್ಲವನ್ನೂ ಕಳೆದುಕೊಂಡು ಬೀದಿಪಾಲಾದರೂ ಆ ಜನ ದುಃಖಿಸಲಿಲ್ಲ. ಪೊಲೀಸರ ಲಾಠಿ ಏಟನ್ನು ಸಹಿಸಿದರು. ಸ್ವಾತಂತ್ರ್ಯಕ್ಕಾಗಿ ತಾವು ಯಾವ ತ್ಯಾಗಕ್ಕೂ ತಯಾರು ಎಂಬ ಸತ್ಯವನ್ನು ಕರ್ನಾಟಕದ ಪ್ರತಿ ಹಳ್ಳಿ ಹಳ್ಳಿಯ ಜನರು ತೋರಿಸಿಕೊಟ್ಟರು.

**ಮೂರಾಬಟ್ಟೆ**

ಇನಾಂದರ್ ಅವರ 'ಮೂರಾಬಟ್ಟೆ' ಕಾದಂಬರಿಯಲ್ಲಿ ಶಾಮಣ್ಣ ಎನ್ನುವ ಯುವಕ ಮರಿಗಾಂಧಿಯೆಂದೇ ಪ್ರಸಿದ್ಧನಾಗಿದ್ದನು. ಅತ್ಯಂತ ಬಡತನದಲ್ಲಿದ್ದ ಈತ ಬುದ್ಧಿವಂತ, ಕಷ್ಟಪಟ್ಟು ಓದಿ ಬಿ.ಎ ಪಾಸಾಗಿದ್ದನು. ಗಾಂಧೀಜಿಯ ಆಶಯದಂತೆ ಖಾದಿ ಧರಿಸುವುದು, ಗ್ರಾಮ ಸುಧಾರಣೆ, ಅಗತ್ಯವಿರುವಲ್ಲೆಲ್ಲಾ ಸರಕಾರದ ಜೊತೆಯಲ್ಲಿ ಅಸಹಕಾರ ಚಳುವಳಿಯಲ್ಲಿ ಭಾಗವಹಿಸುತ್ತಿದ್ದನು. ಇಲ್ಲಿ ರಾಮಣ್ಣನ ಸ್ನೇಹಿತ ಶಾಮಣ್ಣ ತಾನು ಕೂಡಾ ಬಿ.ಎ ಓದಿ ಲಾ ಪಾಸು ಮಾಡಿ ಮುಂಬಯಿ ಹೈಕೋರ್ಟ್‌ನ ವಕೀಲನಾಗಿದ್ದನು. ಅವನಿಗೆ ತನ್ನ ಸುಖ, ಹಣಗಳಿಕೆ, ಸ್ಥಾನಮಾನಗಳೇ ಹೆಚ್ಚಾಗುತ್ತದೆಯೇ ಹೊರತು ದೇಶಸೇವೆ ಮುಖ್ಯವಾಗುವುದಿಲ್ಲ. ಆದರೆ ಬಡವನಾದ ಶಾಮಣ್ಣನಿಗೆ ದೇಶಸೇವೆಯು ತನ್ನ ಮನೆ, ತಾಯಿ ತಂಗಿಗಿಂತ ಹೆಚ್ಚಾಗುತ್ತದೆ. ಅದಕ್ಕೋಸ್ಕರ ಅವನು ತನ್ನ ಸ್ವಂತ ಸುಖವನ್ನು ತ್ಯಾಗ ಮಾಡುತ್ತಾನೆ.

ಶಾಮಣ್ಣನಿಗೆ ವೈಯಕ್ತಿಕಕ ಸಮಸ್ಯೆ ಹಾಸಿ ಹೊದ್ದುಕೊಳ್ಳುವಷ್ಟರ ಮಟ್ಟಿಗೆ ಇದ್ದರೂ ಅವನು ದೇಶದ ಕುರಿತು ಚಿಂತಿಸುತ್ತಾನೆ. ಹಳ್ಳಿಯ ಜನರಿಗೆ ಸ್ವಾವಲಂಬನೆಯ ಮಹತ್ವವನ್ನು ವಿವರಿಸುತ್ತಾನೆ.

ಆದರೆ ಗಾಂಧೀಜಿ ಹೇಳಿದಷ್ಟು ಗ್ರಾಮೋದ್ಧಾರ, ಸ್ವದೇಶಿ ಚಳವಳಿ ಸುಲಭವಾಗಿರಲಿಲ್ಲ. ಯಾಕೆಂದರೆ ಇನ್ನೂರು ವರ್ಷಗಳ ದಾಸ್ಯದ ಫಲವಾಗಿ ಜನ ಸ್ವಾವಲಂಬನೆಯನ್ನೇ ಮರೆತಿದ್ದರು. ಅವನು ಕೈಗೊಂಡ ಗ್ರಾಮೋದ್ಧಾರ ಹಳ್ಳಿಗರ ಅಜ್ಞಾನದಿಂದ ಕುಸಿದುಬೀಳುತ್ತದೆ.

ಶಾಮಣ್ಣ ನಾಡಗೌಡನಲ್ಲಿ ಒತ್ತೆಯಿಟ್ಟ ತನ್ನ ಹೊಲವನ್ನು ಬಿಡಿಸಿ ತೆಗೆದುಕೊಳ್ಳಲು ರಾಮಣ್ಣನನ್ನು ಕೇಳಿಕೊಳ್ಳಬೇಕೆಂದು ಮುಂಬಯಿಗೆ ಬರುತ್ತಾನೆ. ಆ ಸಂದರ್ಭದಲ್ಲಿಯೇ ಗಾಂಧೀಜಿ 'ಮಾಡು ಇಲ್ಲವೇ ಮಡಿ' ಚಳವಳಿಗೆ ಕರೆಕೊಟ್ಟಿರುತ್ತಾರೆ. ಮುಂಬಯಿಯಲ್ಲಿ ಆಗಸ್ಟ್ ಎಂಟರಂದು ಮಧ್ಯರಾತ್ರಿ ಗಾಂಧೀಜಿಯನ್ನೊಳಗೊಂಡಂತೆ ಎಲ್ಲಾ ನಾಯಕರ ಬಂಧನವಾಗುತ್ತದೆ. ಮುಂಬಯಿಯಲ್ಲಿ ಭಯಂಕರವಾದ ಮೆರವಣಿಗೆ ಆರಂಭವಾಗುತ್ತದೆ. ಕಾಂಗ್ರೆಸ್ ಜನರನ್ನು ಚದುರಿಸಲು ಪೊಲೀಸರು ಲಾಠಿ, ಗುಂಡುಗಳನ್ನು ಬಳಸುತ್ತಾರೆ. ಅಹಿಂಸೆಯಿಂದ ಆರಂಭವಾದ ಮೆರೆವಣಿಗೆ ಹಿಂಸೆಗೆ ತಿರುಗುತ್ತದೆ. ಸಹಸ್ರ ಸಂಖ್ಯೆಯ ಹೆಣ ಉರುಳುತ್ತದೆ. ಲಕ್ಷೋಪಲಕ್ಷ ಜನರ ಬಂಧನವಾಗುತ್ತದೆ. ಹೀಗೆ ಬಂಧನಕ್ಕೊಳಪಟ್ಟವರಲ್ಲಿ ಶಾಮಣ್ಣ ಒಬ್ಬ.

ಶಾಮಣ್ಣನ ಸ್ನೇಹಿತ ರಾಮಣ್ಣ ಸರಕಾರಿ ವಕೀಲ. ದುರಾದೃಷ್ಟವಶಾತ್ ಅವನು ಶಾಮಣ್ಣನಿಗೆ ವಿರುದ್ಧವಾಗಿ ಸರಕಾರದ ಪರವಾಗಿ ವಾದಿಸುತ್ತಾನೆ. ಸ್ನೇಹಕ್ಕಿಂತ ರಾಮಣ್ಣನಿಗೆ ತನ್ನ ಸ್ಥಾನಮಾನವೇ ಮುಖ್ಯವಾಗುತ್ತದೆ. ಶಾಮಣ್ಣನ ಬಂಧನವಾಗುತ್ತದೆ. ಅವನ ಹೊಲ ಮನೆಗಳನ್ನು ಸರಕಾರ ಹರಾಜು ಹಾಕುತ್ತದೆ. ಮುದಿ ತಾಯಿಯ ಗೋಳಂತೂ ಹೇಳತೀರದು. ದಿನದಿಂದ ದಿನಕ್ಕೆ ಅವನ ತಾಯಿಯ ದೇಹಸ್ಥಿತಿ ಹದಗೆಡುತ್ತದೆ. ಕೊನೆಗೂ ತಾಯಿಯನ್ನು ಜೀವಂತವಾಗಿ ಕಾಣುವ ಆಸೆಯಿಂದ ತನ್ನ ಧ್ಯೇಯವನ್ನು ಬಲಿಕೊಟ್ಟು ಕ್ಷಮಾಪಣ ಪತ್ರ ಬರೆದು ಜೈಲಿನಿಂದ ಹೊರಬರುತ್ತಾನೆ. ಆದರೆ ಅಷ್ಟರಲ್ಲಾಗಲೇ ಅವನ ತಾಯಿ ಇಹಲೋಕದ ಯಾತ್ರೆಯನ್ನು ಮುಗಿಸಿರುತ್ತಾಳೆ. ಹೀಗೆ ದೇಶಕ್ಕೋಸ್ಕರ ಶಾಮಣ್ಣನ ಬದುಕು ಮೂರಾಬಟ್ಟೆಯಾಗುತ್ತದೆ. ತಾಯಿ, ತನ್ನ ಮನೆ ಎಲ್ಲವನ್ನೂ ಕಳೆದುಕೊಳ್ಳುತ್ತಾನೆ. ಆದರೆ ದಾಸ್ಯದ ಅಜ್ಞಾನದಲ್ಲಿ ಮೈಮರೆತ ಜನರನ್ನು ಸುಧಾರಿಸುವುದು ಅಷ್ಟೊಂದು ಸುಲಭವಾಗಿರಲಿಲ್ಲ. ಬ್ರಿಟಿಷ್ ಆಡಳಿತದ ವಿರುದ್ಧ ಹೋರಾಡಿದವರು ಬಡವರು. ಅವರು ದೇಶಕ್ಕಾಗಿ ಸರ್ವಸಮರ್ಪಣೆ ಮಾಡುತ್ತಾರೆ. ಸ್ವತಂತ್ರ ಭಾರತದಲ್ಲಿ ಸುಖ ಪಟ್ಟವರು ಮಾತ್ರ ಬ್ರಿಟಿಷ್ ಬೆಂಬಲಿತ ಶ್ರೀಮಂತರು ಹಾಗೂ ವಿದ್ಯಾವಂತ ವರ್ಗ.

ಈ ಕಾದಂಬರಿಯಲ್ಲಿಯೂ ನಾಗೇಶ ಮಾಸ್ತರರು ದೇಶದ ಬಗ್ಗೆ ಕಾಳಜಿಯುಳ್ಳವರು. ಜನರಲ್ಲಿ ಸ್ವಾತಂತ್ರ್ಯದ ಅರಿವನ್ನು ಮೂಡಿಸಲು ತನ್ನದೇ ಆದ ರೀತಿಯಲ್ಲಿ ಪ್ರಯತ್ನಿಸುತ್ತಾರೆ. ಅಂದು ಅನಕ್ಷರಸ್ಥರೇ ಜಾಸ್ತಿಯಾಗಿದ್ದ ಹಳ್ಳಿಗಳಲ್ಲಿ ನಾಗೇಶ ಮಾಸ್ತರರು ಪತ್ರಿಕೆಯಲ್ಲಿ ಬರುವ ದೇಶ ವಿದೇಶದ ಸುದ್ದಿಯನ್ನು ಜನರಿಗೆ ಓದಿ ಹೇಳುತ್ತಾರೆ. ಈ ರೀತಿಯಾಗಿ ಜನರಲ್ಲಿ ತಮ್ಮ ದೇಶದ ಕುರಿತಾಗಿ ಜ್ಞಾನವನ್ನು ಮೂಡಿಸುವುದು, ದೇಶಾಭಿಮಾನವನ್ನು ಮೂಡಿಸುವುದು ಯಾವ ದೇಶ ಸೇವೆಗಿಂತಲೂ ಕಡಿಮೆಯಾದುದಲ್ಲ.

**ಔದಾರ್ಯದ ಉರುಳಲ್ಲಿ**

ಈ ಕಾದಂಬರಿಯ ನಾಯಕ ರಾಧಕೃಷ್ಣ ದೇಶ ಸೇವೆಯ ಹುಚ್ಚನ್ನು ತಲೆಗೆ ಅಂಟಿಸಿ ಕೊಂಡವನು. ಅವನು ಉತ್ತರ ಕನ್ನಡ ಜಿಲ್ಲೆಗೆ ಬರುತ್ತಾನೆ. ಅಲ್ಲಿಯ ಜನರು ಮಾತ್ರ ನಿಜವಾಗಿಯೂ ಗಾಂಧೀಜಿಯ ಮಾತಿಗೆ ಸ್ಪಂಧಿಸಿದವರು. ಅಲ್ಲಿ ಉಪ್ಪಿನ ಸತ್ಯಾಗ್ರಹ, ಅರಣ್ಯ ಸತ್ಯಾಗ್ರಹ, ಕರನಿರಾಕರಣೆ ಬಹಳ ಜೋರಾಗಿಯೇ ನಡೆಯುತ್ತದೆ. ಕರ್ನಾಟಕದಲ್ಲಿ ಸತ್ಯಾಗ್ರಹ ತೀವ್ರ ಸ್ವರೂಪವನ್ನು ಪಡೆದುಕೊಂಡದ್ದು ಉತ್ತರಕನ್ನಡ ಜಿಲ್ಲೆಯಲ್ಲಿ. ಹೆಂಗಸರು, ಮಕ್ಕಳು, ವೃದ್ಧರು ತಮ್ಮ ಸ್ವಂತ ಸುಖವನ್ನು ತ್ಯಜಿಸಿ ಸತ್ಯಾಗ್ರಹಕ್ಕೆ ಧುಮುಕಿದರು. ನಿಜವಾಗಿ ಹೇಳುವುದಾದರೆ ದಕ್ಷಿಣಕನ್ನಡ ಜಿಲ್ಲೆ ಅತ್ಯಂತ ವಿದ್ಯೆಯಲ್ಲಿ ಮುಂದುವರಿದ ಜಿಲ್ಲೆಯಾಗಿತ್ತು. ಆದರೆ ದೇಶಸೇವೆಗೆ ಬಂದರೆ ಕಾರ್ನಾಡ್ ಸದಾಶಿವರಾಯರಂತಹ ಒಬ್ಬಿಬ್ಬರನ್ನು ಹೊರತುಪಡಿಸಿದರೆ ಬಹಳಷ್ಟು ಜನರು ದೇಶದ ಆಗುಹೋಗುಗಳ ಕುರಿತಾಗಿ ತಲೆಕೆಡಿಸಿದೊಂಡವರಲ್ಲ. ಆದರೆ ಮಲೆನಾಡಿನ ಜಿಲ್ಲೆಗಳಾದ ಶಿರ್ಸಿ, ಸಿದ್ಧಾಪುರ, ಅಂಕೋಲ ಮುಂತಾದ ಹಳ್ಳಿಯ ಜನರಗೆ ಹೇಳಿಕೊಳ್ಳುವಂತಹ ವಿದ್ಯೆಯೇನೂ ಇರಲಿಲ್ಲ. ಆದರೆ ಗಾಂಧೀಜಿಯ ಮಾತಿಗೆ ನಿಜವಾಗಿ ಮನ್ನಣೆಯಿತ್ತು ತಮ್ಮ ಸರ್ವಸ್ವವನ್ನು ತ್ಯಾಗ ಮಾಡಿದುದು ಈ ಜನರು. ರಾಧಾಕೃಷ್ಣ ಈ ಊರುಗಳಿಗೆ ಬಂದು ತನ್ನ ಕೈಲಾದ ಸಹಾಯವನ್ನು ಮಾಡುತ್ತಾನೆ. ಅಲ್ಲಿಯ ನಿರ್ಗತಿಕ ಮಕ್ಕಳನ್ನು ತಂದು ಅವರ ತಂದೆ ತಾಯಿ ಜೈಲಿನಿಂದ ಬಿಡುಗಡೆಯಾಗಿ ಬರುವ ತನಕ ತನ್ನ ಆಶ್ರಮದಲ್ಲಿ ಆಶ್ರಯವನ್ನು ಕೊಡುತ್ತಾನೆ.

**ಈಸೂರಿನ ದುರಂತ**

ಕರ್ನಾಟಕದ ಸ್ವಾತಂತ್ರ್ಯ ಸಂಗ್ರಾಮದ ಇತಿಹಾಸದಲ್ಲಿ ಈಸೂರು ಪ್ರಮುಖ ಸ್ಥಾನವನ್ನು ಪಡೆದುಕೊಳ್ಳುತ್ತದೆ. ದೇಶದ ಸ್ವಾತಂತ್ರ್ಯಕ್ಕಾಗಿ ಪಡಬಾರದ ಕಷ್ಟ ನಷ್ಟಗಳನ್ನು ಈ ಊರಿನ ಜನರು ಅನುಭವಿಸಿದ್ದಾರೆ. ಆರ್. ಬಸವರಾಜ್ ಅವರು ಬರೆದ 'ಈಸೂರಿನ ಚಿರಂಜೀವಿಗಳು' ಕಾದಂಬರಿಯು ಆ ಊರಿನ ಜನರ ತ್ಯಾಗ ಬಲಿದಾನವನ್ನು ಸಮರ್ಥವಾಗಿ ಬಿಂಬಿಸುತ್ತದೆ. ಅಂದು ಕೀರ್ತನೆ, ಹರಿಕತೆ ಕೂಡ ಜನರಲ್ಲಿ ಜಾಗೃತಿಯನ್ನು ಮೂಡಿಸುವ ಮಾಧ್ಯಮವಾಗಿ ಬಳಕೆಯಾಗುತ್ತಿದ್ದುದನ್ನು ಕಾಣುತ್ತೇವೆ. ಇಲ್ಲಿ ವೀರಭದ್ರ ದೇವರ ಗುಡಿಯು ಜನರೆಲ್ಲರೂ ಒಂದುಗೂಡುವ ತಾಣವಾಗುತ್ತದೆ. ಪುರಾಣದ ಉದಾಹರಣೆಗಳನ್ನು ನೀಡುವುದರ ಮೂಲಕ ವರ್ತಮಾನದ ಸ್ಥಿತಿಯ ಕುರಿತು ಹಾವಣ್ಣ ಜನರಲ್ಲಿ ಜಾಗೃತಿಯನ್ನು ಮೂಡಿಸುತ್ತಿದ್ದನು– "ಈಸೂರಿನ ವೀರಪುತ್ರರೇ, ಪುತ್ರಿಯರೇ– ಕೇಳಿರಿ ಕೇಳಿರಿ, ದುರ್ಯೋಧನ ಮೋಸದ ಪಗಡೆಯಾಟ ಆಡಿ ಪಾಂಡವರನ್ನು ಕಾಡಿಗೆ ಅಟ್ಟಿದ. ಇದಕ್ಕೂ ಮುಂಚೆ ಭೀಮಸೇನನಿಗೆ ವಿಷಬೆರೆಸಿ ಲಡ್ಡುಗಳನ್ನು ತಿನ್ನಿಸಿ ಅವನನ್ನು ನದಿಗೆ ಎಸೆದ. ಪಾಂಡವರನ್ನು ಅರಗಿನ ಮನೆಯಲ್ಲಿ ಕೂಡಿ, ಬೆಂಕಿ ಹಚ್ಚಿ ಬೂದಿಮಾಡುವ ಕುತಂತ್ರ ನಡೆಸಿದ. ಇಷ್ಟೆಲ್ಲವನ್ನೂ ಮಾಡಿದ್ದು ಏತಕ್ಕೋಸ್ಕರ?

ಅದು ಈ ಭೂಮಿಗಾಗಿ, ಅವರ ರಾಜ್ಯವೂ ತನಗೇ ಸೇರಬೇಕು. ಈ ಭೂಮಂಡಲಕ್ಕೆಲ್ಲಾ ತಾನೊಬ್ಬನೇ ಚಕ್ರವರ್ತಿಯಾಗಬೇಕು. ಉಳಿದವರೆಲ್ಲಾ ತನ್ನ ಸೇವೆ ಮಾಡಿ ಗುಲಾಮರಂತೆ

ಬಾಳಬೇಕೆಂಬ ಸ್ವಾರ್ಥದಿಂದ. ಆದರೆ ಕೊನೆಗೆ ಆದದ್ದೇನು? ಮಣ್ಣಿನ ವ್ಯಾಮೋಹದಿಂದ ಸೋದರರೊಂದಿಗೆ ಯುದ್ಧ ಮಾಡಿದ ಕೌರವ ಕೊನೆಗೆ ವಂಶ ಸಹಿತ ಮಣ್ಣಿನಲ್ಲಿ ಮಣ್ಣಾಗಿ ಹೋದ...

ಇಂದೂ ದುರ್ಯೋಧನ, ರಾವಣನಂಥವರು ಇದ್ದಾರೆ. ಸ್ವಾತಂತ್ರ್ಯವನ್ನು ಬೇಡಿದರೆ, ಬೇಡಿ ಬಂದೂಕುಗಳನ್ನು ತೋರಿಸುವ ರಾಕ್ಷಸರಿದ್ದಾರೆ. ಎಲ್ಲಿಂದಲೋ ಬಂದ ಕೆಂಪು ಮೂತಿಯವರು ನಮ್ಮ ತಲೆಯೇರಿ ಕೂತಿದ್ದಾರೆ. ನಮ್ಮ ಅನ್ನ ಉಂಡು ನಮಗೆ ದ್ರೋಹ ಬಗೆಯುತ್ತಿದ್ದಾರೆ. ಇಂತಹ ದುಷ್ಟ ಶಕ್ತಿಗಳನ್ನು ಮೆಟ್ಟಿ ನಿಲ್ಲುವುದೇ ನಮ್ಮೆಲ್ಲರ ಸದ್ಯದ ಕರ್ತವ್ಯ. ಸ್ವಾತಂತ್ರ್ಯ ಸಾಧನೆಯೇ ನಮ್ಮ ಜೀವನದ ಗುರಿ. ಸದ್ಯಕ್ಕೆ ಅದೊಂದೇ ನಮ್ಮ ತಾರಕಮಂತ್ರ, ನಮ್ಮ ಸರ್ವಜ್ಞ ಕವಿ ಏನು ಹೇಳಿದ್ದಾನೆ ಗೊತ್ತೇ?

ತಂತಿವಾದ್ಯವು ಲೇಸು
ಮಂತ್ರಿಯ ಕೆಳೆ ಲೇಸು
ಯಂತ್ರವಾಹಕನ ದಯೆ ಲೇಸು ಜಗದಿ
ಸ್ವತಂತ್ರವೇ ಲೇಸು ಸರ್ವಜ್ಞ

ಎಂದಿದ್ದಾನೆ.[೧೦]

ಈ ರೀತಿಯಾಗಿ ಹಾವಣ್ಣನಂತಹ ಸಾಮಾನ್ಯ ವ್ಯಕ್ತಿ ತನಗೆ ಗೊತ್ತಿದ್ದ ವಿದ್ಯೆಯನ್ನೇ ದೇಶದ ಜನತೆಯನ್ನು ಬಡಿದೆಬ್ಬಿಸಲು ಬಳಸುತ್ತಾನೆ. ಅವನ ಆವೇಶ ಪೂರಿತವಾದ ಮಾತುಗಳನ್ನು ಕೇಳಿದ ಈಸೂರಿನ ಜನತೆ ವೀರಭದ್ರ ದೇವರ ಸಮ್ಮುಖದಲ್ಲಿ ತಾವು ದೇಶಕ್ಕೋಸ್ಕರ ಮಾಡುತ್ತೇವೆ ಅಥವಾ ಮಡಿಯುತ್ತೇವೆ ಎಂಬ ಪ್ರತಿಜ್ಞೆ ಕೈಗೊಳ್ಳುತ್ತಾರೆ.

### ಹಳ್ಳ ಬಂತು ಹಳ್ಳ

ಶ್ರೀನಿವಾಸ ವೈದ್ಯರ 'ಹಳ್ಳ ಬಂತು ಹಳ್ಳ' ಕಾದಂಬರಿಯು ಸುಮಾರು ೧೮೫೭ರಿಂದ ೧೯೪೭ರವರೆಗಿನ ಜನಜೀವನದ ಚಿತ್ರಣವನ್ನು ನೀಡುತ್ತಲೇ ಸ್ವಾತಂತ್ರ್ಯ ಹೋರಾಟ ಪಡೆದುಕೊಂಡ ವಿವಿಧ ಮಜಲುಗಳನ್ನು ಪರಿಚಯಿಸುತ್ತದೆ. ಇಲ್ಲಿ ನಾನಾಸಾಹೇಬ ದಕ್ಷಿಣದ ರಾಜರುಗಳ ಸಹಾಯವನ್ನು ಯಾಚಿಸುವುದಕ್ಕೋಸ್ಕರ ಪದ್ಮನಾಭ ಮತ್ತು ಕಮಲನಾಭ ಎಂಬಿಬ್ಬರು ತನ್ನ ನಂಬುಗೆಯ ಬಂಟರನ್ನು ಕಳುಹಿಸಿಕೊಡುತ್ತಾನೆ. ಅವರು ನರಗುಂದದ ಬಾಬಾಸಾಹೇಬನ ಸಹಾಯವನ್ನು ಯಾಚಿಸಲು ಏನೋ ಗುಪ್ತ ಸಂದೇಶವನ್ನು ತಲುಪಿಸಲು ಹೋಗುವಾಗ ನವಲಗುಂದದಲ್ಲಿ ಸೆರೆಸಿಗುತ್ತಾರೆ. ಇತ್ತ ನರಗುಂದದಲ್ಲಿ ಬಾಬಾಸಾಹೇಬ ಪೊಲಿಟಕಲ್ ಏಜೆಂಟ್ ಮ್ಯಾನ್ಸನ್‌ನನ್ನು ಕೊಚ್ಚಿಕೊಂದು ಸರಕಾರದ ವಿರುದ್ಧ ಯುದ್ಧ ಸಾರಿದ್ದ. ಹೀಗೆ ನರಗುಂದ ಹೊತ್ತಿ ಉರಿಯುತ್ತಿದ್ದ ಕಾಲವದು.

ಆದರೂ ಪದ್ಮನಾಭ ಮತ್ತು ಕಮಲನಾಭನಿಗೆ ತಮಗೆ ವಹಿಸಿದ ಕೆಲಸವನ್ನು ಮಾಡುವ ಆತುರವಿತ್ತು. ನರಗುಂದದಲ್ಲಿ ಇಂತಹ ಭೀಕರ ಕೊಲೆ ದರೋಡೆ ಬ್ರಿಟಿಷರ ಅಟ್ಟಹಾಸದ ಕತೆಯನ್ನು ಕೇಳಿ ಕೂಡಾ ಅವರ ಧೈರ್ಯ ಕಡಿಮೆಯಾಗಲಿಲ್ಲ. ಒಂದು ದಿನ ಪದ್ಮನಾಭ ಕಾವಲುಗಾರರ ಕಣ್ಣು ತಪ್ಪಿಸಿಕೊಂಡು ನಾಗಾಲೋಟದಲ್ಲಿ ಕುದರೆಯನ್ನು ಓಡಿಸಿಕೊಂಡು ಸತ್ತೆನೋ ಕೆಟ್ಟೆನೋ ಎಂದು ಯೋಚಿಸದೆ ಅಲ್ಲಿಂದ ತಪ್ಪಿಸಿಕೊಳ್ಳುತ್ತಾನೆ. ನಾಲ್ಕು ದಿನದ ನಂತರ ಬಂದ ಸುದ್ದಿಯ ಪ್ರಕಾರ ಪದ್ಮನಾಭನನ್ನು ವೆಂಕಟೇಶದೇವರ ಗುಡಿ ಬಯಲಿನಲ್ಲಿ ಗಲ್ಲಿಗೆ ಹಾಕಿದ ಸುದ್ದಿ ಬರುತ್ತದೆ. ಅವನಲ್ಲಿ ಪೇಶ್ವೆ ನಾನಾಸಾಹೇಬನು ಬಾಬಾಸಾಹೇಬನಿಗೆ ಬರೆದ ಪತ್ರ ಸಿಕ್ಕುತ್ತದೆ. ಪದ್ಮನಾಭನಿಗೆ ತಾನು ಬಾಬಾಸಾಹೇಬನನ್ನು ಭೇಟಿಯಾಗುವುದು, ನಾನಾಸಾಹೇಬನ ಪತ್ರವನ್ನು ಅವನಿಗೆ ನೀಡುವುದು ಸುಲಭದ ಕೆಲಸವಲ್ಲವೆಂದು ತಿಳಿದಿತ್ತು. ಹೊತ್ತಿ ಉರಿಯುತ್ತಿರುವ ನವಲಗುಂದಕ್ಕೆ ಹೋದರೆ ತಾನು ಜೀವಂತ ಬರುವುದು ಅಸಾಧ್ಯವೆಂದೂ ತಿಳಿದಿತ್ತು. ಆದರೂ ಅವನಲ್ಲಿದ್ದ ಸ್ವಾಮಿನಿಷ್ಠೆ ಹಾಗೂ ದೇಶಭಕ್ತಿಯು ಅವನ ಜೀವಕ್ಕಿಂತ ಹೆಚ್ಚಿನದ್ದಾಗಿತ್ತು.

೧೮೫೭ರ ನಂತರ ಸುಮಾರು ಒಂದು ತಲೆಮಾರಿನವರೆಗೆ ನವಲಗುಂದದಲ್ಲಿ ಹೇಳಿಕೊಳ್ಳುವಂತಹ ಯಾವ ಚಳವಳಿಯು ನಡೆಯುವುದಿಲ್ಲ. ೧೯೩೦ರ ಸುಮಾರಿಗೆ ಕಮಲನಾಭ ಪಂತರ ಮೊಮ್ಮಗ ರಾಮು ಕಾಂಗ್ರಸ್ ಚಳವಳಿಗೆ ಸೇರುವುದರ ಮೂಲಕ ನವಲಗುಂದದಂತಹ ಸಣ್ಣ ಊರಿನಲ್ಲಿ ಕೂಡಾ ಸ್ವಾತಂತ್ರ್ಯ ಹೋರಾಟದ ಕಾವು ಏರತೊಡಗುತ್ತದೆ. ರಾಮು ನವಲಗುಂದದ ಜನರಲ್ಲಿ ಜಾಗೃತಿ, ಕರಪತ್ರ ಹಂಚೋದು, ಬೆಳಗಾಂನಲ್ಲಿ ಬಾಂಬು ತಯಾರಿಸೋದು, ಬೆಣ್ಣೆ ಹಳ್ಳದಲ್ಲಿ ಉಪ್ಪು ತಯಾರಿಸೋದು ಮುಂತಾದ ನೂರಾರು ಚಟುವಟಿಕೆಗಳಲ್ಲಿ ಭಾಗವಹಿಸಿ ಪೊಲೀಸರಿಗೆ ಬೇಕಾದ ವ್ಯಕ್ತಿಯಾಗುತ್ತಾನೆ. ೧೯೪೨ರ ಚಳವಳಿಯಲ್ಲೂ ಪಂತರ ಮನೆಯ ರಾಮು ನವಲಗುಂದದಲ್ಲಿ ಚಳುವಳಿಯನ್ನು ಹಬ್ಬುತ್ತಿದ್ದನು. ಅವನು ಬಂಗಾಲಕ್ಕೆ ಹೋಗಿ ಬಾಂಬು ತಯಾರಿಸಲು ಕಲಿತುಕೊಂಡು ಬಂದಿದ್ದಾನೆಂಬ ಸುದ್ದಿ ಹಬ್ಬಿತು. ಕಾಂಗ್ರೆಸ್ಸಿನವರು ನವಲಗುಂದ ಭಾಗದಲ್ಲಿ ಚಳುವಳಿ ಹಬ್ಬುವ ಕೆಲಸವನ್ನು ರಾಮುಗೆ ನೀಡಿದ್ದಾರಂತೆ ಎಂಬ ಗುಸುಗುಸು ಹಬ್ಬತೊಡಗಿತು. ಪೊಲೀಸರು ಗಾಂಧಿಟೋಪಿ ಹಾಕಿಕೊಂಡು ಗಾಂಧಿಭಕ್ತರಂತೆ ವೇಷ ಬದಲಿಸಿಕೊಂಡು ರಾಮುವನ್ನು ಹುಡುಕುತ್ತಿದ್ದರು. ಹೀಗೆ ರಾಮು ಒಂದು ದಿನ ಪಡೇಸೂರ ಗ್ರಾಮದಲ್ಲಿ ಏನೋ ಚಟುವಟಿಕೆಯಲ್ಲಿ ನಿರತನಾಗಿದ್ದಾಗ ಪೊಲೀಸರ ಗುಂಡೇಟಿಗೆ ಬಲಿಯಾಗುತ್ತಾನೆ. ಹೀಗೆ ಕಟ್ಟಾ ಸಂಪ್ರದಾಯಸ್ಥರಾದ ಪಂತರ ಮನೆತನದ ಹುಡುಗನೊಬ್ಬ ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸಿ ತನ್ನ ಪ್ರಾಣವನ್ನು ದೇಶಕ್ಕೋಸ್ಕರ ಅರ್ಪಿಸುತ್ತಾನೆ. ವಿದ್ಯೆ ಕಲಿತು ಹಣ ಸಂಪಾದನೆ ಮಾಡುವ ಅವಕಾಶವಿದ್ದರೂ ಕೂಡಾ ಅವನಿಗೆ ದೇಶ ಸೇವೆಯೇ ಮುಖ್ಯವಾಗುತ್ತದೆ.

**ಆತ್ಮಾರ್ಪಣೆ**

ವಸುದೇವ ಭಟ್ಟ ಅವರ 'ಆತ್ಮಾರ್ಪಣೆ' ಕಾದಂಬರಿಯೊಂದು ಕ್ರಾಂತಿಕಾರಿ ಹೋರಾಟದ ವಿವಿಧ ಸ್ವರೂಪಗಳನ್ನು ತೆರೆದಿಡುತ್ತದೆ. ಕ್ರಾಂತಿಕಾರನಾದ ಅಜಯ್ ಎಂಬ ಯುವಕ ಪೊಲೀಸರಿಗೆ ಸೆರೆ ಸಿಕ್ಕುತ್ತಾನೆ. ಜೈಲಿನಲ್ಲಿ ಕುಳಿತುಕೊಂಡು ತಮ್ಮ ಹೋರಾಟ ನಡೆದುಕೊಂಡು ಬಂದ ದಾರಿಯನ್ನು ಅವಲೋಕಿಸುತ್ತಾನೆ. ಇದೊಂದು ಉಗ್ರಗಾಮಿ ಹೋರಾಟದ ಸ್ವರೂಪವನ್ನು ತೆರೆದಿಡುವ ಕಾದಂಬರಿ. ಬ್ರಿಟಿಷರ ಎದೆ ನಡುಗಿಸುವಲ್ಲಿ ಉಗ್ರಗಾಮಿಗಳ ಪಾತ್ರ ಪ್ರಮುಖವಾದುದು. ಅವರು ಹಿಂಸಾತ್ಮಕವಾದ ಮಾರ್ಗವನ್ನು ಅನುಸರಿಸಿದರೂ ಕೂಡಾ ಅವರ ಉದ್ದೇಶ ಶುದ್ಧಿಯಾಗಿತ್ತು. ದೇಶದ ಬಿಡುಗಡೆಯೇ ಇವರ ಧ್ಯೇಯವಾಕ್ಯವಾಗಿತ್ತು. "ಈ ದೇಶಕ್ಕಾಗಿ, ಈ ನೆಲಕ್ಕಾಗಿ, ಭಾರತ ಮಾತೆಯ ವಿಮೋಚನೆಗಾಗಿ ನಮ್ಮ ದೇಹ ಮುಡಿಪು"[೧೧] ಎಂಬ ಅವರ ಉದ್ದೇಶದಲ್ಲಿ ಅಗಾಧವಾದ ದೇಶಭಕ್ತಿಯ ಸೆಲೆಯನ್ನು ಕಾಣುತ್ತೇವೆ.

ಲಾಲ್, ಪಾಲ್, ಬಾಲ್ ಮುಂತಾದ ಕ್ರಾಂತಿಕಾರಿ ನಾಯಕರು ಅಂದು ಅಜಯನಂತಹ ವಿದ್ಯಾರ್ಥಿಗಳಿಗೆ ಸ್ಫೂರ್ತಿಯಾಗುತ್ತಾರೆ. ಇವರಿಂದಾಗಿ ಅಜಯನಲ್ಲಿ 'ಭಾರತದ ಸ್ವಾತಂತ್ರ್ಯಕ್ಕಾಗಿ ನಾವು ಬದುಕಬೇಕು, ಬದುಕಿ ಹೋರಾಡಬೇಕು' ಎಂಬ ಬಾವನೆ ಬಲವಾಗುತ್ತದೆ. ಅಂದು ಕ್ರಾಂತಿಕಾರಿ ಹೋರಾಟಗಾರರ ಕನಸು ಮನಸ್ಸಿನಲ್ಲಿ ಕೇವಲ ಭಾರತದ ಬಂಧವಿಮೋಚನೆಯನ್ನು ಹೊರತುಪಡಿಸಿ ಬೇರೆ ಯಾವುದೇ ತಮ್ಮ ಸ್ವಂತ ಬದುಕಿನ ಕುರಿತು ಅವರು ಚಿಂತಿಸುತ್ತಿರಲಿಲ್ಲ.

ಅಂದು ಕ್ರಾಂತಿಕಾರಿಗಳನ್ನು ಕಾಡುತ್ತಿದ್ದ ಸಮಸ್ಯೆಯೆಂದರೆ ಹಣದ ಸಮಸ್ಯೆ. ಅದಕ್ಕೋಸ್ಕರ ಅವರು ಕೆಲವೊಂದು ಸಂದರ್ಭದಲ್ಲಿ ಜನರಿಗೆ ದರೋಡೆಕೋರರಂತೆ ಕಂಡುಬರುತ್ತಿದ್ದರು. ಹಣಕ್ಕಾಗಿ ಅವರು ಜನವಿರೋಧಿ ಶ್ರೀಮಂತ ಧನಿಕರನ್ನು ಕೊಳ್ಳೆ ಹೊಡೆಯುವ ಯೋಜನೆಯನ್ನು ಹಾಕಿಕೊಂಡಿದ್ದರು. ಕಾಕೋರಿ ಪಿತೂರಿಯೆಂದೇ ಪ್ರಖ್ಯಾತವಾದ ರೈಲು ದರೋಡೆಯು ಇವರಿಂದ ನಡೆಯುತ್ತದೆ. ರೈಲಿನಲ್ಲಿ ಸಾಗುತ್ತಿದ್ದ ಬ್ರಿಟಿಷ್ ಟ್ರೆಜರಿಯನ್ನು ಇವರು ಅಪಹರಿಸಿದರು. ಈ ದರೋಡೆಯು ಕ್ರಾಂತಿಕಾರಿಗಳ ಕೆಲಸವೆಂದು ತಿಳಿದ ತಕ್ಷಣ ದೇಶದ ಯುವಜನತೆಯಲ್ಲಿ ಉತ್ಸಾಹ ಉಂಟಾಗುತ್ತದೆ. ಬ್ರಿಟಿಷರು ಕನಸಿನಲ್ಲಿಯೂ ಊಹಿಸದೆ ಇದ್ದ ಈ ರೀತಿಯ ಪಿತೂರಿಯ ಮೂಲಕ ಅವರ ಎದೆಧೈರ್ಯವನ್ನು ಕುಂದಿಸುವುದು ಇವರ ಮುಖ್ಯ ಉದ್ದೇಶವಾಗಿತ್ತು.

ಜೋಗೇಶ್‌ಚಂದ್ರ ಚಟರ್ಜಿ ಎಂಬಾತನು ಈ ಸಂಘಟನೆಯನ್ನು ಉತ್ತರ ಪ್ರದೇಶದವರೆಗೆ ತಂದನು. ಕಾಶ್ಮೀರದಿಂದ ಬಂಗಾಲದವರೆಗೂ ಸಂಘಟಿತರಾಗಿ ತಮ್ಮ ಶಕ್ತಿಯನ್ನು ಬೆಳೆಸಿಕೊಂಡರು. ಕಾಶಿ ವಿದ್ಯಾಪೀಠದ ಸಂಸ್ಕೃತ ಪಂಡಿತರು ಕೂಡಾ ಈ ಕ್ರಾಂತಿಕಾರಿ ಸಂಘಟನೆಗೆ ಬೆಂಬಲ ನೀಡುತ್ತಾರೆ. ದಕ್ಷಿಣ ಭಾರತಕ್ಕಿಂತ ಉತ್ತರ ಭಾರತದಲ್ಲಿ ಕ್ರಾಂತಿಯು ವ್ಯಾಪಕವಾಗಿ ಹರಡುತ್ತದೆ, ಕಾನ್‌ಪುರದಲ್ಲಿ ರಾಜೇಂದ್ರ ಲಾಹಿರಿ, ಕಾನ್ಪುರದಲ್ಲಿ ರಾಮ್ ಪ್ರಸಾದ್, ಬಂಗಾಲದಲ್ಲಿ ಚಂದ್ರಶೇಖರ್ ಆಜಾದ್ ಕ್ರಾಂತಿಯ ವ್ಯವಸ್ಥೆ ಮಾಡಿದರು.

ಕಾಕೋರಿ ರೈಲ್ವೆ ಪಿತೂರಿಯಲ್ಲಿ ರಾಜೇಂದ್ರ ಲಾಹಿರಿ, ರೋಷನ್ ಸಿಂಗ್ ಮತ್ತು ರಾಮಪ್ರಸಾದರಿಗೆ ಮರಣದಂಡನೆ ವಿಧಿಸಿದರು. ಆದರೂ ಕ್ರಾಂತಿಕಾರಿಗಳು ತಮ್ಮ ಧ್ಯೇಯದಿಂದ ಹಿಂದಕ್ಕೆ ಸರಿಯುವುದಿಲ್ಲ. ಕ್ರಾಂತಿಯೇ ದೇಶದ ಬಿಡುಗಡೆಯ ದಾರಿಯೆಂಬುದಾಗಿ ಅವರು ನಂಬಿರುತ್ತಾರೆ. ಅಂದು ಕಾಂಗ್ರೆಸ್ ಎರಡು ಗುಂಪುಗಳಾಗಿ ಬೇರ್ಪಡುತ್ತವೆ. ಇಬ್ಬರ ಧ್ಯೇಯ ಒಂದೇ ಆಗಿದ್ದರೂ ಅದನ್ನು ಸಾಧಿಸುವ ಮಾಧ್ಯಮದಲ್ಲಿ ಅಗಾಧವಾದ ವ್ಯತ್ಯಾಸವಿತ್ತು. ಅಹಿಂಸೆಯ ಮಾರ್ಗ ತೀರಾ ನಿಧಾನಗತಿಯದೆಂಬುದು ಹಾಗೂ ಬ್ರಿಟಿಷರಂತಹ ಚಾಣಕ್ಯರನ್ನು ಬಗ್ಗು ಬಡಿಯಲು ಅದರಿಂದ ಸಾಧ್ಯವಿಲ್ಲವೆಂಬುದು ಅವರ ಭಾವನೆಯಾಗಿತ್ತು. ಗಾಂಧೀಜಿಯವರ ಅಸಹಕಾರ ಚಳುವಳಿ ವಿಫಲವಾದ ಸಮಯದಲ್ಲಿ ಕೂಡಾ ಕ್ರಾಂತಿಕಾರಿಗಳು ತೀವ್ರ ಹೋರಾಟವನ್ನು ನಡೆಸುವುದರ ಮೂಲಕ ಬ್ರಿಟಿಷರಿಗೆ ಸಿಂಹಸ್ವಪ್ನವಾಗಿ ಕಾಡುತ್ತಿದ್ದರು. ಅಸಹಕಾರ ಚಳುವಳಿಯಲ್ಲಿ ೧೯೪೨ನ್ನು ಹೊರತುಪಡಿಸಿದರೆ ಮುಖಂಡರನ್ನು ಸೆರೆಹಿಡಿದ ತಕ್ಷಣ ಚಳುವಳಿನಿಂತುಹೋಗುತಿತ್ತು. ಆದರೆ ಕ್ರಾಂತಿಕಾರಿಗಳು ಒಬ್ಬ ನಾಯಕನನ್ನು ನಂಬಿ ಕ್ರಾಂತಿಯನ್ನು ಆರಂಭಿಸುತ್ತಿರಲಿಲ್ಲ. ಯಾಕೆಂದರೆ ಆ ನಾಯಕ ಉರುಳಿದಾಗ ಏನು ಮಾಡಬೇಕೆಂದು ದಾರಿ ತೋರದಾಗುತ್ತದೆ. ಆದರೆ ಕ್ರಾಂತಿಕಾರಿಗಳಲ್ಲಿ ಒಬ್ಬೊಬ್ಬನ ಬಲಿದಾನವು ಕೂಡಾ ಇನ್ನು ೧೦ ಜನ ನೇಣುಗಂಬವನ್ನೇರಲು ಪ್ರೋತ್ಸಾಹಿಸುತ್ತಿತ್ತು. ಕ್ರಾಂತಿಕಾರಿಗಳು **'ಹಿಂದುಸ್ಥಾನ್ ಸೋಷಿಯಲಿಸ್ಟ್ ರಿಪಬ್ಲಿಕನ್ ಪಾರ್ಟಿ'** ಎಂಬ ಒಂದು ಗುಪ್ತ ಸಂಘಟನೆಯನ್ನು ಸ್ಥಾಪಿಸಿದ್ದರು. ಇದೊಂದು ಗುಪ್ತಗಾಮಿ ಚಳುವಳಿಯ ಸಂಸ್ಥೆಯಾಗಿತ್ತು. ಈ ಸಂಸ್ಥೆಯ ಧ್ಯೇಯೋದ್ದೇಶವು ಬಹಳಷ್ಟು ಗುಪ್ತವಾಗಿತ್ತು.

ಭಾರತದ ಮೂಲೆ ಮೂಲೆಯಲ್ಲೂ ಕ್ರಾಂತಿಯಾಗಬೇಕು. ಎಲ್ಲೆಡೆಗೂ ಕ್ರಾಂತಿ ಹರಡಿ ಬ್ರಿಟಿಷ್ ಸಾಮ್ರಾಜ್ಯವನ್ನು ಹೊಡೆದೋಡಿಸಬೇಕೆಂಬುದು ಅವರ ಧ್ಯೇಯವಾಗಿತ್ತು. ಆಗ್ರಾದಲ್ಲಿ ಕ್ರಾಂತಿಕಾರಿ ಸಂಸ್ಥೆಯನ್ನು ಭಗತ್‌ಸಿಂಗ್ ಸ್ಥಾಪಿಸಿ ಬಾಂಬ್ ತಯಾರಿಕೆಯ ಬಗೆಗೆ ಶ್ರಮಿಸತೊಡಗಿದನು. ರಿವಾಲ್ವರ್, ಮದ್ದುಗುಂಡುಗಳು ದ್ರಾವಕಗಳು ಹಾಗೂ ಚಾಕು- ಕತ್ತಿಗಳು ಸಂಗ್ರಹಿಸಲ್ಪಟ್ಟಿತು. ಹಿಂಗ್‌ಹಿಮಂಡಿ ಎಂಬಲ್ಲಿ ಪ್ರಚಂಡ ಶಕ್ತಿಯ ಬಾಂಬ್ ತಯಾರಿಕೆ, ಗುಂಡು ಹಾರಿಸುವಲ್ಲಿ ತರಬೇತಿ, ಆತ್ಮರಕ್ಷಣೆ, ಮತ್ತು ಹೋರಾಟದಲ್ಲಿ ಶಿಕ್ಷಣವನ್ನು ಕೊಡಲಾಯಿತು. ಕ್ರಾಂತಿಕಾರಿಗಳ ಸಂಘಟನೆಯಲ್ಲಿ ನಾವು ಒಂದು ಬಗೆಯ ಶಿಸ್ತನ್ನು ಕಾಣಬಹುದಿತ್ತು. ಕ್ರಾಂತಿಗೆ ಕೂಡಾ ಒಂದು ವ್ಯವಸ್ಥಿತವಾದ ಯೋಜನೆ, ಶಿಕ್ಷಣವನ್ನು ನೀಡಲಾಗುತ್ತಿತ್ತು. ಜತೀಂದ್ರನಾಥನ ನೇತೃತ್ವದಲ್ಲಿ ಬಾಂಬ್ ತಯಾರಿಕೆ ಭರದಿಂದ ಸಾಗಿತು. ಬ್ರಿಟಿಷ್ ಸಾಮ್ರಾಜ್ಯ ಮತ್ತು ಅದರ ಅಂಕೆಯ ಪೋಲೀಸ್ ಗೂಢಾಚಾರರು, ಅಧಿಕಾರಿಗಳು, ಪ್ರಕೃತಿ ಸಹಜವಾದ ಉಷ್ಣ, ಚಳಿ, ಮಳೆ, ಗಾಳಿ ಇವೆಲ್ಲವನ್ನೂ ಇದಿರಿಸಿ ಈ ಕ್ರಾಂತಿಕಾರಿಗಳು ಹೋರಾಡಿದರು.[೨]

ಕ್ರಾಂತಿಕಾರಿಗಳ ಹೋರಾಟದ ಚಿತ್ರಣವು ನಿಜವಾಗಿಯೂ ಒಂದುರೀತಿಯಲ್ಲಿ ಮೈ ನವಿರೇಳಿಸುವಂತಿದೆ. ಬ್ರಿಟಿಷ್ ಸರಕಾರದ ಕಟ್ಟುನಿಟ್ಟಿನ ಬೇಹುಗಾರಿಕೆಯ ನಡುವೆಯೂ ಇವರು ಮಾಡಿದ ಸಾಧನೆ ಅದ್ಭುತವಾದುದು. ಈ ಕಾದಂಬರಿಯ ಕಥಾನಾಯಕ ಅಜಯ್ ಕ್ರಾಂತಿಕಾರಿಗಳ ಸಂಘಟನೆ ಸೇರುತ್ತಾನೆ. ಬಾಂಬ್ ತಯಾರಿಸುವುದಕ್ಕಾಗಿ ಇಸ್ಲಾಮಿಯಾ ಕಾಲೇಜಿನ

ಲ್ಯಾಬೋರೇಟರಿಗೆ ಲಗ್ಗೆಯಿಟ್ಟು ಅಲ್ಲಿಂದ ಕೆಲವು ಮುಖ್ಯ ರಾಸಾಯನಿಕ ವಸ್ತುಗಳನ್ನು ಸಾಗಿಸುತ್ತಾನೆ. ಆದರೆ ಬಾಂಬ್ ತಯಾರಿಕೆಗೆ ಬೇಕಾದ ಮುಖ್ಯ ದ್ರಾವಕವನ್ನು ಅಲ್ಲೇ ಬಿಡುತ್ತಾರೆ. ಕೊನೆಗೆ ಇವರ ದಸ್ತಗಿರಿಯಾಗುತ್ತದೆ. ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೆಮದರೆ ದಸ್ತಗಿರಿಯಾದ ವಿದಾರ್ಥಿಗಳಲ್ಲಿ ಒಬ್ಬ ಮಾತ್ರ ಹಿಂದು. ಉಳಿದವರು ಮುಸ್ಲಿಮರು. ಹಿಂದೂ ಮುಸ್ಲಿಮರಲ್ಲಿ ಮೊದಲಿಗೆ ಭಿನ್ನಾಭಿಪ್ರಾಯವಿರಲಿಲ್ಲ. ದೇಶದ ಸ್ವಾತಂತ್ರ್ಯ ಗಳಿಕೆಯೇ ಮುಖ್ಯವಾಗಿತ್ತು. ಕ್ರಾಂತಿಕಾರಿಗಳಲ್ಲಿ ಮುಸ್ಲಿಮರು ಕೂಡ ಪ್ರಮುಖ ಪಾತ್ರವನ್ನು ವಹಿಸಿದ್ದಾರೆ.

ದೆಹಲಿಯ ಫಿರೋಜ್ ಷಹಾ ತೊಘಲಕ್ ಕೋಟೆಯಲ್ಲಿ ೧೯೨೮ ಸೆಪ್ಟೆಂಬರ್ ೯ರಂದು ಉತ್ತರ ಭಾರತದ ವಿವಿಧ ಕಡೆಗಳ ಕ್ರಾಂತಿಕಾರಿಗಳ ಸಭೆಯೊಂದು ನಡೆಯಿತು. ಇದರ ಪರಿಣಾಮವಾಗಿ **'ಹಿಂದುಸ್ಥಾನ್ ಸೋಷಿಯಲಿಸ್ಟ್ ರಿಪಬಿಕನ್ ಆರ್ಮಿ'** ಎಂಬ ಪಕ್ಷ ಸ್ಥಾಪನೆಯಾಯಿತು.

ಅಕ್ಟೋಬರ್ ೩೦ರಂದು ಯಾರಿಗೂ ಬೇಡದ ಸೈಮನ್ ಕಮಿಷನ್ ಲಾಹೋರ್‌ಗೆ ಭೇಟಿ ನೀಡಿತ್ತು. ಇದರ ವಿರುದ್ಧ ಪ್ರತಿಭಟನಾ ಮೆರವಣಿಗೆ ಸಾಗುತ್ತಿದ್ದ ವೇಳೆಯಲ್ಲಿ ಸ್ಕಾರ್ಟ್ ಮತ್ತು ಸಾಂಡರ್ಸ್ ನೂರಾರು ಮಂದಿ ಪೊಲೀಸರೊಂದಿಗೆ ಶಾಂತಿಯುತವಾಗಿ ಸಾಗುತ್ತಿದ್ದ ಮೆರವಣಿಗೆ ಮೇಲೆ ಧಾಳಿ ನಡೆಸಿ ಲಾಲಾ ಲಜಪತರಾಯರಿಗೆ ಲಾಠಿಚಾರ್ಜ್ ಮಾಡಿತು. ಇದರಿಂದಾಗಿ ಕ್ರಾಂತಿಯ ಕಿಡಿ ಲಾಹೋರಿನಲ್ಲಿ ಹಬ್ಬಿತು

ಬ್ರಿಟಿಷರ ವಿರುದ್ಧ ನಡೆದ ಪ್ರತಿಯೊಂದು ಹೋರಾಟವನ್ನು ನಾವು ಗಮನಿಸಿದರೆ ಹಿಂಸೆ ಭುಗಿಲೇಳಲು ಹೋರಾಟ ತೀವ್ರಗೊಳ್ಳಲು ಅವರೇ ಕಾರಣರಾಗುತ್ತಾರೆ. ಶಾಂತಿಯುತವಾಗಿ ಸಾಗುತ್ತಿದ್ದ ಪ್ರತಿಭಟನೆಯನ್ನು ಹಿಂಸೆಯ ಮೂಲಕ ಬಗ್ಗು ಬಡಿಯಲು ನೋಡುತ್ತಾರೆ. ಇದು ಭಾರತೀಯರ ಹೋರಾಟದ ತೀವ್ರತೆಯನ್ನು ಹೆಚ್ಚಿಸುತ್ತದೆ. ತಮ್ಮ ಕಡೆಯಿಂದ ಭಾರತೀಯರಿಗೆ ಆಗುವ ಅನ್ಯಾಯವನ್ನು ಅವರೆಂದೂ ಅವಲೋಕಿಸಲಿಲ್ಲ.

೧೭ನೇ ಡಿಸೆಂಬರ್ ೧೯೨೮ರಂದು ಸ್ಯಾಂಡರ್ಸ್‌ನ ಕೊಲೆಯಾಯಿತು. ಲಾಲಾಜಿಯ ಮರಣದ ಸೇಡು ತೀರಿತು. ಆದರೆ ಹಂತಕರನ್ನು ಹಿಡಿಯಲು ಪೊಲೀಸರಿಗೆ ಸಾಧ್ಯವಾಗಲಿಲ್ಲ. ಇದು ಸರಕಾರದ ಮುಖಭಂಗಕ್ಕೆ ಕಾರಣವಾಯಿತು. ನ್ಯಾಯಕ್ ಮಂಡಿಯ ಒಂದಂತಸ್ತಿನ ಮನೆಯಲ್ಲಿ ಸಭೆ ಸೇರಿದ್ದ ಕ್ರಾಂತಿಕಾರರು ಮುಂದಿನ ಯೋಜನೆಗಳ ಬಗ್ಗೆ ಚರ್ಚಿಸಿದರು. ಸಂಘಟನೆ ಬಲಪಡಿಸಿ ಕ್ರಾಂತಿ ಸಾಧಿಸುವ ಕನಸು ಎಲ್ಲರದಾಗಿತ್ತು. ಅಸೆಂಬ್ಲಿಯೊಳಗೆ ಬಾಂಬೆಸೆಯುವ ಯೋಜನೆ ರೂಪುಗೊಂಡಿತ್ತು. ಭಗತ್‌ಸಿಂಗ್ ಈ ಕಾರ್ಯ ಮಾಡುವುದಾಗಿ ನಿರ್ಧರಿಸಲಾಯಿತು. ಆದರೆ ಜೀವಹಾನಿ ಮಾಡುವ ಉದ್ದೇಶ ಕ್ರಾಂತಿಕಾರರಿಗೆ ಇರಲಿಲ್ಲ. ಸರಕಾರಕ್ಕೆ ಒಂದು ಎಚ್ಚರಿಕೆಯ ಗಂಟೆಯನ್ನು ಬಾರಿಸುವುದು ಮಾತ್ರ ಇವರ ಉದ್ದೇಶವಗಿತ್ತು. ಈ ಕೆಲಸವನ್ನು ಮಾಡಲು ಭಗತ್‌ಸಿಂಗ್ ಒಪ್ಪಿಕೊಳ್ಳುತ್ತಾನೆ. ೧೯೨೯ ಎಪ್ರಿಲ್‌ನಲ್ಲಿ ಅಸೆಂಬ್ಲಿಯಲ್ಲಿ ಬಾಂಬ್ ಸಿಡಿಸಿ ಭಗತ್‌ಸಿಂಗ್ ಮತ್ತು ಬಟುಕೇಶ್ವರ ದತ್ತ ಇವರ ದಸ್ತಗಿರಿಯಾಗುತ್ತದೆ. ಅವರಿಬ್ಬರಿಗೂ ತಪ್ಪಿಸಿಕೊಳ್ಳುವ ಅವಕಾಶ

ಬೇಕಾದಷ್ಟಿತ್ತು. ಆದರೂ ತಮ್ಮ ಉದ್ದೇಶವನ್ನು ಸರಕಾರಕ್ಕೆ ಸ್ಪಷ್ಟಪಡಿಸಲೋಸುಗ ಅವರು ದಸ್ತಗಿರಿಯಾಗುತ್ತಾರೆ. ಜೀವಹಾನಿ ಮಾಡುವುದು ತಮ್ಮ ಉದ್ದೇಶವಲ್ಲವೆಂದು ಅವರು ಸ್ಪಷ್ಟವಾಗಿ ಹೇಳುತ್ತಾರೆ.

ಅಕ್ಬರ್‌ಮಂಡಿ ಪೊಲೀಸ್ ಸ್ಟೇಷನ್‌ನಲ್ಲಿ **'ಹಿಂದುಸ್ಥಾನ್ ಸೋಷಲಿಸ್ಟ್ ರಿಪಬ್ಲಿಕನ್ ಸೇನೆ'**ಯ ಮಹಾನಾಯಕರನ್ನು ಬಂಧಿಸಲಾಯಿತು. ಸೆರೆಯಾದ ಪ್ರತಿಯೊಬ್ಬ ಕ್ರಾಂತಿವೀರನಿಗೆ ಅತ್ಯಂತ ಕಠಿಣ ಶಿಕ್ಷೆಯನ್ನು ನೀಡಿದರು. ಇದರಿಂದಾಗಿ ದಸ್ತಗಿರಿಯಾದ ಸುಮಾರು ೩೦ ಮಂದಿಯಲ್ಲಿ ೭ ಮಂದಿ ಪೊಲೀಸರ ಹಿಂಸೆಗೆ ತಲೆಬಾಗಿ ಸರಕಾರದ ಕಡೆಯ ಸಾಕ್ಷಿಯಾದರು.

ಅಜಯ್ ಬಾಂಬ್ ತಯಾರಿಕೆಗೋಸ್ಕರ ದುಡಿದ. ಅಜಯ್‌ನ ಬಾಂಬ್ ತಯಾರಿಕೆ ಸಫಲವಾಯಿತು. ಅಜಯ್ ತಯಾರಿಸಿದ ಬಾಂಬ್ ಪಂಜಾಬ್ ಪ್ರಾಂತ್ಯದ ಲಾಹೋರ್, ಅಮೃತ್‌ಸರ, ಮೈಲಾಪುರ್, ಗಜ್ರನ್‌ವಾಲ, ಶೀಖಪುರ ಮತ್ತು ರಾವಲ್ಪಿಂಡಿಗಳಲ್ಲಿ ಸಿಡಿಯಿತು. ಈ ಘಟನೆಯು ಜನತೆಗೆ ಹೊಸ ಹುರುಪನ್ನು ನೀಡುತ್ತದೆ. ಭಾರತೀಯರು ಕೂಡಾ ಬಾಂಬು ತಯಾರಿಕೆಯಲ್ಲಿ ಪರಿಣತಿಯನ್ನು ಗಳಿಸಿದ್ದರು. ಅಂತಹ ಪ್ರತಿಕೂಲ ಪರಿಸ್ಥಿತಿಯಲ್ಲಿ ಕ್ರಾಂತಿಕಾರಿಗಳು ಇಷ್ಟೆಲ್ಲಾ ಅದ್ಭುತ ಸಾಹಸವನ್ನು ಮಾಡಿದ್ದರೆಂದರೆ ಅವರು ತಮ್ಮ ಸ್ವಂತ ಸುಖವನ್ನು ಎಷ್ಟೊಂದು ಕಡೆಗಣಿಸಿದ್ದರೆಂಬುದು ತಿಳಿಯುತ್ತದೆ.

ಮೇಜರ್ ಸೂರ್ಯಸೇನನ ನಾಯಕತ್ವದಲ್ಲಿ ಸುಮಾರು ೧೨೫ ಮಂದಿ ಕ್ರಾಂತಿಕಾರರು ಚಿತಗಾಂಗ್ ಶಸ್ತ್ರಾಗಾರದ ಮೇಲೆ ಧಾಳಿ ನಡೆಸಿದರು. ಶಾಂತಾಘೋಷ್ ಮತ್ತು ಸುಮತಿ ಚೌಧರಿ ಎಂಬ ಶಾಲಾ ಬಾಲಕಿಯರು ತಿಪ್ಪೆರಾ ಜಿಲ್ಲಾಧಿಕಾರಿಯನ್ನು ಗುಂಡಿಟ್ಟು ಕೊಂದರು. ಅಂದು ಹೆಣ್ಣುಮಕ್ಕಳಲ್ಲಿ ಸಹ ತೀವ್ರ ಕ್ರಾಂತಿಕಾರಿಗಳಿರುವುದನ್ನು ನಾವು ಮನಗಾಣಬಹುದು ಮತ್ತು ಬ್ರಿಟಿಷರ ಕುರಿತಾದ ದ್ವೇಷ ಚಿಕ್ಕ ಪ್ರಾಯದ ಮಕ್ಕಳಲ್ಲೂ ಮನೆ ಮಾಡಿರಬೇಕಾದರೆ ಅವರು ಸಾಮಾನ್ಯ ಭಾರತೀಯರನ್ನು ಎಷ್ಟೊಂದು ಕೀಳಾಗಿ ನಡೆಸಿಕೊಂಡಿರಬೇಕೆಂಬುದು ನಮ್ಮ ಊಹೆಗೆ ಬಿಟ್ಟ ವಿಚಾರವಾಗಿದೆ.

ಅಜಯ್ ಲಾಹೋರ್ ನಗರವನ್ನು ತ್ಯಜಿಸುತ್ತಾನೆ. ಸರಕಾರದ ಪರವಾದ ನಕಲಿ ಕ್ರಾಂತಿಕಾರರಿಂದಾಗಿ ಕ್ರಾಂತಿಯ ಎಲ್ಲಾ ಮಾಹಿತಿಯು ಸರಕಾರಕ್ಕೆ ಸೋರಿ ಹೋಗುತ್ತದೆ. ಕ್ರಾಂತಿಯನ್ನು ಮುನ್ನಡೆಸುತ್ತಿದ್ದ ಬಹಳಷ್ಟು ನಾಯಕರ ದಸ್ತಗಿರಿಯಾಗುತ್ತದೆ. ಈ ಸಂದರ್ಭದಲ್ಲಿ ಅಜಯ ಕೂಡಾ ಸೆರೆಯಾಗುತ್ತಾನೆ. ಹೀಗೆ ಬ್ರಿಟಿಷರ ಎದೆಗುಂಡಿಗೆಯನ್ನು ನಡುಗಿಸಿದ ಕ್ರಾಂತಿಯ ಮಹಾಜ್ವಾಲೆ ಕ್ರಮೇಣ ನಂದಿ ಹೋಗುತ್ತದೆ. ಉಗ್ರಗಾಮಿಗಳು ಹಾಗೂ ಮಂದಗಾಮಿಗಳ ನಡುವೆ ಎಷ್ಟೇ ಭಿನ್ನಾಭಿಪ್ರಾಯವಿದ್ದರೂ ಕೂಡ ಇವರಿಬ್ಬರ ಧ್ಯೇಯ ಒಂದೇ ಆಗಿತ್ತು. ಬ್ರಿಟಿಷರು ಹಂತ ಹಂತವಾಗಿ ಭಾರತದಲ್ಲಿ ತಮಗೆ ನೆಮ್ಮದಿಯಿಂದ ಬದುಕಲು ಸಾಧ್ಯವಿಲ್ಲವೆಂಬ ಸತ್ಯವನ್ನು ಇವರಿಬ್ಬರಿಂದಲೂ ಮನಗಂಡರು. ಕ್ರಾಂತಿಕಾರರು ತಮ್ಮ ಜೀವದ ಹಂಗು ಬಿಟ್ಟು ಹೋರಾಡಿದರು. ಸತ್ಯಾಗ್ರಹ ಮಾಡಿ ಸೆರೆಮನೆ ಸೇರುವುದು ಇವರ ಧ್ಯೇಯವಾಗಿರಲಿಲ್ಲ. ಯಾವುದೇ ಉಗ್ರ

ಹೋರಾಟದಿಂದಲೂ ಸರಿಯೇ ಬ್ರಿಟಿಷರು ಇಲ್ಲಿಂದ ಕಾಲ್ತೆಗೆಯಬೇಕೆಂಬುದು ಅವರ ಉದ್ದೇಶವಾಗಿತ್ತು.

**ಹಿಂದಿರುಗಿ ಬರಲಿಲ್ಲ**

ಕೋ.ಚೆನ್ನಬಸಪ್ಪರ ಇನ್ನೊಂದು ಕಾದಂಬರಿ 'ಹಿಂದಿರುಗಿ ಬರಲಿಲ್ಲ'. ಇದರಲ್ಲಿ ಜಯದೇವನೆಂಬ ಬುದ್ಧಿವಂತ ಬಡವಿದ್ಯಾರ್ಥಿ ಸಕಲವನ್ನು ತ್ಯಾಗ ಮಾಡಿ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸುತ್ತಾನೆ. ಆದರೆ ಸ್ವತಂತ್ರ ಭಾರತದಲ್ಲಿ ಸ್ವಾತಂತ್ರ್ಯ ವೀರರಿಗೆ ಯಾವ ಮರ್ಯಾದೆಯೂ ಸಿಗುವುದಿಲ್ಲ. ಸ್ವಾತಂತ್ರ್ಯ ಹೋರಾಟಗಾರರೇ ಕಾಂಗ್ರೆಸ್ ಸರಕಾರಕ್ಕಿಂತ ಬ್ರಿಟಿಷ್ ಸರಕಾರವೇ ಮೇಲು ಎಂಬುವುದಾಗಿ ಭಾವಿಸುವ ವಿಪರ್ಯಾಸವನ್ನು ನಾವಿಲ್ಲಿ ಕಾಣುತ್ತೇವೆ. ಸ್ವಾತಂತ್ರ್ಯಕ್ಕೋಸ್ಕರ ಹೋರಾಡಿ ಜೈಲು ಸೇರಿದ ಜಯದೇವ ಸುರಕ್ಷಿತವಾಗಿ ಮನೆಗೆ ಬರುತ್ತಾನೆ. ಆದರೆ ಸ್ವತಂತ್ರ ಭಾರತದಲ್ಲಿ ವಿಧ್ವಂಸಕ ಕೃತ್ಯದಲ್ಲಿ ಭಾಗಿಯಾಗಿದ್ದಾನೆಂಬ ಹಣೆಪಟ್ಟಿಯನ್ನು ಕಟ್ಟಿಕೊಂಡು ಜೈಲುಸೇರಿದ ಜಯದೇವ ಹಿಂದಿರುಗಿ ಬರುವುದೇ ಇಲ್ಲ. ಅವನು ಏನಾದನೆಂಬುದು ಕೊನೆಯವರೆಗೆ ಅವನ ಕುಟುಂಬವರ್ಗಕ್ಕೆ ಚಿದಂಬರ ರಹಸ್ಯವಾಗಿಯೇ ಉಳಿಯುತ್ತದೆ.

ಜಯದೇವ ಬಡವನಾದರೂ ಅತೀ ಬುದ್ಧಿವಂತ. ಅವರಿವರ ಸಹಾಯದಿಂದ, ವಿದ್ಯಾರ್ಥಿವೇತನದಿಂದ ಹಾಸ್ಟಿಲಿನಲ್ಲಿದ್ದುಕೊಂಡು ಕಷ್ಟಪಟ್ಟು ಓದುತ್ತಾನೆ. ಮೆಟ್ರಿಕ್‌ನಲ್ಲಿ ಬಳ್ಳಾರಿ ಜಿಲ್ಲೆಗೆ ಮೊದಲಿನಾಗಿ ಪಾಸಾದ ಅವನು ಮದರಾಸಿನ ಪ್ರೆಸಿಡೆಂಟ್ ಕಾಲೇಜಿಗೆ ಸೇರಿ ಬಿ.ಎ ಓದುತ್ತಿರುತ್ತಾನೆ. ೧೯೩೦ ಜನವರಿ ೨೬ನೇ ತಾರೀಖಿನಂದು ದೇಶದಾದ್ಯಂತ ಸ್ವಾತಂತ್ರ್ಯ ಪ್ರತಿಜ್ಞೆಯನ್ನು ಜನ ಸ್ವೀಕರಿಸಬೇಕೆಂದು ಕಾಂಗ್ರೆಸ್ ಅಧ್ಯಕ್ಷರ ಕರೆ ಬಂತು. ವಿದ್ಯಾರ್ಥಿಗಳು ನಾಡಿನ ಯಾವ ವರ್ಗದ ಪ್ರಜೆಗಳಿಗಿಂತಲೂ ಒಂದು ಹೆಜ್ಜೆ ಮುಂದೆ ನಿಂತು ದೇಶದಾದ್ಯಂತ ಸ್ವಾತಂತ್ರ್ಯ ಪ್ರತಿಜ್ಞೆಯನ್ನು ಸ್ವೀಕರಿಸಿದರು. ಸಾಂಬ ಮೈದಾನದಲ್ಲಿ ಸೇರಿದ್ದ ಅಧ್ಯಕ್ಷರ ಭಾಷಣವನ್ನು ಕೇಳಿದ ಜಯದೇವ–"ಈ ಬ್ರಿಟಿಷ್ ಸರಕಾರವನ್ನು ಕೊನೆಗಾಣಿಸಿದರೇನೇ ನಮಗೆ ಮುಕ್ತಿ, ಅದರಿಂದಲೇ ತನ್ನ ಮತ್ತು ತನ್ನಂಥವರ ಕೋಟಿ ದರಿದ್ರ ಜೀವಿಗಳ ಬಾಳಿಗೆ ಬೆಳಕು."[೧೩] ಎಂಬ ನಿರ್ಧಾರಕ್ಕೆ ಬರುತ್ತಾನೆ. ಜಯದೇವನ ಪ್ರಪಂಚ ವಿಸ್ತಾರವಾಗುತ್ತದೆ. ದೇಶದ ರಾಜಕೀಯ ಪರಿಚಯ, ಕಮ್ಯುನಿಸ್ಟ್ ಪರಿಚಯ, ಬೋಸರ ಸಿಂಹಗರ್ಜನೆ ಇವೆಲ್ಲವೂ ಜಯದೇವ ತನ್ನನ್ನು ತಾನು ಹೊರಪ್ರಪಂಚಕ್ಕೆ ತೆರೆದುಕೊಳ್ಳುವಂತೆ ಮಾಡುತ್ತದೆ.

ಜಯದೇವನಿಗೆ ಓದು ಕಲಿತು ಸರಕಾರಿ ನೌಕರಿ ಸಿಕ್ಕಿದರೆ ಅವನ ಕುಟುಂಬವರ್ಗವನ್ನೆಲ್ಲಾ ಸುಖಿಯಾಗಿಡಬಹುದಿತ್ತು. ಅತಿ ಬುದ್ಧಿವಂತನಾದ ಇವನು ದೇಶದ ಕರೆಗೆ ಓಗೊಡದಿದ್ದರೆ ಬ್ರಿಟಿಷ್ ಸರಕಾರದ ಕೆಂಗಣ್ಣಿಗೆ ಗುರಿಯಾಗದಿದ್ದರೆ ಉನ್ನತ ಸರಕಾರಿ ಹುದ್ದೆಯನ್ನು ಪಡೆದುಕೊಳ್ಳುವುದೇನೂ ಕಷ್ಟದ ಮಾತಾಗಿರಲಿಲ್ಲ. ಇವನು ಸರಕಾರಿ ಹುದ್ದೆಯನ್ನು ಪಡೆದುಕೊಳ್ಳುತ್ತಾನೆಂಬ ವಿಶ್ವಾಸದಿಂದಲೇ ಶ್ರೀಮಂತ ಮನೆತನದ ಶಕುಂತಲೆಯನ್ನು ಇವನಿಗೆ ಮದುವೆ ಮಾಡಿಕೊಟ್ಟಿದ್ದರು. ಆದರೆ ದೇಶದ ಕರೆಯಿಂದ, ಸ್ವಾತಂತ್ರ್ಯದ ಅಲೆಯಿಂದ ಅವನಿಗೆ ತಪ್ಪಿಸಿಕೊಳ್ಳುವುದು ಸಾಧ್ಯವಾಗಲಿಲ್ಲ.

ಚಲೇಜಾವ್ ಚಳವಳಿ ಆರಂಭವಾಗುತ್ತದೆ. ಜಯದೇವ ಬಿ.ಎ ಡಿಗ್ರಿಯ ಕೊನೆಯ ವರ್ಷದಲ್ಲಿದ್ದನು. ಒಂಭತ್ತು ತಿಂಗಳು ಕಳೆದರೆ ಪ್ರಥಮ ದರ್ಜೆಯ ಪದವೀಧರನಾಗುತ್ತಾನೆ. ಬೇಡಿದಂಥ ನೌಕರಿ ಸಿಗುತ್ತದೆ. ಆದರೆ ಗಾಂಧೀಜಿಯ ಇದೇ ಕೊನೆಯ ಹೋರಾಟವೆಂಬ ಕರೆ ಜಯದೇವನಲ್ಲಿ ವಿದ್ಯಾಭ್ಯಾಸವನ್ನು ಮುಂದುವರಿಸುವ ವಿಚಾರದಲ್ಲಿ ಗೊಂದಲವನ್ನುಂಟುಮಾಡುತ್ತದೆ. ಒಂದು ಕಡೆ ಹೆತ್ತವರ ದುಃಖ, ಇನ್ನೊಂದು ಕಡೆ ಭಾರತ ಮಾತೆಯ ಬಿಡುಗಡೆ– ಈ ಎರಡು ವಿಚಾರಗಳಲ್ಲಿ ಜಯದೇವನ ಮನಸ್ಸು ಹೊಯ್ದಾಡುತ್ತಿತ್ತು. ಅವನ ಮನಸ್ಸು– "ನಿನ್ನದೊಂದು ಬಾಳು ಹಾಳಾದರೇನು? ಸಾಮ್ರಾಜ್ಯಶಾಹಿಯ ರೋಡುರೋಲರ್ ಕೆಳಗೆ ಸಿಕ್ಕು ಪುಡಿ ಪುಡಿಯಾದರೇನಂತೆ? ನಿನ್ನಂತಹ ಕೋಟಿ ಕೋಟಿ ಯುವಕರ ಸೊಗಸಾದ ಬಾಳಿನ ಉದ್ಯಾನ ಬೆಳೆದು ನಿಲ್ಲುವುದಿಲ್ಲವೆ? ಅದಕ್ಕಾಗಿ ತನ್ನೊಂದು ಬಾಳು ಅದಕ್ಕೆ ರಕ್ತ ಸುರಿದು ಹೋಗಲಿ!"[೮೪] ಎಂದು ಯೋಚಿಸುತ್ತಾನೆ. ಮನೆಯಲ್ಲಿ ಕಿತ್ತು ತಿನ್ನುವ ಬಡತನ, ಯಾರ್ಯಾರದೋ ಸಹಾಯದಿಂದ ಕಲಿತ ವಿದ್ಯೆ, ತನ್ನನ್ನೇ ನಂಬಿದ ಕುಟುಂಬವರ್ಗ ಇಂತಹ ಸಂದರ್ಭದಲ್ಲೂ ತನ್ನ ಹಾಗೂ ತನ್ನವರ ಸುಖವನ್ನು ಭಾರತಮಾತೆಯ ಬಿಡುಗಡೆಗಾಗಿ, ಮುಂದಿನ ಜನಾಂಗದ ಸುಖಕ್ಕಾಗಿ ಬಲಿ ಕೊಡಲು ಬಯಸುತ್ತಾನೆ.

ಜಯದೇವ ಕಾಲೇಜು ತ್ಯಜಿಸಿ ಹೋರಾಟದಲ್ಲಿ ಭಾಗಿಯಾಗುತ್ತಾನೆ. ಪೊಲೀಸ್ ಟ್ರೆಜರಿಯಿಂದಲೇ ನೋಟುಗಳನ್ನು ಅಪಹರಿಸಿ ಅದನ್ನು ಕಲ್ಕತ್ತದ ರಾಮಕೃಷ್ಣಮಠದ ಬರ ಪರಿಹಾರ ನಿಧಿಗೆ ಕೊಡುತ್ತಾನೆ. ಅವನ ಮನೆಯ ಪರಿಸ್ಥಿತಿ ತೀರಾ ಹದಗೆಟ್ಟಿದ್ದರೂ ಸಂಸಾರ ಛಿದ್ರಛಿದ್ರವಾಗಿದ್ದರೂ ಕೂಡ ಹೋರಾಟದಲಿ ಭಾಗಿಯಾಗಿ ಜೈಲು ಸೇರುತ್ತಾನೆ. ಆದರೆ ಸ್ವಾತಂತ್ರ್ಯ ಲಭಿಸಿದ ನಂತರ ಅವನ ಸ್ಥಿತಿ ಇನ್ನಷ್ಟು ಹದಗೆಡುತ್ತದೆ ಹೊರತು ಅದರಲ್ಲಿ ಏನೇನೂ ಸುಧಾರಣೆಯಾಗುವುದಿಲ್ಲ.

ಮೇಲಿನ ಎಲ್ಲಾ ಕಾದಂಬರಿಗಳನ್ನು ಗಮನಿಸಿದಾಗ ಸಾಮಾನ್ಯವಾಗಿ ಕಂಡುಬರುವ ಕೆಲವು ಅಂಶಗಳೆಂದರೆ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿ ತಮ್ಮ ಬದುಕಿನಲ್ಲಿ ಎಲ್ಲಾ ಸುಖಕ್ಕೆ ತಿಲಾಂಜಲಿಯನ್ನಿತ್ತವರು ಹೆಚ್ಚಾಗಿ ಬಡವರು. ಬಡ ವಿದ್ಯಾರ್ಥಿಗಳು ಕೂಡಾ ತಮ್ಮ ಮನೆಯವರ ಕನಸನ್ನು ನುಚ್ಚುನಾರಾಗಿ ಮಾಡಿ ಸ್ವಾತಂತ್ರ್ಯದ ಕರೆಗೆ ಓಗೊಟ್ಟು ಧುಮುಕುತ್ತಾರೆ. ಜೈಲು ಪಾಲಾಗುತ್ತಾರೆ. ಆದರೆ ಸ್ವತಂತ್ರ ಭಾರತದಲ್ಲಿ ಅವರ ಸ್ಥಿತಿಯೇನೂ ಸುಧರಣೆಯಾಗುವುದಿಲ್ಲ. ಶ್ರೀಮಂತರು ಬ್ರಿಟಿಷ್ ಸರಕಾರದ ಕಾಲದಲ್ಲೂ ವ್ಯವಸ್ಥೆಯ ಪರವಾಗಿದ್ದವರು. ಆದುದರಿಂದ ಬ್ರಿಟಿಷ್ ಸರಕಾರದಿಂದಲೇ ತಮ್ಮ ಜನ್ಮ ಪಾವನವಾಯಿತೆಂಬ ನಂಬಿಕೆಯಿರುವವರು. ಇಂತಹ ಜನರು ಯಾವುದೇ ಚಳವಳಿಯಲ್ಲಿ ಭಾಗವಹಿಸುವುದಿಲ್ಲ. ಸೆರೆಮನೆ ಸೇರುವುದಿಲ್ಲ. ಸ್ವಾತಂತ್ರ್ಯ ಬಂದ ನಂತರವೂ ಇವರು ಸುಖವಾಗಿರುತ್ತಾರೆ. **ಮೂರಾಬಟ್ಟೆ** ಕಾದಂಬರಿಯಲ್ಲಿ ಬರುವ ರಾಮಣ್ಣನಾಗಲಿ, '**ಮೆರೆವಣಿಗೆ**'ಯ ಕಾದಂಬರಿಯ ಸುದರ್ಶನನ ಕೆಲವು ಮಂದಿ ಸಹಪಾಠಿಗಳಾಗಲಿ, **ಔದಾರ್ಯದ ಉರುಳಲ್ಲಿ** ಬರುವ ರಾಧಕೃಷ್ಣನ ಗೆಳೆಯ ಸದಾನಂದನಾಗಲಿ ಯಾವುದೇ ಹೋರಾಟದಲ್ಲೂ ಭಾಗವಹಿಸುವುದಿಲ್ಲ. ಸ್ವತಂತ್ರ ಭಾರತದಲ್ಲೂ ಇವರೇ ಸಮಾಜದ ಮುಖ್ಯವಾಹಿನಿಯಲ್ಲಿ

ಸ್ಥಾನಮಾನವನ್ನು ಪಡೆದು ಬದುಕಿದವರು. ನಿಜವಾದ ಹೋರಾಟಗಾರು ತಮ್ಮ ಮನೆ-ಮಠ, ಆಸ್ತಿ-ಪಾಸ್ತಿ, ಬಂಧು-ಬಳಗ, ಎಲ್ಲವನ್ನೂ ತ್ಯಾಗ ಮಾಡುತ್ತಾರೆ. ತಮ್ಮ ಅಮೂಲ್ಯವಾದ ಯೌವನದ ದಿನಗಳನ್ನು ಸೆರೆಮನೆಯಲ್ಲಿ ಕಳೆಯುತ್ತಾರೆ. ಆದರೆ ಯಾವುದೇ ಇತಿಹಾಸದ ಪುಟಗಳಲ್ಲೂ ಇವರ ಹೆಸರು ದಾಖಲಾಗುವುದಿಲ್ಲ. ಸ್ವತಂತ್ರ ಭಾರತದಲ್ಲೂ ಇವರು ಕಂಡ ಕನಸು ನನಸಾಗುವುದಿಲ್ಲ. ಇವರ ಬದುಕಿನ ಬವಣೆ ಕೊನೆಗಾಣುವುದಿಲ್ಲ. ಬ್ರಿಟಿಷರು ಹೇಳಿದ ಹಾಗೆ 'ಅಧಿಕಾರ ಹಸ್ತಾಂತರ' ಮಾತ್ರ ಆಗುತ್ತದೆ. ವಿದೇಶಿ ದೊರೆಗಳ ಬದಲಿಗೆ ಸ್ವದೇಶಿ ದೊರೆಗಳು ನಮ್ಮನ್ನಾಳುತ್ತಾರೆಯೇ ಹೊರತು ದೇಶದ ಸಿತ್ಥಿಗತಿಯ ವಿಚಾರಕ್ಕೆ ಬಂದರೆ ಇಬ್ಬರಲ್ಲೂ ಅಂತಹ ವ್ಯತ್ಯಾಸವೇನೂ ಗೋಚರಿಸುವುದಿಲ್ಲ.

## ಉಪ್ಪಿನ ಸತ್ಯಾಗ್ರಹ ಹಾಗೂ ಕರನಿರಾಕರಣೆಯ ನಿರೂಪಣೆ

ಸ್ವಾತಂತ್ರ್ಯ ಮಹಾಸಂಗ್ರಾಮದಲ್ಲಿ 'ಉಪ್ಪಿನ ಸತ್ಯಾಗ್ರಹ'ವು ಕೂಡಾ ಪ್ರಮುಖ ಸ್ಥಾನವನ್ನು ಪಡೆದುಕೊಂಡಿದೆ. ದಿನನಿತ್ಯದ ಆಹಾರ ಬಳಕೆಯಲ್ಲಿ ಉಪ್ಪು ಅತಿ ಉಪಯುಕ್ತವಾದ ವಸ್ತುವಾದರೂ ಕೂಡ ಎಂದೂ ಯಾರೂ ಅದರ ಕುರಿತಾಗಿ, ಅದರ ಬೆಲೆಯ ಕುರಿತಾಗಿ ಜಾಸ್ತಿ ತಲೆ ಕೆಡಿಸಿಕೊಳ್ಳುವುದಿಲ್ಲ. ಆದರೆ ಸ್ವಾತಂತ್ರ್ಯ ಸಂಗ್ರಾಮದ ಕಾಯಿದೆಭಂಗ ಚಳುವಳಿಯಲ್ಲಿ ಉಪ್ಪಿನ ಸತ್ಯಾಗ್ರಹವು ಎಲ್ಲಕ್ಕಿಂತಲೂ ಪ್ರಮುಖವಾದುದು. ಈ ಚಳುವಳಿಯ ವಿಷಯ ತಿಳಿದಾಗ ಬ್ರಿಟಿಷ್ ಸರ್ಕಾರ 'ಇದೇನು ಮಹಾ! ಉಪ್ಪಿನ ಹೋರಾಟ' ಎಂದು ತಾತ್ಸಾರ ಭಾವ ತಳೆಯಿತು. ಆದರೆ ಎಲ್ಲರ ನಿರೀಕ್ಷೆಗಳು ಅಲ್ಲಗಳೆದು, ಈ ಉಪ್ಪಿನ ಹೋರಾಟ ಭಾರತ ಸ್ವಾತಂತ್ರ್ಯ ಚಳುವಳಿಯ ಅತ್ಯಮೋಘ ಅಧ್ಯಾಯವಾದುದು ಇತಿಹಾಸದಲ್ಲಿ ಸುಲಭ ವಿವರಣೆಗಳಿಗೆ ಒಗ್ಗಿ ಬಾರದಂತಹ ಒಂದು ಪ್ರಮುಖ ತಿರುವು. ಬ್ರಿಟಿಷ್ ಸರಕಾರವು ಜನಸಾಮಾನ್ಯರಿಗೆ ಅತ್ಯವಶ್ಯಕವಾಗಿ ಬೇಕಾದ ಉಪ್ಪಿನ ಮೇಲೆ ತೆರಿಗೆಯನ್ನು ವಿಧಿಸಿದರು. ಉಪ್ಪನ್ನು ತೆರಿಗೆ ಕೊಡದೆ ತಯಾರಿಸಿದವರಿಗೆ, ಸಂಗ್ರಹಿಸಿದವರಿಗೆ, ಕಠಿಣ ಶಿಕ್ಷೆ ವಿಧಿಸಲಾಗಿತ್ತು. ಉಪ್ಪಿನ ತೆರಿಗೆಯನ್ನು ಕೊಡದ 'ಹೇಡಿ'ಗಳಿಗೆ ೩ ತಿಂಗಳ ಜೈಲು ಶಿಕ್ಷೆ ವಿಧಿಸಲಾಗಿದ್ದನ್ನು ಗಾಂಧೀಜಿಯವರು 'ಯಂಗ್ ಇಂಡಿಯಾ' ಪತ್ರಿಕೆಯಲ್ಲಿ (೬.೩.೧೯೩೦ರಲ್ಲಿ) ಎಲ್ಲರ ಗಮನಕ್ಕೆ ತಂದರು. ಅದರಲ್ಲೂ 'ಹೇಡಿಗಳು' ಎಂಬ ಪದ ಉಪಯೋಗಿಸಿರುವುದು ಅವರ ಮನಸ್ಸಿಗೆ ಬಹಳ ನೋವನ್ನು ಉಂಟುಮಾಡಿತು. ಇದ್ದಕ್ಕಿದ್ದಂತೆ 'ಉಪ್ಪು' ಒಂದು ಆಕರ್ಷಕ ಶಬ್ದವಾಯಿತು. ಅದೇ ಸ್ವಾತಂತ್ರ್ಯ ಚಳುವಳಿಯ ಮಂತ್ರವಾಯಿತು.

ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರು ಸ್ವತಃ ಕಾಯಿದೆ ಭಂಗ ಚಳುವಳಿಯಲ್ಲಿ ಭಾಗವಹಿಸಿ ಜೈಲುವಾಸವನ್ನು ಅನುಭವಿಸಿದವರು. ಆದುದರಿಂದ ಅವರ ಕಾದಂಬರಿಯೊಂದು ಕಾಲ್ಪನಿಕ ಕಥನವಾಗದೆ ಅನುಭವ ಕಥನವಾಗಿದೆ. ಉಪ್ಪಿನ ಸತ್ಯಾಗ್ರಹದ ಯಥಾವತ್ತಾದ ಚಿತ್ರಣ ಹಾಗೂ ಬ್ರಿಟಿಷರು ಪ್ರಕೃತಿದತ್ತವಾದ ಉಪ್ಪಿನ ಮೇಲೆ ಕರ ವಿಧಿಸಿದುದರ ರಹಸ್ಯವನ್ನು ಈ ಕಾದಂಬರಿ ಬಯಲಿಗೆಳೆಯುತ್ತದೆ.

೧೯೩೦ನೇ ಫೆಭ್ರವರಿ ೧೪ನೆಯ ತಾರೀಖಿನ ವೇಳೆಗೆ ಉಪ್ಪಿನ ಸತ್ಯಾಗ್ರಹವನ್ನು ಕುರಿತು ಬೇಕಾದಷ್ಟು ಪ್ರಚಾರ ನಡೆದಿತ್ತು. ಉಪ್ಪಿನ ಮೇಲೆ ಹೇರಿದ ಕರದ ಮೂಲ, ಭಾರತೀಯರಿಗೆ ಚೆನ್ನಾಗಿ ಗೊತ್ತಾಯಿತು. ಉಪ್ಪಿನ ಸಮಿತಿಯವರು ೧೮೩೬ರಲ್ಲಿಯೇ, ಇಂಗ್ಲಿಷ್ ಉಪ್ಪು ಭಾರತದಲ್ಲಿ ಮಾರಾಟವಾಗಬೇಕಾದರೆ, ಭಾರತದ ಉಪ್ಪಿಗೆ ಕಂದಾಯ ವಿಧಿಸಬೇಕೆಂದು ಸೂಚಿಸಿದ್ದರು. ಇಂಗ್ಲಿಷ್ ಹಡಗುಗಳು ಲಿವರಫೂಲ್ ಸಮುದ್ರ ತೀರದಲ್ಲಿ ಭಾರತಕ್ಕೆ ಬರಲು ಸಿದ್ಧವಾಗಿ ನಿಂತಿದ್ದವು. ಆದರೆ ಕನಿಷ್ಟ ಪ್ರಮಾಣದ ಹೊರೆಯಿಲ್ಲದೆ ಅವು ಸಮುದ್ರದಲ್ಲಿ ಬರುವುದು ಕಷ್ಟವಾಗಿದ್ದಿತು. ಕೆಲವು ಕಾಲ ಕಲ್ಕತ್ತದ ಚೌರಂಗಿ ರಸ್ತೆಗೆ ಹಡಗಿನಲ್ಲಿ ಲಂಡನ್ನಿನ ಸ್ಟ್ಯಾಂಡಿನಿಂದ ಮಣ್ಣು ತುಂಬಿಕೊಂಡು ಬಂದು ಹಾಕಿದವು! ಒಂದು ಕಾಲದಲ್ಲಿ ಹೂಗ್ಲಿಯಿಂದ ಕಾಳಘಾಟ್ ದೇವಸ್ಥಾನದವರೆಗೆ ಕಾಲುವೆಯಾಗಿ ಹೋಗುತ್ತಿದ್ದುದನ್ನು ಲಂಡನ್ ಮಣ್ಣಿನಿಂದ ತುಂಬಿ ಭರ್ತಿ ಮಾಡಿದರು.

ಇರುವ ವಿಚಾರವಿದು. ಭಾರತಕ್ಕೆ ಬರುವ ಸಾಮಾನಿಗಿಂತ ಭಾರತದಿಂದ ಹೊರಕ್ಕೆ ಹೋಗುವ ಪದಾರ್ಥ ಯಾವಾಗಲೂ ಹೆಚ್ಚು, ೧೯೨೫ರಲ್ಲಿ ಭಾರತಕ್ಕೆ ಬಂದುದು ೨೪೯ ಕೋಟಿ ಸಾಮಾನು; ಭಾರತದಿಂದ ಹೋದುದು ೩೧೬ ಕೋಟಿ ರೂಪಾಯಿನದು, ಅಷ್ಟೇ ಅಲ್ಲ, ಭಾರತದಿಂದ ಹೋಗುವ ಸಾಮಾನುಗಳು, ಆಹಾರ ಧಾನ್ಯ ಕಚ್ಚಾಮಾಲುಗಳಾದುದರಿಂದ ಅವುಗಳಿಗೆ ಹಡಗಿನಲ್ಲಿ ಹೆಚ್ಚು ಸ್ಥಳ ಬೇಕು. ಇಂಗ್ಲೇಂಡಿನಿಂದ ಭಾರತಕ್ಕೆ ಬರುವ ಸಾಮಾನುಗಳು ತಯಾರಾದ ಪದಾರ್ಥಗಳಾದುದರಿಂದ ಹಡಗಿನಲ್ಲಿ ಹೆಚ್ಚು ಸ್ಥಳ ಬೇಕಿಲ್ಲ. ಅಂತೂ ಒಟ್ಟಿನಲ್ಲಿ ಭಾರತದಿಂದ ಇಂಗ್ಲೇಂಡಿಗೆ ಹೋಗುವ ಸಾಮಾನುಗಳಿಗೆ, ಇಂಗ್ಲೇಂಡಿನಿಂದ ಬರುವ ಸಾಮಾನುಗಳಿಗೆ ಬೇಕಾಗುವುದರ ಐದರಷ್ಟು ಹಡಗುಗಳು ಬೇಕಾಗುತ್ತವೆ. ಈ ಹಡಗುಗಳು ಬರಿದಾಗಿ ತಾನೇ ಬರಬೇಕು. ಆದುದರಿಂದ "ಇಂಗ್ಲೇಂಡಿನ ಚೆಶೈರ್ ಉಪ್ಪನ್ನು ಭಾರತಕ್ಕೆ ತುಂಬಿ, ಇಲ್ಲಿಯ ಉಪ್ಪಿನ ಬೆಲೆ ಇದಕ್ಕಿಂತ ಅಧಿಕವಾಗುವಂತೆ ಅದರ ಮೇಲೆ ಕಂದಾಯ ವಿಧಿಸಿದರು". ಗಾಂಧಿಯವರು ಉಪ್ಪಿನ ಸತ್ಯಾಗ್ರಹ ಹೂಡುವುದು ತಿಳಿದ ಕೂಡಲೇ ಸರಕಾರ "ಉಪ್ಪಿನ ತಯಾರಿಕೆಗೆ ಸೌದೆ ಖರ್ಚು ಇಷ್ಟು, ಕೂಲಿ ಇಷ್ಟು, ನೀವು ಇಲ್ಲಿ ಮಾಡುವ ಉಪ್ಪಿಗೆ ಸೀಮೆಯಿಂದ ಬರುವ ಸುಂಕ ಕೊಡುವ ಉಪ್ಪಿಗಿಂತ ಹೆಚ್ಚು ಬೆಲೆ ಬೀಳುತ್ತದೆ" ಎಂದು ಪ್ರಕಟಿಸಿದರು.[೧೫]

ಉಪ್ಪಿನ ಸತ್ಯಾಗ್ರಹದ ಕುರಿತು ಮದರಾಸಿನ 'ಹಿಂದು' ಪತ್ರಿಕೆಯವರು ಒಂದು ಲೇಖನವನ್ನು ಬರೆದರು. "೧೮೩೬ಕ್ಕೆ ಮುಂಚೆ ಭಾರತದಲ್ಲಿ ಉಪ್ಪು ಪುಕ್ಕಟೆಯಾಗಿ ಸಿಕ್ಕುತ್ತಿತ್ತು. ಬ್ರಿಟಿಷ್ ಸರಕಾರಕ್ಕೆ ಅನುಕೂಲವಾಗಲೆಂದು ಈ ಸರಕಾರ ಈ ದೇಶದ ಜನ ಉಪ್ಪು ತಯಾರಿಸಲೇ ಬಾರದು, ಉಪ್ಪಿನ ತಯಾರಿಕೆ, ವಿತರಣೆ, ಮಾರಾಟ... ಎಲ್ಲವೂ ಸರಕಾರದ ಸ್ವಾಮ್ಯ ಎಂಬ ಕಾನೂನು ಮಾಡಿದರು. ಯಾಕೆ ಗೊತ್ತೇ? ಈ ದೇಶದಿಂದ ವಿದೇಶಗಳಿಗೆ ಮುಖ್ಯವಾಗಿ ಇಂಗ್ಲೇಂಡಿಗೆ ಆಹಾರ, ಕಚ್ಚಾ ಸಾಮಾಗ್ರಿಗಳನ್ನು ಹಡಗಿನಲ್ಲಿ ಸಾಗಿಸುತ್ತಿದ್ದರು. ಹಿಂದಿರುಗಿ ಬರುವಾಗ ಆ ಹಡಗಿನಲ್ಲಿ ಅಲ್ಲಿ ತಯಾರಾದ ಸಿದ್ಧ ಸರಕುಗಳನ್ನು ತರುತ್ತಿದ್ದರು. ಅಲ್ಲಿಂದ ತರುವ ಸಿದ್ಧ ವಸ್ತುಗಳ ಸರಕು ಇಲ್ಲಿಂದ ಹೋದ ಹಡಗುಗಳಿಗೆ ಭರ್ತಿ ಆಗುತ್ತಿರಲಿಲ್ಲ. ಖಾಲಿ ಹಡಗುಗಳು ಬಂದರೆ ಸಾಗಣಿಕೆ ನಷ್ಟವಾಗುತ್ತಿತ್ತು. ಹಡಗು ಸಮತೋಲನ ಕಾಯ್ದುಕೊಳ್ಳಲು ಹಡಗಿನ ತಳದಲ್ಲಿ ಭಾರ ಹೇರಲೇ

ಬೇಕಾಗಿತ್ತು... ಈ ಭಾರವನ್ನು ಭರ್ತಿ ಮಾಡಲು ಮಣ್ಣು, ಒಡೆದ ಪಿಂಗಾಣಿ ಚೂರುಗಳನ್ನು ಉಪ್ಪನ್ನು ತುಂಬುತ್ತಿದ್ದರು.

ಅಲ್ಲಿಂದ ಬಿಟ್ಟಿಯಾಗಿ ತುಂಬಿಕೊಂಡು ಬಂದಿದ್ದ ಉಪ್ಪನ್ನು ಸುಮ್ಮನೆ ಸಮುದ್ರಕ್ಕೆ ಯಾಕೆ ಸುರಿಯಬೇಕು? ಅದನ್ನು ಇಲ್ಲಿಯವರಿಗೆ ಮಾರುವ ಏರ್ಪಾಡನ್ನು ಮಾಡಿದರು. ಇಲ್ಲಿಯೇ ಬೇಕಾದಷ್ಟು ಉಪ್ಪು ಎಲ್ಲಿ ಬೇಕಾದರೆ ಅಲ್ಲಿ ಬಿಟ್ಟಿಯಾಗಿ ನಿಸರ್ಗದತ್ತವಾಗಿ ಗಾಳಿ, ನೀರು, ಬೆಳಕು ಸಿಕ್ಕಂತೆ ಹೇರಳವಾಗಿ ಸಿಗುತ್ತಿತ್ತು. ಬ್ರಿಟಿಷ್ ಸರ್ಕಾರ ಇಲ್ಲಿ ಯಾರೂ ಉಪ್ಪು ತಯಾರಿಸಲೇ ಬಾರದು ಎಂದು ಶಾಸನ ಮಾಡಿ ಅಲ್ಲಿಂದ ಪುಕ್ಕಟೆ ತಂದ ಉಪ್ಪನ್ನು ನಮ್ಮ ಜನರಿಗೆ ಸುಂಕ ಸಹಿತ ಮಾರಲು ಕಾಯಿದೆ ಮಾಡಿದರು... ![೧೬] ಹೀಗೆ ಬ್ರಿಟಿಷರ ಸ್ವಾರ್ಥದ ಪರಮಾವಧಿಯ ಚಿತ್ರಣವನ್ನು **ಹಿಂದು** ಪತ್ರಿಕೆ ಬಯಲು ಮಾಡಿತು.

೧೯೩೦ನೆಯ ಜನವರಿ ೨೬ನೇ ತಾರೀಖು ಅಖಿಲ ಭಾರತ ಕಾಂಗ್ರೆಸ್ ಮಹಾಸಭೆಯ ವರ್ಕಿಂಗ್ ಸಮಿತಿಯವರು ಸ್ವಾತಂತ್ರ್ಯ ಘೋಷಣೆಯ ಠರಾವನ್ನು ದೇಶದಲ್ಲಿ ಪ್ರಚಾರ ಮಾಡಿ, ಪೂರ್ಣ ಸ್ವಾತಂತ್ರ್ಯದಿನವನ್ನಾಗಿ ಆಚರಿಸಬೇಕೆಂದು ಸೂಚಿಸಿದರು. ಪ್ರತಿಯೊಬ್ಬ ಭಾರತೀಯನೂ ಈ ಪ್ರತಿಜ್ಞೆ ತೆಗೆದುಕೊಳ್ಳಬೇಕೆಂದು ಅಪ್ಪಣೆ ಮಾಡಿದರು.

"ಪ್ರಪಪಂಚದ ಇತರ ಜನಾಂಗಳಿಗೆ ಹೇಗೋ ಹಾಗೆ ಭಾರತಕ್ಕೂ ಪೂರ್ಣವಾಗಿ ಬೆಳೆಯಲು ಅವಕಾಶ ಬೇಕು. ಜೀವನ ಅವಶ್ಯಕತೆಗಳೂ, ತಮ್ಮ ಶ್ರಮದ ಫಲಗಳೂ, ಸ್ವಾತಂತ್ರ್ಯವೂ ಭಾರತೀಯರ ಹಕ್ಕು. ಯಾವುದಾದರೂ ಸರಕಾರ ಜನರ ಈ ಹಕ್ಕುಗಳನ್ನು ಕಿತ್ತುಕೊಂಡರೆ ಅಥವಾ ಜನರ ಮೇಲೆ ದಬ್ಬಾಳಿಕೆ ನಡೆಸಿದರೆ, ಜನರಿಗೆ ಆ ಸರ್ಕಾರವನ್ನು ಬದಲಾಯಿಸುವ ಅಥವಾ ನಾಶಮಾಡುವ ಹಕ್ಕು ಇದೆಯೆಂದು ನಂಬುತ್ತೇವೆ. ಭಾರತದಲ್ಲಿ ಬ್ರಿಟಿಷ್ ಸರ್ಕಾರ, ಭಾರತೀಯರ ಸ್ವಾತಂತ್ರ್ಯವನ್ನು ನಾಶಮಾಡುವುದು ಮಾತ್ರವಲ್ಲದೆ ಜನರ ಲೂಟಿಯ ಮೇಲೆಯೇ ಅವಲಂಬಿಸಿ ಭಾರತವನ್ನು ಆರ್ಥಿಕ ರಾಜಕೀಯ ಸಾಂಸ್ಕೃತಿಕ ನೀತಿಯ ದೃಷ್ಟಿಯಿಂದ ಪೂರ್ಣವಾಗಿ ತುಳಿದಿದೆ: ಆದುದರಿಂದ ಭಾರತವು ಬ್ರಿಟಿಷ್ ಸಂಬಂಧವನ್ನು ತ್ಯಜಿಸಿ ಪೂರ್ಣ ಸ್ವರಾಜ್ಯ ಅಥವಾ ಸ್ವಾತಂತ್ರ್ಯವನ್ನು ಹೊಂದಬೇಕೆಂದು ಬಯಸುತ್ತೇವೆ.

ಭಾರತವು ಆರ್ಥಿಕವಾಗಿ ನಾಶವಾಗಿದೆ. ನಮ್ಮ ದೇಶದವರಿಂದ ಸರ್ಕಾರ ಹೊಂದುವ ಉತ್ಪತ್ತಿಗೂ, ಜನರ ಉತ್ಪತ್ತಿಗೂ ಒಂದಕ್ಕೊಂದಕ್ಕೆ ಸಂಬಂಧವೆ ಇಲ್ಲ. ನಮ್ಮ ಸಾಮಾನ್ಯ ಉತ್ಪತ್ತಿ ದಿನಕ್ಕೆ ಒಂದು ಮುಕ್ಕಾಲು ಆಣೆ. ನಾವು ಕೊಡುವ ಹೆಚ್ಚಾದ ಕಂದಾಯದ ಪೈಕಿ ಶೇಕಡ ೨೦ ಜಮೀನು ಕಂದಾಯ, ಶೇಕಡ ೨ ಉಪ್ಪಿನ ಮೇಲಿನ ಕಂದಾಯ, ಈ ಕಂದಾಯ ಮುಖ್ಯವಾಗಿ ಬಡವರ ಮೇಲೆಯೇ ಬೀಳುತ್ತದೆ. ನೂಲುವುದು ಮುಂತಾದ ಕೈಗಾರಿಕೆಗಳೆಲ್ಲಾ ನಾಶವಾಗಿದೆ. ರೈತರು ವರುಷಕ್ಕೆ ನಾಲ್ಕು ತಿಂಗಳು ಸೋಮಾರಿಗಳಾಗಿದ್ದಾರೆ. ಕೈಗಾರಿಕೆಗಳಿಲ್ಲದುದರಿಂದ ಅವರ ಬುದ್ಧಿ ಮಂಕಾಗಿದೆ. ಬಾಕಿ ದೇಶಗಳಲ್ಲಿ ಹೀಗೆ ನಾಶವಾದ ಕೈಗಾರಿಕೆಗಳ ಸ್ಥಳಗಳಲ್ಲಿ ಬೇರೆ ಕೈಗಾರಿಕೆಗಳನ್ನು ಅವರಿಗೆ ಒದಗಿಸಿದ್ದಾರೆ. ಇಲ್ಲಿ ಅಂತಹುದೇನೂ ಆಗಿಲ್ಲ.

ಸುಂಕ, ನೋಟು, ಇವುಗಳು, ರೈತರಿಗೆ ಹೆಚ್ಚು ಹೊರೆ ಬೀಳುವಂತೆಯೇ ಏರ್ಪಾಡಾಗಿವೆ. ನಮ್ಮ ದೇಶಕ್ಕೆ ಆಮದಾಗುವುದರ ಪೈಕಿ ಬ್ರಿಟಿಷರ ಸಾಮಾನುಗಳೇ ಹೆಚ್ಚು. ಸುಂಕದ ಏರ್ಪಾಡಿನಲ್ಲಿ ಬ್ರಿಟಿಷರಿಗೆ ಬಹಳ ಅನುಕೂಲವಾಗುವಂತೆ ಪಕ್ಷಪಾತವಾಗಿದೆ. ಸುಂಕದ ಆ ಉತ್ಪತ್ತಿ ರೈತನ ಹೊರೆಯನ್ನು ಕಡಿಮೆಮಾಡಲು ಉಪಯೋಗವಾಗುತ್ತಿಲ್ಲ. ಅಸಾಧ್ಯ ಸಂಬಳದ ಅಧಿಕಾರಿಗಳ ಸರ್ಕಾರ ನಡೆಸಲು ಉಪಯೋಗವಾಗುತ್ತಿದೆ. ಹಣವಿನಿಮಯ ನೀತಿ ಮನಸ್ಸಿಗೆ ಬಂದಂತೆ ಆಗಿದೆ. ಇದರಿಂದ ಈ ದೇಶದ ಅನೇಕ ಕೋಟಿ ರೂಪಾಯಿಗಳು ಇಂಗ್ಲೇಂಡಿಗೆ ಹೋಗಿವೆ.

ರಾಜಕೀಯವಾಗಿ ಬ್ರಿಟಿಷರ ಕಾಲದಲ್ಲಿಯಂತೆ ಭಾರತದ ಯೋಗ್ಯತೆ ಮತ್ತಾವಾಗಲೂ ಇಷ್ಟು ಕಡಿಮೆಯಾಗಲಿಲ್ಲ. ಯಾವ ಸುಧಾರಣೆಗಳಿಂದಲೂ ಜನರಿಗೆ ನಿಜವಾದ ರಾಜಕೀಯ ಜವಾಬ್ದಾರಿ ದೊರೆತಿಲ್ಲ. ಪರದೇಶದ ಶಕ್ತಿಗೆ ನಮ್ಮಲ್ಲಿಯ ಅತ್ಯಂತ ಶ್ರೇಷ್ಠರು ಕೂಡಾ ತಲೆಬಗ್ಗಿಸಬೇಕಾಗಿದೆ. ಮಾತಿನ ಸ್ವಾತಂತ್ರ್ಯ, ಇವೆಲ್ಲಾ ನಮಗೆ ಇಲ್ಲವೇ ಇಲ್ಲ. ನಮ್ಮ ದೇಶದ ಅನೇಕ ಬಾಂಧವರು ಈ ದೇಶಕ್ಕೆ ಬರಲು ಅವಕಾಶವಿಲ್ಲವಾಗಿದೆ. ಅವರು ದೇಶಭ್ರಷ್ಟರಾಗಿ ಪರದೇಶದಲ್ಲಿ ಅಲೆಯುತ್ತಿದ್ದಾರೆ. ನಮ್ಮವರ ಆಳುವ ಶಕ್ತಿಯೆಲ್ಲಾ ನಾಶವಾಗುತ್ತಿದೆ. ಅವರು, ಸಣ್ಣ ಹಳ್ಳಿಯ ಹುದ್ದೆಗಳಿಂದಲೂ ಗುಮಾಸ್ತಗಿರಿಯಿಂದಲೂ ತೃಪ್ತರಾಗಬೇಕಾಗಿದೆ. ನಮಗೆ ದೊರೆಯುತ್ತಿರುವ ಶಿಕ್ಷಣ ನಮ್ಮ ಸಂಸ್ಕೃತಿಯ ತಳಹದಿ ಆವರಣಗಳನ್ನೆಲ್ಲಾ ಹರಿದು ಹಾಕಿದೆ. ಈ ವಿದ್ಯೆ ನಮ್ಮನ್ನು ಬಂಧಿಸುವ ಸಂಕೋಲೆಗಳನ್ನೇ ನಾವು ಅಪ್ಪಿಕೊಳ್ಳುವಂತೆ ಮಾಡಿದೆ.ಬಲಾತ್ಕಾರವಾಗಿ ನಮ್ಮ ಆಯುಧಗಳನ್ನು ಕಿತ್ತುಕೊಂಡಿದ್ದಾರೆ. ನಮ್ಮ ಪುರುಷತ್ವವೇ ನಾಶವಾಗಿದೆ. ಪರದೇಶದ ಸೈನ್ಯ, ಇಲ್ಲಿ ಇರುವುದರಿಂದ ನಮ್ಮ ಹೊಡೆದಾಡುವ ಶಕ್ತಿ ಪೂರ್ಣವಾಗಿ ನಾಶವಾಗಿದೆ. ನಾವು ನಮ್ಮನ್ನು ಸಂರಕ್ಷಿಸಿಕೊಳ್ಳಲಾರೆವು. ಕಳ್ಳರಿಂದಲೂ ದುಷ್ಟರಿಂದಲೂ ನಮ್ಮ ಹೆಂಡತಿ ಮಕ್ಕಳನ್ನು ಸಂರಕ್ಷಿಸಿಕೊಳ್ಳಲಾರೆವು ಎಂಬ ಅಧೈರ್ಯ ಉಂಟಾಗಿದೆ.

ನಮ್ಮ ದೇಶಕ್ಕೆ ಈ ನಾಲ್ಕು ಬಗೆಯ ಅನ್ಯಾಯಗಳನ್ನು ಮಾಡಿರುವ ಈ ಆಡಳಿತಕ್ಕೆ ಇನ್ನು ಬಾಗಿರುವುದು ಮನುಷ್ಯರಿಗೂ ದೇವರಿಗೂ ವಿರೋಧವಾದ ಪಾಪವೆಂದು ನಾವು ನಂಬುತ್ತೇವೆ. ನಮ್ಮ ಸ್ವಾತಂತ್ರ್ಯವನ್ನು ಹೊಂದುವ ಮಾರ್ಗ, ಹಿಂಸೆಯ ಮೂಲಕವಲ್ಲವೆಂಬುದನ್ನು ನಾವು ಪರಿಗಣಿಸಿದ್ದೇವೆ. ಆದುದರಿಂದ ನಾವು ಬ್ರಿಟಿಷ್ ಸರಕಾರದೊಂದಿಗೆ ಎಲ್ಲಾ ಸಹಕಾರವನ್ನೂ ಹಿಂದಕ್ಕೆ ತೆಗೆದುಕೊಳ್ಳುತ್ತೇವೆ. ಕಂದಾಯವನ್ನು ಕೊಡದಿರುವದೇ ಮೊದಲಾದ ಇತರ ಎಲ್ಲಾ ಕಾನೂನುಭಂಗ ಚಳುವಳಿಗೂ ಸಿದ್ಧರಾಗುತ್ತೇವೆ. ಸರ್ಕಾರಕ್ಕೆ ನಮ್ಮ ಸಹಕಾರವನ್ನು ಕಂದಾಯವನ್ನೂ ಕೊಡದೆ ನಿಲ್ಲಿಸಿಬಿಟ್ಟರೆ, ಎಂತಹ ಉದ್ರೇಕ ಸ್ಥಿತಿಯಲ್ಲಿಯೂ ಹಿಂಸಾ ಮಾರ್ಗಕ್ಕೆ ನಾವು ಹೋಗದಿದ್ದರೆ, ಈ ಅಮಾನುಷ ಸರ್ಕಾರ ಕೊನೆಗಾಣುತ್ತದೆ ಎಂದು ನಮ್ಮ ನಂಬಿಕೆ. ಆದುದರಿಂದ ನಾವು ಪೂರ್ಣಸ್ವರಾಜ್ಯ ಸ್ಥಾಪನೆಗಾಗಿ ಕಾಂಗ್ರೆಸ್ಸಿನವರು ಆಗಿಂದಾಗ್ಗೆ ಕೈಗೊಳ್ಳುವ ಕಾರ್ಯಗಳನ್ನು ನಡೆಸುವುದೆಂದು ಈ ಮೂಲಕ ಪ್ರತಿಜ್ಞೆಮಾಡುತ್ತೇವೆ.[೨೧೭] ಸ್ವಾತಂತ್ರ್ಯ ಪ್ರತಿಜ್ಞೆ, ದೇಶದಲ್ಲಿ ಅಡಗಿದ್ದ ಉತ್ಸಾಹವನ್ನು ಒಳಶಕ್ತಿಯನ್ನೂ ಪ್ರಕಟಿಸಿತು. ಕಾಂಗ್ರೆಸ್ ವರ್ಕಿಂಗ್ ಸಮಿತಿ ಉಪ್ಪಿನ ಸತ್ಯಾಗ್ರಹವನ್ನು ನಡೆಸಬೇಕೆಂದು ನಿರ್ಣಯಿಸಿತು. ಉಪ್ಪಿನ ತೆರಿಗೆಯನ್ನು ರದ್ದುಗೊಳಿಸಬೇಕೆಂದು ಗಾಂಧೀಜಿಯವರು

ವೈಸ್ರಾಯರಿಗೆ ಕೇಳಿಕೊಂಡರು. "ಎಲ್ಲರ ಆಹಾರದಲ್ಲಿ ಉಪ್ಪು ಅವಶ್ಯಕವಾಗಿದ್ದರೂ ಈ ತೆರಿಗೆ ತುಂಬಾ ಭಾರ. ತೆಗೆದು ಹಾಕಿದರೆ ಬಡಜನರಿಗೆ ಅತ್ಯಂತ ಪ್ರಯೋಜನ, ಉಪಕಾರ"[೧೮] ಎಂದು ತಿಳಿಸಿದರು. ಗಾಂಧೀಜಿಯವರು ಉಪ್ಪಿನ ಕಾನೂನನ್ನು ಮುರಿಯಲು ತಾನು ಹೊರಟಿರುವುದನ್ನು ತಿಳಿಸಿದರು. ಈ ಬಗ್ಗೆ ಚರ್ಚಿಸಲು ಸಿದ್ಧರಾಗಿದ್ದರು. ಚರ್ಚೆಗೆ ಸರಕಾರ ಸಿದ್ಧವಾದರೆ ಸತ್ಯಾಗ್ರಹವನ್ನು ಮುಂದೆ ಹಾಕಲು ಸಿದ್ಧವೆಂಬುದನ್ನೂ ತಿಳಿಸಿದರು. "ಇದು ಸತ್ಯಾಗ್ರಹಿಯ ಸರಳವಾದ ಮತ್ತು ಪವಿತ್ರವಾದ ಕರ್ತವ್ಯ. ಉಪ್ಪಿನ ಶಾಸನ ಮುರಿಯಲು ಸತ್ಯಾಗ್ರಹ ಪ್ರಾರಂಭಿಸಬೇಕಾಗುತ್ತದೆ. ನಾನು ದಸ್ತಗಿರಿಯಾದರೂ ಸತ್ಯಾಗ್ರಹ ಮುಂದುವರಿಸಲು ಸತ್ಯಾಗ್ರಹಿಗಳು ಸಿದ್ಧವಾಗಿದ್ದಾರೆ"[೧೯] ಎಂದು ತಿಳಿಸಿದರು. ಈ ಪತ್ರವನ್ನು ಒಬ್ಬ ಆಂಗ್ಲ ಮಿತ್ರನ ಕೈಯಲ್ಲಿ ಕಳುಹಿಸಿದರು.

ಮಾರ್ಚ್ ಆರಂಭದಲ್ಲಿ ಗಾಂಧೀಜಿ ಸರಕಾರಕ್ಕೆ ಮತ್ತೊಂದು ಸಂದೇಶವನ್ನು ಕಳುಹಿಸಿದರು. ಯಾವುದೇ ಪ್ರತಿಕ್ರಿಯೆ ಬರಲಿಲ್ಲ. ಗಾಂಧೀಜಿಯವರು ತಮ್ಮ ಅನುಯಾಯಿಗಳೊಂದಿಗೆ ಮಾರ್ಚ್ ೧೨ರಂದು ಸಾಬರ್ಮತಿ ಆಶ್ರಮದಿಂದ ಹೊರಟು ದಂಡಿಯಾತ್ರೆಯನ್ನು ಆರಂಭಿಸಿದರು. ಆ ತಂಡದಲ್ಲಿ ಆಗ ೧೮ ವರ್ಷದ ತರುಣನಾಗಿದ್ದ ಮೈಲಾರ ಮಹದೇವಪ್ಪ ಕರ್ನಾಟಕದ ಏಕೈಕ ಪ್ರತಿನಿಧಿ. ೨೪ ದಿನಗಳ ಆ ಯಾತ್ರೆ ದಿನಗಳೆದಂತೆ ಮಹಾನ್ ವಿಜಯಯಾತ್ರೆಯಾಗಿ ಪರಿಣಮಿಸಿತು. ದಾರಿಯಲ್ಲಿದ್ದ ಹಳ್ಳಿಗಳ, ಸುತ್ತಮುತ್ತಲ ಹಳ್ಳಿಗಳ ಜನ ಸಹಸ್ರಾರು ಸಂಖ್ಯೆಯಲ್ಲಿ ಗಾಂಧೀಜಿ ತಂಗಿದ ಜಾಗಗಳಿಗೆ ಬಂದು ಸಭೆಗಳಲ್ಲಿ ಭಾಗವಹಿಸಿದರು. ಪಟೇಲರು ರಾಜೀನಾಮೆಯಿತ್ತರು. ದೇಶದಲ್ಲೆಲ್ಲ ವಿದ್ಯುತ್ ಸಂಚಾರವಾಯಿತು. ಜನಾಂದೋಲನ ಹೊಸರೂಪಗಳಲ್ಲಿ ಹಬ್ಬತೊಡಗಿತು. ಈ ಚಳುವಳಿ ಜರಗುತ್ತಿರುವಾಗಲೇ ಏಪ್ರಿಲ್ ೧೮ರಂದು ಸೂರ್ಯಸೇನರ ನಾಯಕತ್ವದಲ್ಲಿ ಚಿತಗಾಂಗಿನ ಶಸ್ತ್ರಾಗಾರ ಧಾಳಿ ಪ್ರಸಂಗ ಜರುಗಿತು. ವಾಯುವ್ಯ ಸರಹದ್ದು ಪ್ರಾಂತ್ಯದಲ್ಲಿ ಖಾನ್ ಅಬ್ದುಲ್‌ಗಫಾರ್‌ಖಾನರ ಬಂಧನದಿಂದ ಪ್ರಕ್ಷುಬ್ದ ಪರಿಸ್ಥಿತಿಯುಂಟಾದಾಗ ಚಂದ್ರಸಿಂಗ್‌ರ ನೇತೃತ್ವದಲ್ಲಿ ಗರ್‌ವಾಲ್ ತುಕಡಿಯ ಭಾರತೀಯ ಸೈನಿಕರು ಜನರ ಮೇಲೆ ಗುಂಡು ಹಾರಿಸಲು ನಿರಾಕರಿಸಿದರು. ಗಾಂಧೀಜಿಯ ತಂಡ ಏಪ್ರಿಲ್ ೫ರಂದು ದಂಡಿಯನ್ನು ತಲುಪಿದರು. ಎಪ್ರಿಲ್ ೬ ರಂದು ದಂಡಿಯ ಕಡಲ ತೀರದಲ್ಲಿ ತಾವೇ ತಯಾರಿಸಿ ಕಾಯಿದೆ ಭಂಗ ಚಳುವಳಿಯನ್ನು ಪ್ರಾರಂಭಿಸಿದರು.

ಭಾರತದಲ್ಲಿ ಎಲ್ಲಿ ನೋಡಿದರೂ ಉಪ್ಪಿನ ಮಾತೇ ಮಾತಾಯಿತು. ಗಾಂಧಿಯವರು ವೈಸ್ರಾಯರಿಗೆ ಬರೆದ ಪತ್ರಕ್ಕೆ ಸರಿಯಾದ ಪ್ರತ್ಯುತ್ತರ ಬರಲಿಲ್ಲ. ಉಪ್ಪಿನ ಸತ್ಯಾಗ್ರಹವನ್ನು ಪ್ರಾರಂಭಿಸುವುದಕ್ಕೆ ಮುಂಚೆ ಗಾಂಧಿಯವರು, ವೈಸ್ರಾಯರ ಪ್ರತ್ಯುತ್ತರವನ್ನು ನೋಡಿ ಹೀಗೆ ಹೇಳಿದರು– "ನಾನು ನಮಸ್ಕಾರ ಮಾಡಿ ಅನ್ನ ಕೇಳಿದೆ, ಆದರೆ ನನಗೆ ದೊರಕಿದುದು ಕಲ್ಲು. ಬ್ರಿಟಿಷ್ ಜನಾಂಗ ಹಿಂಸೆಗೆ ಮಾತ್ರವೇ ಬಗ್ಗುವುದು. ಆದುದರಿಂದ ವೈಸರಾಯರ ಪ್ರತ್ಯತ್ತರದಿಂದ ನನಗೆ ಆಶ್ಚರ್ಯವಾಗಲಿಲ್ಲ. ಭಾರತದಲ್ಲಿರುವ ಶಾಂತಿ ಸೆರೆಮನೆಯ ಶಾಂತಿ ಮಾತ್ರ, ಭಾರತ ಒಂದು ದೊಡ್ಡ ಸೆರೆಮನೆ. ಈ ಕಾನೂನನ್ನು ನಾನು ಪ್ರತಿಭಟಿಸುತ್ತೇನೆ. ದೇಶದ ಉಸಿರು ಹಿಂಡುತ್ತಿರುವ ಈ ಬಲಾತ್ಕಾರದ ದುಃಖದಾಯಕವಾದ ಶಾಂತಿಯನ್ನು ಒಡೆಯುತ್ತೇನೆ."[೨೦]

ಗಾಂಧಿಯವರ ಸಂದೇಶ ದೇಶದ ಮೂಲೆ ಮೂಲೆಗೂ ಹಬ್ಬಿತು. ಸರಕಾರ ಒಂದು ವಾರ ಈ ಚಳುವಳಿಯಿಂದ ಏನು ತಾನೇ ಮಾಡಲು ಸಾಧ್ಯ? ಎಂಬಂತೆ ಸುಮ್ಮನೆ ಇತ್ತು. ಆದರೆ ಇದ್ದಕ್ಕಿದ್ದಂತೆ ಸರಕಾರದ ಶಾಂತಿ ಭಂಗವಾಯಿತು. ವಲ್ಲಭಭಾಯಿ ಪಟೇಲರು ಗಾಂಧಿಯವರಿಗಿಂತ ಮುಂಚೆ ಕೈದಿಗಳಾದರು. "ನಿಮ್ಮ ಮದುವೆ, ಹಬ್ಬದ ವೈಭವಗಳನ್ನೆಲ್ಲಾ ಬಿಡಿ. ಅತ್ಯಂತ ಶಕ್ತವಾದ ಸರಕಾರದೊಂದಿಗೆ ಕಾದಾಡುವ ಜನರಿಗೆ, ಈ ವಿನೋದದಲ್ಲಿ ತೊಡಗಲು ಅವಕಾಶವಿಲ್ಲ. ನಾಳೆಯಿಂದ ನೀವು ನಿಮ್ಮ ಮನೆಗಳನ್ನು ಬೀಗ ಹಾಕಿಕೊಂಡು ಬಯಲಿನಲ್ಲಿಯೇ ವಾಸಿಸಬೇಕಾಗಬಹುದು. ನಿಮಗೆ ಬಂದಿರುವ ಹೆಸರಿಗೆ ನೀವು ಅರ್ಹರಾಗಬೇಕಾದರೆ ನೀವು ಇನ್ನೂ ಬಹಳ ಕೆಲಸ ಮಾಡಬೇಕು. ಈಗ ಪ್ರಾರಂಭಿಸಿಯಾಯಿತು. ಹಿಂತಿರುಗುವಂತೆ ಇಲ್ಲ.... ತಮ್ಮ ಜಮೀನು ಹೋಗಬಹುದೆಂದು ಕೆಲವರಿಗೆ ಭಯವಿದೆ. ನನಗೆ ಗೊತ್ತು. ಆದರೆ ಅದೇನು ಮಹಾ? ಜಮೀನುಗಳನ್ನೆಲ್ಲಾ ಸರಕಾರ ತೆಗೆದುಕೊಳ್ಳಲಿ. ಅನಂತರ ಗುಜರಾತು ಪೂರ್ತ ನಿಮ್ಮ ಬೆಂಬಲದಲ್ಲಿರುವುದು. ಧೈರ್ಯವಾಗಿ; ನಿಮ್ಮ ಹಳ್ಳಿಗಳನ್ನೆಲ್ಲ ಚೆನ್ನಾಗಿ ವ್ಯವಸ್ಥೆ ಮಾಡಿ. ಇತರರಿಗೆ ಮೇಲು ಪಂಕ್ತಿಯಾಗಿಲಿ; ಪ್ರತಿಯೊಂದು ಹಳ್ಳಿಯೂ ಒಂದು ಸೈನ್ಯ ಶಿಬಿರವಾಗಬೇಕು. ಶಿಸ್ತು ವ್ಯವಸ್ಥೆ ಇವು ಯುದ್ಧದ ಅರ್ಧಭಾಗ. ಸರಕಾರಕ್ಕೆ ಒಂದೊಂದು ಊರಿಗೆ ಒಬ್ಬೊಬ್ಬ ಶಾನುಭೋಗ ಒಬ್ಬ ಪಟೇಲ ಇದ್ದಾರೆ. ಆದರೆ ನಮಗೆ ಊರಿನಲ್ಲಿರುವ ಪ್ರತಿಯೊಬ್ಬರೂ ಒಬ್ಬ ಸ್ವಯಂಸೇವಕರೇ"[೨೧] ಎಂಬ ಸರ್ದಾರ್ ಪಟೇಲರ ನುಡಿ ಭಾರತಕ್ಕೆ ಸೈನ್ಯಾಧಿಕಾರಿಯ ಅಪ್ಪಣೆಯಂತೆ ಕೇಳಿಸಿತು. ದಂಡಿ ಮಹಾಪ್ರಸ್ಥಾನದ ಚಲನಚಿತ್ರವನ್ನು ಎಲ್ಲೂ ತೋರಿಸಕೂಡದೆಂದು ಸರ್ಕಾರ ಆಜ್ಞೆ ಮಾಡಿತು. ಪೊಲೀಸಿನವರಿಗೆ ಬೇರೆ ಇತರ ಸಾಮಾನ್ಯ ಕರ್ತವ್ಯವೆಲ್ಲಾ ಇಲ್ಲವಾಯಿತು. ಬರಿಯ ಅಸಹಕಾರಿಗಳನ್ನು ಕಾಯುವುದೆ ಅವರ ಕೆಲಸವಾಯಿತು. ಹಿಂಸೆ ಪಶುಶಕ್ತಿ, ಸುಳ್ಳಿನ ಮೇಲೆ ಅವಲಂಬಿಸಿರುವ ಸರ್ಕಾರವು ಅಸಹಕಾರಗಳ ಧ್ಯೇಯದಲ್ಲಿ ಅಪನಂಬಿಕೆಯನ್ನು ತಾಳಿದ್ದು ಆಶ್ಚರ್ಯವಲ್ಲ. ಗುಜರಾತಿನಲ್ಲಿ ೨೦೦ ಜನ ಗ್ರಾಮ ಪಟೇಲರು ರಾಜೀನಾಮೆ ಕೊಟ್ಟರು. ೧೯೩೦ನೇ ಇಸವಿ ಎಪ್ರಿಲ್ ೬ನೇ ತಾರೀಖು ಗಾಂಧಿಯವರು ದಂಡಿಯನ್ನು ಸೇರಿದರು. ಆ ದಿವಸ ಉಪ್ಪಿನ ಕಾನೂನನ್ನು ಮುರಿದು ಸಮುದ್ರ ತೀರದಲ್ಲಿದ್ದ ಉಪ್ಪನ್ನು ಎತ್ತಿಕೊಂಡರು. ಕರಾಚಿ, ಶಿರೋಡ, ರತ್ನಗಿರಿ, ಪಾಟ್ನ, ಪೇಷಾವರ್, ಕಲ್ಕತ್ತಾ, ಮದರಾಸು, ಶೋಲಾಪುರ ಮುಂತಾದ ಕಡೆಗಳಲ್ಲಿ ನಡೆದ ಗುಂಡು ಹಾರಿಸುವಿಕೆಯಿಂದ ಸರಕಾರದಲ್ಲಿ ಹಿಂಸೆಯ ಭಾವ ಎಷ್ಟರಮಟ್ಟಿಗೆ ಇದೆಯೆಂಬುದು ವ್ಯಕ್ತವಾಯಿತು.

ಸರಕಾರದ ಪೈಶಾಚಿಕ ಕೃತ್ಯವನ್ನು ನೋಡಿದರೆ ಚಳುವಳಿಯ ತೀವ್ರತೆಯನ್ನು ಮನಗಾಣಬಹುದು. ೨೦೦ ಜನ ಪಟೇಲರು ರಾಜೀನಾಮೆ ಕೊಡುವುದು ಸುಲಭದ ಸಂಗತಿಯೇನಲ್ಲ. ಆದರೆ ಇಷ್ಟು ಮಂದಿ ತಮ್ಮ ಕೆಲಸಕ್ಕೆ ರಾಜೀನಾಮೆಯನ್ನು ನೀಡಿದ್ದಾರೆಂದರೆ ಚಳುವಳಿಯ ಸಾತ್ವಿಕತೆ ಹಾಗೂ ನೈಜತೆ ಅವರ ಅಂತಃಕರಣವನ್ನು ಯಾವ ಮಟ್ಟದಲ್ಲಿ ಚುಚ್ಚಿರಬೇಕೆಂಬುದನ್ನು ನಾವಿಲ್ಲಿ ಯೋಚಿಸಬಹುದು. ಎಪ್ರಿಲ್ ೬ನೇ ರಾತ್ರಿ ಒಂದು ಗಂಟೆಗೆ ಸರಕಾರ ಗಾಂಧಿಯವರನ್ನು ದಸ್ತಗಿರಿ ಮಾಡಿತು. ಭಾರತದಲ್ಲೆಲ್ಲಾ ಪೂರ್ಣ ಹರತಾಳವಾಯಿತು.

ಕಾರ್ಖಾನೆಗಳಿಂದ ೫೦,೦೦೦ ಜನರು ಹರತಾಳದಲ್ಲಿ ಸೇರಿದರು. ಮುಂಬಯಿಯ ಬಟ್ಟೆ ವ್ಯಾಪಾರಿಗಳು ೬ ದಿನ ಅಂಗಡಿ ಮುಚ್ಚಿದರು. ದೇಶಕ್ಕೊಸ್ಕರ ತಮ್ಮ ವೈಯಕ್ತಿಕ ನಷ್ಟವನ್ನು ಕಡೆಗಣಿಸಿದರೆಂದರೆ ಗಾಂಧೀಜಿಯ ವರ್ಚಸ್ಸು ಯಾವ ಮಟ್ಟದಲ್ಲಿದ್ದಿರಬೇಕೆಂಬುದನ್ನು ನಾವು ತಿಳಿದುಕೊಳ್ಳಬಹುದು.

ಸತ್ಯಾಗ್ರಹದ ಕಹಳೆ ಭಾರತದಲ್ಲಷ್ಟೇ ಅಲ್ಲದೆ ವಿದೇಶದಲ್ಲೂ ಮೊಳಗಿತು. ಭಾರತ ಸ್ವಾತಂತ್ರ್ಯ ಸಂಗ್ರಾಮಕ್ಕೆ ಪರದೇಶಗಳು ಕೂಡಾ ಪ್ರತಿಧ್ವನಿಸಿದವು. ಪನಾಮದಲ್ಲಿದ್ದ ಭಾರತೀಯರು ಹರತಾಳವನ್ನಾಚರಿಸಿದರು. ಸುಮಾತ್ರದ ಭಾರತೀಯರು ಹರತಾಳವನ್ನು ಆಚರಿಸಿ ವೈಸ್ರಾಯರಿಗೆ ತಂತಿ ಕೊಟ್ಟರು. ಫ್ರಾನ್ಸಿನ ಪತ್ರಿಕೆಗಳು ಗಾಂಧಿಯ ವಿಷಯದಿಂದಲೇ ತುಂಬಿ ಹೋದುವು. ಜರ್ಮನಿಯವರು ಬಹಿಷ್ಕಾರ ಬಲವಾದುದರಿಂದ ಬಟ್ಟೆಗಳನ್ನು ಕಳುಹಿಸುವುದನ್ನು ನಿಲ್ಲಿಸಿದರು. ಅಮೆರಿಕದ ೧೦೨ ಜನ ಪಾದ್ರಿಗಳು ಲಂಡನ್ನಿನ ಪ್ರಧಾನಿ ಮ್ಯಾಕ್‌ಡೊನಾಲ್ಡ್ ಅವರಿಗೆ "ಗಾಂಧಿಯವರೊಂದಿಗೆ ರಾಜಿ ಮಾಡಿಕೊಳ್ಳಿ" ಎಂದು ತಂತಿ ಕೊಟ್ಟರು. ಮ್ಯಾಕ್ ಡೊನಾಲ್ಡ್ ಅವರಂತಹ ಸ್ವಾತಂತ್ರ್ಯ ಪ್ರೇಮಿಗಳೆನಿಸಿಕೊಂಡವರು ಕೂಡ ಗಾಂಧಿಯವರನ್ನು ಸೆರೆ ಹಾಕಿದಾಗ ಮೌನವಹಿಸಿರುವುದು ಆಶ್ಚರ್ಯದ ಸಂಗತಿಯಾಗಿತ್ತು. ಧರ್ಸಾನದ ಮುಂಬಯಿಯ ಉಪ್ಪಿನ ಗಣಿಗಳನ್ನು ಮುತ್ತುವವರಿಗೆ, ಅಬ್ಬಾಸ್ ತಯಾಬ್ಜಿಯವರು ಮುಖಂಡರಾದರು. ಅವರ ದಸ್ತಗಿರಿಯಾದ ಕೂಡಲೇ ಶ್ರೀಮತಿ ಸರೋಜಿನಿದೇವಿಯವರು ಮುಖಂಡರಾದರು. ಸರಕಾರದವರು ಒಂದೇ ದಿನ ೨೨೦ ಜನರನ್ನು ದಸ್ತಗಿರಿ ಮಾಡಿ ದರ್ಸಾನದಲ್ಲಿ ಸೆರೆಯಿಟ್ಟರು. ೧೯ನೆಯ ತಾರೀಖು ವಾಲ್ಡ ಉಪ್ಪಿನ ಕೇಂದ್ರದಲ್ಲಿ ಸರಕಾರ ೪೦೦ ಜನ ಸ್ವಯಂಸೇವಕರನ್ನು ದಸ್ತಗಿರಿಮಾಡಿದರು.

ಕಾಂಗ್ರೆಸ್ ವರ್ಕಿಂಗ್ ಕಮಿಟಿಯ ಸಭೆಗಳು ನಡೆದು ಚಳುವಳಿಯನ್ನು ಮುಂದುವರಿಸಬೇಕೆಂದು ತೀರ್ಮಾನಿಸಿದುವು. ಮೇ ೨೧ನೇ ತಾರೀಖು ಧರ್ಸಾನದಲ್ಲಿ ಭಾರೀ ಗುಂಪು ಉಪ್ಪಿನ ಗಣಿಯನ್ನು ಮುತ್ತಿತು. ೨೫೦೦ ಜನ ಸ್ವಯಂಸೇವಕರಿದ್ದರು. ಸ್ವಯಂಸೇವಕರು ಉಪ್ಪಿನ ಗಣಿಗೆ ಮುತ್ತಿಗೆ ಹಾಕಿದ ಕೂಡಲೇ ಪೊಲೀಸರು ಅವರನ್ನು ಲಾಟಿಯಿಂದ ಬಡಿದರು. ಈ ದೃಶ್ಯವನ್ನು ನೋಡಲು ಸಾವಿರಾರು ಜನರು ನೆರೆದಿದ್ದರು. ಹೀಗೆ ಎರಡು ಗಂಟೆಗಳ ಕಾಲ ಪೊಲೀಸಿನವರು ಬಡಿದ ಮೇಲೆ ಇಮಾಮ್ ಸಾಹೇಬ್, ಪ್ಯಾರೇಲಾಲ್, ಮಣಿಲಾಲ್ ಗಾಂಧಿ ಇವರ ದಸ್ತಗಿರಿಯೂ, ಅನಂತರ ಶ್ರೀಮತಿ ಸರೋಜಿನಿ ದೇವಿಯವರ ದಸ್ತಗಿರಿಯೂ ಆಯಿತು. ಆ ದಿವಸ ಗಾಯಗೊಂಡ ಸ್ವಯಂಸೇವಕರ ಸಂಖ್ಯೆ ಸಾವಿರಾರು. ಭೈಲಾಲ್‌ಭಾಯಿ, ದಾಜಾಭಾಯಿ ಮತ್ತು ಹುಲಬಾಯಿ ಎಂಬ ಸ್ವಯಂಸೇವಕರು ಲಾಟಿ ಏಟುಗಳಿಂದ ಸತ್ತರು. ಪೊಲೀಸಿನವರು ಧರ್ಸಾನದ ಬಳಿಗೆ ಯಾವ ಕಡೆಗಳಿಂದಲೂ ಜನ ಹೋಗದಂತೆ ತಡೆಗಟ್ಟಿದರು. ರಸ್ತೆ, ಕಾಲುದಾರಿ, ಎಲ್ಲವುಗಳಿಗೂ ಕಾವಲು ಹಾಕಿದ್ದರು. ಮಿಲಿಟರಿ ಮತ್ತು ಪೊಲೀಸರು ಸೇರಿ ಸ್ವಯಂಸೇವಕರನ್ನೆಲ್ಲಾ ಎಲ್ಲಿಯೋ ಯಾರಿಗೋ ಗೊತ್ತಿಲ್ಲದ ಸ್ಥಳಕ್ಕೆ ಸಾಗಿಸಿದರು.

ವಾಡಲ ಉಪ್ಪಿನ ಉಗ್ರಾಣದ ಮೇಲೂ ಸ್ವಯಂಸೇವಕರು ಅನೇಕ ದಾಳಿಗಳನ್ನು ನಡೆಸಿದರು. ೨೨ನೇ ತಾರೀಖು ೧೮೮ ಸ್ವಯಂಸೇವಕರನ್ನು ದಸ್ತಗಿರಿ ಮಾಡಿ ವೋರ್ಲಿಗೆ ಸಾಗಿಸಿದರು. ೨೫ನೇ ತಾರೀಖು ನೂರು ಸ್ವಯಂಸೇವಕರು ಉಪ್ಪಿನ ಕೋಡಿಯನ್ನು ಮುತ್ತಿದರು. ಪೊಲೀಸರು ಲಾಟಿ ಪ್ರಹಾರ ಮಾಡಿದರು. ೧೭ ಜನಕ್ಕೆ ಏಟು ಬಿತ್ತು. ಪೊಲೀಸರು ಪ್ರೇಕ್ಷಕರ ಪೈಕಿ ಸಹ ಕೆಲವರನ್ನು ಸೇರಿಸಿ ೧೧೫ ಜನರನ್ನು ದಸ್ತಗಿರಿ ಮಾಡಿದರು. ೨೬ನೇ ತಾರೀಖು ೬೫ ಸ್ವಯಂಸೇವಕರು ಬಂದರು. ಪೊಲೀಸರು ೪೩ ಜನರನ್ನು ದಸ್ತಗಿರಿ ಮಾಡಿದರು. ಇಂತಹ ಸಂದರ್ಭದಲ್ಲೂ ಕೂಡ ಕಾಂಗ್ರೆಸ್ ವಾರದಲ್ಲಿ ಮುಂಬಯಿನಲ್ಲಿ ೮೬,೦೦೦ ಸ್ವಯಂಸೇವಕರು ಸಿದ್ಧರಾಗಿರುವರೆಂದು ಪ್ರಕಟಣೆ ಹೊರಡಿಸಿತು.

ಜೂನ್ ೧ನೇ ತಾರೀಖು ವಾಡಲ ಮೇಲೆ ಸ್ವಯಂಸೇವಕರು ನಡೆಸಿದ ಅಹಿಂಸಾ ಮುತ್ತಿಗೆ ಅದ್ಭುತವಾಗಿದ್ದಿತು. ಆ ದಿನ ಸ್ವಯಂಸೇವಕರೂ, ಪ್ರೇಕ್ಷಕರೂ ಸೇರಿ ೧೫,೦೦೦ ಜನ ಇದ್ದರು. ಪೊಲೀಸರು ಬೇಲಿಯಂತೆ ನಿಂತು ತಡೆಯುತ್ತಿದ್ದರು. ಇದ್ದಕ್ಕಿದ್ದಂತೆ ಪ್ರೇಕ್ಷಕರ ಪೈಕಿ ಹೆಂಗಸರು ಮಕ್ಕಳು ಕೂಡಾ ಪೊಲೀಸರ ಬೇಲಿಯನ್ನು ನುಗ್ಗಿ ಒಳಕ್ಕೆ ಹೋದರು. ಸುಮಾರು ೧೫೦ ಜನರಿಗೆ ಗಾಯಗಳಾದುವು. ಅನಂತರ ಮಿಲಿಟರಿ ಬಂತು. ಆ ವೇಳೆಗ ೪೦೦೦ ಜನರನ್ನು ವೊರ್ಲಿಯಲ್ಲಿ ಹಿಡಿದು ಹಾಕಿದರು. ೬೦ ಜನರಿಗೆ ಬಹಳ ಗಾಯಗಳಾಗಿದ್ದವು. ೧೫ ಜನರ ಸ್ಥಿತಿ ಚಿಂತಾಜನಕವಾಯಿತು. ಆ ಕಾಲದಲ್ಲಿ ಪೊಲೀಸರು ಅತ್ಯಂತ ಕ್ರೌರ್ಯದಿಂದ ನಡೆದುಕೊಂಡರು. ಮುಂಬಯಿಯ ನಿವೃತ್ತ ನ್ಯಾಯಾಧೀಶರದ ಮಿ. ಹುಸೇನ್‌ರವರೂ, ಕೆ. ನಟರಾಜನ್‌ರವರೂ, ಭಾರತ ಸೇವಕ ಸಂಘದ ಕಾರ್ಯದರ್ಶಿ ಮಿ. ದೇವಧರೆ ಅವರೂ ತಾವು ನೋಡಿದ ಭೀಭತ್ಸವನ್ನು ಕುರಿತು ಹೀಗೆ ಹೇಳಿಕೆ ಕೊಟ್ಟರು. "ಸತ್ಯಾಗ್ರಹಿಗಳು ಉಪ್ಪಿನ ಉಗ್ರಾಣದ ಗಡಿಯಿಂದ ಆಚೆಗೆ ಹೋದ ಮೇಲೆ, ಯುರೋಪಿಯನ್ ಕುದುರೆ ಸವಾರರು ಕೈಗಳಲ್ಲಿ ಲಾಠಿಗಳನ್ನು ಹಿಡಿದುಕೊಂಡು ಸಿಕ್ಕಿದವರನ್ನು ಹೊಡೆಯುತ್ತಾ, ಹಳ್ಳಿಗೂ ಉಪ್ಪಿನ ಉಗ್ರಾಣಕ್ಕೂ ನಡುವೆ ಇದ್ದ ಜನಗಳನ್ನು ಬಡಿದರು. ಅವರು ಹಳ್ಳಿಯ ಬೀದಿಗಳಲ್ಲಿ ಕುದುರೆಗಳನ್ನು ನಾಗಾಲೋಟದಲ್ಲಿ ಓಡಿಸಿಕೊಂಡು ಹೋಗಿ ಹೆಂಗಸರನ್ನೂ ಹುಡುಗರನ್ನೂ ಹೊಡೆದು ಚದುರಿಸಿದರು. ಹಳ್ಳಿಯವರು ಓಣಿಗಳಿಗೂ ಸಂದಿಗಳಿಗೂ ಓಡಿ ಹೋಗಿ ಬಾಗಿಲು ಮುಚ್ಚಿಕೊಂಡರು. ಆದರೆ ಮನೆಯೊಳಗೆ ಸೇರಿಕೊಳ್ಳಲು ಆಗದವರನ್ನು ಪೋಲೀಸರು ಹಾಗೂ ಕುದುರೆ ಸವಾರರು ಲಾಟಿಗಳಿಂದ ಬಡಿದರು".

ನ್ಯೂಫ್ರೀಮೆನ್ ಎಂಬ ಪರದೇಶದ ಪತ್ರಿಕೆಗೆ ಲೇಖನ ಬರೆಯುತ್ತಾ ವೆಬ್‌ಮಿಲರ್ ಅವರು ಧರ್ಸಾನದ ಸತ್ಯಾಗ್ರಹವನ್ನು ಕುರಿತು ಹೀಗೆ ಬರೆದರು. "ನಾನು ೭೭ ದೇಶಗಳಲ್ಲಿ ೧೮ ವರುಷ ಪತ್ರಿಕಾ ಸುದ್ದಿಗಾರನಾಗಿ ಅನೇಕ ಬಗೆಯ ದಂಗೆ ಅಶಾಂತಿಗಳನ್ನು ನೋಡಿದ್ದೇನೆ. ಆದರೆ ಧರ್ಸಾನದಂತಹ ಭೀಭತ್ಸವನ್ನು ಎಲ್ಲೂ ಕಾಣಲಿಲ್ಲ. ಅದರ ನೋವು ಎಷ್ಟರಮಟ್ಟಿಗಿದ್ದಿತೆಂದರೆ ನಾನು ನೋಡುವುದಕ್ಕೂ ಶಕ್ತಿ ಇಲ್ಲದೆ ಬೇರೆ ಕಡೆ ತಿರುಗಿ ಬಿಡುತ್ತಿದ್ದೆ. ಮುಖ್ಯವಾದ ಅದ್ಭುತ, ಸ್ವಯಂಸೇವಕರ ಶಾಂತಿ. ಅವರು ಗಾಂಧಿಯವರ ಅಹಿಂಸೆಯಿಂದ ಪೂರ್ಣವಾಗಿ ಆವೃತರಾಗಿದ್ದರು." [೨೨]

ಈ ಉಪ್ಪಿನ ದಂಗೆಗಳನ್ನು ಕಣ್ಣಾರೆ ನೋಡಿದ ಲಂಡನ್ ಹೆರಾಲ್ಡ್ ಪತ್ರಿಕೆಯ ಜಾರ್ಜ್ ಸ್ಲೊಕೋಂರವರು ಹೀಗೆ ಬರೆದರು- "ವಾಡಲದ ಹತ್ತಿರ ಒಂದು ಜಾಗದಿಂದ ನಾನು ನಡೆದುದನ್ನೆಲ್ಲಾ ನಿರೀಕ್ಷಿಸುತ್ತಿದ್ದೆ. ಭಾವನಾಪೂರಿತವಾಗಿ ಅತ್ಯಂತ ಸ್ನೇಹದಿಂದಿದ್ದ ಸ್ವಯಂಸೇವಕರ ಮತ್ತು ಜನರ ಮಧ್ಯೆ ನಿಂತುಕೊಂಡು, ನನ್ನ ದೇಶದ ಪ್ರತಿನಿಧಿಗಳು ಈ ಹಾಸ್ಯಾಸ್ಪದವೂ ಅವಮಾನಕರವೂ ಆದ ಕೆಲಸಗಳಲ್ಲಿ ತೊಡಗಿರುವುದನ್ನು ನೋಡುವುದು, ಇಂಗ್ಲೀಷ್ ಮನುಷ್ಯನಿಗೆ ಅತ್ಯಂತ ನಾಚಿಕೆಯನ್ನುಂಟುಮಾಡುವುದಾಗಿತ್ತು. ಲಕ್ಷಾಂತರ ಜನರು ಮೆರೆವಣಿಗೆಯಲ್ಲಿ ಸೇರಿ ಕಾಂಗ್ರೆಸ್ ಧ್ವಜದ ಅಡಿಯಲ್ಲಿ ಹೋಗುತ್ತಾ ಸಿಖ್, ಮುಸಲ್ಮಾನ್, ಹಿಂದೂ, ಪಾರ್ಸಿ, ಬ್ರಾಹ್ಮಣ, ಝಾಡಮಾಲಿ ಎಲ್ಲರ ಬಾಯಿಯಿಂದಲೂ ಕಾಂಗ್ರೆಸ್ಸಿನ ಪ್ರಶಂಸೆ, ಬ್ರಿಟಿಷರ ಬೈಗಳ ಕೇಳುವಾಗ ಆಗಾಗ್ಗೆ ಸರಕಾರದವರು ತಮ್ಮ ಮಾತುಗಳಲ್ಲಿಯೂ, ಪ್ರಕಟಣೆಗಳಲ್ಲಿಯೂ ಹೇಳುವ "ರಾಜಭಕ್ತರೂ, ಶಾಂತಪ್ರಿಯರೂ ಆದ ಆ ಅಸಂಖ್ಯಾತ ಜನ ಎಲ್ಲಿ?" ಎಂದು ಯಾರಿಗಾದರೂ ಆಶ್ಚರ್ಯವಾಗುತ್ತದೆ.

ಬ್ರಿಟನ್ನನ್ನು ಕಂಡರೆ ನಿಧಾನವಾಗಿ ದ್ವೇಷ ಬೆಳೆಯುತ್ತಿದೆ. ಎಲ್ಲೋ ಕೆಲವು ಪುಂಡರು ಒಂದೆರಡು ಕಡೆ ಮಾಡಿರುವ ತುಂಟತನದ ಹೊರತು, ಈ ಅಸಂಖ್ಯಾತ ಜನರು ಭಾರತೀಯರ ಮಧ್ಯೆ ಸುರಕ್ಷಿತವಾಗಿ ತಿರುಗಾಡುತ್ತಿದ್ದಾರೆ. ಗುಂಪು ಎಷ್ಟೇ ದೊಡ್ಡದಾಗಿರಲಿ, ಇಂಗ್ಲಿಷರನ್ನು ಕಂಡರೆ ಒಂದು ತಿರಸ್ಕಾರದಿಂದ ನೋಡುತ್ತಾರೆ. ಬಹಿರಂಗವಾಗಿ ಏನನ್ನೂ ಪ್ರಕಟಿಸುವುದಿಲ್ಲ. ಆದರೂ ಭಾರತದಲ್ಲಿ ನಮ್ಮ ಸ್ಥಾನ ಭದ್ರವಾಗಿಲ್ಲ. ಒಂದು ಕಾಲದಲ್ಲಿ ಭಾರತೀಯರಿಗೆ ನಮ್ಮಲ್ಲಿ ಭಯ, ಗೌರವ ಮತ್ತು ದ್ವೇಷ ಮೂರೂ ಇದ್ದಿತು. ಎರಡನೆಯ ಭಾವ ನಾಶವಾಗಿ ಎಷ್ಟೋ ದಿನಗಳಾದುವು. ಮೊದಲನೆಯದು ಬೇಗ ಬೇಗ ಮರೆಯಾಗುತ್ತಿದೆ. ಪರಿಸ್ಥಿತಿ ಬದಲಾವಣೆ ಆಗದಿದ್ದರೆ ಭಾರತೀಯರಿಗೆ ಇಂಗ್ಲಿಷ್‌ನವರನ್ನು ಕಂಡರೆ ದ್ವೇಷಭಾವ ಒಂದೇ ಉಳಿಯುತ್ತದೆ. ಭಾರತವನ್ನು ಬಿಟ್ಟು ಹೋಗುವ ಈ ಸಂದರ್ಭದಲ್ಲಿ ಇದೇ ನನ್ನ ವಿಷಾದಕರವದ ನಂಬಿಕೆ.[೨೩]" ಎಂಬ ಇಂಗ್ಲಿಷ್ ಪತ್ರಕರ್ತನ ಈ ಮಾತು ಭಾರತದಲ್ಲಿ ಅಂದಿದ್ದ ಪರಿಸ್ಥಿತಿಯ ನಗ್ನಸತ್ಯಕ್ಕೆ ಹಿಡಿದ ಕನ್ನಡಿಯಾಗಿದೆ.ಮಾನವೀಯತೆಯಿರುವ ಇಂಗ್ಲಿಷರೇ ಭಾರತದ ಇಂಗ್ಲಿಷ್ ಆಳರಸರ ಕ್ರೌರ್ಯವನ್ನು ನೆನೆದು ಅವಮಾನದಿಂದ ಹಾಗೂ ವಿಷಾದದಿಂದ ತಲೆತಗ್ಗಿಸುವಂತಹ ಸ್ಥಿತಿ ಅಂದು ಭಾರತದಲ್ಲಿತ್ತು. ಅಷ್ಟು ಮಾತ್ರವಲ್ಲದೆ ಭಾರತೀಯರ ಅಹಿಂಸಾ ಮನೋಭಾವ, ಒಳ್ಳೆಯತನವನ್ನು ವಿಚಾರವಾದಿಯಾಗಿದ್ದ ಇಂಗ್ಲಿಷರೂ ಗುರುತಿಸಿದ್ದರು. ಒಂದು ಕಾಲದಲ್ಲಿ ಇಂಗ್ಲಿಷರ ಕುರಿತು ಭಾರತೀಯರಿಗೆ ಒಂದು ಬಗೆಯ ಗೌರವವೂ ಇತ್ತು, ಭಯವೂ ಇತ್ತು. ಆದರೆ ಬರಬರುತ್ತಾ ಇಂಗ್ಲೀಷ್ ಆಳರಸರ ಕ್ರೌರ್ಯ, ಅಮಾನವೀಯತೆಯ ಸತ್ಯದರ್ಶನವಾದಾಗ ಇಂಗ್ಲಿಷರ ಕುರಿತು ನಿಜವಾದ ಭಾರತಿಯನೊಬ್ಬನಿಗೆ ದ್ವೇಷವೇ ಸ್ಥಾಯಿಭಾವವಾಗಿ ಉಳಿಯುವುದರಲ್ಲಿ ಸಂಶಯವಿರಲಿಲ್ಲ.

ಕೋ ಚೆನ್ನಬಸಪ್ಪನವರ 'ಬೇಡಿ ಕಳಚಿತು ದೇಶ ಒಡೆಯಿತು' ಕಾದಂಬರಿಯಲ್ಲಿ ಉಪ್ಪಿನ ಸತ್ಯಾಗ್ರಹ, ಗಾಂಧೀಜಿಯವರ ಪಾದಯಾತ್ರೆ, ಗಾಂಧೀಜಿಯ ಮಾತಿನ ಮೋಡಿಗೆ ಹಳ್ಳಿ ಹಳ್ಳಿಯ ಜನರು ಒಳಗಾದುದನ್ನು ನಾವು ಕಾಣಬಹುದು. ಗಾಂಧೀಜಿಯು ಉಪ್ಪಿನ ಶಾಸನವನ್ನು

ಉಲ್ಲಂಘಿಸುವ ಈ ಮಹಾಯಾತ್ರೆಯಲ್ಲಿ ತಮ್ಮೊಡನೆ ನಡೆಯಲು ಆಶ್ರಮದ ೭೧ ಪಾದಾಚಾರಿಗಳನ್ನು ಅಯ್ಕೆ ಮಾಡಿಕೊಂಡರು. ಅವರಲ್ಲಿ ಕರ್ನಾಟಕದ ಮೈಲಾರ ಮಹಾದೇವಪ್ಪ ಒಬ್ಬರು. ಮಾರ್ಚ್ ೧೨ರಂದು ಗಾಂಧೀಜಿ ಸಾಬರಮತಿ ಆಶ್ರಮದಿಂದ ಹೊರಡುವಾಗ ಅಲ್ಲಿಯ ಮಹಿಳೆಯರು ಅವರಿಗೆ ಆರತಿ ಎತ್ತಿ ತಿಲಕವಿಟ್ಟು ನೂಲಿನ ಮಾಲೆ ಹಾಕಿ ಬೀಳ್ಕೊಟ್ಟರು. ಸ್ವಾತಂತ್ರ ಹೋರಾಟವೊಂದು ಭಾರತೀಯರ ಪಾಲಿಗೆ ಪವಿತ್ರ ಪೂಜೆಯಾಗಿತ್ತು. ದೇವತಾ ಕಾರ್ಯದಷ್ಟೇ ಮಹತ್ವದ್ದಾಗಿತ್ತು. "ಸ್ವಾತಂತ್ರ್ಯ ಪ್ರಾಪ್ತಿ ಆಗುವವರೆಗೆ ನಾನು ಸಾಬರಮತಿ ಆಶ್ರಮಕ್ಕೆ ಹಿಂದಿರುಗುವುದಿಲ್ಲವೆಂದು"[೨೪] ಗಾಂಧೀಜಿ ಪ್ರತಿಜ್ಞೆ ಮಾಡಿದರು.

ದೇಶ ವಿದೇಶಗಳಿಂದ ಬಂದಿದ್ದ ಪತ್ರಕರ್ತರು, ವಿಶೇಷ ವರದಿಗಾರರು ಛಾಯಾಚಿತ್ರ ಗ್ರಾಹಕರು ಆ ಮೆರವಣಿಗೆಯ ಸುದ್ದಿಯನ್ನು ಬಿತ್ತರಿಸಲು ಆ ಅಹಿಂಸಾ ದಂಡನ್ನು ಹಿಂಬಾಲಿಸಿದರು. ಉಪ್ಪಿನ ಶಾಸನವನ್ನು ಮುರಿದು ಉಪ್ಪನ್ನು ತಯಾರಿಸಲು ಹೊರಟ ಅಹಿಂಸಾ ಸೈನ್ಯವನ್ನು ಕುರಿತು ರಾಜಾಜಿ ಮದ್ರಾಸಿನಲ್ಲಿ– "ಗಾಂಧೀಜಿ ಉಪನ್ನು ಮಾತ್ರ ಉತ್ಪಾದನೆ ಮಾಡುತ್ತಿಲ್ಲ. ರಾಜದ್ರೋಹವನ್ನು ಉತ್ಪಾದನೆ ಮಾಡುತ್ತಿದ್ದಾರೆ"[೨೫] ಎಂದು ತಿಳಿ ಹಾಸ್ಯದಿಂದ ಹೇಳಿದರು. ಗಾಂಧೀಜಿ ತಮ್ಮ ಯಾತ್ರೆ ಮುಂದುವರಿಸಿದಾಗ ಮುನ್ನೂರು ಗ್ರಾಮಾಧಿಕಾರಿಗಳು ತಮ್ಮ ವಂಶಾನುಗತವಾಗಿ ಬಂದ ಹುದ್ದೆಗೆ ರಾಜೀನಾಮೆಯನ್ನು ಕೊಟ್ಟರು. ಈ ವಿದ್ಯಮಾನಗಳನ್ನೆಲ್ಲ ಗಮನಿಸಿದರೆ ಗಾಂಧೀಜಿಯೊಬ್ಬರೆ ರಾಜದ್ರೋಹವನ್ನು ಉತ್ಪಾದನೆ ಮಾಡಲಿಲ್ಲ, ರಾಜನಭಕ್ತರಲ್ಲಿಯೂ ರಾಜದ್ರೋಹ ಮಾಡುವಂತಹ ಮನೋಭಾವವನ್ನು ಬಿತ್ತುವಲ್ಲಿ ಅವರ ಪ್ರಭಾವಶಾಲಿ ವ್ಯಕ್ತಿತ್ವವು ಯಶಸ್ವಿಯಾಗುತ್ತದೆ.

ಗಾಂಧೀಜಿ ತಮ್ಮ ಸತ್ಯಾಗ್ರಹಿಗಳಿಗೆ ಪ್ರತಿದಿನ ಬೆಳಿಗ್ಗೆ ಐದು ಮೈಲು ಸಂಜೆ ಐದು ಮೈಲು ನಡೆದು ರಾತ್ರಿ ಒಂದೊಂದು ಹಳ್ಳಿಗಳಲ್ಲಿ ತಂಗಿದ್ದು ಮರುದಿನ ಯಾತ್ರೆ ಮುಂದುವರಿಸುತ್ತಿದ್ದರು. ಪಾದಯಾತ್ರೆಯು ಸತ್ಯಾಗ್ರಹಿಗಳನ್ನು ಮಾನಸಿಕವಾಗಿ ಕಷ್ಟ ಸಹಿಸುವುದಕ್ಕೆ ಗಾಂಧೀಜಿ ಮಾಡಿದ ಒಂದು ಏರ್ಪಾಡಿನಂತೆ ಕಾಣುತ್ತದೆ. ಮತ್ತು ಹಳ್ಳಿಯ ಜನರಲ್ಲಿ ಕೂಡ ಬ್ರಿಟಿಷ್ ಸರಕಾರ ತಮಗೆಸಗುತ್ತಿರುವ ದ್ರೋಹದ ಕುರಿತು ಜಾಗೃತಿಯನ್ನು ಮೂಡಿಸುವುದು ಕೂಡ ಈ ಪಾದಯಾತ್ರೆಯ ಉದ್ದೇಶವಿದ್ದಂತೆ ಕಾಣುತ್ತದೆ. ಹಳ್ಳಿ ಹಳ್ಳಿಗಳಲ್ಲಿ ಜನರು ಈ ದಂಡಯಾತ್ರೆಯ ಕುರಿತು ಪದಕಟ್ಟಿ ತಮ್ಮಟೆ ಬಡಿದು ಕುಣಿಯುತ್ತಿದ್ದರು.

ಬರ್ತಾರೆ ಗಾಂಧಿ ಬರ್ತಾರೆ! ಬರ್ತಾರೆ! ಗಾಂಧಿ ಬರ್ತಾರೆ
ಬಿರುಗಾಳಿ ಬಂದಂಗೆ ಗಾಂಧಿ ಬರ್ತಾರೆ!
ಬಿರುಗಾಳಿ ಬಂದಂಗೆ ನುಗ್ಗಿ ಬರ್ತಾರೆ!
ನುಗ್ಗಿ ಬರ್ತಾರೆ! ನುಗ್ಗಿ ಬರ್ತಾರೆ!
ಹೋ! ಭೂತಾಯಿ ಕೊಟ್ಟಂಥ ಉಪ್ಪು
ಅದಕೇಕೆ ಕೊಡಬೇಕು ಸುಂಕ?...

ಅದಕೇಕೆ ಕೊಡಬೇಕು ಸುಂಕ?[೨೬]

ಈ ರೀತಿ ಹಾಡು, ಕುಣಿತಗಳ ಮೂಲಕ ಮನರಂಜನೆಯ ಮಾಧ್ಯಮದ ಹಾಗೆ ಗಾಂಧೀಜಿಯ ಉದ್ದೇಶವು ಅವರ ಪಾದಯಾತ್ರೆಯ ಕ್ರಮದಿಂದಾಗಿ ಹಳ್ಳಿಗಳಿಗೆ ತಲುಪುತ್ತದೆ. ಹೀಗೆ ಗಾಂಧೀಜಿ ಹೋದ ಹಳ್ಳಿಗಳಲ್ಲಿ ಜನರು ಹುಚ್ಚೆದ್ದು ಕುಣಿದರು. ಜನರ ಅಂತರಾಳದಲ್ಲಿ ಹುದುಗಿದ್ದ ಸ್ವಾತಂತ್ರ್ಯದ ಬಯಕೆಯನ್ನು ಗಾಂಧೀಜಿ ಬಡಿದೆಬ್ಬಿಸಿದರು. ಕೆಲವೇ ಕೆಲವು ಮಂದಿಯ ಹೋರಾಟವಾಗದ್ದ ಸ್ವಾತಂತ್ರ್ಯ ಸಂಗ್ರಾಮವನ್ನು ಸಮಷ್ಟಿಯ ಹೋರಾಟವನ್ನಾಗಿಸಿದವರು ಗಾಂಧೀಜಿ.

ಎಪ್ರಿಲ್ 5, 1930ರಂದು ಬೆಳಗ್ಗೆ 5.30ರ ಸಮಯ. ಗಾಂಧಿ ಕೈಯಲ್ಲಿದ್ದ ಊರುಗೋಲನ್ನು ಕೆಳಗಿಟ್ಟರು. ಬಾಗಿ ಒಂದು ಹಿಡಿ ನಿಸರ್ಗದತ್ತ ಉಪ್ಪನ್ನು ಕೈಗೆತಿಕೊಂಡು ಮೇಲೆದ್ದು ನಿಂತರು. "ನಾಳೆಯಿಂದ ಉಪ್ಪು ತಯಾರಿಸಬಹುದು. ಸುಂಕ ಹಾಕಿದ ಸರ್ಕಾರಿ ಉಪ್ಪನ್ನು ತಿನ್ನಬೇಡಿ"[೨೭] ಎಂಬ ಗಾಂಧೀಜಿಯ ಮಾತು ಹಳ್ಳಿ ಹಳ್ಳಿಗೂ ವ್ಯಾಪಿಸಿತು.

ದೇಶದಾದ್ಯಂತ ಚಳುವಳಿ ಆರಂಭವಾಗಲು ಇದು ನಾಂದಿಯಾಯಿತು. ಗಾಂಧೀಜಿಯವರನ್ನು ಬಿಟ್ಟು ಇತರ ನಾಯಕರನ್ನೂ, ಸಾವಿರಾರು ಸತ್ಯಾಗ್ರಹಿಗಳನ್ನೂ ಬಂಧಿಸಿತು ಸರಕಾರ. ಏಪ್ರಿಲ್ ಒಂದು ತಿಂಗಳಲ್ಲೇ ಬಂಧಿತರ ಸಂಖ್ಯೆ ಅರುವತ್ತು ಸಾವಿರವನ್ನು ದಾಟಿತು. ಗಾಂಧೀಜಿ ಮುಂಬಯಿಯಿಂದ ನೂರೈವತ್ತು ಮೈಲಿ ದೂರದಲ್ಲಿರುವ ಧರ್ಸಾನದ ಸರ್ಕಾರಿ ಉಪ್ಪು ಕೋಠಿಯಲ್ಲಿ ಚಳುವಳಿಯನ್ನು ಆರಂಭಿಸಲು ಹೊರಟಾಗ ಮೇ ೫ರಂದು ಸರ್ಕಾರ ಅವರನ್ನು ಬಂಧಿಸಿತು. ಅವರು ನಿಯಮಿಸಿದ್ದ ಅಬ್ಬಾಸ್ ತಯಾಬ್ಜಿ ನಾಯಕತ್ವ ವಹಿಸಿ ಬಂಧಿತರಾದರು. ಅನಂತರ ಸರೋಜಿನಿ ನಾಯ್ಡು ನಾಯಕರಾದರು. ಮೇ ೨೧ರಂದು ಧರ್ಸಾನದಲ್ಲಿ ಸತ್ಯಾಗ್ರಹ ಕಣ್ಣಾರೆ ಕಂಡ ಅಮೇರಿಕದ ಯುನೈಟೆಡ್ ಪ್ರೆಸ್‌ನ ಪ್ರತಿನಿಧಿ ವೆಬ್‌ಮಿಲರ್ ತಮ್ಮ ವರದಿಯಲ್ಲಿ "ಹದಿನೆಂಟು ವರ್ಷಗಳ ಕಾಲ, ಇಪ್ಪತ್ತೆರಡು ದೇಶಗಳಿಂದ ವರದಿ ಮಾಡಿರುವ ನಾನು ಅಸಂಖ್ಯಾತ ಗಲಭೆಗಳು, ಬೀದಿ ಕದನಗಳು, ದಂಗೆಗಳನ್ನು ಕಂಡಿದ್ದೇನೆ. ಧರ್ಸಾನದಲ್ಲಿ ಕಂಡಂತಹ ಭೀಭತ್ಸ ದೃಶ್ಯಗಳನ್ನು ಕಂಡಿಲ್ಲ. . . . ಕೆಲವೊಮ್ಮೆ ದೃಶ್ಯಗಳು ಎಷ್ಟು ಸಂಕಟಕರವಾಗಿದ್ದುವೆಂದರೆ, ನೋಡಲಾರದೆ ನಾನು ಬೇರೆಡೆ ತಿರುಗುತ್ತಿದ್ದೆ."[೨೮] ಎಂದು ಬರೆದಿದ್ದಾರೆ.

ಧರ್ಸಾನದಲ್ಲಿ ಎರಡೂವರೆ ಸಾವಿರ ಸತ್ಯಾಗ್ರಹಿಗಳು ಕೂಡಿದ್ದರು. ಅವರನ್ನು ಚದುರಿಸಲು ನಾಲ್ಕುನೂರು ಪೊಲೀಸರು. ಪೊಲೀಸರ ಮುಖ್ಯ ಆಯುಧ ಕಬ್ಬಿಣದ ಬಳೆ ಹೂಡಿದ ಐದು ಅಡಿ ಉದ್ದದ ಲಾಠಿ, ಸತ್ಯಾಗ್ರಹಿಗಳಲ್ಲಿ ಕೆಲವರು ಗಾಯಾಳುಗಳನ್ನು ಒಯ್ದು ಉಪಚರಿಸುವ ಕೆಲಸಕ್ಕೆ ನಿಯಮಿತರಾಗಿದ್ದರು. ಕೋಠಿಯಲ್ಲಿ ಉಪ್ಪಿನ ತಟ್ಟೆಗಳಿದ್ದವು. ಯಾವ ಸತ್ಯಾಗ್ರಹಿಯು ಒಳ ಬರದಂತೆ ಮುಳ್ಳು ತಂತಿಯ ಬೇಲಿ, ಅದರ ಸುತ್ತ ನೀರು ತುಂಬಿದ ಕಂದಕ, ಸತ್ಯಾಗ್ರಹಿಗಳು ಹೊರವಲಯದಲ್ಲಿ ಗುಂಪಾಗಿ ನಿಂತಿದ್ದರು. ಆರಿಸಿದ ಸತ್ಯಾಗ್ರಹಿಗಳು ಕಂದಕವನ್ನು ದಾಟಿ ಬೇಲಿಯ

ಬಳಿ ಬರುವುದು, ಪೊಲೀಸರ ಲಾಟಿಗಳು ಅವರ ತಲೆ, ಭುಜಗಳ ಮೇಲೆ ಎರಗುವುದು, ಲಾಠಿಯ ಹೊಡೆತದ ಶಬ್ದ, ಪ್ರೇಕ್ಷಕರ ವೇದನಾಪೂರಿತ ನಿಟ್ಟುಸಿರು, ಉದ್ಗಾರಗಳು ಮಾತ್ರ ಕೇಳಿ ಬರುತ್ತಿದ್ದವು. ಪ್ರತಿ ಸತ್ಯಾಗ್ರಹಿಯು ತಾನು ಏಟು ತಿಂದು ಉರುಳುವವರೆಗೆ ತಲೆಯೆತ್ತಿ, ಎದೆ ಚಾಚಿ ಮುನ್ನಡೆಯುತ್ತಿದ್ದ. ನೆಲವೆಲ್ಲ ನೆತ್ತರು. ಸುಮಾರು ಒಂದು ದಶಕದ ಕಾಲ ಗಾಂಧೀಜಿಯವರು ಅಹಿಂಸೆಯ ತತ್ವವನ್ನು ಪ್ರಚಾರ ಮಾಡಿ, ನಿಶ್ಯಸ್ತ್ರ ಸತ್ಯಾಗ್ರಹಿಗಳಲ್ಲಿ ತುಂಬಿದ್ದ ಧೈರ್ಯ ಧರ್ಸಾನಾ ಸತ್ಯಾಗ್ರಹದಲ್ಲಿ ಯಶಸ್ವಿಯಾಗಿ ಪ್ರಯೋಗವಾಯಿತು.

ಸ್ವಾತಂತ್ರ್ಯ ಸಂಗ್ರಾಮದಲ್ಲಿ ಅಹಿಂಸೆಯ ಪ್ರಯೋಗ ಪ್ರಪಂಚದಲ್ಲೇ ಮೊದಲು ನಡೆಸಿದವರು ಗಾಂಧೀಜಿ. ಗಾಂಧೀಜಿಯ ಮಾತಿಗೆ ಅದೇನು ಸಂಮ್ಮೋಹನ ಶಕ್ತಿಯಿತ್ತೋ? ಮೊದಲಬಾರಿಗೆ ದೇಶದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಹಳ್ಳಿ ಹಳ್ಳಿಯ ಭಾರತೀಯರು ಪ್ರವಾಹದಂತೆ ಸತ್ಯಾಗ್ರಹಕ್ಕೆ ನುಗ್ಗಿ ಬಂದರು. ತಮ್ಮ ಮನೆ ಮಠವನ್ನು ತ್ಯಜಿಸಿದರು. ಮೊದಲ ಬಾರಿಗೆ ನಮ್ಮ ಹಳ್ಳಿಯ ಹೆಣ್ಣುಮಕ್ಕಳು ಕೂಡಾ ಗಂಡಸರನ್ನು ಮೀರಿಸುವಂತೆ ಈ ಸ್ವಾತಂತ್ರ್ಯ ಸಮರದಲ್ಲಿ ಭಾಗವಹಿಸಿದರು. ಕರ ನಿರಾಕರಣೆ ಹಾಗೂ ಉಪ್ಪಿನ ಸತ್ಯಾಗ್ರಹದಲ್ಲಿ ಉತ್ತರ ಕರ್ನಾಟಕದ ಪಾತ್ರ ಪ್ರಮುಖವಾದುದು. ಇದು 'ಗಾಂಧಿಯ ರಾಜ್ಯ'ವೆಂದೇ ಪ್ರಸಿದ್ಧವಾಗಿತ್ತು. ಗುಜರಾತಿನ ಬಾರ್ಡೋಲಿಯನ್ನು ಬಿಟ್ಟರೆ ಕರನಿರಾಕರಣೆಯು ಅತ್ಯಂತ ಯಶಸ್ವಿಯಾಗಿ ನಡೆದುದು ಕರ್ನಾಟಕದಲ್ಲಿ.ಫೆಬ್ರವರಿ ೨೩ರಂದು ಬಳ್ಳಾರಿಯಲ್ಲಿ ಕೂಡಿ ಆರ್.ಆರ್. ದಿವಾಕರ್, ಕೌಜಲಗಿ ಹನುಮಂತರಾಯರು, ಗಂಗಾಧರ ರಾವ್ ದೇಶಪಾಂಡೆ, ಹರ್ಡಿಕರ್ ಮತ್ತು ಕಾರ್ನಾಡು ಸದಾಶಿವರಾಯರನ್ನೊಳಗೊಂಡ ಸತ್ಯಾಗ್ರಹ ಸಮಿತಿಯನ್ನು ರಚಿಸಿ ಕಾರವಾರ ಜಿಲ್ಲೆಯ ಅಂಕೋಲ ತಾಲೂಕನ್ನು ಉಪ್ಪಿನ ಸತ್ಯಾಗ್ರಹಕ್ಕಾಗಿ ಆರಿಸಲಾಯಿತು. ಅಂಕೋಲ ತಾಲೂಕಿನಲ್ಲಿ ೨೪ ಸತ್ಯಾಗ್ರಹಿಗಳ ಶಿಬಿರಗಳನ್ನು ಸ್ಥಾಪಿಸಲಾಯಿತು. ಉಪ್ಪಿನ ಸತ್ಯಾಗ್ರಹದೊಂದಿಗೆ ಅರಣ್ಯ ಸತ್ಯಾಗ್ರಹ, ಪಾನ ನಿರೋಧ ಕಾರ್ಯಕ್ರಮವಾಗಿ ಹೆಂಡದಂಗಡಿಗಳ ಪಿಕೆಟಿಂಗ್, ಸೇಂದಿ ಮರಗಳನ್ನು ಕಡಿಯುವುದು, ವಿದೇಶಿ ವಸ್ತ್ರಗಳ ದಹನ, ಕರನಿರಾಕರಣ, ಗ್ರಾಮಾಧಿಕಾರಿಗಳ ರಾಜೀನಾಮೆ ಇವೆಲ್ಲ ಚಳುವಳಿಯ ಮುಖ್ಯ ಅಂಶಗಳಾಗಿದ್ದುವು. ಚಳುವಳಿಗೆ ಪ್ರತಿಯೊಂದು ಪ್ರಾಂತ್ಯವು ಸಿದ್ಧವಾಯಿತು. ಮಹಾತ್ಮರ ಮಾತಿನಲ್ಲಿ ಅತ್ಯಂತ ಶ್ರದ್ಧೆಯುಳ್ಳ ಉತ್ತರ ಕನ್ನಡ ಜಿಲ್ಲೆಯ ಅದರಲ್ಲಿಯೂ ಸಿದ್ಧಾಪುರ, ಅಂಕೋಲೆ, ತಾಲೂಕುಗಳ ರೈತರು ಕರನಿರಾಕರಣೆಯ ಘೋರ ಪ್ರತಿಜ್ಞೆಯನ್ನು ಸ್ವೀಕರಿಸಿ ಅದನ್ನು ಕೊನೆಯವರೆಗೂ ನಡೆಸಿಕೊಂಡು ಹೋದರು. ಅವರು ಅನುಭಸಿದ ಕಷ್ಟ-ನಷ್ಟ, ಹಾಗೂ ಮಾಡಿದ ತ್ಯಾಗ ಕರ್ನಾಟಕಕ್ಕೆ ಮಾತ್ರವಲ್ಲ; ಇಡೀ ಭಾರತಕ್ಕೆ ಹೆಮ್ಮೆಯ ವಿಚಾರವಾಗಿದೆ.

ಗುಜರಾತ್ ಪ್ರಾಂತ್ಯದ ರೈತಬಾಂಧವರು ೧೯೨೮ರಲ್ಲಿಯೇ ಕರನಿರಾಕರಣೆಯಲ್ಲಿ ಭಾಗವಹಿಸಿ ದೇಶಕ್ಕೆ ಮಾದರಿಯಾದರು. ೧೯೩೧ರಲ್ಲಿಯೂ ಅವರು ಕಣಕ್ಕಿಳಿದರು. ಆದರೆ ಅವರಿಗಿರುವ ವಿವಿಧ ಅನುಕೂಲತೆಗಳೊಂದೂ ಸಿದ್ಧಾಪುರ, ಶಿರಸಿ, ಅಂಕೋಲೆ, ಹಿರೇಕೆರೂರ ರೈತರಿಗಿರಲಿಲ್ಲ. ಬಾರಡೋಲಿ ರೈತರ ಮೇಲೆ ಅಧಿಕಾರಿಗಳು ನಡೆಸಿದ ದಬ್ಬಾಳಿಕೆಯನ್ನು ಪತ್ರಿಕೆಗಳು ಕೂಡಲೇ ಪ್ರಕಟ ಮಾಡಿ ಜಗತ್ತಿನ ಮೂಲೆ ಮೂಲೆಗಳಿಗೂ ಅವರ ಧೈರ್ಯ, ತ್ಯಾಗ, ಸಾಹಸದ

ಕತೆಯನ್ನು ತಲುಪಿಸುತ್ತಿದ್ದವು. ಆದುದರಿಂದ ಜನರ ಸಹಾನುಭೂತಿ, ಆರ್ಥಿಕ, ನೈತಿಕ ಬೆಂಬಲ, ಇವು ಅವರಿಗೆ ದೊರಕುತ್ತಿದ್ದವು. ಉತ್ತರ ಕನ್ನಡ ಜಿಲ್ಲೆಯ ಸತ್ಯಾಗ್ರಹಿಗಳ ಮೇಲೆ ನಡೆದ ದಬ್ಬಾಳಿಕೆ, ಅಧಿಕಾರಿಗಳು ನಡೆಸಿದ ಅತ್ಯಾಚಾರ, ಇವು ಪತ್ರಿಕೆಗಳಲ್ಲಿ ಪ್ರಕಟವಾಗಲೇ ಇಲ್ಲ. ಕರ್ನಾಟಕದ ಕೆಲವು ಪತ್ರಿಕೆಗಳಾದ ಕಾನಡಾ ಧುರೀಣ, ಕಾನಡ ವೃತ್ತ, ಕರ್ನಾಟಕ ವೈಭವ, ಕರ್ಮವೀರ ಮುಂತಾದ ವಾರಪತಿಕೆಗಳು ಸುಗ್ರೀವಾಜ್ಞೆಗೆ ತುತ್ತಾಗಿ ಮುದ್ರಣಾಲಯಗಳಿಗೆ ಬೀಗ ಬಿದ್ದ ಕಾಲವದು. ಹೀಗಾಗಿ ಪ್ರಚಾರದ ಮೂಲಕ ಜಗತ್ತಿನ ಗಮನವನ್ನು ಸೆಳೆಯುವ ಇಲ್ಲವೆ ಹೆಚ್ಚಿನ ದಬ್ಬಾಳಿಕೆ ನಡೆಸದಂತೆ ಅಧಿಕಾರಿಗಳ ಅತ್ಯಾಚಾರಗಳನ್ನು ಬಯಲಿಗೆಳೆಯುವ ಸೌಲಭ್ಯ, ಅನುಕೂಲತೆಗಳು ಆ ರೈತರಿಗೆ ಇಲ್ಲದೆ ಹೋದವು. ಆದರೂ ಅಲ್ಲಿಯ ಸತ್ಯಾಗ್ರಹಿಗಳು ಅಧಿಕಾರಿಗಳ ಅತ್ಯಾಚಾರಕ್ಕಾಗಲಿ, ಭೂಮಿಯನ್ನು ಸರಕಾರ ವಶಪಡಿಸಿಕೊಂಡದ್ದಕ್ಕಾಗಲಿ ಗಾಬರಿಗೊಂಡು ಸತ್ಯಾಗ್ರಹವನ್ನು ಕೈ ಬಿಡಲಿಲ್ಲ. ಕರ ಕೊಟ್ಟು ಯಾತನೆಗಳಿಂದ ಮುಕ್ತರಾಗುವ ಹೇಡಿತನಕ್ಕೂ ಅವರು ಮುಂದಾಗಲಿಲ್ಲ.

ಅಂಕೋಲೆ, ಸಿದ್ಧಾಪುರ, ಶಿರಸಿ, ಹಿರೇಕೆರೂರ ತಾಲೂಕಿನ ಜನತೆ ಕರನಿರಾಕರಣೆ ಮಾಡಿ ಸ್ವಾತಂತ್ರ್ಯ ಸಂಗ್ರಾಮವನ್ನು ಅಹಿಂಸಾ ತತ್ವದಡಿಯಲ್ಲಿ ಮುಂದುವರಿಸಿಕೊಂಡು ಹೋದ ರೀತಿಯು ಸಾಮೂಹಿಕ ಅಹಿಂಸಾಪ್ರಯೋಗದ ಒಂದು ಯಶಸ್ವಿ ಅಧ್ಯಾಯ. ಪ್ರಚಾರ, ಪ್ರಕಟಣಾ ಸೌಲಭ್ಯಗಳ ಅಭಾವವಿದ್ದ ಆ ಕಾಲದಲ್ಲಿ ಉತ್ತರ ಕನ್ನಡ ಜನರ ತ್ಯಾಗ ಬಲಿದಾನದ ಚಿತ್ರಣವು ಇತಿಹಾಸದ ಪುಟದಲ್ಲಿ ಸಮರ್ಥವಾಗಿ ದಾಖಲಾಗಲಿಲ್ಲ. ಆದರೆ ಅದನ್ನು ಹತ್ತಿರದಿಂದ ಕಂಡಂತಹ ಕನ್ನಡದ ಅನೇಕ ಮಂದಿ ಸಾಹಿತಿ, ಕವಿಗಳು ತಮ್ಮ ಕಾದಂಬರಿಗಳಲ್ಲಿ ಈ ಚಳುವಳಿಯನ್ನು ಯಥಾವತ್ತಾಗಿ ಚಿತ್ರಿಸಿದ್ದಾರೆ.

ಉತ್ತರ ಕನ್ನಡ ಜಿಲ್ಲೆಯ ಅಂಕೋಲ ತಾಲೂಕಿನ ಪೊಜಗೇರಿಯಲ್ಲಿ ಎಪ್ರಿಲ್ ೧೩ರಂದು ಜಲಿಯನ್ ವಾಲಾಬಾಗ್ ಹತ್ಯಾಕಾಂಡ ಆದ ಆ ಕರಾಳ ದಿನ, ಬ್ರಿಟಿಷರ ಕರಾಳ ಉಪ್ಪಿನ ಶಾಸನವನ್ನು ಉಲ್ಲಂಘಿಸಿ ಗಾಂಧೀಜಿಯ ಆದೇಶವನ್ನು ಈಡೇರಿಸಲಾಯಿತು. ಅಂದು ಮೆರವಣಿಗೆಯಲ್ಲಿ ನೆರೆದ ವಿವಿಧ ಜಿಲ್ಲೆಗಳ ಸಹಸ್ರಾರು ಜನಸ್ತೋಮವನ್ನು ನೋಡಿ ಕಸ್ಟಮ್ಸ್ ಅಧಿಕಾರಿ ಮಿ. ಸ್ಟೀಲ್ ಮತ್ತು ಜಿಲ್ಲಾ ಅಧಿಕಾರಿ ಮಿ. ಕೋಲಿನ್ಸ್ ಆಶ್ಚರ್ಯದಿಂದ ನಿಬ್ಬೆರಗಾಗಿ 'ಜನ ಹೀಗೆ ಬಂಡೆದ್ದರೆ ಯಾವ ಸರಕಾರ ಉಳಿದೀತು' ಎಂಬುದಾಗಿ ಉದ್ಗಾರ ತೆಗೆದರು. ಹೀಗೆ ಉತ್ತರ ಕರ್ನಾಟಕದಲ್ಲಿ ನಡೆದ ಉಪ್ಪಿನ ಸತ್ಯಾಗ್ರಹ ಬ್ರಿಟಿಷರ ಎದೆಗುಂಡಿಗೆಯನ್ನು ನಡುಗಿಸಿತು. ಹೆಣ್ಣುಮಕ್ಕಳು ಈ ಸತ್ಯಾಗ್ರಹದ ಸಂದರ್ಭದಲ್ಲಿ ತೋರಿದ ಸಾಹಸವಂತೂ ಅತ್ಯದ್ಭುತವಾದುದು. ಓದು ಬರಹ ಬಾರದ ಹಾಲಕ್ಕಿ ಹೆಣ್ಣುಮಕ್ಕಳು ಕೂಡ ಈ ಸತ್ಯಾಗ್ರಹದಲ್ಲಿ ಭಾಗವಹಿಸಿದ್ದಾರೆ. ಬಾಣಂತಿಯರು ಹಸುಗೂಸನ್ನು ಬಿಟ್ಟು ಸತ್ಯಾಗ್ರಹ ಮಾಡಿ ಜೈಲು ಸೇರಿದ್ದಾರೆ.

ರಮಣಯ್ಯನ ಸತ್ಯಾಗ್ರಹ 'ಬುಲೆಟಿನ್' ವರದಿಯ ಪ್ರಕಾರ– "ಮುಂಬೈಯಲ್ಲಿ ಒಂದೇ ದಿನ ಒಂದು ಲಕ್ಷ ಜನ ಸಮುದ್ರ ತೀರಕ್ಕೆ ಹೋಗಿ ಉಪ್ಪು ತಯಾರಿಸಿ ಉಪ್ಪಿನ ಕಾಯಿದೆಯನ್ನು ಮುರಿದಿದ್ದಾರೆ... ಸರಕಾರ ಹೇಳುವಂತೆ ಇಲ್ಲಿಯವರೆಗೆ ಸತ್ಯಾಗ್ರಹ ಪ್ರಾರಂಭವಾದ ಒಂದು ತಿಂಗಳ

ಒಳಗಾಗಿ ಎಂಬತ್ತು ಸಾವಿರ ಸತ್ಯಾಗ್ರಹಿಗಳು ಜೈಲಿನಲ್ಲದ್ದಾರೆ. ಆದರೆ ಅನಧಿಕೃತ ಲೆಕ್ಕದಂತೆ ಒಂದು ಲಕ್ಷಕ್ಕೂ ಹೆಚ್ಚು ಜನ ಸತ್ಯಾಗ್ರಹಿಗಳು ಜೈಲಿನಲ್ಲಿದ್ದಾರೆ"[೨೯] ಸತ್ಯಾಗ್ರಹ ವಿಚಾರ ಪ್ರಚಾರ ಆಗದಂತೆ, ಭಾರತದ ಮೂಲೆ ಮೂಲೆಗೆ ತಲುಪದಂತೆ ಸರಕಾರ ಪತ್ರಿಕೆಗಳ ಕುತ್ತಿಗೆ ಹಿಸುಕುವ ಕೆಲಸ ಮಾಡಿದರೂ ಕೂಡ ಅದ್ಯಾವ ಮೂಲಗಳಿಂದಲೋ ಎಲ್ಲಾ ವಿಚಾರಗಳು ಜನರಿಗೆ ತಲುಪುತ್ತಿದ್ದವು. ಕರಪತ್ರಗಳನ್ನು ರಚಿಸುವುದು, ಭೂಗತ ಪತ್ರಿಕೆಗಳನ್ನು ಮುದ್ರಿಸಿ ಜನರಿಗೆ ತಲುಪಿಸುವುದು ಕೂಡಾ ಹೋರಾಟದ ಒಂದು ಭಾಗವೇ ಆಗಿತ್ತು. ಬಹಳ ಎಚ್ಚರಿಕೆಯಿಂದ ಸ್ವಯಂಸೇವಕರು ಈ ಕೆಲಸವನ್ನು ನಿರ್ವಹಿಸುತ್ತಿದ್ದರು. ಇದಕ್ಕಾಗಿ ರಾತ್ರಿ ನಿದ್ದೆ ಬಿಟ್ಟು ತಲೆ ಮರೆಸಿಕೊಂಡು ಈ ಪತ್ರಿಕೆಗಳನ್ನು ಮುದ್ರಿಸಿ ಎಲ್ಲಾ ಕಡೆಗಳಿಗೂ ತಲುಪುವ ವ್ಯವಸ್ಥೆಯನ್ನು ಮಾಡುತ್ತಿದ್ದರು. ಉತ್ತರ ಕನ್ನಡ, ಸಿದ್ಧಾಪುರ, ಶಿರಸಿ, ಕಾರವಾರ, ದಕ್ಷಿಣ ಕನ್ನಡ ಮುಂತಾದ ಕಡೆಗಳಲ್ಲಿ ಉಪ್ಪಿನ ಸತ್ಯಾಗ್ರಹ ಜೋರಾಗಿಯೇ ನಡೆಯುತಿತ್ತು.

ಶ್ರೀನವಾಸ ವೈದ್ಯರ 'ಹಳ್ಳ ಬಂತು ಹಳ್ಳ' ಕಾದಂಬರಿಯಲ್ಲಿ ನವಲಗುಂದದಂತಹ ಒಂದು ಸಣ್ಣ ಹಳ್ಳಿಯಲ್ಲಿ ಕೂಡ ರಾಮು ಎಂಬ ಯುವಕನ ನೇತೃತ್ವದಲ್ಲಿ ಉಪ್ಪಿನ ಸತ್ಯಾಗ್ರಹ ಭರದಿಂದ ನಡೆದುದರ ಚಿತ್ರಣವನ್ನು ನಾವು ಕಾಣಬಹುದು. ನವಲಗುಂದದ ಬೆಣ್ಣೆಹಳ್ಳಿ ಎಂಬಲ್ಲಿ ನಡೆಯುತ್ತಿರುವ ಉಪ್ಪಿನ ಚಳುವಳಿಯನ್ನು ಧಮನ ಮಾಡುವುದಕ್ಕೆ ಧಾರವಾಡ ಜಿಲ್ಲೆಯ ಡಿ.ಎಸ್.ಪಿ ಇಸ್ಮಾಯಿಲ್‌ಖಾನ್ ನವಲಗುಂದಕ್ಕೆ ಬರುತ್ತಾನೆ. ಇಲ್ಲಿ ಉಪ್ಪಿನ ಸತ್ಯಾಗ್ರಹ ಭರದಿಂದ ನಡೆಯುತ್ತಿತ್ತು. "ಕೃಷ್ಣಪಕ್ಷದ ಬೆಳಗಿನ ನಾಲ್ಕು ಗಂಟೆಯ ಸಮಯಕ್ಕೆ ಪಶ್ಚಿಮದಲ್ಲಿ ಕ್ಷೀಣಿಸುತ್ತಿರುವ ಚಂದ್ರನ ಬೆಳಕಿನಲ್ಲಿ ಉದ್ದಕ್ಕೂ ಹರಿದ ಹಳ್ಳದ ದಂಡೆಯ ಮೇಲೆ ಸೇರಿದ ಸುಮಾರು ನಾಲ್ಕು ನೂರು ಜನರು 'ಬೋಲೋ ಭಾರತ ಮಾತಾ ಕೀ ಜೈ'... ಮಹಾತ್ಮಗಾಂಧೀಕೀ ಜೈ... ಧಿಕ್ಕಾರ... ಧಿಕ್ಕಾರ... ಬ್ರಿಟಿಷ್ ಸರಕಾರಕ್ಕೆ ಧಿಕ್ಕಾರ"[೩೦] ಎಂದು ನಾಡು ನಡುಗಿಸುವ ಘೋಷಣೆಗಳನ್ನು ಕೂಗುತ್ತ ಉಪ್ಪು ಮಾಡಿಬಿಟ್ಟರು. ಉಪ್ಪು ಮಾಡಿ, ಚಿಕ್ಕ ಚಿಕ್ಕ ಪೊಟ್ಟಣಗಳನ್ನು ಕಟ್ಟಿ ನಾಲ್ಕಾರು ಬಿದಿರಿನ ಬುಟ್ಟಿಗಳಲ್ಲಿಟ್ಟುಕೊಂಡು ಬೆಳಗಿನ ಪ್ರಭಾತಪೇರಿಯಲ್ಲಿ ನವಲಗುಂದದ ಬೀದಿಗಳನ್ನು ಸುತ್ತು ಸುತ್ತಿ ಮನೆಮನೆಗಳಿಗೆ ತೆರಳಿ ಉಪ್ಪು ಮಾರತೊಡಗಿದರು. "ಗಾಂಧಿ ಉಪ್ಪು... ಈ ದೇಶಕ್ಕ ಸ್ವಾತಂತ್ರ್ಯ ತರೋ ಉಪ್ಪು... ಕೆಂಪು ಮೂತಿಯವರನ್ನು ಒದ್ದು ಓಡಿಸೋ ಉಪ್ಪು... ಎರಡ ಬಿಲ್ಲಿ... ಇಷ್ಟ ಉಪ್ಪಿಗೆ ಎರಡ ಬಿಲ್ಲಿ... ಅಂಗಡ್ಯಾಗ ಒಂದಾಣೆ ಕೊಡ್ತೀರಿ... ಅಮ್ಮಾರ, ಅಕ್ಕಾ, ಗೌಡರ... ರಾಯರ.... ಉಪ್ಪು ತೊಗೋರಿ ಉಪ್ಪು..."[೩೧] ಎಂಬುದಾಗಿ ಉಪ್ಪಿನ ವ್ಯಾಪಾರವನ್ನೇ ಆರಂಭಿಸಿದರು. ಯುವಕರ ಉತ್ಸಾಹ ಮೇರೆ ಮಿರಿತ್ತು. ಬ್ರಿಟಿಷ್ ಉಪ್ಪಿಗಿಂತ ಕಡಿಮೆ ದರದಲ್ಲಿ ದೇಶೀಯ ಉಪ್ಪನ್ನು ಮನೆ ಮನೆಗೆ ತಂದು ಮಾರತೊಡಗಿದರು. ಅಂದು ಉಪ್ಪನ್ನು ಕೊಂಡುಕೊಳ್ಳುವುದು ಕೂಡ ಸ್ವಾತಂತ್ರ್ಯ ಹೋರಾಟದ ಒಂದು ಭಾಗವೇ ಆಗಿತ್ತು. ಹೇಡಿಗಳಾಗಿದ್ದವರು, ಸರಕಾರದ ಬಾಲಬುಡಕರ್ಯಾರು ಉಪ್ಪು ಕೊಂಡುಕೊಳ್ಳುತ್ತಿರಲಿಲ್ಲ. ನವಲಗುಂದದಲ್ಲಿ ಉಳಿದುಕೊಂಡಿದ್ದ ೧೦ ಮಂದಿ ಪೊಲೀಸರಿಗೆ ಈ ೪೦೦–೫೦೦ ಜನರ ಗೌಜಿ ಗದ್ದಲಗಳನ್ನು ತಡೆಯಲು ಸಾಧ್ಯವಾಗುತ್ತಿರಲಿಲ್ಲ.

ಇವರ ಸ್ವದೇಶಿ ಉಪ್ಪಿನ ಮಾರಾಟಕ್ಕೆ ಊರಲ್ಲಿ ಮಿಶ್ರ ಪ್ರತಿಕ್ರಿಯೆ ವ್ಯಕ್ತವಾಯಿತು. ಕೆಲವು ಮನೆಯ ಎದುರು ಮಹಿಳೆಯರು ಉಪ್ಪು ಮಾರಲು ಬಂದ ಸ್ವಾತಂತ್ರ್ಯ ಸೇನಾನಿಗಳಿಗೆ ಆರತಿ ಎತ್ತಿ ಹಣೆಗೆ ಕುಂಕುಮ ಇಟ್ಟು ಉಪ್ಪು ಕೊಂಡರು. ಉಪ್ಪು ತಯಾರಿಸುವುದಷ್ಟೇ ಉಪ್ಪು ಕೊಳ್ಳುವುದು ಕೂಡ ದೇಶಭಕ್ತಿ ಹಾಗೂ ತ್ಯಾಗದ ಸಂಕೇತವಾಗಿತ್ತು. ಇನ್ನು ಕೆಲವರು ಸರಕಾರದ ಭಯದ ನೆರಳಿನಲ್ಲಿ ಬದುಕುತ್ತಿದ್ದವರು ಯಾವುದೇ ಕಷ್ಟಗಳನ್ನು ತಮ್ಮ ಮೈ ಮೇಲೆ ಎಳೆದುಕೊಳ್ಳಲು ಸಿದ್ಧರಿರಲಿಲ್ಲ. ಅವರು –"ಬ್ಯಾಡೋಯಪ್ಪಾ ಇಲ್ಲದ ರಗಳೆ, ನಾಳೆ ಒಂದು ಹೋಗಿ ಒಂದಾದೀತು" ಎನ್ನುತ್ತಾ ಮುಖ ತಿರುವಿ ಮನೆಯೊಳಗೆ ನಡೆದರು.[೩] ಹೀಗೆ ಉಪ್ಪಿನ ಸತ್ಯಾಗ್ರಹದ ಕಾಲದಲ್ಲೂ ಕೂಡ ಸರ್ವಸ್ವವನ್ನು ತ್ಯಾಗ ಮಾಡಲು ಸಿದ್ಧರಿರುವ ಜನರಿದ್ದ ಹಾಗೆ ತಮ್ಮ ಭದ್ರತೆಯನ್ನು ನೋಡಿಕೊಳ್ಳುವ ಜನರೂ ಇದ್ದರು.

ಆನಂದ ಕಂದ ಅವರು ರಚಿಸಿದ 'ಮಗಳ ಮದುವೆ' ಕಾದಂಬರಿಯು ಸಾಮಾಜಿಕ ಕಥಾವಸ್ತುವಿನ ಜೊತೆ ಜೊತೆಯಲ್ಲಿಯೇ ೧೯೩೦ನೇ ಇಸವಿಯ ಭಾರತದ ರಾಜಕೀಯ ಚಳುವಳಿಯ ವಾತಾವರಣವನ್ನು ಹಿನ್ನಲೆಯಾಗಿ ಇಟ್ಟುಕೊಂಡು ರಚಿಸಲಾದ ಕಾದಂಬರಿ. ಉತ್ತರ ಕರ್ನಾಟಕದ ಅಂದಿನ ಜನಜೀವನದ ವಿವಿಧ ಮಾದರಿಗಳ ಚಿತ್ರಣವನ್ನು ನಾವಿಲ್ಲಿ ಕಾಣುತ್ತೇವೆ.

ಗಾಂಧೀಜಿಯ ಉಪ್ಪಿನ ಸತ್ಯಾಗ್ರಹದ ಕುರಿತು ಜನಸಾಮಾನ್ಯರ ಮಿಶ್ರ ಪ್ರತಿಕ್ರಿಯೆಯನ್ನು ನಾವು ಈ ಕಾದಂಬರಿಯಲ್ಲಿ ಕಾಣುತ್ತೇವೆ. ಕೆಲವರಿಗೆ ಈ ಸತ್ಯಾಗ್ರಹವೊಂದು ಹುಚ್ಚುತನವಾಗಿ ತೋರುತ್ತದೆ. ಗಾಂಧೀಜಿಯ ಮಾತಿಗಾಗಿ ತಮ್ಮ ಸರ್ವಸ್ವವನ್ನು ತ್ಯಾಗ ಮಾಡಿದ ಜನರೊಂದು ಕಡೆಯಲ್ಲಿದ್ದರೆ ಅದನ್ನು ತೀರಾ ಸರಳವಾಗಿ 'ಹುಚ್ಚುತನ'ವೆಂಬುದಾಗಿ ನಿಂದಿಸುವ ಜನರು ಇನ್ನೊಂದು ಕಡೆಯಲ್ಲಿದ್ದರು. ಅಂತಹ ಮಹಾತ್ಯಾಗವು ಅಂದಿನ ಕಾಲದಲ್ಲಿ ಬದುಕಿದ್ದ ಜನರಲ್ಲಿ ಕೆಲವರಿಗೆ ಹುಚ್ಚುತನವಾಗಿ ಕಾಣುವುದು ಬ್ರಿಟಿಷರ ಸಾಮರ್ಥ್ಯದ ಮೇಲೆ ಅವರಿಗಿದ್ದ ಅಂಧಾಭಿಮಾನ ಹಾಗೂ ತಮ್ಮ ಕೈಲಾಗದುದನ್ನು ಬೇರೆಯವರು ಮಾಡಿದರೆ ಅದನ್ನು ಮೂದಲಿಸುವ ಒಂದು ಕೀಳು ಅಭಿರುಚಿಯನ್ನು ನಾವು ಕಾಣುತ್ತೇವೆ.

೧೯೩೦ರಲ್ಲಿ ಉಪ್ಪಿನ ಸತ್ಯಾಗ್ರಹ ಎಲ್ಲೆಡೆಯೂ ನಡೆಯುತ್ತಿದ್ದ ಕಾಲವದು. ಕೆಲವು ಮಂದಿ ಯುವಕರು ಗಾಂಧಿ ಹೇಳಿದ ಉಪ್ಪಿನ ಕಾಯಿದೆ ಭಂಗ ಚಳುವಳಿಯಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಿದ್ದರು. ಆದರೆ ಇನ್ನು ಕೆಲವು ಮಂದಿ ಯಾವುದೇ ದೇಶಸೇವೆಯಲ್ಲಿ ತೊಡಗಿಸಿಕೊಳ್ಳದವರು 'ಇದೊಂದು ಹುಚ್ಚು', ಉಪ್ಪಿನ ಕಾಯಿದೆಭಂಗ ಮಾಡಿದ ತಕ್ಷಣ 'ಸ್ವರಾಜ್ಯ' ಬರುತ್ತದೆಯೇ? ಎಂಬುದಾಗಿ ಮೂಗು ಮುರಿಯುತ್ತಿದ್ದರು. ಗಾಂಧೀಜಿಯ ಮಾತು ಕೇಳುವವರು ಹುಚ್ಚರು ಎಂಬ ಭಾವನೆ ಕೆಲವರಲ್ಲಿತ್ತು. ಶೀನಪ್ಪ ಎನ್ನುವವನು–"ಆ ಗಾಂಧಿ ಒಬ್ಬ ಕೈ ತುಂಬಾ ಹಣ ಸಂಪಾದಿಸಿಕೊಡುವ ಬ್ಯಾರಿಸ್ಟರಿಕೆ ಬಿಟ್ಟು, ಅರೆಬೆತ್ತಲೆಯಾಗಿ ಅಡ್ಡಾಡಿಕೋತ ಏನೋನೋ ಬಡಬಡಿಸುತಾನ! ಅವನ ಬಡಬಡಿಕೆ ಎಲ್ಲಾ ತಲ್ಯಾಗಾಕೊಂಡು ನಮ್ಮ ಈ ಹುಚ್ಚರ ತಂಡ ಏನೇನೋ ಮಾಡಿಕೋತ ಓಡಾಡತದ! ಸರಕಾರದವರು ಸುಳ್ಳ ಇವರನ್ನು ಹಿಡಿ ಹಿಡಿದು ಜೇಲಿಗೆ

ಕಳಸತಾರ; ಅದಕ್ಕಿಂತ ಇವರನ್ನೆಲ್ಲಾ ಹಚ್ಚರ ಆಸ್ಪತ್ರೆಗೆ ಹಾಕಿದರ ಒಳ್ಳೇದಾದೀತ್ಯೆ ಅಂತ ಅನಿಸತದ ನನಗ!".[೩೩] ಎನ್ನುತ್ತಾನೆ. ಸ್ವರಾಜ್ಯಕ್ಕಾಗಿ ಗಾಂಧೀಜಿ ಕೈಗೊಂಡಿರುವ ಮಹಾನ್ ಕಾರ್ಯ ಕೂಡ ಕೆಲವರಿಗೆ ಹುಚ್ಚುತನವಾಗಿ ತೋರುತ್ತದೆ.

ನಮ್ಮ ಹೆಣ್ಣುಮಕ್ಕಳಲ್ಲೂ ಜಾಗೃತಿ ಮೂಡುತ್ತಿದ್ದ ಕಾಲವದು. ಅನಂತರಾಯರ ಮಗಳು ಕುಮುದಾ ಹೇಳುವ ಮಾತು ಇಲ್ಲಿ ಉಲ್ಲೇಖಾರ್ಹ – "ನಮ್ಮ ಜನರಲ್ಲಿ ಮಲಗಿ ನಿದ್ರಿಸುತ್ತಿದ್ದ ಆತ್ಮಶಕ್ತಿ ಎಚ್ಚರಗೊಂಡರೆ ಬ್ರಿಟಿಷರ ಬಾಂಬು ಇದ್ದಲ್ಲೇ ಹುಡುಗೂಡಿಹೋಗತಾವ ತಿಳೀತಲ್ಲೋ?"[೩೪] ಗಾಂಧೀಜಿ ನಮ್ಮ ಜನರ ನಿದ್ರಿಸುತ್ತಿದ್ದ ಆತ್ಮಶಕ್ತಿಯನ್ನು ಎಚ್ಚರಿಸುವ ಕೆಲಸವನ್ನೇ ಮಾಡಿದರು.

ಉತ್ತರ ಕರ್ನಾಟಕದ ಹಳ್ಳಿ ಹಳ್ಳಿಗಳಲ್ಲಿ ಕೂಡಾ ರತ್ನಾಕರ ಎಂಬ ಯುವಕನ ಮುಂದಾಳುತನದಲ್ಲಿ ಸಾಂಕೇತಿಕವಾಗಿ ಕಾಯಿದೆಭಂಗ ಚಳುವಳಿ ನಡೆಯುತ್ತದೆ. ಉಪ್ಪನ್ನು ಮಾಡಿ ಮನೆಮನೆಗೆ ಮಾರುತ್ತಾರೆ. ಕರ್ನಾಟಕದಲ್ಲಿ ಉಪ್ಪಿನ ಸತ್ಯಾಗ್ರಹದ ಸಭೆಗಳು ದಿನದಿನವೂ ನಡೆಯುತ್ತಿತ್ತು. ಆದರೆ ಗಾಂಧೀಜಿಯವರ ಹಾಗೂ ಇತರ ನಾಯಕರ ಬಂಧನವು ಚಳುವಳಿ ನಿರತ ಅನೇಕ ಸ್ವಯಂಸೇವಕರಿಗೆ ದಿಕ್ಕು ತೋಚದಂತೆ ಮಾಡುತ್ತದೆ. ಯಾಕೆಂದರೆ ನಮ್ಮ ಭಾರತೀಯ ಜನರಿಗೆ ಮುಂದಾಳುಗಳಿಲ್ಲದೆ ತಾವೇ ತಾವಾಗಿ ನಡೆಸುವ ಹೋರಾಟದ ಅನುಭವ ಕಡಿಮೆ. ಒಬ್ಬ ಮುಂದಾಳುವಿದ್ದರೆ ಅವನ ಮಾರ್ಗದರ್ಶನದಂತೆ ಜೀವಕ್ಕೆ ಜೀವಕೊಡಲು ಇಲ್ಲಿಯ ಜನತೆ ಸಿದ್ಧರು. ಇದನ್ನರಿತುಕೊಂಡೇ ಬ್ರಿಟಿಷರು ಯಾವುದೇ ಒಂದು ಚಳುವಳಿ ಆರಂಭವಾಗುತ್ತಿದ್ದ ಹಾಗೆ ಗಾಂಧೀಜಿಯವರನ್ನು ಮೊದಲು ಬಂಧಿಸುತ್ತಿದ್ದರು. ಅಂತಹ ಸಂದರ್ಭದಲ್ಲಿ ಕೆಲವೊಮ್ಮೆ ಚಳುವಳಿ ದಿಕ್ಕು ತಪ್ಪಿ ಸರಕಾರದ ಮುಖಭಂಗ ಹಾಗೂ ಪರದಾಟಕ್ಕೂ ಕಾರಣವಾಗಿದೆ. ರತ್ನಾಕರನಂತಹ ಹಳ್ಳಿಯ ವಿದ್ಯಾವಂತ ತರುಣರು ಮುಖಂಡರ ಬಂಧನವಾದ ಸಂದರ್ಭದಲ್ಲೂ ಚಳುವಳಿಯ ಕಾವು ಆರಿ ಹೋಗದ ಹಾಗೆ ಅದನ್ನು ಮುಂದುವರಿಸಿಕೊಂಡು ಹೋಗುವ ಕೆಲಸವನ್ನು ಮಾಡುತ್ತಿದ್ದರು.

ಶ್ರೀರಂಗ ಇವರು ರಚಿಸಿದ 'ಪುರುಷಾರ್ಥ' ಕಾದಂಬರಿಯಲ್ಲಿ ಕೂಡಾ ೧೯೩೦ರ ಉಪ್ಪಿನ ಸತ್ಯಾಗ್ರಹದ ಚಿತ್ರಣವಿದೆ. ಇಲ್ಲಿಯ ಕಥಾನಾಯಕ ಮಾಧವ ಈ ಚಳುವಳಿಯಲ್ಲಿ ಭಾಗವಹಿಸುತ್ತಾನೆ. ಶಿರಸಿ, ಸಿದ್ಧಾಪುರ, ಅಂಕೋಲಾ, ತಾಲೂಕುಗಳಿಗೆ ಹೋಗಿ ಕರನಿರಾಕರಣೆಯಲ್ಲಿ ಭಾಗವಹಿಸುತ್ತಾನೆ. ಉತ್ತರ ಕನ್ನಡ ಜಿಲ್ಲೆಯಲ್ಲಿ ನಡೆದ ಚಳುವಳಿಯ ಮುಂದಾಳತ್ವವನ್ನು ವಹಿಸಿಕೊಳ್ಳುತ್ತಾನೆ. ಅಲ್ಲಿ ಚಳುವಳಿ ಭರದಿಂದ ನಡೆದು ಎಷ್ಟೋ ಹೊಲ ಮನೆಗಳು ಜಪ್ತಿಯಾಗುತ್ತವೆ. ಎಷ್ಟೋ ದನ ಕರುಗಳು ಹರಾಜಾಗುತ್ತವೆ. ಕೆಲವೊಮ್ಮೆ ಪೊಲೀಸರು ತಮ್ಮ ದಡ್ಡತನದಿಂದ ನಿಜವಾದ ಚಳುವಳಿಗಾರರ ಬದಲು ಯಾವತ್ತೋ ಅಪರೂಪಕ್ಕೆ ನೆಂಟರಂತೆ ಚಳುವಳಿಯ ಜೊತೆ ಸೇರಿಕೊಂಡವರನ್ನು ಹಿಡಿದು ಅವರಿಗೆ ಚಳುವಳಿಗಾರರ ಪಟ್ಟ ಕಟ್ಟುತ್ತಾರೆ. ಅಂದು ದೇಶಸೇವಕರಿಗೆ ಊರಿನಲ್ಲಿ ಸಿಗುತ್ತಿದ್ದ ಮರ್ಯಾದೆ, ಗೌರವ, ಭಕ್ತಿ ಕೂಡಾ ಜನರು ಚಳುವಳಿ ಸೇರುವುದಕ್ಕೆ ಕಾರಣವಾಗುತ್ತದೆ.

## ಕರನಿರಾಕರಣೆ

ಕರನಿರಾಕರಣೆಯು ಕರ್ನಾಟಕದಲ್ಲಿ ಅದರಲ್ಲೂ ಶಿರಸಿ, ಸಿದ್ಧಾಪುರ, ಅಂಕೋಲ ಮುಂತಾದ ಕಡೆಗಳಲ್ಲಿ ಬಹಳ ಗಂಭೀರವಾಗಿ ನಡೆಯಿತು. ಈ ಭಾಗದ ರೈತರಿಗೆ ಗಾಂಧಿಯ ಮಾತು ವೇದವಾಕ್ಯವಾಗಿತ್ತು. ಅಹಿಂಸಾ ಪ್ರತಿಭಟನೆಯ ಎದುರು ತಮಗಾಗುವ ಕಷ್ಟ–ನಷ್ಟಗಳನ್ನು ಇವರು ತೃಣವಾಗಿ ಕಂಡರು. 'ಮೆರವಣಿಗೆ' ಕಾದಂಬರಿಯಲ್ಲಿ ಕರ್ನಾಟಕದಲ್ಲಿ ನಡೆದ ಕರನಿರಾಕರಣೆಯ ಚಿತ್ರಣವನ್ನು ನಾವು ಕಾಣಬಹುದು.

ಈ ಕಾದಂಬರಿಯ ನಾಯಕನಾದ ಸುದರ್ಶನ ಕರ ನಿರಾಕರಣ ಚಳುವಳಿಯಲ್ಲಿ ಮುಖ್ಯಪಾತ್ರವನ್ನು ವಹಿಸುತ್ತಾನೆ. ಸುದರ್ಶನ ಜನರಿಗೆ ಚಳುವಳಿಯ ಕುರಿತು ಹಾಗೂ ತಾವು ಅನುಭವಿಸಬೇಕಾದ ಕಷ್ಟ–ನಷ್ಟದ ಕುರಿತು ತಿಳಿಸಿದನು. ದಿನದಿಂದ ದಿನಕ್ಕೆ ಸ್ವಯಂಸೇವಕರ ಸಂಖ್ಯೆ ಜಾಸ್ತಿಯಾಯಿತು. ಆ ಹಳ್ಳಿಯಲ್ಲಿ ಬ್ರಾಹ್ಮಣ, ಶೂದ್ರ, ಮುಸಲ್ಮಾನ, ಲಿಂಗಾಯಿತ, ನೇಟಿವ್ ಕ್ರಿಸ್ತ – ಹೀಗೆ ವಿವಿಧ ಜಾತಿಗಳಿರುವ ಈ ಊರಿನ ಜನರು ಚಳುವಳಿಗೋಸ್ಕರ ಒಗ್ಗೂಡಬಹುದೇ ಎಂಬ ಸಂಶಯ ಸುದರ್ಶನನಿಗಿತ್ತು. ಆದರೆ ಸ್ವಾತಂತ್ರ್ಯದೆದುರು ಅವರ ಜಾತಿ ಮತ ಭೇದ ಮರೆಯಾಗಿ ಎಲ್ಲರೂ ಒಂದಾಗುತ್ತಾರೆ. ಇಲ್ಲಿ ದೇಶೀಯ ಚಳುವಳಿಯೊಂದು ತಾವೆಲ್ಲರೂ ಒಂದು ಎಂಬ ಭಾವನೆಯನ್ನು ಜನರಲ್ಲಿ ಮೂಡಿಸಿ ಜನರನ್ನು ಒಗ್ಗೂಡಿಸುವಲ್ಲಿ ಯಶಸ್ವಿಯಾಗುತ್ತದೆ.

ಸುದರ್ಶನ ಹಳ್ಳಿಯ ಒಂದು ಮನೆಯನ್ನು 'ಸ್ವರಾಜ್ಯ ಆಶ್ರಮ'ವನ್ನಾಗಿ ಮಾರ್ಪಾಡು ಮಾಡುತ್ತಾನೆ. ಇಲ್ಲಿ ಸ್ವಯಂಸೇವಕರಿಗೆ ಬೇಕಾದ ಅಹಿಂಸಾ ತರಬೇತಿ ಹಾಗೂ ನೈತಿಕ ಬಲದ ಕುರಿತು ಪಾಠ ನಡೆಯುತ್ತದೆ. ಇಲ್ಲಿ ತಯಾರಾದ ಸ್ವಯಂಸೇವಕರು ಪ್ರತಿ ಹಳ್ಳಿ ಹಳ್ಳಿಗೂ ಹೊರಟು ಹೋಗುತ್ತಿದ್ದರು. ವೃತ್ತಪತ್ರಿಕೆಗಳನ್ನೆಲ್ಲ ಹೊರಡದಂತೆ ಸರಕಾರ ತಡೆಯಾಜ್ಞೆ ಹೊರಡಿಸಿತ್ತು. ಇಂತಹ ಸಂದರ್ಭದಲ್ಲಿ ಸುದರ್ಶನ ಸೈಕೊಸ್ಟೈಲಿನಲ್ಲಿ ಪ್ರತಿದಿನವೂ ಪತ್ರಿಕೆಗಳನ್ನು ಹೊರಡಿಸಿ, ಎಲ್ಲಾ ಹಳ್ಳಿಗಳಿಗೂ ಕಳುಹಿಸುತ್ತಿದ್ದನು. ಅವುಗಳಲ್ಲಿ ಗಾಂಧೀಜಿಯವರ ಸಂದೇಶಗಳು; ಅಹಿಂಸೆಗೆ ಕೊಡಬೇಕಾದ ಪ್ರಾಮುಖ್ಯತೆ, "ಎದುರಾಳಿ ಬಂದೂಕದಿಂದ ಹೊಡೆದರೂ ಎದೆ ಒಡ್ಡಬೇಕೇ ಹೊರತು ಅವನ ಮೇಲೆ ಕೈ ಎತ್ತಬಾರದು" ಎಂಬ ತತ್ವಗಳ ಪ್ರತಿಪಾದನೆ ಇರುತ್ತಿದ್ದಿತು. ಈ ವೃತ್ತಪತ್ರಿಕೆಗಳ ಸಂಖ್ಯೆ ದಿನದಿಂದ ದಿನಕ್ಕೆ ಜಾಸ್ತಿಯಾಗುತ್ತಿದ್ದಿತು. ಪ್ರತಿಯೊಂದು ಹಳ್ಳಿಯಲ್ಲಿಯೂ ಸಾಯಂಕಾಲವಾಗುವುದನ್ನೇ ನಿರೀಕ್ಷಿಸುತ್ತಾ ವೃತ್ತಪತ್ರಿಕೆ ಬರುವುದನ್ನೇ ಕಾಯತೊಡಗಿದರು. ಸರಕಾರದವರು ಬಹುಕಾಲ ಸುಮ್ಮನಿರವುದು ಸಾಧ್ಯವಿರಲಿಲ್ಲ. ಅವರಿಗೆ ವೃತ್ತಪತಿಕೆಯು ಪ್ರತಿದಿನ ಸಾಯಂಕಾಲವೂ ಸಿಕ್ಕುತ್ತಿದ್ದುವು. ಆದರೆ ಇದನ್ನು ಬರೆಯುವವರು ಯಾರು? ಅಚ್ಚು ಹಾಕುವವರು ಯಾರು? ಅದನ್ನು ಅಚ್ಚು ಹಾಕುವ ಸೈಕೊಸ್ಟೈಲ್ ಮಿಶನ್ ಎಲ್ಲಿದೆ? ಇದನ್ನು ನಡೆಸುವವರು ಯಾರು? ರೈತರೇ ಇಷ್ಟು ಧೈರ್ಯಶಾಲಿಗಳಾಗಿದ್ದಾರೆಯೇ? ಈ ಸುದರ್ಶನ ಎಂಬುವವನು ಎಲ್ಲಿಯವನು? ಇವನ ಮಾತನ್ನೇ ರೈತರು ಕೇಳುತ್ತಾರೆಯೇ? ಎಂಬ ಸಮಸ್ಯೆಗಳು ಅವರಿಗೆ ಉಂಟಾದುವು. ಗುಪ್ತ ಪೊಲೀಸರ ಸಂಖ್ಯೆ ದಿನದಿನಕ್ಕೆ ಹೆಚ್ಚಿತು.

ಒಂದು ದಿನ ಇದ್ದಕ್ಕಿದ್ದಂತೆ ಪೊಲೀಸಿನವರು ಸ್ವರಾಜ್ಯ ಆಶ್ರಮವನ್ನು ಮುತ್ತಿದರು. ಅಲ್ಲಿದ್ದ ಸ್ವಯಂಸೇವಕರ ಸಾಮಾನುಗಳನ್ನು ಹಾಗೂ ಸುದರ್ಶನನ ಸಾಮಾನುಗಳನ್ನು ಹೊರಕ್ಕೆ ಎಸೆದರು. ಅಂತಹ ಸಂದರ್ಭದಲ್ಲಿ ಊರ ಪಟೇಲನು ಸರಕಾರಿ ಕೆಲಸಕ್ಕೆ ರಾಜೀನಮೆಯನ್ನು ಕೊಟ್ಟು ತನ್ನ ಮನೆಯಲ್ಲಿಯೇ ಸುದರ್ಶನನಿಗೆ ಆಶ್ರಯವನ್ನು ಕೊಟ್ಟನು. ಬೊಮ್ಮೇಗೌಡನು ರಾಜೀನಾಮೆಯನ್ನು ಕೊಟ್ಟುದೇ ತಡ, ಹಲವಾರು ಮಂದಿ ಪಟೇಲರು ಕೂಡ ರಾಜೀನಾಮೆಯನ್ನು ಕೊಟ್ಟರು. ಸರಕಾರದವರು ಬೊಮ್ಮೇಗೌಡನ ಮನೆಯ ದನಗಳನ್ನು ಅವನ ಕಂದಾಯಕ್ಕಾಗಿ ಹರಾಜು ಹಾಕಿದರು. ಯಾರೂ ಕೊಳ್ಳಲಿಲ್ಲ. ಸರ್ಕಾರದವರು ತಮ್ಮ ಸ್ವಂತ ಖರ್ಚಿನಿಂದ ಬಸ್ಸನ್ನು ಕಳುಹಿಸಿ ದೂರದ ಜಿಲ್ಲೆಯಿಂದ ಯಾರನ್ನೋ ಕರೆಸಿ ಬೊಮ್ಮೇಗೌಡನ ಸುಮಾರು ಸಾವಿರ ಸಾವಿರ ರೂಪಾಯಿ ದನಗಳನ್ನು ಅವು ಹೋದ ಬೆಲೆಗೆ ಮಾರಿದರು. ಮನೆಯಲ್ಲಿದ್ದ ಹಿತ್ತಾಳೆ ಪಾತ್ರೆಗಳನ್ನು ಅವು ಹೋದ ಬೆಲೆಗೆ ಮಾರಿದರು.

ಆ ಊರಿನಲ್ಲಿ ಹರಾಜು ಹಾಕುವಾಗ ಊರಿನ ಬ್ರಿಟಿಷ್ ಸರಕಾರದ ಪರವಾಗಿರುವ ಒಂದಿಬ್ಬರು ಶ್ರೀಮಂತರನ್ನು ಬಿಟ್ಟರೆ ಬೇರಾರೂ ಕೊಂಡುಕೊಳ್ಳುತ್ತಿರಲಿಲ್ಲ. ಕಷ್ಟದಲ್ಲಿಯೂ ಅಂತಹ ಒಗ್ಗಟ್ಟು ಆ ಜನರಲ್ಲಿತ್ತು. ಪ್ರತಿದಿನವೂ ಹರಾಜುಗಳು ನಡೆಯುತ್ತಿತ್ತು. ಕಂದಾಯ ಕೊಡದಿದ್ದವರ ಮನೆಗಳೆಲ್ಲಾ ಹರಾಜಾದುವು. ಆ ಊರಿನ ಕಂಟ್ರಾಕ್ಟರ್ ರಾಮಭಟ್ಟ ಮಾತ್ರ ಹರಾಜಿನಲ್ಲಿ ತಮಗೆ ಇಷ್ಟ ಬಂದ ತೋಟಗಳನ್ನು ಕೊಂಡುಕೊಳ್ಳುತ್ತಿದ್ದನು. ಆದರೂ ಅವನಿಗೆ ಭಯ ಕಾಡುತ್ತಿತ್ತು. ಒಂದೇ ಒಂದು ಧೈರ್ಯವೆಂದರೆ ಮೊದಲು ಊರಿನಲ್ಲಿ ಪ್ರಖ್ಯಾತ ಪೋಲಿಗಳೆನಿಸಿಕೊಂಡವರು ಕೂಡ ಗಾಂಧೀಜಿಯವರ ಅಹಿಂಸಾ ಮಾರ್ಗವನ್ನು ಅನುಸರಿಸುತ್ತಿದ್ದರು. ರಾಮಭಟ್ಟನು ಹರಾಜಿನಲ್ಲಿ ಪುಟ್ಟಪ್ಪ ಎಂಬ ಸ್ವಯಂಸೇವಕನ ತೋಟವನ್ನು ಕೊಂಡನು. ಆದರೂ ಅವನನ್ನು ಭಯ ಕಾಡುತ್ತಿತ್ತು.

ಹರಾಜಿನಲ್ಲಿ ಸ್ವಯಂಸೇವಕರ ತೋಟ, ಮನೆಗಳನ್ನು, ದನ ಕರುಗಳನ್ನು ತಮ್ಮ ಊರಿನವರು ಕೊಂಡರೆ ಅವರ ಮನೆಯ ಮುಂದೆ ಸ್ವಯಂಸೇವಕರು ಉಪವಾಸ ಸತ್ಯಾಗ್ರಹ ಕೂರುತ್ತಿದ್ದರು. ಸಾತ್ವಿಕ ರೀತಿಯಿಂದ ಸ್ವಾರ್ಥಿ ಜನರ ಮನಸ್ಸನ್ನು ಪರಿವರ್ತಿಸುವ ಕಲೆಯನ್ನು ಗಾಂಧೀಜಿಯವರಿಂದ ಹಳ್ಳಿಯ ಸ್ತ್ರೀ, ಪುರುಷ, ಸ್ವಯಂಸೇವಕರೆಲ್ಲರೂ ಕಲಿತುಕೊಂಡಿದ್ದರು. ಪುಟ್ಟಪ್ಪನ ವೀಳ್ಯದೆಲೆಯ ತೋಟವನ್ನು ಕೊಂಡುಕೊಂಡ ರಾಮಭಟ್ಟರ ಮನೆಯ ಮುಂದೆ ಕೂಡ ಹತ್ತು ಜನ ಗಂಡಸರೂ, ಐದು ಜನ ಹುಡುಗಿಯರು ಕುಳಿತಿದ್ದರು. ಗಾಂಧಿಯವರ ಉಪವಾಸ ಸತ್ಯಾಗ್ರಹದ ಮಾರ್ಗವು ತನ್ನ ಮೇಲೆ ಇಷ್ಟು ಹತ್ತಿರದಲ್ಲೇ ಪ್ರಯೋಗವಾಗುತ್ತದೆಂದು ಅವರು ಎಣಿಸಿರಲಿಲ್ಲ. ೧೫ ಜನ ಉಪವಾಸ ಕುಳಿತಿರುವಾಗ ಭಟ್ಟರು ಊಟ ಮಾಡಿದರೂ ಅದೇಕೋ ಅವರ ಆತ್ಮಸಾಕ್ಷಿ ಚುಚ್ಚುತ್ತಿತ್ತು. ಇವರನ್ನು ಎದುರಿಸುವುದು ಹೇಗೆ? ಮೇಲೆ ಬಿದ್ದರೆ ನಾವೂ ಮೇಲೆ ಬೀಳಬಹುದು. ಪೊಲೀಸರ ಸಹಾಯ ಕೇಳಬಹುದು. ಹೀಗೆ ಉಪವಾಸ ಕುಳಿತವರನ್ನು ಹೇಗೆ ಎದುರಿಸಲಿ? ಎಂಬುದು ಅವರ ಸಮಸ್ಯೆಯಾಯಿತು. "ಹಾಳು ಮುಂಡೆ ತೋಟ, ನಾನು

ಯಾಕಯ್ಯ ಕೊಂಡುಕೊಂಡೆ''? ಎಂದು ಅವರಿಗೆ ಬಹಳ ದುಃಖವಾಯಿತು. ಕೊನೆಗೂ ಭಟ್ಟರು ಆ ಜಮೀನನ್ನು ಬಿಟ್ಟು ಬಿಟ್ಟರು.

ಈ ಕರನಿರಾಕರಣೆಯ ಪ್ರಭಾವ ಅಂಕೋಲೆ, ಸಿರಸಿ, ಸಿದ್ಧಾಪುರಗಳಲ್ಲಿ ಅತಿ ಪ್ರಬಲವಾಯಿತು. ಸಣ್ಣ ಹುಡುಗರು ಸಹ ಹೆಗಲಿನ ಮೇಲೆ ಕೊಡಲಿಗಳನ್ನು ಹಿಡಿದುಕೊಂಡು ಹೊರಟರು. ಸುಮಾರು ಮೂರು ಲಕ್ಷ ಈಚಲಮರಗಳನ್ನು ಕಡಿದರು. ಸಿರಸಿ ತಾಲೂಕಿನ ೧೨೦ ಪಟೇಲರ ಪೈಕಿ ೯೬ ಪಟೇಲರು ರಾಜೀನಾಮೆಯಿತ್ತರು. ಅಂಕೋಲಾ ತಾಲೂಕಿನಲ್ಲಿ ೯೩ ಪಟೇಲರ ಪೈಕಿ ೪೩ ಜನ ರಾಜೀನಾಮೆಯಿತ್ತರು. ಸುಮಾರು ೮೦೦ ಸಂಸಾರಗಳು ಚಳುವಳಿಯಲ್ಲಿ ಭಾಗವಹಿಸಿದರು. ೩೩೦ ಸಂಸಾರಗಳ ಜಮೀನು ಪೂರ್ಣವಾಗಿ ಕೈಬಿಟ್ಟು ಹೋದುವು. ೧೫ ಲಕ್ಷ ರೂಪಾಯಿ ಬೆಲೆಬಾಳುವ ಜಮೀನುಗಳನ್ನು ಸರಕಾರದವರು ಮುಟ್ಟುಗೋಲು ಹಾಕಿದರು. ಚರಸ್ವತ್ತುಗಳು ೨೧೮ ಜಫ್ತಿಗಳಾಗಿ ೨೦,೦೦೦ ರೂಪಾಯಿ ಬೆಲೆಬಾಳುವ ಸಾಮಾನು ಸರಕಾರಕ್ಕೆ ಸೇರಿತು. ಹರಾಜಿನ ಸಾಮಾನುಗಳನ್ನು ಕೊಂಡುಕೊಂಡವರ ಬಾಗಿಲುಗಳಲ್ಲಿ ೩೭ ಸತ್ಯಾಗ್ರಹಿಗಳು ಉಪವಾಸ ಮಾಡಿದರು. ಲಕ್ಷ್ಮಮ್ಮನೆಂಬಾಕೆಯು ೩೧ ದಿನಗಳ ಕಾಲ ಉಪವಾಸ ಮಾಡಿದಳು. ಸಿರಸಿ, ಸಿದ್ಧಾಪುರದಲ್ಲಿ ಸರಕಾರದವರು ೧೦೦ ಪೊಲೀಸರನ್ನು ಹೆಚ್ಚಾಗಿ ನೇಮಿಸಿದರು. ಅವರ ವೆಚ್ಚಕ್ಕಾಗಿ ಪ್ರಜೆಗಳಿಂದ ೩೭,೦೦೦ ರೂಪಾಯಿ ದಂಡ ಕಂದಾಯವನ್ನು ವಸೂಲು ಮಾಡಿದರು. ೮೦೦ ಜನರಿಗೆ ಸಜಾ ಆಯಿತು. ಆ ಪೈಕಿ ೧೦೦ ಜನ ಸ್ತ್ರೀಯರೂ ಇದ್ದರು.

ಮೇಲಿನ ಅಂಕಿ ಅಂಶಗಳನ್ನು ಗಮನಿಸಿದರೆ ಅಂಕೋಲ, ಶಿರಸಿ, ಸಿದ್ಧಾಪುರದ ಜನರ ಸಾಹಸ ಹಾಗೂ ಸತ್ಯಾಗ್ರಹದ ತೀವ್ರತೆಯ ಕಾವು ನಮ್ಮ ಗಮನಕ್ಕೆ ಬರುತ್ತದೆ. ಸುದರ್ಶನ ಯಾವ ಹಳ್ಳಿಯಲ್ಲಿ ಆ ಕಾಲದಲ್ಲಿ ವಾಸಿಸುತ್ತಿದ್ದನೋ ಆ ಹಳ್ಳಿಯಲ್ಲಿ ಸ್ವಲ್ಪ ಹೆಚ್ಚು ಕಡಿಮೆ ಏನೂ ಉಳಿಯಲಿಲ್ಲ. ಯಾವ ಮನೆಯಲ್ಲಿಯೂ ಯಾವ ಸಾಮಾನು ಉಳಿಯಲಿಲ್ಲ. ಒಂದು ಕಾಳು ರಾಗಿ, ಜೋಳ, ಹಿತ್ತಾಳೆ ಪಾತ್ರೆ ಏನೂ ಉಳಿಯಲಿಲ್ಲ. ಮುಕ್ಕಾಲು ಭಾಗ ಮನೆಗಳು ಸರಕಾರದ ಪೊಲೀಸರ ವಶದಲ್ಲಿದ್ದವು. ಇಂತಹ ಕಷ್ಟ ನಷ್ಟಗಳನ್ನು ಅನುಭವಿಸಿಯೂ ಉತ್ತರ ಕನ್ನಡದ ಜನತೆ ಎದೆಗುಂದಲಿಲ್ಲ. ಇಂತಹ ಸ್ಥಿತಿಯಲ್ಲಿ ಸರಕಾರದ ಕಂದಾಯಗಳನ್ನು ಕೊಡದವರು ಬಯಲಿನಲ್ಲಿಯೇ ಸೊಪ್ಪು ಸೆದೆಗಳನ್ನು ಬೇಯಿಸಿಕೊಂಡು ತಿನ್ನುತ್ತಿದ್ದರು. ಕರ್ನಾಟಕದ ಈ ದೇಶಭಕ್ತರನ್ನು ಕುರಿತು ವಲ್ಲಭಭಾಯಿ ಪಟೇಲರು ಹೇಳಿದ ಮಾತುಗಳು ಉಲ್ಲೇಖನೀಯ– "ಕರ್ನಾಟಕದ ಧೀರರಾದ ರೈತರು ತ್ಯಾಗದಲ್ಲಿಯೂ ಭೂಮಿ ಆಸ್ತಿಗಳನ್ನು ಕಳೆದುಕೊಂಡಿರುವುದರಲ್ಲಿಯೂ ಕಷ್ಟ ಸಹನೆಯಲ್ಲಿಯೂ ನಿಮಗೆ(ಗುಜರಾತಿನ ರೈತರಿಗೆ) ಸಮಾನರಾಗಿದ್ದಾರೆ. ಅವರ ಆಸ್ತಿಗಳೆಲ್ಲವೂ ಜಪ್ತಾಗಿವೆ; ಮುಟ್ಟುಗೋಲು ಹಾಕಿಕೊಂಡಿದ್ದಾರೆ. ಜನರನ್ನು ಜೈಲಿಗೆ ತುಂಬಿದ್ದಾರೆ. ಇನ್ನೂ ಹೆಚ್ಚಿಗೆ ಕಷ್ಟಗಳೆಲ್ಲಾ ಅವರಿಗೆ ಉಂಟಾಗಿವೆ. ಸ್ತ್ರೀಯರೂ ಪುರುಷರೂ ತಾವು ಯಾವ ಕಷ್ಟಗಳಿಗೂ ಹೆದರುವುದಿಲ್ಲವೆಂಬುದನ್ನು ಜಗತ್ತಿಗೆ ತೋರಿಸಿದ್ದಾರೆ. ಇವತ್ತು ಅವರು ಸಂಪೂರ್ಣವಾಗಿ ನಿರಾಶ್ರಿತರಾಗಿದ್ದಾರೆ. ಅವರ ನೋವು, ಧೈರ್ಯದ ಕಥೆ ನನ್ನಲ್ಲಿ ಮೆಚ್ಚಿಕೆಯನ್ನು ಉಂಟುಮಾಡಿದೆ. ಅವರ ಕಷ್ಟ ಒಂದೊಂದು ಸಲ ನನ್ನ ಮನಸ್ಸನ್ನು ಬಹಳ

ವಿಚಲಿತ ಮಾಡಿದೆ.[೨೬] ಕರ್ನಾಟಕದ ರೈತರ ಹೋರಾಟವು ಜಗತ್ತಿನ ಯಾವ ಭಾಗದ ಸ್ವಾತಂತ್ರ್ಯ ಹೋರಾಟಗಾರರ ಹೋರಾಟಕ್ಕೂ ಕಡಿಮೆಯಿಲ್ಲದ್ದು.

ಶಿವರಾಮ ಕಾರಂತರ 'ಔದಾರ್ಯದ ಉರುಳಲ್ಲಿ' ಕಾದಂಬರಿಯಲ್ಲಿ ಕೂಡ ಉತ್ತರ ಕನ್ನಡ ಜಿಲ್ಲೆಯ ಸತ್ಯಾಗ್ರಹ ಚಿತ್ರಣವಿದೆ. ಈ ಕಾದಂಬರಿಯ ಕಥಾನಾಯಕ ರಾಧಕೃಷ್ಣ ಉತ್ತರ ಕನ್ನಡ ಜಿಲ್ಲೆಗೆ ಬಂದಾಗ ಅಲ್ಲಿ ಸತ್ಯಾಗ್ರಹದ ತೀವ್ರತೆ ಮುಗಿದಿರುತ್ತದೆ, ಆದರೆ ಅದರ ನೋವು, ಕಷ್ಟ- ನಷ್ಟ ಮಾತ್ರ ಉಳಿದಿರುತ್ತದೆ. ಇಂತಹ ಸಂದರ್ಭದಲ್ಲಿ ರಾಧಕೃಷ್ಣ ಆ ಊರಿಗೆ ಬರುತ್ತಾನೆ. ಆ ಊರಿನ ಜನರ ಶ್ರದ್ಧೆಯನ್ನು ಕಂಡು, ಗಾಂಧೀಜಿಯ ಮಾತಿನ ಪ್ರಭಾವಕ್ಕೆ ಅವರು ಒಳಗಾದುದನ್ನ ಕಂಡು ರಾಧಕೃಷ್ಣನಿಗೆ ಆಶ್ಚರ್ಯವಾಗುತ್ತದೆ. ತನ್ನ ಜಿಲ್ಲೆಯಷ್ಟು ವಿದ್ಯೆಯಲ್ಲಿ ಮುಂದುವರಿದ ಪ್ರಾಂತ್ಯ ಅದಲ್ಲ, ಆದರೂ ತ್ಯಾಗದಲ್ಲಿ ಮುಂದುವರಿದಿದ್ದಾರೆ. ಈ ಓದಿದ ಜನಗಳೇ ತ್ಯಾಗದಲ್ಲಿ ಹಿಂದೆ ಎಂದು ಅನಿಸಿತು. ರಾಧಕೃಷ್ಣನು ಇಲ್ಲಿ ಬಂದು ತನ್ನ ಕೆಲಸವೇನೆಂದು ನಿರ್ಧರಿಸುವ ಮೊದಲು ಆ ಪ್ರದೇಶದ ಹಳ್ಳಿಪಳ್ಳಿಗಳನ್ನೆಲ್ಲ ಸಂಚರಿಸಿದನು. ಅವನು ಹೊಕ್ಕ ಒಂದೊಂದು ಮನೆಯು ಒಂದೊಂದು ಕತೆಯನ್ನು ಹೇಳುತ್ತಿತ್ತು. ಬಂಧುಗಳನ್ನು ಸೆರೆಮನೆಗೆ ಕಳುಹಿಸಿದವರು ಕೆಲವರು; ಪೊಲೀಸರ ದಬ್ಬಾಳಿಕೆಗೆ ಗುರಿಯಾದವರು ಕೆಲವರು. ತಮ್ಮ ಆಸ್ತಿ ಮನೆಗಳನ್ನು ದಂಡ ತೆತ್ತು ಕಂಗಾಲಾದವರು ಕೆಲವರು. ಆದರೂ ಜನರಲ್ಲಿ ನಿರಾಸೆಯುಂಟಾಗಲಿಲ್ಲ. ನಾಳಿನ ಗೆಲುವನ್ನು ಇದಿರು ಕಾದಿದ್ದಾರೆ. ತಮಗೆ ಜಯವಿದೆ ಎಂದು ನಂಬಿ ಕುಳಿತಿದ್ದಾರೆ. ಒಂದು ವ್ಯಥೆ ಮಾತ್ರ ಅವರನ್ನು ಕೊರೆಯದೆ ಇಲ್ಲ. ಅದು ನಾಳಿನ ಚಿಂತೆಯಲ್ಲ, ಅಂದಿನ ಚಿಂತೆ. ಹೊಲಮನೆಗಳನ್ನು ಕಳೆದುಕೊಂಡು ನಿರ್ಗತಿಕರಾಗಿ, ತಮ್ಮವರನ್ನು ಸಾಕುವ ಹೊಣೆಗಾರಿಕೆ ಅವರನ್ನು ಹೆದರಿಸುತ್ತಿದೆ. ದನಕರುಗಳನ್ನು ಕಳೆದುಕೊಂಡುದರಿಂದ ಇದ್ದ ಹೊಲ ಗದ್ದೆಗಳನ್ನು ಉತ್ತುಬಿತ್ತುವ ವಿಚಾರ ಅವರನ್ನು ಕಂಗಾಲಾಗಿ ಮಾಡಿದೆ. ಬೆಳೆದ ಬೆಳೆಯನ್ನು ಕತ್ತರಿಸುವುದೇ ಬಿಡುವುದೇ ಎಂಬ ಯೋಚನೆಯಾಗಿದೆ. ಅದನ್ನು ಮನೆಗೆ ತಂದು ರಾಶಿ ಒಟ್ಟಿದ ಮರುದಿನವೇ ವಿಧಿಸಿದ ದಂಡಕ್ಕಾಗಿ ಸರಕಾರ ಅದನ್ನು ಕೂಡ ಹರಾಜು ಮಾಡಿದರೆ ಗತಿಯೇನು ಎಂಬ ಚಿಂತೆ ಅವರನ್ನು ಕಾಡುತ್ತಿತ್ತು. ಯಾವ ಕದನವೇ ಆಗಲಿ ಬರೀ ಹೊಟ್ಟೆಯಲ್ಲಿ ಅದು ನಡೆಯಲಾರದಷ್ಟೇ. ಅಲ್ಲಲ್ಲಿ ತಮ್ಮ ಗೆಳೆಯರ ಆಸ್ತಿಮನೆಗಳು ಹರಾಜಾಗುವುದನ್ನು ಕಾಣುತ್ತಿದ್ದಾರೆ, ಕೊಳ್ಳುವವರಿಲ್ಲದೆ ಹೋದರೆ, ದೂರದ ಗಿರಾಕಿಗಳನ್ನು ಹಿಡಿದು ತಂದು ಸಾವಿರಾರು ಬೆಲೆಬಾಳುವ ಭೂಮಿಗಳನ್ನು ನೂರಿನ್ನೂರಕ್ಕೆ ಹರಾಜು ಮಾಡಿ, ಜನರ ಮೇಲಿನ ಸೇಡು ತೀರಿಸುವುದನ್ನು ನೋಡುತ್ತಿದ್ದಾರೆ. ನಿನ್ನೆ ದಿನವಷ್ಟೇ ನೂರು ರೂಪಾಯಿಗಳನ್ನು ಕೊಟ್ಟುಕೊಂಡ ಕೋಣಗಳ ಜತೆಯನ್ನು ತಮ್ಮ ಕಣ್ಣ ಮುಂದೆಯೇ ಇಪ್ಪತ್ತು ರೂಪಯಿಗಳಿಗೆ ಲಿಲಾವು ಮಾಡಿ, ಅದನ್ನು ಸ್ವಾರ್ಥಿಗಳಾದ ಯಾರೋ ಅಟ್ಟಿಕೊಂಡು ಹೋಗುವುದನ್ನು ಕಾಣುತ್ತಿದ್ದಾರೆ. ಒಂದು ಕಡೆ ಸ್ವಾತಂತ್ರ್ಯಕ್ಕಾಗಿ ಜನರು ಮನೆ, ಆಸ್ತಿ, ಪಾಸ್ತಿಗಳನ್ನು ಕಳೆದುಕೊಳ್ಳುತ್ತಿದ್ದರೆ ಇನ್ನೊಂದು ಕಡೆ ನಮ್ಮವರೇ ಬ್ರಿಟಿಷ್ ಸರಕಾರದ ಪರವಾಗಿ ತಮ್ಮ ಲಾಭವನ್ನು ಯೋಚಿಸಿ ಅತ್ಯಂತ ಕಡಿಮೆ ಬೆಲೆಗೆ ಅದನ್ನು ಕೊಂಡುಕೊಳ್ಳುತ್ತಿದ್ದರು. ಇಂತಹ ಜನರ ನಡುವೆ ಕುಳಿತ ರಾಧಕೃಷ್ಣ ಇಲ್ಲಿ ತನ್ನ ಕರ್ತವ್ಯವೇನೆಂಬುದಾಗಿ ಯೋಚಿಸುತ್ತಾನೆ. ಅವರನ್ನು ಇನ್ನೂ ಹೆಚ್ಚಿನ

ತ್ಯಾಗಕ್ಕೆ ಹುರಿದುಂಬಿಸುವ ಜನರಿದ್ದಾರೆ. ಆದರೆ ಅವನಿಗೆ ಮನಸ್ಸು ಬಾರದು. ಅವನು ಹಸಿದ ನಾಲ್ವರಿಗೆ ಅನ್ನ ಹುಡುಕಿ ಕೊಡುವ ಕೆಲಸವು ತನ್ನದು ಎಂದು ನಿರ್ಧರಿಸಿ ಆ ಕೆಲಸದಲ್ಲಿ ನಿರತನಾಗುತ್ತಾನೆ. ಮಲೆನಾಡಿನ ಕೊಂಪೆಯ ಒಂದು ಹಳ್ಳಿಯಾದ ನಾಗೇನಹಳ್ಳಿಯಲ್ಲಿ ಇರಲು ನಿರ್ಧರಿಸುತ್ತಾನೆ. ಅವರು ಸಲ್ಲಿಸಿದ ತ್ಯಾಗಕ್ಕಾಗಿ ಪಶ್ಚತ್ತಾಪ ಪಡದಂತೆ ಹಿತವಚನ ಹೇಳುವ ಕೆಲಸವನ್ನು ಕೈಗೆತ್ತಿಕೊಳ್ಳುತ್ತಾನೆ. ನಾಗೇನಹಳ್ಳಿ ಕಾಡು ಗುಡ್ಡಗಳಿಂದ ಸುತ್ತುವರಿದ ಒಂದು ಊರು. ಬಂದು ಹೋಗುವುದಕ್ಕೆ ಒಂದೆರಡು ಕಾಡುದಾರಿಗಳು ಮಾತ್ರ, ಸಮನಾದ ರಸ್ತೆಗೆ ಹತ್ತು ಮೈಲು ನಡೆಯಬೇಕು. ಆ ಘಟ್ಟದ ಸೆರಗಿನಲ್ಲಿ ಊರಿಗೆ ಮುಂಚೆಯೇ ಮಳೆಗಾಲ. ಹೆಜ್ಜೆ ಹೆಜ್ಜೆಗೂ ಜಿಗಣೆಗಳ ಕಾಟ. ಅಂಥ ಮೂಲೆಯಲ್ಲಿಯೂ ಜನ ತಮ್ಮ ಪಾಲಿನ ಕರ್ತವ್ಯ ಸಲ್ಲಿಸಿದರು. ಕೊಡಲಿ ರಾಮರಾಗಿ ಅರಣ್ಯಗಳಿಗೆ ನುಗ್ಗಿ ಮರಮಟ್ಟುಗಳನ್ನು ಕಡಿದು, ಸರಕಾರದ ರೋಷಕ್ಕೆ ಬಲಿಯಾಗಿದ್ದರು.[೩೭] ಹೀಗೆ ಉಪ್ಪಿನ ಸತ್ಯಾಗ್ರಹ ಹಾಗೂ ಕರನಿರಾಕರಣೆಯು ಕರ್ನಾಟಕದ ಎಲ್ಲಾ ಭಾಗಗಳಲ್ಲಿಯೂ ಅಲ್ಪಸ್ವಲ್ಪ ನಡೆದರೂ ಅದು ಯಶಸ್ವಿಯಾಗಿ ನಡೆದುದು ಉತ್ತರ ಕರ್ನಾಟಕದಲ್ಲಿ. ಸ್ವಾತಂತ್ರ್ಯ ಸಂಗ್ರಾಮಕ್ಕೆ ಈ ಊರಿನ ಜನರ ಕೊಡುಗೆ ಹಾಗೂ ತ್ಯಾಗ ಅಪಾರವಾದುದು.

## ಕನ್ನಡ ಕಾದಂಬರಿಗಳಲ್ಲಿ ಕ್ವಿಟ್ ಇಂಡಿಯಾ ಚಳುವಳಿ

ಬ್ರಿಟಿಷರೇ ಭಾರತ ಬಿಟ್ಟು ತೊಲಗಿ" ಎಂಬ ಘೋಷಣೆಯು ಆಗಸ್ಟ್ ೮, ೧೯೪೨ರಂದು ಹೊರ ಬೀಳುತ್ತದೆ. ಆದರೆ ಈ ಚಳುವಳಿಗೆ ಮೊದಲು ಬ್ರಿಟಿಷರನ್ನು ಭಾರತದಿಂದ ಹೊರಹಾಕಲು ಅಸಂಖ್ಯ ಪ್ರಯತ್ನಗಳು ನಡೆದುವು. ಭಾರತದಲ್ಲಿ ಭದ್ರವಾಗಿ ತಳವೂರಿ ಇಲ್ಲಿಯ ಜನರ ಹೋರಾಟವನ್ನು ಘೋರವಾದ ಹಿಂಸಾ ಮಾರ್ಗದ ಮೂಲಕ ಹತ್ತಿಕ್ಕಿದ ಬ್ರಿಟಿಷರನ್ನು 'ಭಾರತ ಬಿಟ್ಟು ತೊಲಗಿ' ಎಂದು ಹೇಳುವ ಮನೋಬಲ ಬಂದುದು ಆ ಮೊದಲು ಇಲ್ಲಿ ನಡೆದ ಅನೇಕ ಹೋರಾಟ ಹಾಗೂ ಬಲಿದಾನಗಳ ಫಲ. ಬ್ರಿಟಿಷರ ಕುಟಿಲ ನೀತಿ, ಉಪ್ಪಿನ ಸತ್ಯಾಗ್ರಹ, ಸ್ವದೇಶಿ ಚಳುವಳಿ, ಕರನಿರಾಕರಣೆ, ಎರಡನೆಯ ಮಹಾಯುದ್ಧ, ಇವೆಲ್ಲ ಹೋರಾಟಗಳ ಅಂತಿಮ ಸ್ವರೂಪವೇ 'ಕ್ವಿಟ್ ಇಂಡಿಯಾ' ಘೋಷಣೆ.

ಸ್ವಾತಂತ್ರ್ಯದ ಮಹಾಸಂಗ್ರಾಮದಲ್ಲಿ ಇದೊಂದು ಅತ್ಯಂತ ಮಹತ್ವದ ಘಟನೆ. ಬ್ರಿಟಿಷರಿಗೆ ಈ ಚಳುವಳಿಯನ್ನು ಹತ್ತಿಕ್ಕುವುದು ಒಂದು ಸವಾಲೇ ಆಗಿತ್ತು. ಅದಕ್ಕೋಸ್ಕರ ಅವರು ಅತ್ಯಂತ ಕ್ರೂರವಾದ ದಮನನೀತಿಯನ್ನು ಅನುಸರಿಸಿದರು. ಅನೇಕ ಕಾದಂಬರಿಗಳಿಗೆ ಈ ಚಳುವಳಿಯು ವಸ್ತುವನ್ನೊದಗಿಸಿತು. ಸ್ವಾತಂತ್ರ್ಯಾನಂತರ ಮುಡಿಬಂದ ಹಲವಾರು ಕಾದಂಬರಿಗಳು ಈ ಮಹಾನ್ ಘಟನೆಯ ಸುತ್ತವೇ ಹೆಣೆಯಲ್ಪಟ್ಟಿದೆ. ಈ ಚಳುವಳಿಯಲ್ಲಿ ಸಾಮಾನ್ಯ ಜನರ ಪಾತ್ರ ಅತ್ಯಂತ ಮಹತ್ವದ್ದು. ನಾಯಕರೇನೋ 'ಮಾಡು ಇಲ್ಲವೇ ಮಡಿ' ಎಂಬುದಾಗಿ ಜನತೆಗೆ ಕರೆ ನೀಡಿ ಸೆರೆಮನೆ ಸೇರಿಕೊಂಡರು. ಆದರೆ ತಾವೇನು ಮಾಡಬೇಕು ಎಂಬ ಖಚಿತವಾದ ಯೋಜನೆ ಜನಸಾಮಾನ್ಯರ ಮುಂದಿರಲಿಲ್ಲ. ತಮಗೆ ಸರಿ ಕಂಡಂತೆ, ಬ್ರಿಟಿಷ್ ಸರಕಾರಕ್ಕೆ ನಷ್ಟವಾಗುವಂತಹ ಕೆಲಸವನ್ನು ಜನಸಾಮಾನ್ಯರು ಮಾಡಲಾರಂಭಿಸಿದರು. ಗಾಂಧೀಜಿ ನಂಬಿಕೊಂಡು ಬಂದಿದ್ದ,

ಉಳಿದೆಲ್ಲಾ ಚಳುವಳಿಯ ಸಂದರ್ಭದಲ್ಲಿ ಯಶಸ್ವಿಯಾಗಿ ಪ್ರಯೋಗಗೊಂಡಿದ್ದ ಅಹಿಂಸೆಯು ಈ ಚಳುವಳಿಯ ಸಂದರ್ಭದಲ್ಲಿ ಕೈ ಬಿಟ್ಟಿದ್ದನ್ನು ನಾವು ಅನೇಕ ಕಾದಂಬರಿಗಳಲ್ಲಿ ಕಾಣುತ್ತೇವೆ.

ಕೋ ಚೆನ್ನಬಸಪ್ಪನವರ 'ಬೇಡಿ ಕಳಚಿತು ದೇಶ ಒಡೆಯಿತು' ಕಾದಂಬರಿಯು ೪೨ರ ಚಳುವಳಿಯ ಸ್ವರೂಪವನ್ನು ಹೀಗೆ ತಿಳಿಸುತ್ತದೆ- ೧೯೪೨ ಎರಡನೇ ಮಹಾಯುದ್ಧದ ಕಾಲ. ಜಪಾನ್ ಭಾರತದ ಮೇಲೆ ದಾಳಿ ಮಾಡುವ ಅಪಾಯವಿತ್ತು. ಹಾಗೇನಾದರೂ ಆದರೆ ಭಾರತದಲ್ಲಿದ್ದ ಬ್ರಿಟಿಷ್ ಸರಕಾರವೇ ಭಾರತದಲ್ಲಿದ್ದ ಎಲ್ಲಾ ಉದ್ದಿಮೆ, ಸಂಪತ್ತನ್ನು ನಾಶ ಮಾಡಲು ಯೋಚಿಸುತ್ತಿತ್ತು. ಇಂತಹ ಸಂದರ್ಭದಲ್ಲಿ ಗಾಂಧೀಜಿ ಸಾಮೂಹಿಕ ಸತ್ಯಾಗ್ರಹ ಶಾಸನಭಂಗ ಚಳುವಳಿಗೆ ಒತ್ತಾಯಿಸಿದರು.

ಚಳುವಳಿಯ ಸ್ವರೂಪವನ್ನು ಒಬ್ಬ ಪತ್ರಕರ್ತ ಹೀಗೆ ವರದಿ ಮಾಡುತ್ತಾನೆ- "ಶಾಲಾ ಕಾಲೇಜು ಸರ್ಕಾರಿ ಕಛೇರಿಗಳು, ಗಿರಣಿಗಳು, ಕಾರ್ಖಾನೆಗಳು, ವಿಮಾನ ನಿಲ್ದಾಣಗಳು, ವಾಣಿಜ್ಯ ಮಳಿಗೆಗಳೂ ಸಾಮೂಹಿಕವಾಗಿ ಬಂದ್ ಆಚರಿಸುವ ಮೂಲಕ ಈ ಚಳುವಳಿ ಆರಂಭವಾಗುವುದು. ಟೆಲಿಗ್ರಾಫ್ ತಂತಿ ಕತ್ತರಿಸುವುದು, ರೈಲ್ವೇ ಹಳಿ ಕೀಳುವುದು, ಪೋಲೀಸ್ ಠಾಣೆಗಳನ್ನು ಆಕ್ರಮಿಸಿಕೊಳ್ಳುವುದು, ಮತ್ತು ಸರಕಾರಿ ಕಛೇರಿಗಳನ್ನು ವಶಪಡಿಸಿಕೊಳ್ಳುವುದು ಮುಂದಿನ ಹೆಜ್ಜೆ. ಚಳುವಳಿಯನ್ನು ಮುಂದುವರಿಸಿಕೊಂಡು ಹೋಗಲು ಒಬ್ಬ ಮುಖಂಡನನ್ನು ಅರೆಸ್ಟ್ ಮಾಡಿದರೆ ಅವರ ಜಾಗದಲ್ಲಿ ಜಿಲ್ಲೆಗೊಬ್ಬ ಸರ್ವಾಧಿಕಾರಿಯನ್ನು ನೇಮಿಸಿಕೊಳ್ಳಬೇಕು."[೩೮]

ಈ ಚಳುವಳಿಯನ್ನು ಹೇಗಾದರೂ ಮಾಡಿ ಹತ್ತಿಕ್ಕಲು ಬ್ರಿಟಿಷ್ ಮಂತ್ರಿಮಂಡಲ ವೈಸ್ರಾಯಿ ಲಿನ್‌ಲಿತ್‌ಗೆ ಸಂಪೂರ್ಣ ಅಧಿಕಾರವನ್ನು ಕೊಟ್ಟಿತು. ಗಾಂಧೀಜಿಯವರ 'ಮಾಡು ಇಲ್ಲವೇ ಮಡಿ' ಪ್ರತಿಜ್ಞೆಯನ್ನು ಎಲ್ಲರೂ ಅಂಗೀಕರಿಸುತ್ತಾರೆ. 'ಮಾಡು ಇಲ್ಲವೇ ಮಡಿ' ಗೊತ್ತುವಳಿಯ ಅಂಗೀಕಾರವಾದ ದಿನವೇ ಗಾಂಧೀಜಿ, ನೆಹರೂ, ಆಜಾದ್ ಇವರನ್ನೊಳಗೊಂಡಂತೆ ರಾಷ್ಟ್ರದ ಪ್ರಮುಖ ಮುಖಂಡರನ್ನು ದಸ್ತಗಿರಿ ಮಾಡಲಾಗುತ್ತದೆ. ಈ ಚಳುವಳಿಯನ್ನು 'ಬಹಿರಂಗ ದಂಗೆ' ಎಂದು ಕರೆಯಲಾಗುತ್ತದೆ. ಯಾವ ವಿಧದಲ್ಲಾದರೂ ಚಳುವಳಿಯನ್ನು ಹತ್ತಿಕ್ಕಲು ಸರಕಾರ ನಿರ್ಧರಿಸುತ್ತದೆ. ಇದ್ದಕ್ಕಿದ್ದ ಹಾಗೆ ಮುಂಬಯಿ ಶಹರದಲ್ಲಿ ಬಹಿರಂಗ ದಂಗೆ ಆರಂಭವಾಗುತ್ತದೆ. ಶಹರದ ನಾನಾ ಬೀದಿಗಳಿಂದ, ನಾನಾ ದಿಕ್ಕುಗಳಿಂದ ಕೈಯಲ್ಲಿ ಬಡಿಗೆ, ಹಾರೆ, ಭರ್ಜಿಗಳನ್ನು ಹಿಡಿದು ನುಗ್ಗಿ ಬರುತ್ತಿದ್ದಾರೆ! ಗವಾಲಿಯಾ ಟ್ಯಾಂಕ್ ಮೈದಾನದತ್ತ ಜನಪ್ರವಾಹ ಹರಿದುಬರುತ್ತಿದೆ. ಇದನ್ನು ಕಂಡು ಮುಂಬಯಿ ಗವರ್ನರ್ ಸ್ಥಳೀಯ ಅಧಿಕಾರಿಗಳಿಗೆ "ಕಂಡಲ್ಲಿ ಗುಂಡಿಟ್ಟು ಕೊಲ್ಲಿ" ಎಂದು ಆಜ್ಞೆ ಮಾಡಿದನು. ಅಹಿಂಸಾ ರೀತಿಯಲ್ಲಿ ಆರಂಭವಾದ ಸತ್ಯಾಗ್ರಹವನ್ನು ಹಿಂಸಾ ರೀತಿಯಿಂದ ಸದೆಬಡಿಯಲು ಬ್ರಿಟಿಷ್ ಸರಕಾರ ಯೋಚಿಸುತ್ತದೆ. "ಸಾವಿರ ಜನ ಸಾಯಲಿ! ಹತ್ತು ಸಾವಿರ ಸಾಯಲಿ! ಹಿಂಜರಿಯ ಬೇಡಿ. ನುಗ್ಗಿರಿ. ದಂಗೆಕೋರರರನ್ನು ಬಗ್ಗು ಬಡಿಯಿರಿ ! ಹೂಂ... ತಡಮಾಡಬೇಡಿ! "[೩೯] ಎಂದು ಆಜ್ಞಾಪಿಸುತ್ತಾನೆ. ಈ ಮಾತುಗಳಿಂದ ಬ್ರಿಟಿಷ್ ಆಳರಸರಿಗೆ ಭಾರತೀಯರ ಪ್ರಾಣ ಎಷ್ಟೊಂದು ನಿಕೃಷ್ಟವಾಗಿತ್ತೆಂಬುದನ್ನು ನಾವು ತಿಳಿದುಕೊಳ್ಳಬಹುದು.

ಮುಂಬಯಿ ಮಹಾ ಶಹರದಲ್ಲಿ ಹೆಣಗಳು ಉರುಳಲಾರಂಬಿಸುತ್ತದೆ. ಚಳುವಳಿಯಲ್ಲಿ ತೊಡಗಿದ ಜನರ ಮೇಲೆ ಗುಂಡು ಹಾರಿಸುತ್ತಾರೆ. ಮೊದಲನೇ ಸುತ್ತಿಗೆ ಎಂಟು, ಎರಡನೇ ಸುತ್ತಿಗೆ ಮತ್ತೆ ಎಂಟು ಹೆಣಗಳು ಉರುಳಿದವು. ಆದರೂ ಚಳುವಳಿಗಾರರು ಹಿಂದಕ್ಕೆ ಸರಿಯಲಿಲ್ಲ. ಇಂತಹ ಹಿಂಸೆಯನ್ನು ಸಹಿಸಿಕೊಂಡು ಜನರು ತಮ್ಮ ಬಲಿದಾನಕ್ಕೆ ಮುಂದಾಗಿರುವುದು ಬ್ರಿಟಿಷ್ ಸರಕಾರದ ಬಗ್ಗೆ ಅವರಿಗಿದ್ದ ಅಸಹನೆ ಹಾಗೂ ಸರಕಾರದ ಸರ್ವಾಧಿಕಾರಿ ಧೋರಣೆಗೆ ಹಿಡಿದ ಕನ್ನಡಿಯಂತಿದೆ. ಜಗತ್ತಿನ ಕಣ್ಣಿನಲ್ಲಿ ಅತ್ಯಂತ ನಾಗರಿಕ ರಾಷ್ಟ್ರವೆನಿಸಿದ ಬ್ರಿಟಿಷ್ ಸರಕಾರವು ಭಾರತೀಯರ ಮೇಲೆ ಮಾಡಿದ ಅತ್ಯಾಚಾರದ ಚಿತ್ರಣವು ಅವರ ಗೋಮುಖವ್ಯಾಘ್ರತನವನ್ನು ಬಯಲುಮಾಡುತ್ತದೆ. ೧೯೪೨ ಆಗಸ್ಟ್ ೮ನೇ ರಾತ್ರಿ ನಾಯಕರ ಬಂಧನವಾದದ್ದೇ ತಡ ಮುಂಬಯಿ ಮಹಾಶಹರವು ಹೊತ್ತಿ ಉರಿಯುವ ಚಿತ್ರಣ, ನುಗ್ಗಿ ಬರುವ ಜನಸಾಗರವನ್ನು ಹತ್ತಿಕ್ಕಲು ಬ್ರಿಟಿಷರು ಅನುಸರಿಸಿದ ಕ್ರೂರ ಮಾರ್ಗವನ್ನು ಆ ಸಂದರ್ಭದಲ್ಲಿಯೇ ರಚಿಸಲಾದ ಹಲವು ಕಾದಂಬರಿಗಳು ಅನಾವರಣಗೊಳಿಸುತ್ತದೆ. ಇಲ್ಲಿ ಕೆಲವು ಲೇಖಕರು ಆ ಚಳುವಳಿಯಯನ್ನು ಸ್ವತಃ ಕಣ್ಣಾರೆ ಕಂಡವರು, ಇನ್ನು ಕೆಲವರು ಆ ಚಳುವಳಿಯಲ್ಲಿ ಭಾಗವಹಿಸಿದವರು.

ಗಾಂಧೀಜಿಯನ್ನೊಳಗೊಂಡ ಹಾಗೆ ನಾಯಕರ ಬಂಧನವಾದ ಸುದ್ದಿ ತಿಳಿದುದೇ ಜನರು ಕಂಗಾಲಾದರು. ಮಾರ್ಗದರ್ಶನ ನೀಡುವ ಮಹಾತ್ಮರನ್ನು ಬಂಧಿಸಿ ಬ್ರಿಟಿಷ್ ಸರಕಾರ ತಪ್ಪು ಮಾಡುತ್ತದೆ. ದಿಕ್ಕು ತೋಚದ ಜನ ಈ ಮುಖಂಡರ ಹೆಸರುಗಳಲ್ಲಿ ಜಯಘೋಷ ಮಾಡುತ್ತಾ ಮೆರೆವಣಿಗೆ ಹೊರಡುತ್ತಾರೆ. ಚಳುವಳಿಯನ್ನು ಹತ್ತಿಕ್ಕಲು ನೆರೆದ ಪೋಲೀಸರಿಗೆ ತಾವೇನು ಮಾಡಬೇಕೆಂಬುದಾಗಿ ತೋಚುವುದಿಲ್ಲ. ಲಾರಿ ಲಾರಿಗಳಲ್ಲಿ ಪೋಲೀಸರು ಬ್ರಿಟಿಷ್ ಸಾರ್ಜೆಂಟರು ಬರುತ್ತಾರೆ. ಒಂದು ಕಡೆಯಿಂದ ಜನರು ಚದುರಿದರೆ ಇನ್ನೊಂದು ಕಡೆಯಿಂದ ಮುನ್ನುಗ್ಗುತ್ತಾರೆ. ಎಲ್ಲಿ ನೋಡಿದರಲ್ಲಿ ಚೀತ್ಕಾರ, ಕೋಲಾಹಲ, ಸಾವಿನ ಕರೆ, ಆವೇಶದ ಘೋಷ! ಮೊದಲೇ ಚಿಕ್ಕ ಬೀದಿಗಳು. ಪೋಲೀಸರು ಅಶ್ರುವಾಯುವನ್ನು ಪ್ರಯೋಗಿಸುತ್ತಿದ್ದರು. ಆದರೆ ಜನರು ಅದಕ್ಕೂ ಬಗ್ಗುತ್ತಿರಲಿಲ್ಲ. ಜನಜಂಗುಳಿಯ ಮಧ್ಯದಲ್ಲಿ ಸಿಕ್ಕಿಬಿದ್ದ ಪೋಲೀಸರು ಏಟು ತಿಂದು ಕೂಡ ಸತ್ತು ಬದುಕಿದರು. ಅಹಿಂಸೆಯಿಂದ ಆರಂಭವಾದ ಚಳುವಳಿ ಮುಂಬಯಿಯಲ್ಲಿ ಹಿಂಸೆಗೆ ತಿರುಗುತ್ತದೆ. ಪೋಲೀಸರ ಕಾರಿಗೆ ಬೆಂಕಿ ಕೊಟ್ಟರು. ಸಾರ್ಜೆಂಟರು ಗುಂಡು ಹಾರಿಸತೊಡಗಿದರು. ಅಷ್ಟರಲ್ಲಿ ಹಿಂದಿನಿಂದ ಹಾರಿಹೋಗಿ ಯಾರೋ ಸಾಜೆಂಟನ ಮೇಲೆ ಧಾಳಿ ನಡೆಸಿದರು. ಅವನನ್ನು ಇರಿದು ನೆಲಕ್ಕೆ ಕೆಡವಿದರು. ಕೈಯಲ್ಲಿನ ಪಿಸ್ತೂಲು ಕಸಿದುಕೊಂಡು ಮಾಯವಾದರು. ಒಮ್ಮೆ ಹಿಂದೆ ಸರಿದಂತೆ ಕಂಡುಬರುತ್ತಿದ್ದ ಜನರು ಮತ್ತೆ ಮುಂದೆ ಬರುತ್ತಿದ್ದರು. ಜನರು ಪೋಲೀಸರನ್ನು ಬೆನ್ನಟ್ಟುತ್ತಿದ್ದರೋ ಪೋಲೀಸರೇ ಜನರನ್ನು ಬೆನ್ನಟ್ಟುತ್ತಿದ್ದರೋ ಎಂಬುದು ತಿಳಿಯುತ್ತಿರಲಿಲ್ಲ. ಮಹಡಿಯ ಮೇಲಿಂದ ಯಾರೋ ಅರೆಯುವ ಕಲ್ಲನ್ನು ಸಾರ್ಜೆಂಟನ ಮೇಲೆ ಎಸೆದರು. ಅವನ ತಲೆಯೊಡೆದು ಚೂರು ಚೂರಾಗಿ ಹೋಗಿತ್ತು. ಹೀಗೆ ಗಾಂಧಿಯ ಅಹಿಂಸೆಯನ್ನು ೧೯೪೨ರ ಆರಂಭದಲ್ಲೇ ಜನರು ಕೈ ಬಿಡಲಾರಂಭಿಸಿದರು.

ಎಲ್ಲೆಂದರಲ್ಲಿ, ಕಲ್ಲು, ಸೋಡಾಬಾಟಲು, ಇಟ್ಟಿಗೆಗಳ ತೂರಾಟ, ಬಸ್ಸುಗಳಿಗೆ ಬೆಂಕಿ ಕೊಡುವುದು ಅಂದು ಮುಂಬಯಿಯಲ್ಲಿ ನಡೆಯುತ್ತಿತ್ತು. ಪೊಲೀಸರು ಜನರನ್ನು ಒಡೆಯುವ ತೀವ್ರತೆಗೆ ಕೈಯಲ್ಲಿರುವ ಬಿದಿರು ಬಡಿಗೆಯು ತುಂಡಾಗುತ್ತಿತ್ತು. ಲಾಠಿಯ ಏಟುಗಳು ಜನರ ತಲೆಯ ಮೇಲೆ ಬೀಳುತ್ತಿದ್ದವು. ಎಲ್ಲೆಂದರಲ್ಲಿ ನೋವಿನ ಚೀತ್ಕಾರ, ಆವೇಶದ ಕೂಗು ಕೇಳಿ ಬರುತ್ತಿತ್ತು. ಅಂದು ಮುಂಬಯಿಯಲ್ಲಿದ್ದ 'ಮೂರಾಬಟ್ಟೆ' ಕಾದಂಬರಿಯ ನಾಯಕ ಶಾಮಣ್ಣ ಹತ್ತು ಹೆಜ್ಜೆಗೊಂದಾದರೂ ಹೆಣವನ್ನು ಕಂಡಿರಬೇಕು ಎನ್ನುತ್ತಾನೆ. ಮಿಲಿಟರಿ ವಾಹನಗಳ ಚಕ್ರಗಳಿಗೆ ಸಿಲುಕಿ ಅಸಂಖ್ಯಾತ ಜನರು ಅಸುನೀಗಿದ್ದರು. ಅಂದರೆ ೧೯೪೨ ಆಗಸ್ಟ್ ೯, ಒಂದೇ ದಿನದಲ್ಲಿ ಮುಂಬಯಿ ಶಹರ ಒಂದರಲ್ಲಿಯೇ ಹಲವಾರು ಜನಸಾಮಾನ್ಯರ ಹೆಣಗಳು ಉರುಳಿರುವ ಚಿತ್ರಣವನ್ನು 'ಮೂರಾಬಟ್ಟೆ' ಕಾದಂಬರಿ ನೀಡುತ್ತದೆ.

ಹಳ್ಳಿಗಳಿಂದ ಬಂದು ಮುಂಬಯಿ ಗಿರಣಿಯಲ್ಲಿ ಪಾಳಿಯಲ್ಲಿ ಕೆಲಸಮಾಡುವ, ಗುಬ್ಬಚ್ಚಿಗೂಡಿನಂತಹ ಮನೆಯಲ್ಲಿ ಬದುಕುತ್ತಿರುವವರು ಕೂಡ ದೇಶಕ್ಕಾಗಿ ತಮ್ಮಿಂದ ಸಾಧ್ಯವಾದಷ್ಟು ಸೇವೆಯನ್ನು ಸಲ್ಲಿಸುತ್ತಾರೆ. ಕಾಂಗ್ರೆಸ್ ಕಾಲ ಕಾಲಕ್ಕೆ ಸ್ವರಾಜ್ಯಕ್ಕೋಸ್ಕರ ಮಾಡುವ ಹೋರಾಟದಲ್ಲಿ ಭಾಗವಹಿಸುತ್ತಾರೆ. ಆದರೆ ಕಾಲೇಜಿನಲಿ ಓದಿ ವಿದ್ಯಾಭ್ಯಾಸವನ್ನು ಪಡೆದು ಬ್ರಿಟಿಷ್ ಸರಕಾರದ ನೌಕರಿಗೆ ಕೈಯೊಡ್ಡಿದವರು ದೇಶಸೇವೆಯ ಕುರಿತು ನಿರುತ್ಸಾಹದ ಮಾತುಗಳನ್ನಾಡುತ್ತಾರೆ. ಆದರೆ ಸ್ವಾತಂತ್ರ್ಯ ದೊರೆಯುವ ಮೊದಲು ಹಾಗೂ ದೊರೆತ ನಂತರ ಕೂಡಾ ಸುಖವಾಗಿದ್ದವರು ಮಾತ್ರ ತಮ್ಮ ಸ್ವಾರ್ಥವನ್ನು ನೋಡಿಕೊಂಡ ಇಂತಹ ಶ್ರೀಮಂತ ವಿದ್ಯಾವಂತ ಜನರೇ ಆಗಿದ್ದರು. ದೇಶದ ಅಸಹಕಾರ ಚಳುವಳಿ ವಿಫಲವಾಗುವುದಕ್ಕೆ ಬುದ್ಧಿವಂತರಾದ ಇಂತಹ ಬುದ್ಧಿಹೀನ ತರುಣರೇ ಕಾರಣವೆಂದು ಶಾಮಣ್ಣ ವಿಶ್ಲೇಷಿಸುತ್ತಾನೆ. ಒಬ್ಬ ಒಪ್ಪಿ ಮುಂದೆ ಬಂದರೆ ಒಂಭತ್ತು ಮಂದಿ ಹಿಂದೆ ನಿಂತು ಮೂದಲಿಸುವವರೇ ಆಗಿದ್ದಾರೆ. ದೇಶದ ಬಹುತೇಕ ಜನರು ಕಾಯಾ, ವಾಚಾ, ಮನಸಾ ಸತ್ಯಾಗ್ರಹದ ಚಳುವಳಿಯಲ್ಲಿ ಭಾಗವಹಿಸಿದ್ದರೆ ಅದು ವಿಫಲವಾಗುತ್ತಿರಲಿಲ್ಲ. ಗಾಂಧೀಜಿಯವರ ಹೆಸರು ಉಚ್ಚಾರ ಮಾಡುವ ಯೋಗ್ಯತೆಯಿಲ್ಲದವರು ಕೂಡ "ಗಾಂಧಿಯವರ ಮ್ಯಾಲೆ ದಿನದೊಳಗಿಂದ ಹತ್ತು ಸಾರೆಯಾದರೂ ಟೀಕೆ ಮಾಡುತಾರ. ಮುದುಕನ ತಲೀ ತಿರಿಗೇದ ಅಂತಾರ. ಅಂದಮ್ಯಾಲೆ ನೀನೆ ನೊಡಲ್ಲ, ಎಷ್ಟು ಬುದ್ಧಿವಂತರಾಗ್ಯಾರ...."[೦] ಎಂದು ಶಾಮಣ್ಣನು ರಾಮಣ್ಣನನ್ನು ತಿವಿಯುತ್ತಾನೆ.

ನಾಗಪುರದಲ್ಲಿ ಕೂಡಾ ಇದೇ ಘಟನೆ ಪನರಾವರ್ತನೆಯಾಗುತ್ತದೆ. ಅಲ್ಲಿಯೂ ಒಂದೇ ದಿನದಲ್ಲಿ ೨೪ ಹೆಣಗಳು ಉರುಳುತ್ತವೆ. ದೆಹಲಿಯಲ್ಲಿ ವೈಸ್ರಾಯರ ಆಜ್ಞೆಯಂತೆ ಒಂದೇ ದಿನದಲ್ಲಿ ಗೋಲಿಬಾರಿಗೆ ೧೪ ಹೆಣಗಳು ಉರುಳಿತು. ಈ ಸುದ್ದಿ ಇಡೀ ದೇಶದಾದ್ಯಂತ ತಲುಪುತ್ತದೆ. ಕಾಶಿ ಹಿಂದೂ ವಿಶ್ವವಿದ್ಯಾಲಯದ ರಸಾಯನಶಾಸ್ತ್ರದ ಪ್ರಾಧ್ಯಾಪಕ ರಾಧೇಶಾಮ್ ಶರ್ಮ ಅಲ್ಲಿ ಚಳುವಳಿಯನ್ನು ಆರಂಭಿಸುತ್ತಾರೆ. ಕೊನೆಗೆ ಅಲ್ಲಿಂದ ತಪ್ಪಿಸಿ ಗ್ವಾಲಿಯಾರಿಗೆ ನುಸುಳಿ ಅಲ್ಲಿ ಗುಪ್ತವಾಗಿ ಬಾಂಬುಗಳನ್ನು ತಯಾರಿಸಿ ಭೂಗತರಾಗಿ ಚಳವಳಿ ನಡೆಸುತ್ತಿದ್ದವರಿಗೆ ಬಾಂಬುಗಳನ್ನು ಒದಗಿಸಲು ತೊಡಗುತ್ತಾರೆ.

ಕಾಶಿಯಲ್ಲಿ ವಿದ್ಯಾರ್ಥಿಗಳು ನಡೆಸಿದ ಪ್ರತಿಭಟನೆ ಮದ್ರಾಸಿನ ಮದನಪಲ್ಲಿ ಥಿಯಾಸಫಿಕಲ್ ಕಾಲೇಜು, ಅನಂತಪುರ, ದತ್ತಮಂಡಲದ ಕಾಲೇಜಿಗೂ ತಲುಪಿತು. ಅವರೂ ಕಾಲೇಜನ್ನು ಬಹಿಷ್ಕರಿಸಲು ನಿರ್ಧರಿಸಿದರು. ಹೀಗೆ ವಿದ್ಯಾರ್ಥಿ ಮುಷ್ಕರ ಕೂಡ ಆರಂಭವಾಗುತ್ತದೆ. ಕಾಲೇಜು ಆವರಣದಲ್ಲಿ ಪಿಕೆಟಿಂಗ್ ನಡೆಸುತ್ತಿದ್ದ ವಿದ್ಯಾರ್ಥಿಗಳ ತಲೆ ಒಡೆದು ಮೂಲೆ ಮುರಿಯುತ್ತಾರೆ. 'ಬೇಡಿ ಕಳಚಿತು ದೇಶ ಒಡೆಯಿತು' ಕಾದಂಬರಿಯ ಲೇಖಕರಾದ ಕೋಚೆಯನ್ನೊಳಗೊಂಡಂತೆ ಕೊಟ್ರೆಗೌಡ, ಮಲ್ಲಯ್ಯ, ಗಂಗಿರೆಡ್ಡಿ, ಮುಂತಾದ ಎಂಟು ವಿದ್ಯಾರ್ಥಿಗಳನ್ನು ಕಾಲೇಜು ಸುಟ್ಟ ಮತ್ತು ಚಕ್ರವರ್ತಿ ಸರಕಾರವನ್ನು ಬುಡಮೇಲು ಮಾಡುವ ಆರೋಪದ ಮೇಲೆ ಬಂಧಿಸುತ್ತಾರೆ.

೧೯೪೨ರ ಚಳುವಳಿಯು ಕರ್ನಾಟಕದಲ್ಲಿ ವ್ಯಾಪಕವಾಗಿ ಹಬ್ಬುತ್ತದೆ. ರೈಲ್ವೇ ಸ್ಟೇಷನ್ ಸುಡುವುದು, ಪೋಸ್ಟಾಫೀಸು ಧ್ವಂಸ ಇತ್ಯಾದಿ ಕೆಲಸಗಳು ಕರ್ನಾಟಕದಲ್ಲಿಯೇ ವ್ಯಾಪಕವಾಗಿ ನಡೆಯುತ್ತದೆ. 'ಮಾಡು ಇಲ್ಲವೇ ಮಡಿ' ಜಯಘೋಷದ ಬದಲು ಜಯಪ್ರಕಾಶ ನಾರಾಯಣರಂತಹ ಕೆಲವು ಮಂದಿ 'ಮಾಡು ಇಲ್ಲವೆ ಮಡಿಸು' (ಕೊಲ್ಲು) ಎಂಬ ರಣಘೋಷವನ್ನು ಅನುಸರಿಸಲು ಆರಂಭಿಸಿದರು. ರೇಡಿಯೋ ಸುದ್ದಿಯು – ಸತಾರ, ಮಿಡ್ನಾಪುರ, ಪೂನಾ, ಬರೋಡ, ಗುಜರಾತ್, ಮತ್ತು ಕರ್ನಾಟಕದಲ್ಲಿ ಕಾಂಗ್ರೆಸ್ ಸೋಷಿಯಲಿಸ್ಟ್ ಕಾರ್ಯಕರ್ತರು ವಿವಿಧೆಡೆ ಬಾಂಬುಗಳನ್ನು ತಯಾರಿಸುತ್ತಿದ್ದಾರೆ. ಈ ಬಾಂಬುಗಳನ್ನು ರೈಲ್ವೇ ಡ್ರೈವರುಗಳೇ ಸ್ಫೋಟಿಸಬೇಕಾದ ಕಡೆ ರವಾನಿಸುತ್ತಿದ್ದಾರೆ. ಸರಕಾರಕ್ಕೆ ಸಾಧ್ಯವಾದರೆ ಬಾಂಬು ಕಾರ್ಖಾನೆಗಳನ್ನು ಪತ್ತೆ ಹಚ್ಚಲಿಯೆಂದು ಸರಕಾರಕ್ಕೆ ಬಹಿರಂಗ ಸವಾಲನ್ನು ಹಾಕುತ್ತಾರೆ. ಹೀಗೆ 'ಕರೊ ಯಾ ಮಾರೋ' ಎಂಬ ತತ್ವವು ಕೂಡಾ ೧೯೪೨ರ ಚಳುವಳಿಯಲ್ಲಿ ಅನುಷ್ಠಾನಕ್ಕೆ ಬರುತ್ತದೆ. ಗಾಂಧೀಜಿ ಸೆರೆಮನೆಯಲ್ಲಿದ್ದ ಕಾರಣ ಜನರು ತಮಗೆ ತಿಳಿದ ಹಾಗೆ ಈ ಚಳುವಳಿಯಲ್ಲಿ ಭಾಗವಹಿಸುತ್ತಾರೆ.

ಚಳುವಳಿಗೆ ಕರೆಕೊಟ್ಟ ಮುಖಂಡರೆಲ್ಲರೂ ಸೆರೆಮನೆಯ ರಕ್ಷಣೆಯಲ್ಲಿ ಹಾಯಾಗಿದ್ದರು. ಆದರೆ ಜನಸಾಮಾನ್ಯರೆಲ್ಲರೂ ಪೊಲೀಸರ, ಸೈನಿಕರ ಗುಂಡೇಟಿಗೆ ಬಲಿಯಾಗುತ್ತಿದ್ದರು. ಮುಂದೆ ಇತಿಹಾಸದ ಪುಟದಲ್ಲಿ ರಾರಾಜಿಸಿದವರು ಕೆಲವೇ ಕೆಲವು ಮಂದಿ ಮುಖಂಡರು ಮಾತ್ರ, ಆದರೆ ಲಕ್ಷಾಂತರ ಜನರು ತಮ್ಮ ಪ್ರಾಣವನ್ನು ಭಾರತಮಾತೆಯ ಬಿಡುಗಡೆಗೋಸ್ಕರ ಸಮರ್ಪಿಸಿದರು.

'ಮೆರವಣಿಗೆ' ಕಾದಂಬರಿಯಲ್ಲಿ ೧೯೪೨ಲ್ಲಿ ಮುಂಬಯಿಯಲ್ಲಿ ನಡೆದ ಚಳುವಳಿ ಹಾಗೂ ಪೊಲೀಸರ ಹಾಗೂ ಸರಕಾರದ ಅಟ್ಟಹಾಸದ ಚಿತ್ರಣವನ್ನು ನಾವು ಕಾಣುತ್ತೇವೆ. ಸರಕಾರ ಚಳುವಳಿಯ ಮುಖಂಡರನ್ನು ದಸ್ತಗಿರಿ ಮಾಡಿದುದರಿಂದ ಮುಂದೆ ನಡೆದ ಅನಾಹುತಕ್ಕೆ ಸರಕಾರವೆ ಹೊಣೆಯಾಗುತ್ತದೆ. ಅಂದು ಮುಂಬಯಿಗೆ ಯಾವ ಕಾರಣಕ್ಕೆ ಹೋದರೂ ಜನರನ್ನು ದಸ್ತಗಿರಿ ಮಾಡುತ್ತಿದ್ದರು. ಮುಂಬಯಿಗೆ ಬಂದಿದ್ದವರೆಂದರೆ ಸಾಕು. ಅವರು ವ್ಯಾಪಾರಕ್ಕೆ ಹೋಗಿರಲಿ, ಎ.ಐ.ಸಿ.ಸಿ. ಸಭೆ ನೋಡಲು ಹೋಗಿರಲಿ, ಸುಮ್ಮನೆ ದೇಶಸಂಚಾರಕ್ಕೆ ಹೋಗಿರಲಿ; ಅವರನ್ನೆಲ್ಲಾ ಸರಕಾರದವರು ತಂದು ಸೆರೆಮನೆಯಲ್ಲಿ ತುಂಬಿದರು. ಅದೇ ಸಂದರ್ಭದಲ್ಲಿ ಈ

ಕಾದಂಬರಿಯ ನಾಯಕನಾದ ಸುದರ್ಶನ ಹಾಗೂ ಅವನ ಸ್ನೇಹಿತ ವಾಸುವಿನ ದಸ್ತಗಿರಿಯಾಗುತ್ತದೆ. ಪೊಲೀಸ್ ಅಧಿಕಾರಿಗಳ ದರ್ಪವಂತೂ ಹೇಳತೀರದು. ನಾವು ನಮ್ಮ ಜನರನ್ನು ತುಳಿಯುತ್ತಿದ್ದೇವೆ ಎಂಬ ಕಲ್ಪನೆಯೇ ಅವರಿಗೆ ಇದ್ದಂತಿರಲಿಲ್ಲ. ಪ್ರಮೋಶನ್ ಪಡೆದುಕೊಳ್ಳುವುದಕ್ಕೆ ಅವರ ದರ್ಪ ಅಹಂಕಾರಗಳೇ ಮಾನದಂಡವಾಗಿದ್ದುವು.

ಮುಂಬಯಿಯಿಂದ ಆರಂಭವಾದ ಈ ಚಳುವಳಿ ಹಳ್ಳಿ ಹಳ್ಳಿಗಳಿಗೂ ಹಬ್ಬುತ್ತದೆ. ಪ್ರತಿಯೊಂದು ಹಳ್ಳಿಗಳಲ್ಲಿ ಕೂಡಾ ಸ್ವಯಂಸೇವಕರ 'ಸೇವಾದಳ'ಗಳು ಆರಂಭವಾಗುತ್ತದೆ. ೧೯೪೨ರ ವೇಳೆಗೆ ಹಳ್ಳಿಯ ಜನರ ದಾಸ್ಯಮನೋಭಾವ ಸಂಪೂರ್ಣವಾಗಿ ಹೊರಟುಹೋಗಿತ್ತು. ನಮಗೆ ಬೇಕಾಗಿದ್ದು 'ಪೂರ್ಣ ಸ್ವರಾಜ್ಯ', ಬ್ರಿಟಿಷರ ಹಂಗು ಹಿಡಿತಕ್ಕೆ ಸಿಗದ ಬಾಳುವೆ. ದೇಶಕ್ಕೆ ಸ್ವಾತಂತ್ರ್ಯ ಬೇಕೆಂಬ ಹಂಬಲ ಕೇವಲ ರಾಜಕಾರಣಿಗಳದ್ದು ಮಾತ್ರ ಆಗಿರದೆ ರೈತರು, ಅಧಿಕಾರಿಗಳು, ವರ್ತಕರು, ಕವಿಗಳು, ಕಲಾವಿದರು, ಎಲ್ಲರ ಹೃದಯದಲ್ಲಿ ಈ ಬಯಕೆ ಪ್ರಜ್ವಲಿಸತೊಡಗಿತು. ಆದರೆ ಜನರಲ್ಲಾದ ಈ ಬದಲಾವಣೆ ಬ್ರಿಟಿಷ್ ಆಳರಸರ ಗಮನಕ್ಕೆ ಬಂದಿರಲಿಲ್ಲ. ಚಳುವಳಿಯ ಮುಖಂಡರನ್ನು ಬಂಧಿಸಿದರೆ ಚಳುವಳಿ ತಣ್ಣಗಾಗುತ್ತದೆಂದು ಅವರು ಭಾವಿಸಿದ ಹಾಗಿತ್ತು. ಆದರೆ ರಾಷ್ಟ್ರ ನಾಯಕರ ಬಂಧನವು ದೇಶಾದ್ಯಂತ ಬ್ರಿಟಿಷರ ಬಗ್ಗೆ ಇದ್ದ ಅಲ್ಪ ಸ್ವಲ್ಪ ವಿಶ್ವಾಸ, ಗೌರವವನ್ನು ನಾಶಮಾಡಿತು.

ಆಗಸ್ಟ್ ೯ನೆಯ ತಾರೀಖು ದೇಶದಲ್ಲೆಲ್ಲಾ ಹರತಾಳವನ್ನಾಚರಿಸಲ್ಪಟ್ಟಿತು. ವಿದ್ಯಾರ್ಥಿಗಳು, ಕೂಲಿಕಾರರು, ರೈತರು ಎಲ್ಲರೂ ಮುಷ್ಕರ ಹಿಡಿದರು. ಸಾಮ್ರಾಜ್ಯಶಾಹಿಯ ಅಧಿಕಾರಿಗಳು ಸಂಯಮತೊರೆದು ಮನಸ್ವಿ ವರ್ತಿಸಸತೊಡಗಿದರು. ನಿರಪರಾಧಿಗಳ ಹತ್ಯಾಕಾಂಡವಾಯಿತು. ರಕ್ತದ ಹೊಳೆ ಹರಿಯಿತು.[೪೧] ಕೆಲವು ಕಡೆ ಸೈನ್ಯದ ಸಿಖ್ ಹಾಗೂ ರಜಪೂತ ತುಕಡಿಗಳು ಗುಂಡು ಹಾರಿಸಲು ನಿರಾಕರಿಸಿದರು. ಅವರಿಗೆ ಕೋರ್ಟ್ ಮಾರ್ಷಲ್ ಆದವು. ೧೯೪೨ರ ಸಮಯದಲ್ಲಿಯೇ ಕೆಲವೊಂದು ಬ್ರಿಟಿಷ್ ಸೇವೆಯಲ್ಲಿದ್ದ ಭಾರತೀಯ ಸೈನಿಕರಲ್ಲಿ ಅಸಹಕಾರ ಹಾಗೂ ದೇಶಪ್ರೇಮ ಚಿಗುರುತ್ತಿರುವ ಲಕ್ಷಣವನ್ನು ನಾವು ಕಾಣುತ್ತೇವೆ. ಇದು ೧೯೪೬ರ ನೌಕಾದಂಗೆಯ ವೇಳೆಗೆ ಪ್ರಜ್ವಲಿಸಲಾರಂಭಿಸಿತು.

ಗಾಂಧೀಜಿಯವರು 'ಮಾಡಬೇಕು, ಇಲ್ಲವೇ ಮಡಿಯಬೇಕು... ಬ್ರಿಟಿಷ್ ಸರಕಾರದ ಅಧಿಕಾರವನ್ನು ಧಿಕ್ಕರಿಸಿ ಸ್ವಾತಂತ್ರ್ಯ ಸಾರಬೇಕು.' ಎಂಬ ಘೋಷಣೆ ಹಿಂದುಸ್ಥಾನದ ಕೋಟ್ಯಾಂತರ ಜನತೆಯನ್ನು ಎಚ್ಚರಿಸಿತು ನಿಜ. ಆದರೆ ಜನರು ಸರಕಾರದ ವಿರುದ್ಧ ಏನು ಮಾಡಬೇಕು ಎಂಬುದರ ಸ್ಪಷ್ಟತೆಯಿರಲಿಲ್ಲ. 'ಹೆಜ್ಜೆ' ಕಾದಂಬರಿಯ ಪ್ರಮುಖ ಪಾತ್ರವಾದ ಸಾವಿತ್ರಿಯ ಮಾತಿನಲ್ಲಿ ಹೇಳುವುದಾದರೆ "ಇದೊಂದು ಸರಿಯಾದ ವ್ಯವಸ್ಥೆ ಇರದ ಹೋರಾಟ."[೪೨] ಜನರು 'ಮಾಡು ಇಲ್ಲವೆ ಮಡಿ' ಎಂಬುದನ್ನು ತಮ್ಮದೇ ರೀತಿಯಲ್ಲಿ ಅರ್ಥ ಮಾಡಿಕೊಂಡು ಹೋರಾಟಕ್ಕಿಳಿದರು. ಕಟ್ಟೀಮನಿಯವರ 'ಮಾಡಿ ಮಡಿದವರು' ಕಾದಂಬರಿಯಲ್ಲಿ ಶೇಖರಪ್ಪ–"ಎಲ್ಲರೂ ಮಾಡಬೇಕು, ಇಲ್ಲಾ ಮಡೀಬೆಕು' ಎಂಬುದಾಗಿ ಬಾಪೂಜಿ ಅಪ್ಪಣೆ ಕೊಟ್ಟಿದ್ದಾರೆ. ಅಷ್ಟು ಸಾಕಲ್ಲ ನಮಗ. ಅವರ

ಅಪ್ಪಣೆಯಂತೆ ನಾವೆಲ್ಲ ನಮಗೆ ತಿಳಿದ ರೀತಿ ಸರಕಾರದ ವಿರುದ್ಧ ಯುದ್ಧ ಹೂಡಬೇಕು".[೪೩] ಶೇಖರಪ್ಪನ ಈ ಮಾತಿನಲ್ಲಿ ಸರಕಾರದ ವಿರುದ್ಧ ಯಾವ ರೀತಿಯ ಯುದ್ಧ ಹೂಡಬೇಕು ಎಂಬ ಸ್ಪಷ್ಟತೆ ಜನರಲ್ಲಿ ಇರಲಿಲ್ಲವೆಂಬುದು ತಿಳಿಯುತ್ತದೆ. ಅಲ್ಲದೆ ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ಜೈಲಿನಿಂದ ಹೊರಗಿದ್ದ ಸ್ಥಳೀಯ ಕಾಂಗ್ರೆಸ್ ಮುಖಂಡರಿಗೆ ಅಷ್ಟೊಂದು ಹುರುಪು ಇದ್ದ ಹಾಗೆ ಕಾಣುವುದಿಲ್ಲ. ಯಾಕೆಂದರೆ ಅವರ್‍ಯಾರೂ ಜನರಿಗೆ ಸರಿಯಾದ ರೀತಿಯಲ್ಲಿ ಮಾರ್ಗದರ್ಶನ ಮಾಡಿದ ನಿದರ್ಶನಗಳು ದೊರಕುವುದಿಲ್ಲ. ಈ ಚಳುವಳಿಯಲ್ಲಿ ಭಾಗವಹಿಸದ ಮುಖಂಡರ ಬಗ್ಗೆ ಯುವಜನತೆಗೆ ಅಸಮಧನವೂ ಇತ್ತು. ಹಾಗೆ ನೋಡಿದರೆ ಕಾಂಗ್ರೆಸ್ ಮುಖಂಡರೆಂದು ಹಣೆಪಟ್ಟಿ ಕಟ್ಟಿಕೊಂಡ ಜನರಿಗಿಂತ ಹಳ್ಳಿಯ ಸಾಮಾನ್ಯ ಜನ ಹಾಗೂ ವಿದ್ಯಾರ್ಥಿಗಳೇ ಈ ಚಳುವಳಿಯಲ್ಲಿ ಹೆಚ್ಚಾಗಿ ಭಾಗವಹಿಸಿದ್ದರು ಅವರ ಕುರಿತಾಗಿ 'ಮಾಡಿ ಮಡಿದವರು' ಕಾದಂಬರಿಯಲ್ಲಿ ಶೇಖರಪ್ಪ – "ಅವರೇನು ಮಾಡುವರು ಅನ್ನೂದನ್ನ ತಿಳಿದುಕೊಳ್ಳೋದು ಬಹಳ ಸುಲಭ. ೧೯೨೧ರಿಂದ ಇಷ್ಟು ವರ್ಷಗಳ ಕಾಲ ಅವರು ಏನು ಮಾಡಿದರೋ ಅದನ್ನೇ ಈಗಲೂ ಮಾಡುವರು. ಸತ್ಯಾಗ್ರಹ ಮಾಡಿ, ಪಿಕೆಟಿಂಗ್ ಮಾಡಿ ಜೇಲಿಗೆ ಹೋಗಿ ಅಲ್ಲಿ ಎರಡು ಮೂರು ವರ್ಷ ಕಳೆದು, ಹೊರಗೆ ಬಂದು ಮತ್ತೆ ಸತ್ಯಾಗ್ರಹ ಮಾಡಿ, ಮತ್ತೆ ಜೇಲಿಗೆ ಹೋಗಿ ಅವರಿಗೆಲ್ಲ ಅದೇ ರೂಢಿಯಾಗಿ ಬಿಟ್ಟಿದೆ. ಒಂದು ವಿಷಯ ಮೈಗೆ ಅಂಟಿಕೊಂಡಿತೆಂದರೆ ಅದನ್ನು ಬಿಟ್ಟು ಬೇರೆ ಮಾಡುವುದು ಒಗ್ಗುವುದಿಲ್ಲ. ಅದಕ್ಕೆ ಈ ಮುಖಂಡರಿಗೆ ಪೀಕಲಾಟ ಬಂದಿರೂದು. ಜೇಲಿಗೆ ಹೋಗಬಾರದು ಅಂತ ಮುದುಕನ ಅಪ್ಪಣೆ, ಹೋಗದಿದ್ದರೆ ಬೇರೇನೂ ಮಾಡುವ ತಾಕತ್ತಿಲ್ಲ. ಹೀಗಾಗಿ ಅವರು ಉಭಯ ಸಂಕಟದೊಳಗೆ ಸಿಕ್ಕಿಬಿದ್ದಿದ್ದಾರೆ. ಅದಕ್ಕೆ ಅಜ್ಞಾತವಾಸದ ಸೋಗು ಹಾಕಿ ಮುಂಬಯಿ, ಪುಣೆಗಳಂಥ ಪಟ್ಟಣಗಳಲ್ಲಿ– ಅದೂ ದೊಡ್ಡ ಸರಕಾರಿ ಅಧಿಕಾರಿಗಳ ಮನೆಯಲ್ಲಿ ಆರಾಮವಾಗಿ ಊಟ ಮಾಡಿಕೊಂಡು ಕಾಲಕಳೆಯಬೇಕಂತ ಮಾಡಿದ್ದಾರೆ."[೪೪] ಶೇಖರಪ್ಪನ ಈ ಮಾತು ೧೯೪೨ರ ಚಳುವಳಿಯ ಸಂದರ್ಭದಲ್ಲಿ ಕಾಂಗ್ರೆಸ್ ಮುಖಂಡರ ವರ್ತನೆಗೆ ಹಿಡಿದ ಕನ್ನಡಿಯಂತಿದೆ. ಹಿರಿಯ ಮುಖಂಡರ ವರ್ತನೆಯ ಕುರಿತು ಕಿರಿಯ ಚಳುವಳಿಗಾರರಿಗಿದ್ದ ಅಸಮಧಾನವನ್ನು ಕೂಡ ಈ ಮಾತು ವ್ಯಕ್ತಪಡಿಸುತ್ತದೆ. ತೀವ್ರವಾದ ಚಳುವಳಿ ನಡೆಯುವಾಗ ಯುವ ಜನತೆಗೆ ಯಾವ ರೀತಿಯಿಂದಲೂ ಮಾರ್ಗದರ್ಶನ ಮಾಡದ ಹಿರಿಯ ಮುಖಂಡರು ಕೊನೆಗೆ ಸಭೆ ಸೇರಿ ಸ್ವಯಂಸೇವಕರನ್ನು ಟೀಕಿಸುತ್ತಾರೆ. ತಾವೇನೂ ಮಾಡದೆ ಕಿರಿಯ ಸ್ವಯಂಸೇವಕರನ್ನು ಟೀಕಿಸುವುದನ್ನು ಸಹಿಸದ ಶೇಖರ ಬಹಳ ನೇರವಾಗಿಯೇ ಅವರ ವರ್ತನೆಯನ್ನು ಖಂಡಿಸುತ್ತಾನೆ– "ಕಾಂಗ್ರೆಸ್ ಅಧಿಕಾರಿಗಳು ಅಂತ ಈಗ ಮೂಗು ಮ್ಯಾಲ ಮಾಡಿಕೊಂಡು ಬಂದಿರುವ ನೀವೆಲ್ಲಾ ಕಾಂಗ್ರೆಸ್ಸಿನ ಮಾನ ಉಳಿಯುವುದಕ್ಕಾದರೂ ಸ್ವಲ್ಪಾದರೂ ಕೆಲಸ ಮಾಡಿದ್ದೀರ? ಇಷ್ಟರತನಕ ಆಗಸ್ಟ್ ಒಂಭತ್ತರಿಂದ ಇದುವರೆಗೆ ಏನು ಮಾಡೀರಿ ಹೇಳ್ರಿ, ಆವೊತ್ತು ಮಂಬಯಿಯೊಳಗೆ ಸಭಾ ಕೂಡಿದಾಗ ನೀವ್ಯಾರೂ ಬಾಯಿ ಬಿಚ್ಚಲಿಲ್ಲ. ಕೈಯೊಳಗೆ ಬಳೀ ತೊಟ್ಟವರಾಂಗ ಸುಮ್ಮಗ ಕೂತಿದೀರಿ. ನಿಮ್ಮನ್ನ ನೋಡಿ ನಾವೂ ಸುಮ್ಮನ ಕೂತಿದ್ದರ ಕಾಂಗ್ರೆಸ್ನ ಮರ್ಯಾದೆಯೆಲ್ಲಾ ಹಾಳಾಗಿ ಹೋಗುತ್ತಿತ್ತು. ಕಾಂಗ್ರೆಸ್ಸಿನ ಹೆಸರು ಹಳ್ಳ ಕೂಡಿ ಹೋಗುತ್ತಿತ್ತು. ನಾವು ಹಳ್ಳಿಯ ಮಂದಿ ಸುಮ್ಮನೆ ಕೂಡದೆ ನಮಗೆ ತಿಳಿದ ಹಾಂಗ ಕೆಲಸ ಮಾಡಿದ್ದೀವಿ. ಈಗ

ಬಂದಿರೇನು ನೀವು ಕಾಂಗ್ರೆಸ್ ಅಧಿಕಾರಿಗಳು ನಮ್ಮ ತಲೆಯ ಮೇಲೆ ಮೆಣಸು ಅರೆಯುವುದಕ್ಕೆ."[೪೫] ಶೇಖರನ ಈ ಮಾತುಗಳನ್ನು ಗಮನಿಸಿದರೆ ಹಿರಿಯ ಮುಖಂಡರ ಬಗ್ಗೆ ಕಿರಿಯ ಸ್ವಯಂಸೇವಕರಿಗಿದ್ದ ಅಸಮಧಾನವು ಸ್ಪಷ್ಟವಾಗಿ ಗೊತ್ತಾಗುತ್ತದೆ.

ಹಿಂಸೆ, ಅಹಿಂಸೆ ಎಂಬ ವಾದ ವಿವಾದಗಳಿಗೆ ಆಸ್ಪದ ಕೊಡದೆ ಯುವಕರು ಸರಕಾರದ ಯಂತ್ರಗಳನ್ನು ಬಗ್ಗು ಬಡಿಯಲು ಅಗತ್ಯಬಿದ್ದರೆ ಪಿಸ್ತೂಲು ಬಂದೂಕುಗಳನ್ನು ಬಳಸಲು ಆರಂಭಿಸಿದರು. ೧೯೪೨ರಲ್ಲಿ ಶಾಂತರೀತಿಯಲ್ಲಿ ಮೆರವಣಿಗೆ ಹೋಗುತ್ತಿದ್ದ ೭ ಮಂದಿಗೆ ಗುಂಡು ಹಾರಿಸುತ್ತಾರೆ. ಕರ್ನಾಟಕದ ಬೈಲಹೊಂಗಲದಲ್ಲಿ ನಡೆದ ಈ ಘಟನೆ ಕರ್ನಾಟಕದ ಮೊದಲನೆ ಬಲಿ.[೪೬] ಕರ್ನಾಟಕದ ಬೆಳಗಾವಿಯಲ್ಲೂ ಚಳುವಳಿ ತೀವ್ರವಾಗಿ ನಡೆಯುತ್ತದೆ. ಹಳ್ಳಿ ಹಳ್ಳಿಗಳಲ್ಲಿ ಚಳುವಳಿ ತೀವ್ರವಾಗಿ ನಡೆಯುತ್ತದೆ. ಸರಕಾರದ ಯಂತ್ರ ತೀವ್ರವಾಗಿ ಕುಸಿಯಲಾರಂಭಿಸುತ್ತದೆ. ಸರಕಾರದ ಪರ ಪಿತೂರಿ ಮಾಡುವವರು ಸಹ ಚಳುವಳಿಗಾರರಿಗೆ ಹೆದರುತ್ತಿದ್ದರು. ಇಡೀ ಊರಿಗೆ ಊರೇ ಚಳುವಳಿಗಾರರಿಗೆ ಬೆಂಬಲವಾಗಿ ನಿಂತಿತು. ಅನ್ನ, ಆಹಾರ, ಬಿಟ್ಟು ಬೆಟ್ಟ ಗುಡ್ಡ ಅಳೆದು ಅವರಿಗೂ ಸಾಕಾಗಿ ಹೋಗುತ್ತಿತ್ತು. ಕೆಲವೊಂದು ಸಿ.ಐ.ಡಿ.ಗಳು ಚಳುವಳಿಗಾರರನ್ನು ಹಿಡಿದೇ ಹಿಡಿಯುವ ಹಟ ತೊಟ್ಟಿದ್ದರು. ಯಾಕೆಂದರೆ ಚಳುವಳಿಯನ್ನು ಹತ್ತಿಕ್ಕಿ ಉನ್ನತ ಹುದ್ದೆಗೆ ಏರುವ ಆಕಾಂಕ್ಷೆಯನ್ನು ಹೊಂದಿದ್ದರು. ದ್ರೋಹಿಗಳು, ಹೇಡಿಗಳು, ದಬ್ಬಾಳಿಕೆಗಾರರು, ಪೊಲೀಸರು, ಅಧಿಕಾರಿಗಳು ಇವರದೇ ಸರ್ವಾಧಿಕಾರವಾಗಿತ್ತು. ಅಧಿಕಾರಿಗಳ ತುಳಿತ ಹೆಚ್ಚಾದ ಹಾಗೆ ಜನತೆಯ ಕ್ರೋಧ ಕೆರಳುತ್ತಿತ್ತು. ಜನತೆಯ ರೋಷ ಏರಿದ ಹಾಗೆ ಅಧಿಕಾರಿಗಳ ದಬ್ಬಾಳಿಕೆ ಉಗ್ರವಾಗುತ್ತಿತ್ತು.

ಭೂಗತರಾದ ಕಾಂಗ್ರೆಸ್ ಕಾರ್ಯಕರ್ತರನ್ನು ಹಿಡಿಯಲು ಪೊಲೀಸರು ಯಾವ ಹೇಯ ಮಟ್ಟಕ್ಕಿಳಿಯಲು ಹೇಸುತ್ತಿರಲಿಲ್ಲ. ಭೂಗತರಾದ ಚಳುವಳಿಗಾರರನ್ನು ಹಿಡಿಯಲು ಪೊಲೀಸರು ಜಾನು ಕುಂಬಾರನಂತಹ ದರೋಡೆಕೋರರ ಸಹಾಯವನ್ನು ಪಡೆದುಕೊಳ್ಳುವ ಉಲ್ಲೇಖವು ಮಿರ್ಜಿ ಅಣ್ಣರಾಯರ 'ಪ್ರತಿಸರಕಾರ' ಕಾದಂಬರಿಯಲ್ಲಿದೆ.[೪೭] ಭೂಗತರಾದ ಕಾಂಗ್ರೆಸ್ ಕಾರ್ಯಕರ್ತರನ್ನು ಹಿಡಿದುಕೊಟ್ಟರೆ ಅವನ ಮೇಲಿದ್ದ ವಾರಂಟನ್ನು ರದ್ದುಗೊಳಿಸುವುದಾಗಿ ಆಶ್ವಾಸನೆ ಕೊಡುತ್ತಾರೆ. 'ಗಾಂಧಿಟೋಪಿ' ಹಾಕಿಕೊಂಡು ದರೋಡೆಮಾಡುವ ಪುಂಡರ ಗುಂಪಿಗೆ ಬ್ರಿಟಿಷ್ ಸರಕಾರ, ಪೊಲೀಸ್ ಅಧಿಕಾರಿಗಳಿಂದಲೇ ಕುಮ್ಮಕ್ಕು ದೊರೆಯುತ್ತದೆ. ಈ ಗೂಂಡಗಳಿಗೆ ಸರಕಾರಕ್ಕೆ ಬೇಡವಾದ ವ್ಯಕ್ತಿಗಳನ್ನು ಕೊಲ್ಲಲು ಸ್ವಾತಂತ್ರ್ಯವಿತ್ತು. ಇವರ ಮನೆಯವರಿಗೆ ಸರಕಾರ ನೆರವು ನೀಡುತ್ತಿತ್ತು. ಇದರಿಂದಲೇ ಬ್ರಿಟಿಷ್ ಸರಕಾರದ ನೈತಿಕ ಮಟ್ಟವು ಹೇಗಿತ್ತೆಂಬುದನ್ನು ನಾವು ಅರಿತುಕೊಳ್ಳಬಹುದು.

"ಕಾಂಗ್ರೆಸ್ಸಿಗೆ ದುಡ್ಡಿನ ಕೊರತೆಯಿದೆ. ಅದಕ್ಕಾಗಿ ಕೊಲೆ-ಸುಲಿಗೆಗಳನ್ನು ನಡೆಸಿದೆ. ಇದರಿಂದ ನಾಗರಿಕರಿಗೆ ತೊಂದರೆಯಾಗುತ್ತಿದೆ. ಆದುದರಿಂದ ಪುಂಡರನ್ನು ನಿರ್ನಾಮಗೊಳಿಸಲಿಕ್ಕೆ ಜನತೆ ಸರಕಾರಕ್ಕೆ ನೆರವಾಗಬೇಕು".[೪೮] ಎಂಬ ಅಪಪ್ರಚಾರ ಮಾಡಿ ಮುಗ್ಧ ಜನರು ಕಾಂಗ್ರೆಸ್ಸಿನ ಕಾರ್ಯಕರ್ತರನ್ನು ಸಂಶಯದಿಂದ ನೋಡುವ ಒಂದು ಕುತಂತ್ರವನ್ನು ಹೆಣೆಯುತ್ತಾರೆ. ಕೆಲವು

ದರೋಡೆಕೋರರು ಪೊಲೀಸರ ಕುಮ್ಮಕ್ಕಿನಿಂದ ದರೋಡೆ ಮಾಡುವಾಗ 'ಗಾಂಧಿ ಮಹಾರಾಜ ಕೀ ಜೈ! 'ಭಾರತ ಮಾತಾ ಕೀ ಜೈ!' ಎಂಬುದಾಗಿ ಹೇಳಿ ದರೋಡೆಯ ಆರೋಪ ಕಾಂಗ್ರೆಸ್ ಕಾರ್ಯಕರ್ತರ ಮೇಲೆ ಬರುವಂತೆ ಮಾಡುತ್ತಿದ್ದರು.

ಈ ಹೋರಾಟದಲ್ಲಿ ಪಾಲ್ಗೊಂಡವರು ಬಹಳಷ್ಟು ಜನರು ಹಳ್ಳಿಯ ಸಾಮಾನ್ಯ ರೈತರು, ಕಾರ್ಮಿಕರು, ಅಶಿಕ್ಷಿತ ದೇಶಪ್ರೇಮಿಗಳು ಹಾಗೂ ತರುಣರು. ನಿಜವಾಗಿಯೂ ೧೯೪೨ರ ಚಳುವಳಿ ಅಷ್ಟೊಂದು ತೀವ್ರ ಸ್ವರೂಪ ಪಡೆದುಕೊಂಡದ್ದು ಹಳ್ಳಿಗಳಲ್ಲಿಯೇ. ಪಟ್ಟಣದ ಜನರು ಆರಂಭದಲ್ಲಿ ಚಳುವಳಿಯಲ್ಲಿ ತೊಡಗಿಸಿಕೊಳ್ಳುತ್ತಾರೆ. ಆದರೆ ಅಷ್ಟೇ ವೇಗವಾಗಿ ಪಟ್ಟಣದ ಚಳುವಳಿ ನಿಂತುಹೋಗುತ್ತದೆ. ನಿಜವಾಗಿ ಹೇಳುವುದಾದರೆ ಚಳುವಳಿಯನ್ನು ಮುಂದುವರಿಸಿಕೊಂಡು ಹೋಗಿ ಬ್ರಿಟಿಷರಿಗೆ ತಲೆನೋವಾಗಿ ಕಾಡಿದವರು ಹಳ್ಳಿಯ ರೈತಾಪಿ ಜನರು. ಮಾಡಿ ಮಡಿದವರು ಕಾದಂಬರಿಯಲ್ಲಿ ವಿಶ್ವನಾಥನು-"ನಿಜ ಹೇಳಬೇಕಾದರೆ ಹಳ್ಳಿ ಮಂದೀನೇ ಬಹದ್ದೂರರು ನೋಡು ಹೇಮಾ, ಇಂಥ ಕೆಲಸದೊಳಗ. ಒಮ್ಮೆ ಒಂದು ಕೆಲಸಕ್ಕೆ ನಿಂತರಂದರ ಮುಗೀತು- ಅದನ್ನು ಮುಗಿಸೂತನಕ ಬಿಡುವ ಮಾತೆ ಇಲ್ಲ. ಒಂದು ಕಡಿತ, ಎರಡು ತುಂಡು... ಒಂದೂವರೆ ತಿಂಗಳಿಗೆ ಚಳುವಳಿಯೇ ಬೇಸರ ಬಂತು ಪಟ್ಟಣದವರಿಗೆ. ಹಳ್ಳಿಗಾಡಿಗೆ ಬಂದು ನೋಡಿದರ ಜನರ ಉತ್ಸಾಹ ಕಂಡು ಬೆರಗಾಗಬಹುದು ನೀನು. ಆಗಸ್ಟ್ ಹತ್ತು ಹನ್ನೊಂದರಲ್ಲಿ ಎಷ್ಟು ಹುರುಪಿತ್ತೋ ಅದಕ್ಕೂ ಮೂರು ಪಟ್ಟು ಹುರುಪದ ಈಗ. ಒಂದಕ್ಷರ ಕೂಡ ಬರೀಲಾರದ ಅಶಿಕ್ಷಿತ ಹಳ್ಳಿಮಂದಿ ಮಾಡ್ತಾ ಇರುವ ಕೆಲಸಗಳನ್ನು ನೋಡಿದರ ದಂಗಾಗಬಹುದು ನೀನು!"[೪೯] ವಿಶ್ವನಾಥನ ಈ ಮಾತುಗಳು ೧೯೪೨ರ ಚಳುವಳಿಯ ಒಟ್ಟು ಸ್ವರೂಪ ಹಾಗೂ ಹಳ್ಳಿಯ ಜನರ ತ್ರಿಕರಣ ಪೂರ್ವಕ ಹೋರಾಟದ ಸ್ವರೂಪವನ್ನು ನಮಗೆ ತಿಳಿಸುತ್ತದೆ. ನಿಜವಾಗಿಯೂ ಮಾಡಿ ಮಡಿಯುವ ಜನರಿದ್ದುದು ಹಳ್ಳಿಯಲ್ಲಿಯೇ.

ಹಳ್ಳಿಯ ಅನಕ್ಷರಸ್ಥ ಜನರು ಸಹ ಚಳುವಳಿಯ ಕುರಿತು ಜನ ಜಾಗೃತಿಯನ್ನು ಮೂಡಿಸಲು ಬಯಸುತ್ತಿದ್ದರು. ಅಂಥವರಲ್ಲಿ ರಾಜಾರಾಮ ಮಜಲೀಕರ್ ಅವರ 'ಶ್ರದ್ಧಾಂಜಲಿ' ಕಾದಂಬರಿಯಲ್ಲಿ ಬರುವ ಹೂನಳಿ ಸಿದ್ಧಪ್ಪ ಒಬ್ಬರು. ಅವರು ತಮ್ಮ ಊರಿನಲ್ಲಿ ಕಾಂಗ್ರೆಸ್ ಕಾರ್ಯಾಲಯವನ್ನು ತೆರೆದು ದೇಶಭಕ್ತಿಯನ್ನು ಮೂಡಿಸಿ ಸ್ವಾತಂತ್ರ್ಯವೆಂದರೇನೆಂದು ಗೊತ್ತಿಲ್ಲದ ಜನತೆಯನ್ನು ಕೂಡಾ ಚಳುವಳಿಗೆ ಸಿದ್ಧಗೊಳಿಸುತ್ತಿದ್ದರು. ಅದಕ್ಕೋಸ್ಕರ ವಿದ್ಯಾವಂತ ದೇಶಭಕ್ತರಾದ ರಮೇಶ ಹಾಗೂ ರೋಹಿಣಿಯನ್ನು ತಮ್ಮ ಊರಿಗೆ ಕಳುಹಿಸಿಕೊಡುತ್ತಾರೆ. ಹಳ್ಳಿಯ ಜನರ ಆತ್ಮಶಕ್ತಿಯನ್ನು ಬಡಿದೆಬ್ಬಿಸುವ ಅವರನ್ನು ಮುನ್ನಡೆಸಬಲ್ಲ ಒಬ್ಬ ಸುಸಜ್ಜಿತ ಮುಖಂಡನಿದ್ದರೆ ಅವರು ಯಾವ ತ್ಯಾಗಕ್ಕೂ ಸಿದ್ಧರಿದ್ದರು. ನಿಜವಾಗಿ ದೇಶದ ಸ್ವಾತಂತ್ರ್ಯದ ಅಭೀಪ್ಸೆಯಿದ್ದದ್ದು ಹಳ್ಳಿಯಲ್ಲಿಯೇ. ರಮೇಶ ಹೇಳುತ್ತಾನೆ-"ನಮ್ಮ ನಾಡಿನ ಹೃದಯ ಹಳ್ಳಿ ಎಂದು ಹೇಳಿದ್ದು ಇಲ್ಲಿ ಬಂದು ನೋಡಿದಾಗಲೇ ಅರಿವಾಗಬೇಕು. ಹಳ್ಳಿ ನಮ್ಮ ದೇಶದ ಹೃದಯ, ಪ್ರಾಣ! ನಿಜವಾದ ಶಕ್ತಿ, ನಿಜವಾದ ಭಕ್ತಿ, ಹಾರ್ದಿಕ ಪ್ರೇಮ, ಜಗತ್ತನ್ನೇ ಬೆರಗುಗೊಳಿಸುವ ತ್ಯಾಗ, ಅಭೇದ್ಯ ಸಂಘಟನಾ ಶಕ್ತಿ, ಗುರಿಮುಟ್ಟುವ ಅಚಲ ನಿರ್ಧಾರ, ಜಗತ್ತಿನ ಕೋಶದಲ್ಲಿಯೇ ಒಳ್ಳೆಯತನಕ್ಕೆ ಏನೇನು ವ್ಯಾಖ್ಯೆ

ಇದೆಯೋ ಅದೆಲ್ಲ ಹಳ್ಳಿಯಲ್ಲಿಯೇ ಸಿಕ್ಕತಕ್ಕದ್ದು ಎಂದು ನನಗೀಗ ಖಚಿತವಾಗಿದೆ."[೫೦] ಹಳ್ಳಿಯ ಜನರು ಗಾಂಧೀಜಿಯವರ ಮೇಲೆ ಅಚಲ ನಂಬಿಕೆಯನ್ನಿಟ್ಟಿದ್ದರು. ಅವರ ಭಾವಚಿತ್ರ ಇಟ್ಟು ಪೂಜೆ ಮಾಡುತ್ತಿದ್ದರು. "ಗಾಂಧೀಜಿಯ ಹೆಸರನ್ನು ಕೇಳದ ಹಳ್ಳಿಯಾಗಲಿ, ರಾಷ್ಟ್ರಧ್ವಜವನ್ನು ಹಾರಿಸದ, ಖಾದಿ ಧರಿಸದ, ಚರಕದಲ್ಲಿ ನೂಲದ, ಈಚಲು ಮರಗಳನ್ನು ಕಡಿಯದ ಜನಗಳಿಲ್ಲದ ಊರಾಗಲೀ ಇರಲಿಲ್ಲ. ನಿಜವಾದ ಚಳುವಳಿ ವಿದ್ಯಾಂತರೆನಿಸಿಕೊಂಡವರಿಂದ ಜಾರಿ ಹಳ್ಳಿಗಳ ಕೈಗೆ ಬಿತ್ತು. ಆ ಹೊಣೆಗಾರಿಕೆಯನ್ನು ತಾವು ಚೆನ್ನಾಗಿ ನಿರ್ವಹಿಸಬಲ್ಲೆವೆಂಬುದನ್ನು ಜನತೆ ದೇಶಕ್ಕೆ ತೋರಿಸಿತು. ಎಂದಿನಿಂದಲೂ ಭಾರತದ ಸತ್ವವಾಗಿ ಅದನ್ನು ಉಳಿಸಿಕೊಂಡು ಬಂದಿರುವ ರೈತ, ಗ್ರಾಮೀಣ, ಮತ್ತೆ ತಲೆ ಎತ್ತಿ ಎದೆ ತಟ್ಟಿನಿಂತನು. ಬಾರ್ಡೋಳಿ ಚಳುವಳಿ, ಕರ್ನಾಟಕದಲ್ಲಿ ಸಿರಸಿ, ಸಿದ್ಧಾಪುರದ ಕರನಿರಾಕರಣ, ಅಸಹಕಾರ, ಉಪ್ಪಿನ ಸತ್ಯಾಗ್ರಹದ ಸಾಹಸ, ಸಹಸ್ರ ಸಂಖ್ಯೆಯಲ್ಲಿ ಸೆರೆಮನೆ ಸೇರಿದ ಜನಸಾಮಾನ್ಯರು, ಹಳ್ಳಿಗಳ ಕರ್ತವ್ಯ, ದೇಶಭಕ್ತಿ ಇವುಗಳ ಮಟ್ಟವನ್ನೇ ತುಂಬಾ ಎತ್ತರಕ್ಕೆ ಏರಿಸಿಬಿಟ್ಟವು".[೫೧] ಎಂಬ ಮಾತಿನಲ್ಲಿ ಯಾವ ಉತ್ಪ್ರೇಕ್ಷೆಯೂ ಇಲ್ಲ.

೧೯೪೨ರಲ್ಲಿ ಸ್ವಯಂ ಸೇವಕರು ತಾಲೂಕು ಕಛೇರಿಯಿಂದ ಕಂದಾಯದ ಹಣವನ್ನು ಲಪಟಾಯಿಸುತ್ತಿದ್ದರು. ಹಫ್ತಾ ವಸೂಲಿ ಮಾಡಿ ಅದನ್ನು ಸದುಪಯೋಗಪಡಿಸಿಕೊಳ್ಳುತ್ತಿದ್ದರು. ಪಿಸ್ತೂಲು ಅಪಹರಿಸುತ್ತಿದ್ದರು. ಪೋಲೀಸರ ಕಣ್ಣು ತಪ್ಪಿಸಲು ದಿನಕ್ಕೊಂದು ವೇಷ ಹಾಕಿಕೊಂಡು ಓಡಾಡುತ್ತಿದ್ದರು. ಅಮಲ್ದಾರರ ವೇಷ, ಫೌಜುದಾರರ ವೇಷ ಧರಿಸುವುದು ಸರ್ವೇಸಾಮಾನ್ಯವಾಗಿತ್ತು. ಈ ಚಳುವಳಿಯ ಸಂದರ್ಭದಲ್ಲಿ ಪತ್ರಿಕೆಯಲ್ಲಿ ಎಲ್ಲಿ ನೋಡಿದರೂ ಬರೀ ಗೋಳಿಬಾರಿನದೇ ಕಾರುಬಾರು. 'ಪಾಟಲೀ ಪುತ್ರದಲ್ಲಿ ಬಾಲಕರ ಮೇಲೆ ಗೋಳೀಬಾರು! ಹತ್ತು ಬಾಲಕರ ಮರಣ! ಅಹಮ್ಮದಬಾದಿನಲ್ಲಿ ಗೋಳೀಬಾರು'– ಹೀಗೆ ಎಲ್ಲೆಂದರಲ್ಲಿ ೧೯೪೨ರಲ್ಲಿ ಭಾರತ ಮಾತೆಗೆ ರಕ್ತದ ಅಭಿಷೇಕದ ಸುದ್ದಿಯೇ ತುಂಬಿರುತ್ತಿತ್ತು. ಕೆಲವೊಂದು ಹಳ್ಳಿಗಳಲ್ಲಿ ಸರಕಾರ ಹೆಣದ ರಾಶಿಯನ್ನೇ ಒಟ್ಟುತ್ತಿತ್ತು. ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದ ಹಳ್ಳಿಗಳ ಮನೆಗಳನ್ನು ಲಿಲಾವಿಗೆ ಹಾಕುವ ದೃಶ್ಯವು ಸರ್ವೇಸಾಮಾನ್ಯ ಅಗಿತ್ತು. ಪೋಲೀಸರ ಅತ್ಯಾಚಾರಕ್ಕೆ ಹೇಸಿ ಸತಿಶಿರೋಮಣೀಗಳಾದ ಹೆಣ್ಣುಮಕ್ಕಳು ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದರು. ಜನರು ಈ ವೇಳೆಗಾಗುವಾಗ ಬ್ರಿಟಿಷರ ದಬ್ಬಾಳಿಕೆಯಿಂದ ರೋಸಿ ಹೋಗಿದ್ದರು. ದಬ್ಬಾಳಿಕೆಯನ್ನು ಎದುರಿಸ ತೊಡಗಿದರು. ಮದ್ದುಗುಂಡುಗಳನ್ನೊಯ್ಯುತ್ತಿದ್ದ ರೈಲುಗಳು ಉರುಳಿಸಲ್ಪಟ್ಟವು; ಪೋಲೀಸ್ ಠಾಣೆಗಳಿಗೆ ಬೆಂಕಿ ಬಿತ್ತು. ಟೆಲಿಗ್ರಾಫ್ ತಂತಿಗಳನ್ನು ಕತ್ತರಿಸಿಹಾಕಿದರು. ಕೈಬಾಂಬುಗಳನ್ನು ಜನ ಧಾರಾಳವಾಗಿ ಉಪಯೋಗಿಸಲ್ಪಟ್ಟರು. ಈ ಹೋರಾಟವು ನಮ್ಮ ಇತಿಹಾಸಕಾರರು ಉಲ್ಲೇಖಿಸುವಂತೆ ಕೇವಲ ಅಹಿಂಸಾತ್ಮಕ ಹೋರಾಟವಾಗಿರಲಿಲ್ಲವೆಂಬುದನ್ನು ಕಾದಂಬರಿಗಳು ತಿಳಿಸುತ್ತವೆ.

ದೇಶದ ಹಳ್ಳಿ ಹಳ್ಳಿಗಳಿಗೂ ಗಾಂಧೀಜಿಯ ಸಂದೇಶದ ಮಹತ್ವ ತಲುಪುತ್ತದೆ. ಕೆಲವು ಮಂದಿ ವಿದ್ಯಾವಂತರಾದ ಯುವಕರು ಗಾಂಧೀಜಿಯ ಪ್ರಭಾವಕ್ಕೆ ಒಳಗಾದ ಕಾರಣ, ಅವರಿಂದಾಗಿ ಹಳ್ಳಿಯ ಸಮಸ್ತ ಜನರಿಗೂ ಅವರ ಸಂದೇಶವು ತಲುಪಿ ಪ್ರತಿಯೊಂದು ಹಳ್ಳಿ ಕೂಡಾ

ಹೋರಾಟದ ಕಣವಾಗಿ ಮಾರ್ಪಾಡು ಹೊಂದುತ್ತದೆ. ಪ್ರಭಾತಪೇರಿ, ಮೆರವಣಿಗೆ, ರಾಷ್ಟ್ರಧ್ವಜ ಹಾರಿಸುವುದು, ಪೊಲೀಸರು ಅದನ್ನು ಹರಿದು ಹಾಕಿ ಜನರನ್ನು ಬಂದಿಸುವುದು ಹಳ್ಳಿಗಳಲ್ಲಿ ನಿತ್ಯದ ಘಟನೆಯಾಗುತ್ತದೆ. ಉತ್ತರ ಕನ್ನಡ ಜಿಲ್ಲೆಯ ಮಲೆನಾಡಿನ ಪುಟ್ಟ ಹಳ್ಳಿಯಾದ ನಂದಿಗ್ರಾಮದಲ್ಲೂ ಇಂತಹ ಘಟನೆ, ಹೋರಾಟ ನಡೆಯುವ ಚಿತ್ರಣವನ್ನು ಅ. ನ. ಕೃ ಅವರ 'ಅಮರ ಆಗಸ್ಟ್' ಕಾದಂಬರಿ ನೀಡುತ್ತದೆ. ಹಳ್ಳಿ ಹಳ್ಳಿಯ ಜನರು ಸಭೆ ಸೇರಿ ಬ್ರಿಟಿಷ್ ಸಾಮ್ರಾಜ್ಯವನ್ನು ಶಿಥಿಲಗೊಳಿಸುವ ಹಲವಾರು ನಿರ್ಣಯಗಳನ್ನು ಕೈಗೊಳ್ಳುತ್ತಾರೆ. ಇಂತಹ ಹೋರಾಟದಲ್ಲಿ ಸಕ್ರಿಯವಾಗಿ ಪಾಲ್ಗೊಂಡವರಲ್ಲಿ ಬಹಳಷ್ಟು ಮಂದಿ ಹಳ್ಳಿಯ ಅನಕ್ಷರಸ್ಥ ಬಡಜನರು. ನಂದಿಗ್ರಾಮದಲ್ಲಿ ಕೂಡ ಪುಟ್ಟುಸ್ವಾಮಿಯ ನೇತೃತ್ವದಲ್ಲಿ ಊರ ಹೊರಗಿನ ತೋಪಿನಲ್ಲಿ ನಂದಿಗ್ರಾಮದ ಜನತೆ ಸಭೆ ಸೇರಿ ಕೆಲವು ಮಹತ್ವದ ನಿರ್ಣಯವನ್ನು ಕೈಗೊಳ್ಳುತ್ತರೆ.. ದೇಸಕ್ಕೋಸ್ಕರ ಪ್ರಾಣತ್ಯಾಗಕ್ಕೆ ಸಿದ್ಧರಾಗುತ್ತಾರೆ. "ರಂಗ, ಮಾದ, ಊರ ಹೊರಗಿನ ಟೆಲಿಗ್ರಾಫ್ ತಂತಿ ಕತ್ತರಿಸಿ ಬರಬೇಕು. ನಾಳೆಯ ರಾತ್ರಿ ಎಲೆಕ್ಟ್ರಿಕ್ ಆಫೀಸಿಗೆ ಬೆಂಕಿಯಿಡಬೇಕು. ಕೂಡಲೇ ಒಂದು ಗುಂಪು ಪೊಲೀಸ್ ಸ್ಟೇಷನ್ ಬಳಸಬೇಕು. ಪೊಲೀಸಿನವರ ಬಂದೂಕು ಕಸಿದುಕೊಂಡು ಸ್ಟೇಷನ್ನಿಗೆ ಬೆಂಕಿಯಿಡಬೇಕು. ನೀವಾಗಿಯೇ ಪೊಲೀಸಿನವರನ್ನು ಹೊಡೆಯುವುದಕ್ಕೆ ಹೋಗಬೇಡಿ. ಅವರು ಮೇಲೆ ಬಿದ್ದರೆ ನೀವೂ ಒಂದು ಕೈ ತೋರಿಸಿಬಿಡಿ"[೫೨] . ಇಲ್ಲಿ ಜನರಲ್ಲಿ ಹಿಂಸೆಗೆ ಪ್ರತಿಹಿಂಸೆಯ ಮನೋಭಾವ ಬೆಳೆದುದನ್ನು ನಾವು ಕಾಣಬಹುದು. ಇವರು ಪೂರ್ಣವಾಗಿ ಗಾಂಧಿತತ್ವವನ್ನೂ ಪಾಲಿಸುತ್ತಿಲ್ಲ, ಪೂರ್ಣವಾಗಿ ಸಶಸ್ತ್ರ ಹೋರಾಟವನ್ನೂ ಮಾಡುತ್ತಿಲ್ಲ. ಆದರೆ ಪೊಲೀಸ್ ಸ್ಟೇಷನ್ನಿಂದ ಬಂದೂಕುಗಳನ್ನು ಅಪಹರಿಸುತ್ತಾರೆ. ಇಂತಹ ಹೋರಾಟಕ್ಕೆ ಒಂದು ವ್ಯವಸ್ಥಿತವಾದ ಯೋಜನೆಯನ್ನೂ ಅವರು ಮಾಡಿಕೊಳ್ಳುತ್ತಾರೆ. "ಗಸ್ತಿ ಮಾಡುವುದಕ್ಕೆ ಒಂದು ತಂಡ, ತಂತಿ ಕತ್ತರಿಸುವುದಕ್ಕೆ ಒಂದು ತಂಡ, ಎಲೆಕ್ಟ್ರಿಕ್ ಆಫೀಸ್ ಕೈವಶಮಾಡಿಕೊಳ್ಳುವುದಕ್ಕೆ ಒಂದು ತಂಡ, ಪೊಲೀಸ್ ಸ್ಟೇಶನ್ ಮುತ್ತಿಗೆ ಹಾಕುವುದಕ್ಕೆ ಒಂದು ತಂಡ ವ್ಯವಸ್ಥೆಯಾಯಿತು. ಎಲ್ಲರೂ ಕೈಗೆ ಸಿಕ್ಕಿದ ಕುಡುಗೋಲು, ಮಚ್ಚುಗಳನ್ನು ಹಿಡಿದು ಬರಬೇಕೆಂದು ನಿಶ್ಚಯವಾಯಿತು".[೫೩] ೧೯೩೦ರ ಉಪ್ಪಿನ ಸತ್ಯಾಗ್ರಹದ ಸಮಯದಲ್ಲಿ ಬ್ರಿಟಿಷರ ಹಿಂಸೆಯನ್ನು ಸಹಿಸಿಕೊಂಡು ಅಹಿಂಸೆಯನ್ನು ಅಕ್ಷರಶಃ ಪಾಲಿಸಿದ ಸ್ವಯಂಸೇಕರು ೧೯೪೨ರ ಚಳುವಳಿಯಲ್ಲಿ ಅಹಿಂಸೆಯ ತತ್ವಕ್ಕೆ ವಿದಾಯ ಹೇಳಿ ಹಿಂಸೆಯಾದರೂ ಸರಿಯೇ ಬ್ರಿಟಿಷರನ್ನು ನಮ್ಮ ದೇಶದಿಂದ ಹೊರಗಟ್ಟಲೇಬೇಕೆಂಬ ಮಟ್ಟವನ್ನು ತಲುಪಿದುದು ಆಶ್ಚರ್ಯವಾಗುತ್ತದೆ.

ಅಂದು ಹಳ್ಳಿಗಳಲ್ಲಿ ಹಿಂದು ಮುಸ್ಲಿಂರ ನಡುವೆ ಐಕ್ಯತೆಯಿತ್ತು. ೧೯೪೨ರ ಚಳುವಳಿಯಲ್ಲಿ ಮುಸ್ಲೀಂಲೀಗ್ ಸಹಕರಿಸದಿದ್ದರೂ ಹಳ್ಳಿಯ ಕೆಲವು ಮುಸ್ಲಿಂ ಯವಕರು ಈ ಚಳುವಳಿಯಲ್ಲಿ ಭಾಗವಹಿಸುತ್ತಾರೆ. ಮತ್ತು ಪೊಲೀಸರು ಮುಸ್ಲಿಮರನ್ನು ಎಷ್ಟೇ ಪುಸಲಾಯಿಸಿದರೂ ಕೂಡ ಅವರು ಹಳ್ಳಿಯ ಸ್ವಯಂಸೇವಕರ ಸುಳಿವನ್ನು ಬಿಟ್ಟುಕೊಡುತ್ತಿರಲಿಲ್ಲ. ಎಲ್ಲೋ ಇರುವ ಮುಸ್ಲಿಂಲೀಗಿಗಿಂತ ಹಳ್ಳಿಯ ಮುಸ್ಲೀಂ ಬಾಂಧವರಿಗೆ ತಮ್ಮ ಹಳ್ಳಿಯಲ್ಲಿರುವ ಹಿಂದುಗಳ ಮೇಲೆಯೇ ಹೆಚ್ಚು ಅಭಿಮಾನವಿತ್ತು.

ಹಳ್ಳಿಯಲ್ಲಿ ಮುಸ್ಲಿಂ ಯವಕರು ಕೂಡ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದ್ದರು. ನಂದಿಗ್ರಾಮದಲ್ಲಿ ಮಸ್ತಾನ ಹಾಗೂ ಅವನ ಮಗ ಇಬ್ರಾಹಿಂ ಕೂಡಾ ಈ ಹೋರಾಟದಲ್ಲಿ ಭಾಗವಹಿಸಿ ಬಂಧನಕ್ಕೊಳಪಡುತ್ತಾರೆ. ಪೊಲೀಸರ ಚಿತ್ರಹಿಂಸೆಯಲ್ಲಿ ಮಸ್ತಾನ ಕೊನೆಗೆ ಪ್ರಾಣತ್ಯಾಗ ಮಾಡುತ್ತಾನೆ. ಪ್ರತಿಯೊಂದು ಹಳ್ಳಿ ಹಳ್ಳಿಗಳಲ್ಲೂ ರಕ್ತದ ಕಾಲುವೆಯೇ ಹರಿಯುತ್ತದೆ. ನಂದಿಗ್ರಾಮವೊಂದರಲ್ಲಿಯೇ ಸುಮಾರು ೬೦ ಜನರು ಪೊಲೀಸರ ಗುಂಡೇಟಿಗೆ ಬಲಿಯಾಗುತ್ತಾರೆ. ಪೊಲೀಸರ ಕಡೆಯಿಂದಲೂ ಏಳೆಂಟು ಹೆಣಗಳು ಉರುಳುತ್ತವೆ. ಪೊಲೀಸರಿಗೆ ಎದುರಾಗಿ ಹಳ್ಳಿಯ ಜನರು ಕೂಡ ಬಂದೂಕು ಹಿಡಿದಿದ್ದರು. ಇಂತಹ ಹೋರಾಟದ ಫಲವಾಗಿ ನಳನಳಿಸುತ್ತಿದ್ದ ಹಳ್ಳಿಗಳೆಲ್ಲ ಸ್ಮಶಾನ ಸದೃಶ್ಯವಾಗುತ್ತದೆ. ಹೋರಾಟ ತೀವ್ರವಾಗಿದ್ದ ಹಳ್ಳಿಗಳ ಜನರು ಪೊಲೀಸರ ಅತ್ಯಾಚಾರವನ್ನು ಸಹಿಸಲಾರದೆ ಸುತ್ತಮುತ್ತಲ ಹಳ್ಳಿಗಳಿಗೆ ವಲಸೆ ಹೋಗುತ್ತಾರೆ. ಡಿ.ವೈ.ಎಸ್.ಪಿ ಡೈನಾಮೈಟ್ ಉಪಯೋಗಿಸಿ ಊರಿನ ದೊಡ್ಡ ದೊಡ್ಡ ಮನೆಗಳನ್ನು ಕೆಡವುತ್ತಾರೆ. ೧೯೪೨ರ ಹೋರಾಟದಲ್ಲಿ ಜೈಲು ಸೇರಿದ ಅನೇಕ ಮಂದಿ ೧೯೪೭ರವರೆಗೂ ಜೈಲಿನಲ್ಲಿಯೇ ಇರಬೇಕಾಗುತ್ತದೆ.

## ವಿದ್ಯಾರ್ಥಿಗಳು ಹಾಗೂ ಪ್ರತಿಸರಕಾರದ ಚಟುವಟಿಕೆಗಳು

೧೯೪೨ರ ಚಳುವಳಿಯಲ್ಲಿ ಅಸಂಖ್ಯಾತ ವಿದ್ಯಾರ್ಥಿಗಳು ತಮ್ಮ ಶಾಲಾ ಕಾಲೇಜುಗಳನ್ನು ಬಹಿಷ್ಕರಿಸಿ ಚಳುವಳಿಯಲ್ಲಿ ಭಾಗವಹಿಸಿದರು. ಇವರು ಚಳುವಳಿಯನ್ನು ತೀವ್ರಗೊಳಿಸಿದರು. ಅಸಹಕಾರ ಚಳುವಳಿ, ಕರನಿರಾಕರಣೆ, ಸ್ವದೇಶಿ ಮುಂತಾದ ಎಲ್ಲಾ ಚಳುವಳಿಗಳಲ್ಲೂ ವಿದ್ಯಾರ್ಥಿಗಳು ಪ್ರಮುಖ ಪಾತ್ರವನ್ನು ವಹಿಸಿದ್ದಾರೆ. ವಿದ್ಯಾರ್ಥಿಗಳ ಚಳುವಳಿಯನ್ನು ಹತ್ತಿಕ್ಕಲು ಸರಕಾರ ಹಲವು ರೀತಿಯಲ್ಲಿ ಪ್ರಯತ್ನಿಸುತ್ತಿತ್ತು. ಸ್ವದೇಶಿ ಚಳುವಳಿಯಲ್ಲಿ ಭಾಗವಹಿಸಿದ ವಿದ್ಯಾರ್ಥಿಗಳು ಓದುತ್ತಿದ್ದ ಶಾಲೆ ಮತ್ತು ಕಾಲೇಜುಗಳಿಗೆ ದಂಡ ವಿಧಿಸುವಂತೆ ಆದೇಶವನ್ನು ನೀಡಲಾಗುತ್ತಿತ್ತು. ಅವರಿಗೆ ನೀಡಲಾಗುವ ಸಹಾಯ, ಮತ್ತು ಇತರ ಸವಲತ್ತುಗಳನ್ನು ಹಿಂಪಡೆಯಲಾಯಿತು. ಅವರ ಮಾನ್ಯತೆಯನ್ನು ರದ್ದುಪಡಿಸಲಾಯಿತು. ಅಂತಹ ವಿದ್ಯಾರ್ಥಿಗಳು ವಿದ್ಯಾರ್ಥಿವೇತನಕ್ಕೆ ಸ್ಪರ್ಧಿಸಲು ಅನುಮತಿಯಿರಲಿಲ್ಲ. ಅಂತಹ ವಿದ್ಯಾರ್ಥಿಗಳಿಗೆ ಸರಕಾರಿ ಸೇವೆಗೆ ಪ್ರವೇಶವನ್ನು ತಡೆಯಲಾಯಿತು. ರಾಷ್ಟ್ರೀಯ ಚಳುವಳಿಯಲ್ಲಿ ಭಾಗವಹಿಸಿ ಅಪರಾಧ ಮಾಡಿದ್ದಾರೆ ಎಂದು ಕಂಡು ಬಂದ ವಿದ್ಯಾರ್ಥಿಗಳ ವಿರುದ್ಧ ಶಿಸ್ತಿನ ಕ್ರಮ ತೆಗೆದುಕೊಳ್ಳಲಾಯಿತು. ಅವರಲ್ಲಿ ಅನೇಕರಿಗೆ ದಂಡ ವಿಧಿಸಲಾಯಿತು. ಶಾಲೆ ಮತ್ತು ಕಾಲೇಜುಗಳಿಂದ ಹೊರಹಾಕಲಾಯಿತು, ಬಂಧಿಸಲಾಯಿತು, ಪೊಲೀಸರು ಲಾಠಿ ಏಟಿನ ರುಚಿಯನ್ನೂ ತೋರಿಸಿದರು. ಕೆಲವು ವಿದ್ಯಾರ್ಥಿಗಳಂತೂ ಪೊಲೀಸ್ ಗುಂಡೇಟಿಗೆ ಬಲಿಯಾದರು. ಆದರೂ ವಿದ್ಯಾರ್ಥಿಗಳು ಚಳುವಳಿಯಲ್ಲಿ ಭಾಗವಹಿಸುವುದನ್ನು ತಡೆಗಟ್ಟಲು ಸರಕಾರಕ್ಕೆ ಸಾಧ್ಯವಾಗಲಿಲ್ಲ. ೧೯೪೨ರಲ್ಲೂ ವಿದ್ಯಾರ್ಥಿಗಳು ಈ ಚಳುವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಾರೆ. ಶಾಲಾಕಾಲೇಜನ್ನು ತ್ಯಜಿಸಿ ತಮ್ಮ ವಿದ್ಯಾಭ್ಯಾಸವನ್ನು ದೇಶಸೇವೆಗೋಸ್ಕರ ಮೊಟಕುಗೊಳಿಸುತ್ತಾರೆ. ಸೆರೆಮನೆವಾಸವನ್ನು

ಅನುಭವಿಸುತ್ತಾರೆ. ಕೆಲವೊಮ್ಮೆ ಪೊಲೀಸರ ಗುಂಡೇಟಿಗೂ ಬಲಿಯಾಗುತ್ತಾರೆ. ಚಳುವಳಿಯಲ್ಲಿ ವಿದ್ಯಾರ್ಥಿಗಳ ಪಾಲ್ಗೊಳ್ಳುವಿಕೆಯನ್ನು ಕುರಿತೇ ಕೆಲವೊಂದು ಕಾದಂಬರಿಗಳು ರಚನೆಯಾಗಿವೆ.

ವಸುದೇವ ಭೂಪಾಲನಂ ಅವರು ರಚಿಸಿದ 'ಆಂದೋಲನ' ಕಾದಂಬರಿಯು ೧೯೪೨ರ ಸ್ವಾತಂತ್ರ್ಯ ಚಳುವಳಿಯಲ್ಲಿ ಬ್ರಿಟಿಷ್ ಸಾಮ್ರಾಜ್ಯಶಾಹಿಯ ಕ್ರೂರವಾದ ದಬ್ಬಾಳಿಕೆಗೆ ತುತ್ತಾಗಿ ಅಸುನೀಗಿದ ವಿದ್ಯಾರ್ಥಿ ಪ್ರಮುಖರ ಕಥಾನಕವಾಗಿದೆ. ವಸದೇವ ಭೂಪಾಲನಂ ಸ್ವತಃ ಚಳುವಳಿಯಲ್ಲಿ ಭಾಗವಹಿಸಿ ಸೆರೆಮನೆ ವಾಸವನ್ನು ಅನುಭವಿಸಿದರು. ಅವರ ಅನುಭವವನ್ನು ಕೂಡಾ ಈ ಕಾದಂಬರಿಯಲ್ಲಿ ಹೇಳಲಾಗಿದೆ.

ವಿದ್ಯಾರ್ಥಿಗಳು ಕೆಲವೊಂದು ಯೋಜನೆಯನ್ನು ಕೈಗೊಳ್ಳುತ್ತಾರೆ. ಆದರೆ ಅವುಗಳು ವಿಫಲವಾಗುತ್ತದೆ. ಶ್ರೀರಂಗಪಟ್ಟಣದ ಕಾವೇರಿಸೇತುವೆಯನ್ನು ಡೈನಾಮೈಟ್ ಹಾಕಿ ಒಡೆಯಲು ಯೋಜನೆ ಹಾಕಿಕೊಂಡಿದ್ದರು. ಹೀಗೆ ಮಾಡಿದರೆ ಬೆಳಗೊಳದಿಂದ ಬೆಂಗಳೂರು ಕಡೆಗೆ ಗುಂಡಿನ ಸಾಮಾಗ್ರಿಗಾಗಿ ಸಲ್ಫೂರಿಕ್ ಆಸಿಡ್ ಹೋಗುವುದು ನಿಲ್ಲುತ್ತದೆಂಬುದು ಅವರ ಅಭಿಪ್ರಾಯ. ಆದರೆ ವಿದ್ಯಾರ್ಥಿಗಳ ಯೋಜನೆಯ ಸುಳಿವು ಅದೇಗೋ ಪೊಲೀಸರಿಗೆ ಸಿಕ್ಕಿಬಿಡುತ್ತದೆ. ವಿದ್ಯಾರ್ಥಿಗಳಲ್ಲಿ ಕೂಡಾ ಕೆಲವರು ಪೊಲೀಸರ ಏಜೆಂಟರು ಇರುತ್ತಾರೆ.

ಆಂದೋಲನ ಕಾದಂಬರಿಯಲ್ಲಿ ವೀರೇಂದ್ರ ಎಂಬ ವಿದ್ಯಾರ್ಥಿಯು ಮೈಸೂರು ಪ್ರಾಂತ್ಯದಲ್ಲಿ ನೆರೆದ ಸಾವಿರಾರು ವಿದ್ಯಾರ್ಥಿಗಳನ್ನು ಕುರಿತು –"ಒಬ್ಬೊಬ್ಬ ವಿದ್ಯಾರ್ಥಿಯು ಒಬ್ಬ ಯೋಧನಾಗಬೇಕು. ಆತ್ಮಸಮರ್ಪಣೆಯೇ ಅವನ ಪ್ರತಿಜ್ಞೆ, ಸಾವಿರ ವಿಘ್ನಗಳು ಬಂದೆರಗಬಹುದು. ಆದರೆ ವೀರ ಸತ್ಯಾಗ್ರಹಿ ನಿಶ್ಚಲನು. ಅವನ ತಲೆಬಿರಿದು ರಕ್ತದ ಕಾಲುವೆ ಹರಿಯಬಹುದು. ಆದರೆ ಧೈರ್ಯಸಾಧನೆಯೇ ಅವನ ಜೀವನ.."[೫೪] ಎಂಬುದಾಗಿ ಕರೆನೀಡುತ್ತಾನೆ.

ಅಹಿಂಸಾತ್ಮಕವಾಗಿ ಆರಂಭವಾದ ವಿದ್ಯಾರ್ಥಿಗಳ ಮೆರವಣಿಗೆ ಪೊಲೀಸರ ಲಾಠಿಚಾರ್ಜು, ಗೋಳಿಬಾರಿನ ಕಾರಣದಿಂದಾಗಿ ಹಿಂಸೆಗೆ ತಿರುಗುತ್ತದೆ. ಕೆಲವೊಂದು ಸಂದರ್ಭದಲ್ಲಿ ವಿದ್ಯಾರ್ಥಿಗಳು ತಾವೇ ಮೊದಲಾಗಿ ಹಿಂಸಾಕೃತ್ಯದಲ್ಲಿ ತೊಡಗುತ್ತಾರೆ. ೧೯೪೨ರ ಚಳುವಳಿಯಲ್ಲಿ ಗಾಂಧಿತತ್ವಕ್ಕೆ ಮೀರಿ ಜನರು ನಡೆದರೂ ತಾವೇ ಮೊದಲಾಗಿ ಹಿಂಸೆಯಲ್ಲಿ ನಿರತರಾದ ಉದಾಹರಣೆಗಳಿಲ್ಲ. ಆದರೆ ವಿದ್ಯಾರ್ಥಿಗಳು ಮಾತ್ರ ತಾವೇ ಮೊದಲಾಗಿ ಹಿಂಸೆಯಲ್ಲಿ ನಿರತರಾದ ಉದಾಹರಣೆಗಳನ್ನು ನಾವು ಕಾದಂಬರಿಗಳಲ್ಲಿ ಕಾಣುತ್ತೇವೆ.

ವಿದ್ಯಾರ್ಥಿಗಳೆಲ್ಲರೂ ಸೇರಿ ಒಳಗೆ ಪೊಲೀಸರು ಇರುವಾಗಲೇ ಠಾಣೆಗೆ ಅಗುಳಿ ಹಾಕಿ ಬೆಂಕಿ ಹಾಕುತ್ತಾರೆ. ಒಳಗಿದ್ದವರ ಆರ್ತನಾದವನ್ನು ಕೇಳಿ ಹೊರಹೋಗಿದ್ದ ಸಬ್‌ಇನ್ಸ್‌ಪೆಕ್ಟರ್ ಬಂದು ಬೆಂಕಿ ನಂದಿಸುತ್ತಾನೆ. "ಒಳಗೆ ಬೇಯುತ್ತಿದ್ದವರ ಆರ್ತನಾದಕ್ಕೆ ಉತ್ತರವಾಗಿ 'ಸುಭಾಷ್ಚಂದ್ರಬೋಸ್ ಕೀ ಜೈ' ಹೇಳುತ್ತಿದ್ದ ಹೊರಗೆ ನೆರೆದ ತಂಡವೂ ಅತ್ತಿತ್ತ ಓಟ ಕಿತ್ತಿತ್ತು."[೫೫] ಹೀಗೆ ೧೯೪೨ರ ಚಳುವಳಿಯಲ್ಲಿ ವಿದ್ಯಾರ್ಥಿಗಳು ಗಾಂಧೀಜಿಯ ಅಹಿಂಸಾ ತತ್ವದ ಕಗ್ಗೊಲೆ ಮಾಡುತ್ತಾರೆ.

ವಿದ್ಯಾರ್ಥಿ ಚಳುವಳಿಯಲ್ಲಿ ಅನೇಕ ಮಂದಿ ವಿದ್ಯಾರ್ಥಿನಿಯರು ಭಾಗವಹಿಸುತ್ತಾರೆ. "ಮೀಸೆ ಹೊತ್ತ ಗಂಡಸರೂ ತಲೆತಗ್ಗಿಸಬೇಕು ವಿದ್ಯಾರ್ಥಿನಿಯರ ಚಿತ್ತಸ್ಥೈರ್ಯ ಧೈರ್ಯಗಳೆದುರು."[೫೬] ಎಂಬುದಾಗಿ ವೀರೇಂದ್ರ ಯೋಚಿಸುತ್ತಾನೆ. ಹಲವು ಸಾವಿರ ವಿದ್ಯಾರ್ಥಿಗಳ ಗುಂಪು ಕೋರ್ಟ್ ಆವರಣಕ್ಕೆ ಮುತ್ತಿಗೆ ಹಾಕಿ ಮುಖ್ಯ ನ್ಯಾಯಾಧೀಶನ ಕಾರಿನಲ್ಲಿದ್ದ 'ಯೂನಿಯನ್ ಜಾಕ್' ಧ್ವಜವನ್ನು ಕಿತ್ತೊಗೆದು ನಂಜಿನಿ ಎಂಬ ವಿದ್ಯಾರ್ಥಿನಿ ತ್ರಿವರ್ಣ ಧ್ವಜವನ್ನು ಸಿಕ್ಕಿಸುತ್ತಾಳೆ. ಕೆಲವೊಂದು ವಿದ್ಯಾರ್ಥಿನಿಯರ ಧೈರ್ಯವು ಯಾರಿಗೂ ಕಡಿಮೆಯಿರಲಿಲ್ಲ.

ವಿದ್ಯಾರ್ಥಿಗಳು ಬೆಳಗೊಳದ ಸಲ್ಫೂರಿಕ್ ದ್ರಾವಕದ ಕಾರ್ಖಾನೆಯನ್ನು ಸ್ಫೋಟಿಸಲು ಯತ್ನಿಸುತ್ತಾರೆ. ಆದರೆ ಬ್ರಿಟಿಷ್ ಸರಕಾರದಲ್ಲಿ ನೌಕರರಿಂದ ಹಿಡಿದು ವಿದ್ಯಾರ್ಥಿಗಳವರೆಗೂ ಸರಕಾರದ ಪರವಾದ ಏಜೆಂಟುಗಳಿರುವುದರಂದ ಇವರ ಯೋಜನೆಗಳೆಲ್ಲ ವಿಫಲವಾಗುತ್ತದೆ. ಚಳುವಳಿಯಲ್ಲಿ ತೊಡಗಿದ ವಿದ್ಯಾರ್ಥಿಗಳು ಮಾಡುವ ಹಿಂಸಾಕೃತ್ಯದ ಕುರಿತು ನಂಜಿನಿ ಎಂಬ ವಿದ್ಯಾರ್ಥಿನಿಯ ಚಿಂತನೆಯು ಇಲ್ಲಿ ಉಲ್ಲೇಖಾರ್ಹವಾದುದು– "ಈಗ ಸರಕಾರದ ಕೇಂದ್ರಗಳನ್ನು ನೀವು ನಾಶಮಾಡಿದರೆ ನಾಳೆ ನೀವೇ ಸರಕಾರವನ್ನು ನಡೆಸಬೇಕಾಗಿ ಬರುವಾಗ ಇವನ್ನೆಲ್ಲ ಪುನಃ ನಿರ್ಮಾಣಮಾಡಬೇಕಲ್ಲವೆ? ಎಷ್ಟೊಂದು ವೃಥಾ ಖರ್ಚು. ಈಗ ನೀವು ವಿನಾಶ ಕೃತ್ಯದಲ್ಲಿ ಪುನಃ ನಿರ್ಮಾಣಕ್ಕೆ ಬೇಕಾಗುವಷ್ಟೇ ಶ್ರಮವಹಿಸುತ್ತಿದ್ದೀರಿ. ಇದ್ದ ಮನೆಯನ್ನು ಗೆಲ್ಲಲು ಅದನ್ನು ಸುಟ್ಟು ಮತ್ತೆ ಕಟ್ಟುವುದು ಎಂತಹ ಬುದ್ಧಿವಂತಿಕೆ? ವ್ಯಕ್ತಿಯೊಬ್ಬನನ್ನು ಸ್ವಾಧೀನಪಡಿಸಿಕೊಳ್ಳಲು ಅವನನ್ನು ಮೊದಲು ಕೊಂದು ನಂತರ ಜೀವ ತುಂಬುಲು ವೃಥಾ ಶ್ರಮಪಡುವುದೆ? ತುರಂಗದಲ್ಲಿರುವ ಗಾಂಧೀಜಿ ಕೊನೆಗೆ ಹೊರಬಂದ ಮೇಲೆ ಹಿಂಸಾಯುತವಾದ ಈ ವಿನಾಶಕೃತ್ಯಗಳ ಬಗ್ಗೆ ಕೇಳಿ ಎದೆಯೊಡೆದುಕೊಳ್ಳುತ್ತಾರಷ್ಟೇ. ಇಪ್ಪತ್ತು ವರ್ಷಗಳಿಗಿಂತ ಹೆಚ್ಚಾಗಿ ಅಹಿಂಸೆಯನ್ನು ಬೋಧಿಸುತ್ತಿರುವ ರಾಷ್ಟ್ರೀಯ ನಾಯಕನ ಹೆಸರಿನಲ್ಲಿ ಈ ಕೃತ್ಯಗಳನ್ನು ನಡೆಸುವುದು ಸರಿಯೇ?"[೫೭] ನಂಜಿನಿಯ ಈ ಮಾತುಗಳು ತುಂಬಾ ಅರ್ಥಪೂರ್ಣವೆನಿಸುತ್ತದೆ. ಕೆಲವೊಮ್ಮೆ ಇಂತಹ ಹಿಂಸಾ ನಿರತವಾದಂತಹ ಚಳುವಳಿಯಿಂದ ಬ್ರಿಟಿಷರಿಗಿಂತ ಸಾಮಾನ್ಯಜನರು ತೊಂದರೆಗಳನ್ನು ಅನುಭವಿಸಿದ ಉದಾಹರಣೆಗಳೂ ಇವೆ.

'ಗಾಂಧೀಜಿಯ ಮಾಡು ಇಲ್ಲವೆ ಮಡಿ' ತತ್ವವನ್ನು ಚಳುವಳಿಗಾರರು ಅಪಾರ್ಥ ಮಾಡಿಕೊಂಡಿದ್ದಾರೆನಿಸುತ್ತದೆ. ಅವರ ೨೦ ವರ್ಷದ ಅಹಿಂಸಾ ಪ್ರಯೋಗವು ನಿಷ್ಫಲವಾದಂತೆ ಕಂಡುಬರುತ್ತದೆ. 'ಗುರಿಯಷ್ಟೇ ದಾರಿಯು ಮುಖ್ಯ' ಎಂದು ಗಾಂಧೀಜಿ ಹೇಳಿದ್ದರೆ ಚಳುವಳಿಗಾರರು 'ದಾರಿ ಯಾವುದಾದರೇನು? ಗುರಿಯೇ ಮುಖ್ಯ' ಎಂಬುದಾಗಿ ಯೋಚಿಸುತ್ತಾರೆ. ವಿದ್ಯಾರ್ಥಿಗಳು ಕಾಲೇಜನ್ನು ತ್ಯಜಿಸಿ ಊರೂರು ಸುತ್ತಿ ಯಾವುದೋ ಒಂದು ಸರಕಾರವನ್ನು ಬಗ್ಗುಬಡಿಯುವ ಕೃತ್ಯಗಳಲ್ಲಿ ಭಾಗವಹಿಸುತ್ತಾರೆ. ಆದರೆ ಅವರಿಗೆ ತಾವು ಇದೇ ರೀತಿಯಲ್ಲಿ ಚಳುವಳಿಯನ್ನು ಮಾಡಬೇಕೆಂಬ ಗುರಿಯಿರಲಿಲ್ಲ. ೧೯೪೨ರ ಚಳುವಳಿಯಲ್ಲಿ ಎಲ್ಲರೂ ಸಾಮೂಹಿಕ ಸನ್ನಿಯೆಂಬ ಹಾಗೆ ತಂತಿ ಕತ್ತರಿಸುವುದು, ಪೋಲೀಸ್ ಸ್ಟೇಷನ್ ಸುಡುವುದು,

ರೈಲುಕಂಬಿಗಳನ್ನು ಕತ್ತರಿಸುವುದು ಇವೇ ಮುಂತಾದ ಕೆಲಸಗಳನ್ನು ಮಾಡುತ್ತಾರೆಯೇ ಹೊರತು ವಿಭಿನ್ನವಾದ ರೀತಿಯಲ್ಲಿ ಚಳುವಳಿಯನ್ನು ಮಾಡಿದವರು ವಿರಳವೆನ್ನಬಹುದು.

ಕೆಲವೊಂದು ಊರುಗಳಲ್ಲಿ ವಿದ್ಯಾರ್ಥಿಗಳು ಒಂದು ದಿನದ ಮಟ್ಟಿಗೆ ಸರಕಾರದ ಪೊಲೀಸರನ್ನು ಓಡಿಸಿ ಸ್ವತಂತ್ರ ಸರಕಾರವನ್ನು ಸ್ಥಾಪಿಸಿದ ಉದಾಹರಣೆಗಳಿವೆ. ಆದರೆ ಮಾರನೇ ದಿವಸ ಸರಕಾರ ಮಿಲಿಟರಿಯನ್ನು ಕಳುಹಿಸಿ ಇಂತಹ ಚಳುವಳಿಯನ್ನು ಹತ್ತಿಕ್ಕುವಲ್ಲಿ ಯಶಸ್ವಿಯಾಗುತ್ತದೆ. ಹೀಗೆ ಯೋಜನೆಯಿಲ್ಲದ ಚಳುವಳಿಯಲ್ಲಿ ಮನಸ್ಸು ಬಂದಂತೆ ವರ್ತಿಸಿದ ಕಾರಣ ಹಲವಾರು ವಿದ್ಯಾರ್ಥಿಗಳು ಕೂಡ ಪೊಲೀಸರ ಗುಂಡೇಟಿಗೆ ಆಹುತಿಯಾಗುತ್ತರೆ. ಕೆಲವೊಮ್ಮೆ ಚಳುವಳಿಗಾರರು ಪೊಲೀಸರನ್ನು ಕೆಣಕಿ ಮಜಾ ನೋಡುತ್ತಿದ್ದರು. ಪೊಲೀಸರನ್ನು ಕೆಣಕುವುದು ವಿದ್ಯಾರ್ಥಿಗಳಿಗೆ ಪ್ರಿಯವಾದ ಹವ್ಯಾಸವಾಗಿತ್ತು. ಹೀಗೆ ಮುಖ್ಯವಾದ ವಿಚಾರಗಳನ್ನು ಮರೆತು ಅಮುಖ್ಯವಾದ ವಿಚಾರಗಳಿಗೆ ಮಹತ್ವವನ್ನು ಕೊಡುತ್ತಿದ್ದುದು ಕೂಡ ಚಳುವಳಿಯ ವಿಫಲತೆಗೆ ಕಾರಣವಾಗಿದೆ. ಪೊಲೀಸರು ಕೂಡ ವಿದ್ಯಾರ್ಥಿಗಳಿಂದ ಹತರಾಗಿದ್ದರು.

೧೯೪೨ರಲ್ಲಿ ಬಿರುಗಾಳಿಯಂತೆ ಆರಂಭವಾದ ಚಳುವಳಿಯನ್ನು ಪೊಲೀಸರ ಹಾಗೂ ಮಿಲಿಟರಿ ಪಡೆಯ ಸಹಾಯದಿಂದ ಹತ್ತಿಕ್ಕಲಾಗುತ್ತದೆ. ಆದರೆ ಕೆಲವೊಂದು ಕಡೆಗಳಲ್ಲಿ ಪ್ರತಿಸರಕಾರದ ರಚನೆಯ ಪ್ರಯತ್ನ ನಡೆಯುತ್ತದೆ. ವ್ಯವಸ್ಥಿತವಾದ ಸರ್ವಶಕ್ತ ಸರಕಾರದ ಕಾವಲು ಇರುವಾಗ ಎಲ್ಲೆಡೆಯಲ್ಲೂ ಅದು ನಡೆಯದ ಮಾತು. ಆದರೆ ಬಿಹಾರ, ಬಂಗಾಳ, ಉತ್ತರಪ್ರದೇಶ ಕೆಲವು ಕಡೆ ಹಾಗೂ ಕರ್ನಾಟಕ ಈಸೂರಿನಲ್ಲೂ ಕೆಲವು ದಿನಗಳ ಮಟ್ಟಿಗೆ ಇಂತಹ ಪ್ರತಿಸರಕಾರಗಳು ರಚನೆಗೊಂಡವು. ಅಲ್ಲಿ ಸರಕಾರಿ ಸೇವೆಯಲ್ಲಿದ್ದ ಪಟೇಲ, ಶ್ಯಾನುಭೋಗ, ಉಪಾಧ್ಯಾಯ, ಪೊಲೀಸರನ್ನು ವಜಾ ಮಾಡಲಾಯಿತು. ಕಂದಾಯವನ್ನು ವಸೂಲು ಮಾಡಲಾಯಿತು. ಅಂತಹ ಪ್ರದೇಶಗಳಿಗೆ ಬ್ರಿಟಿಷ್ ಸರಕರದ ಯಾವ ನೌಕರನೂ ತಲೆಯಿಡುವುದು ಕಷ್ಟವಾಗಿತ್ತು. ಜಯಪ್ರಕಾಶ್ ನಾರಯಣ್, ರಾಮಮನೋಹರ ಲೋಹಿಯಾ, ಅಚ್ಯುತ ಪಟವರ್ಧನ್, ಅರುಣಾ ಅಸಫ್ ಆಲಿ, ಸಾನೆ ಗುರೂಜಿ, ನಾನಾ ಪಟೇಲ್– ಒಂತಹವರು ಈ ಕಾರ್ಯಸರಣಿಯ ಧುರೀಣರಾಗಿದ್ದರು. ಹೋರಾಟಗಾರರು ತೆರೆದ ಪ್ರತಿಸರಕಾರಗಳು ಬುಡಮೇಲು ಕೃತ್ಯಗಳ ಬದಲು ಗ್ರಾಮೀಣ ಜನರಿಗೆ ತರಬೇತಿ, ಪಂಚಾಯಿತಿಯ ಮೂಲಕ ಸಮಸ್ಯೆಗಳ ನಿವಾರಣೆ, ಸರಳ ವಿವಾಹ, ಪಾನನಿರೋದ, ಸಾಕ್ಷರತೆ, ಅಸ್ಪೃಶ್ಯತಾ ನಿವಾರಣೆ, ಕಡಿಮೆ ಬಡ್ಡಿ ದರದಲ್ಲಿ ಸಾಲ ನೀಡುವಿಕೆ ಮೊದಲಾದ ಪ್ರಗತಿಪರ ಕಾರ್ಯಕ್ರಮಗಳನ್ನೂ ಹಮ್ಮಿಕೊಂಡಿದ್ದರು. ಮಹಾರಾಷ್ಟ್ರದ ಸತಾರ ಜಿಲ್ಲೆಯಲ್ಲಿ ೪೪ ತಿಂಗಳುಗಳಷ್ಟು ದೀರ್ಘಕಾಲ ಪ್ರತಿಸರಕಾರ ನಡೆಯಿತು. ಅದರ ಮುಖಂಡ ನಾನಾ ಪಾಟೀಲರು ೧೯೪೪ರಲ್ಲಿ ಪಂಚಗಣಿಯಲ್ಲಿ ತಮ್ಮ ಪ್ರಯತ್ನಗಳ ವರದಿಯನ್ನು ಗಾಂಧೀಜಿಯವರಿಗೆ ನೀಡಿದಾಗ ಗಾಂಧೀಜಿ ಹೇಳಿದರು: "ನಿಮ್ಮ ಕಾರ್ಯ ನನ್ನ ತತ್ವಗಳಿಗೆ ಹೊಂದುತ್ತದೆಯೇ ಎಂಬುದು ಪ್ರತ್ಯೇಕ ವಿಚಾರ. ಆದರೆ ನೀವು ಚಲೇಜಾವ್ ಚಳುವಳಿಯನ್ನು ಜೀವಂತವಾಗಿಸಿದಿರಿ. ಸಾತಾರಾ ಹೋರಾಟ ಈಗ ವಿಖ್ಯಾತವಾಗಿದೆ. ಹೇಡಿಯ ಅಹಿಂಸೆಗಿಂತ ಶೂರನ ಹಿಂಸೆ ಮೇಲು!"[೨೮] ಎಂಬುದಾಗಿ ಮೆಚ್ಚುಗೆಯ ಮಾತುಗಳನ್ನು ಆಡುತ್ತಾರೆ.

ಮಿರ್ಜಿ ಅಣ್ಣರಾಯರು 'ಪ್ರತಿಸರಕಾರ' ಎಂಬ ಹೆಸರಿನ ಒಂದು ಕಾದಂಬರಿಯನ್ನೇ ರಚಿಸಿದ್ದಾರೆ. ಇದು ಸಾತಾರ ಜಿಲ್ಲೆಯಲ್ಲಿ ೧೯೪೨ರಲ್ಲಿ ನಡೆದ ಒಂದು ಚಳುವಳಿಯ ಕಥೆಯಾಗಿದೆ. ಆ ಸುತ್ತಿನ ನಾಡಿಗೆ ಪ್ರತಿಸರಕಾರವನ್ನೇ ಸ್ಥಾಪಿಸಿ ಆಡಳಿತ ನಡೆಸಿದ ಕಾರಣದಿಂದ ಈ ಹೋರಾಟ 'ಪ್ರತಿಸರಕಾರ'ದ ಹೋರಾಟವೆಂದು ಪ್ರಸಿದ್ಧವಾಯಿತು. ಅಲ್ಲದೆ ಈ ಹೋರಾಟದಲ್ಲಿ ವಿರೋಧಿಗಳ ಕಾಲಿಗೆ ಪತ್ರೆ ಬಡಿಯುವ ಶಿಕ್ಷೆಯನ್ನು ಈ ಸರಕಾರದವರು ಅನುಸರಿಸಿದುದರಿಂದ ಈ ಹೋರಾಟಕ್ಕೆ 'ಪತ್ರೆಸರಕಾರದ' ಹೋರಾಟವೆಂದೂ ಕರೆದರು. ಈ ಕದನ ಗಾಂಧೀಜಿಯ ಅಹಿಂಸಾ ಮಾರ್ಗದಿಂದ ಬೇರೆಯಾಗಿದೆ. ಬ್ರಿಟಿಷ್ ಸತ್ತೆಯ ಬಲಾಢ್ಯತನವು ಈ ಒಂದು ಜಿಲ್ಲೆಯ ಹೋರಾಟದಿಂದಲೇ ಸಡಿಲವಾಯಿತು. ಆಗಸ್ಟ್ ಕ್ರಾಂತಿಯು ಈ ಪ್ರತಿಸರಕಾರದಿಂದ ಬಲಗೊಂಡು ಅದರ ಪರಿಣಾಮ ದೃಷ್ಟಿಯಿಂದ ಮಹತ್ವಪೂರ್ಣವಾಯಿತು. ಈ ಕೃತಿಯಲ್ಲಿ ಮೂಡಿದ ಸನ್ನಿವೇಶಗಳು ಹಲವು ನೈಜ ಘಟನೆಯ ಆಧಾರದ ಮೇಲೆ ಕಟ್ಟಿದಂಥವುಗಳು.

೧೯೪೨ರಲ್ಲಿ ಬ್ರಿಟಿಷ್ ಸರಕಾರದ ವಿರುದ್ಧ ಜನರು ತಮಗೆ ತಿಳಿದ ರೀತಿಯಲ್ಲಿ ಅಹಿಂಸಾತ್ಮಕ ಹೋರಾಟದಲ್ಲಿ ನಿರತರಾಗಿದ್ದರು. ಆಗ ಬ್ರಿಟಿಷ್ ಸರಕಾರವೇ ಹಿಂಸಾತ್ಮಕ ಹೋರಾಟಕ್ಕೆ ಕರೆ ನೀಡಿತು. "ಬ್ರಿಟಿಷ್ ಸತ್ತೆಗೆ ಗುಪ್ತವಾಗಿಯೂ ಜನತೆಗೆ ಪ್ರಕಟವಾಗಿಯೂ ಇದ್ದು ಸತತ ಸಾಮ್ರಾಜ್ಯಶಾಹಿಗೆ ಪೆಟ್ಟು ಕೊಡುವ ಪ್ರತೀಕಾರ ಮಾಡುವ ಕಾರ್ಯಕರ್ತರ ವರ್ಗವೊಂದು ನಿರ್ಮಾಣವಾಯಿತು. ಅದೇ ಪ್ರತಿಸರಕಾರವಾಯಿತು".[೧೯] ದೊಡ್ಡ ದೊಡ್ಡ ಜಮೀನ್ದಾರರು ಕೂಡ ಪ್ರತಿಸರಕಾರಕ್ಕೆ ಹೆದರುತ್ತಿದ್ದರು. ಪ್ರತಿಸರಕಾರದ ಕಾರ್ಯಕರ್ತರಾಗಿ ಜಮೀನ್ದಾರರ ಮಕ್ಕಳು ಕೂಡ ಇದ್ದರು. ಕೆಲವರಿಗೆ ಈ ಸರಕಾರದ ಬಗ್ಗೆ ಭಯವಿದ್ದರೂ ಅಸಹನೆಯಿರುತ್ತಿತ್ತು. ಬ್ರಿಟಿಷ್ ಸರಕಾರವಂತೂ ಈ ಸರಕಾರದ ಮೇಲೆ ಇಲ್ಲಸಲ್ಲದ ಆರೋಪವನ್ನು ಹೊರಿಸುತ್ತಿತ್ತು.

ಬ್ರಿಟಿಷ್ ಸತ್ತೆ ಸುಸೂತ್ರವಾಗಿ ಬಾಳುತ್ತಿದ್ದುದು ತಾಲೂಕು ಕಚೇರಿಗಳ ಕೋಟೆಯಲ್ಲಿ. ಜನತೆಯಿಂದ ಆಡಳಿತಕ್ಕೆ ಬೇಕಾದ ಧನವನ್ನು ಕೂಡಿಸಿ ಕಳಿಸುವ ಕೆಲಸವನ್ನು ಈ ಕಚೇರಿಗಳು ಮಾಡುತ್ತಿತ್ತು. ಇದನ್ನೇ ವಶಮಾಡಿಕೊಳ್ಳುವುದು ಒಳಿತು. ನಮ್ಮ ಧ್ಯೇಯ ಸಾಧನೆಗೆ ಇದು ಒಳ್ಳೆಯ ದಾರಿ[೨೦] ಎಂಬುದಾಗಿ ಅವರು ಭಾವಿಸಿದ್ದರು. ಹಳ್ಳಿಯ ಪಟೇಲ, ಶಾನುಭೋಗ, ಗೌಡರೇ ನಿಜವಾಗಿಯೂ ಬ್ರಿಟಿಷ್ ಸರಕಾರವನ್ನು ತಳಮಟ್ಟದಿಂದ ಪೋಷಿಸಿದವರು. ಅದನ್ನು ದುರ್ಬಲಗೊಳಿಸುವ ಕಾರಣದಿಂದ ಪ್ರತಿಸರಕಾರದವರು ಪಟೇಲರನ್ನು ಬಂಧಿಸುತ್ತಿದ್ದರು. ಈ ಚಳುವಳಿಯ ಹುಟ್ಟಡಗಿಸಲು ಪೊಲೀಸರು ಗುಂಡಿನ ಸುರಿಮಳೆಯನ್ನೇ ಸುರಿಸಿದರು. ಆದರೂ ಕೂಡ ಬ್ರಿಟಿಷ್ ಸರಕಾರಕ್ಕೆ ಪ್ರತಿಸರಕಾರವನ್ನು ಬಗ್ಗುಬಡಿಯಲು ಸಾಧ್ಯವಾಗಲಿಲ್ಲ. ಬ್ರಿಟಿಷ್ ಸರಕಾರ ಮತ್ತು ಅದರ ಬಾಲಬುಡಕರಾದ ಭಾರತೀಯರು ಕೂಡ ಪ್ರತಿಸರಕಾರದ ಕಾರ್ಯಕರ್ತರು ಕಳವು ದರೋಡೆಗಳನ್ನು ಮಾಡುತ್ತಿದ್ದಾರೆ, ಗೂಂಡಗಳಾಗಿದ್ದಾರೆ[೨೧] ಎಂಬುದಾಗಿ ಆರೋಪಿಸುತ್ತಾರೆ. ಒಂದೆರಡು ಸಾವಿರ ಚಿತ್ರಪಟವನ್ನು ಪ್ರತಿಸರಕಾರದ ವಿರುದ್ಧ ಅಪಪ್ರಚಾರ ಮಾಡುವುದಕ್ಕೆ ಬಳಸಿದ್ದಾರೆಂದರೆ ಪ್ರತಿಸರಕಾರದ ಕುರಿತು ಅವರಿಗಿದ್ದ ಭಯವು ಸ್ಪಷ್ಟವಾಗುತ್ತದೆ.

ನಾನಾಸಾಹೇಬ ಸಾತಾರೆಯ ಪ್ರತಿಸರಕಾರದ ಪ್ರಮುಖ ಮುಖಂಡ. ಇವನು ಪೋಲೀಸರಿಂದ ತಪ್ಪಿಸಿಕೊಳ್ಳುವ ವಿಧಾನ ಹಾಗೂ ಇವನ ಶೌರ್ಯ ಸಾಹಸದ ಕುರಿತು ಸ್ವಾತಂತ್ರ್ಯನಂತರದಲ್ಲಿ ಸಾತಾರೆಯಲ್ಲಿ ಹಲವಾರು ಕತೆಗಳೇ ಹುಟ್ಟಿಕೊಳ್ಳುತ್ತವೆ. ನಾನಾಸಾಹೇಬ ತಾಯಿಯ ಭೇಟಿಗೆ ತೆರಳುತ್ತಾನೆ. ಅವನನ್ನು ಬಂಧಿಸಲು ಪೋಲೀಸರು ಅವನ ಮನೆಯ ಮುಂದೆ ಜಮಾಯಿಸಿದ್ದರು. ಎಲ್ಲಾ ಕಡೆ ನಾನಾಸಾಹೇಬನನ್ನು ಹುಡುಕುತ್ತಿದ್ದರು. ಮುನ್ನೂರು ಜನ ಸಶಸ್ತ್ರ ಕಾರ್ಯಕರ್ತರು ಊರ ಹೊರಗೆ ಕಾವಲು ಕಾಯುತ್ತಿದ್ದರು. ಪೋಲೀಸರಿಗೂ ಅವರಿಗೂ ಮೂರು ತಾಸುಗಳವರೆಗೆ ಚಕಮಕಿ ನಡೆಯಿತು. ನಾನಾಸಾಹೇಬನ ತಾಯಿಯ ಶವ ಯಾತ್ರೆ ನಡೆಯುತ್ತಿರಬೇಕಾದರೆ ಶವದ ತಟ್ಟಿಯಿಂದ ಯಾರೋ ಕೆಳಗೆ ಹಾರಿದರು. ಅವನೇ ನಾನಾಸಾಹೇಬ. ಹೀಗೆ ಪೋಲೀಸರು ಮನೆಯ ಸುತ್ತ ತನಗಾಗಿ ಹುಡುಕುತ್ತಿದ್ದರೂ ಅವರ ಕಣ್ಣ ಮುಂದೆಯೇ ನಾನಾಸಾಹೇಬ ತಪ್ಪಿಸಿಕೊಳ್ಳುತ್ತಾನೆ. ಲೋಣಂ ಸ್ಟೇಷನ್ನಿನ ಡಿ.ಎಸ್.ಪಿ. ಗಿಲ್ಬರ್ಟ್ ಸಾಹೇಬರಿಗೆ ನಾನಾಸಾಹೇಬ ಎದುರಾಗಿ ಹಸ್ತಲಾಘವ ನೀಡಿದಾಗ ಹೆದರಿ ಬೆವರಿನಿಂದ ತೊಯ್ದುಹೋಗಿದ್ದರು.

ಪ್ರತಿಸರಕಾರದ ಹೆಸರನ್ನು ಕೆಡಿಸುವ ಉದ್ದೇಶದಿಂದ ಪೋಲೀಸರು ತಾವು ದರೋಡೆ ಮಾಡಿ ಪ್ರತಿಸರಕಾರದ ಕಾರ್ಯಕರ್ತರ ಮೇಲೆ ಬರುವಂತೆ ಮಾಡುತ್ತಿದ್ದರು. ಪೋಲೀಸರ ಕರಾಳ ನೀತಿಯನ್ನು, ಪುಂಡರ ಕರಾಳ ಕೃತಿಗಳನ್ನು ಪತ್ತೆ ಹಚ್ಚಲು ಪ್ರತಿಸರಕಾರದ ಸದಸ್ಯರು ನಿರ್ಧರಿಸುತ್ತಾರೆ. ಒಂದುವಾರದಲ್ಲಿ ಶಿರೋಳಪೇಟದಲ್ಲಿ ಆರು, ಖಾನಾಪುರ, ವಾಳವೆಗಳಲ್ಲಿಯ ನಾಲ್ಕು ದರೋಡೆಗಳ ವಸ್ತುಗಳನ್ನು ಶೋಧಿಸಿ ಅದರ ಒಡೆಯರಿಗೆ ಒಪ್ಪಿಸಿದರು. ಪ್ರತಿಸರಕಾರದ ಹೆಸರನ್ನು ಕೆಡಿಸಲು ಬ್ರಿಟಿಷ್ ಸರಕಾರವೇ ದರೋಡೆಕೋರರಿಗೆ ನೆರವು ನೀಡುತ್ತಿತ್ತು. ಪ್ರತಿಸರಕಾರ ಪತ್ತೆ ಹಚ್ಚಿದ ದರೋಡೆಕೋರರಲ್ಲಿ ಒಬ್ಬ ಕೂಡಾ ಕಾಂಗ್ರೆಸ್ ಕಾರ್ಯಕರ್ತನಿರಲಿಲ್ಲ. ಶಿರಾಳೆ ಮತ್ತು ವಾಳವೆ ಎಂಬ ಎರಡು ತಾಲೂಕಿನಲ್ಲಿ ಪ್ರತಿಸರಕಾರದ ಹೆಸರಿನಲ್ಲಿ ಹತ್ತು ದರೋಡೆಗಳನ್ನು ಪುಂಡು ಪೋಕರಿಗಳು ನಡೆಸಿದ್ದರು.

ಪ್ರತಿಸರಕಾರ ತಮಗೆ ದ್ರೋಹವೆಸಗಿ ಬ್ರಿಟಿಷರಿಗೆ ತಮ್ಮನ್ನು ಹಿಡಿದುಕೊಟ್ಟವರಿಗೆ ಕಠಿಣ ಶಿಕ್ಷೆಯನ್ನು ವಿಧಿಸುತ್ತಿದ್ದರು. ಅವರ ಸರಕಾರದ ಹನ್ನೊಂದನೆಯ ಕಲಮ್ಮಿನ ಶಿಕ್ಷೆಯೆಂದರೆ ಕಾಲಿಗೆ ಪತ್ರೆ ಕಟ್ಟುವುದು ಅಂದರೆ ಮೊಳೆಗಳನ್ನು ಜಡಿದು ಮಣಿಸಿಬಿಡುವರಂತೆ. ಯಾವ ಹಾಸ್ಪಿಟಲಿನವರು ಕೂಡ ಇಂತಹ ಕೇಸುಗಳನ್ನು ದಾಖಲು ಮಾಡುತ್ತಿರಲ್ಲವಂತೆ. ಈ ಕಾರಣದಿಂದ ಪೋಲೀಸರಿಗೆ ಅಷ್ಟು ಸುಲಭದಲ್ಲಿ ಜನತೆಯು ಪ್ರತಿಸರಕಾರದ ಕಾರ್ಯಕರ್ತರ ಸುಳಿವು ನೀಡುತ್ತಿರಲಿಲ್ಲ. ಆದುದರಿಂದಲೇ ಸತಾರೆಯ ಪ್ರತಿಸರಕಾರ ಅಷ್ಟು ದೀರ್ಘ ಕಾಲದವರೆಗೆ ಆಡಳಿತ ನಡೆಸಲು ಸಾಧ್ಯವಾಯಿತು.

ಪ್ರತಿಸರಕಾರದ ಬಗ್ಗೆ ಜನರಲ್ಲಿ ಅಭಿಮಾನವಿತ್ತು. ಈ ಕೊಲೆ ಸುಳಿಗೆಗಳಿಂದ ಜನರನ್ನು ರಕ್ಷಿಸಬಲ್ಲವರು ಪ್ರತಿಸರಕಾರದವರು ಎಂಬ ನಂಬಿಕೆಯಿತ್ತು. ಸಾಮಾನ್ಯ ಜನರು ಪ್ರತಿಸರಕಾರದ ಬಳಿ ನ್ಯಾಯ ತೀರ್ಮಾನಕ್ಕೆ ಬರುತ್ತಿದ್ದರು. ಪೋಲೀಸ್ ಸ್ಟೇಶನಿಗೆ ಹೋದರೆ ಆಗಲೂ ಬಡವರಿಗೆ ನ್ಯಾಯ

ದೊರಕುತ್ತಿರಲಿಲ್ಲ. ಆದರೆ ಅನೇಕ ಊರಗೌಡರು ಪ್ರತಿಸರಕಾರಕ್ಕೆ ಹೆದರಿ ಊರುಬಿಟ್ಟು ಹೋದರು. ಯಾಕೆಂದರೆ ಪ್ರತಿಸರಕಾರ ಇರುವಾಗ ಗೌಡರ ದರ್ಬಾರು ಹಳ್ಳಿಗಳಲ್ಲಿ ನಡೆಯುತ್ತಿರಲಿಲ್ಲ.

೧೯೪೨ರಲ್ಲಿ ಬೇರೆಲ್ಲ ಚಳುವಳಿಗೆ ಹೋಲಿಸಿದರೆ ಪ್ರತಿಸರಕಾವೊಂದು ಉತ್ತಮವಾದ, ಒಂದು ರೀತಿಯಲ್ಲಿ ಸೃಜನಶೀಲವಾದ ಚಳುವಳಿ. ಕೇವಲ ವಿಧ್ವಂಸಕ ಕೃತ್ಯಗಳಲ್ಲಿ ಮಾತ್ರ ನಿರತರಾಗದೆ ಕೆಲವು ಜನೋಪಯೋಗಿ ಕೆಲಸಗಳನ್ನು ಪ್ರತಿಸರಕಾರ ಮಾಡಿದೆ. ಅವುಗಳೆಂದರೆ ಮದ್ಯಪಾನ ನಿರೋಧ, ನೂಲು ನೇಯುವ ಸಂಘ ಸ್ಥಾಪನೆ, ಶಾಲೆಗೆ ಹೋಗುವ ಮಕ್ಕಳ ಸಂಖ್ಯೆ ಹೆಚ್ಚಳ, ಕಳವು, ಕೊಲೆ, ಸುಲಿಗೆಗಳನ್ನು ಸಂಪೂರ್ಣ ನಿಲ್ಲಿಸುವುದು, ಹಳ್ಳಿ ಹಳ್ಳಿಗಳಲ್ಲೂ ನ್ಯಾಯ ಮಂಡಲಿಗಳ ಸ್ಥಾಪನೆ ಮುಂತಾದ ಜನೋಪಯೋಗಿ ಕೆಲಸಗಳನ್ನು ಅವರು ಕೈಗೊಂಡಿದ್ದರು.

ಪ್ರತಿಸರಕಾರಕ್ಕೆ ಶಿಸ್ತಿನ ತರಬೇತಿಯನ್ನು ನೀಡಲಾಗುತ್ತಿತ್ತು. ಬ್ರಿಟಿಷ್ ಸರಕಾರದ ಅಧಿಕಾರಿಗಳ ಮನೆಯಲ್ಲಿ ಇವರು ಕೆಲಸದಲ್ಲಿದ್ದರೂ ಅವರು ಪ್ರತಿಸರಕಾರದ ಕಾರ್ಯಕರ್ತರೆಂದು ತಿಳಿಯುವುದು ಬ್ರಿಟಿಷ್ ಸರಕಾರಕ್ಕೆ ಸಾಧ್ಯವಾಗುತ್ತಿರಲಿಲ್ಲ. ಇಂಥ ತರುಣರು ಪ್ರತಿ ಸರಕಾರದ ಗುಪ್ತ ಪೊಲೀಸರು. ಇವರಿಂದಲೇ ಬ್ರಿಟಿಷ್ ಸೇನೆಯ ಚಲನ-ವಲನವೆಲ್ಲ ಪ್ರತಿಸರಕಾರಕ್ಕೆ ತಿಳಿಯುತಿತ್ತು.[೨] ಪ್ರತಿ ಸರಕಾರದ ಜೊತೆಯಲ್ಲಿ ಕೆಲವು ಹೆಣ್ಣುಮಕ್ಕಳು ಕೂಡ ಕಾರ್ಯಕರ್ತರಾಗಿದ್ದರು.

ಪ್ರತಿ ಸರಕಾರವು ಮುಖ್ಯವಾದ ಮೂರು ಠರಾವುಗಳನ್ನು ಮಂಜೂರು ಮಾಡುತ್ತದೆ. ಅವಗಳೆಂದರೆ ೧.ಬ್ರಿಟಿಷ್ ರಾಜಯಂತ್ರವನ್ನು ಮುರಿದು ಬಿಡುವ ಆಕ್ರಮಣ ಕಾರ್ಯಕ್ರಮವನ್ನು ಕೂಡಲೇ ಕೈಗೊಳ್ಳುವುದು, ೨.ಊರಗೌಡ, ಕುಲಕರ್ಣಿಯವರಿಗೆ ಒಕ್ಕಲಿಗರ ಕಡೆಯಿಂದ ಹೆಚ್ಚಿಗೆ ಧಾನ್ಯ ವಸೂಲಿ ಮಾಡಬೇಡಿರೆಂದು ಅಪ್ಪಣೆ ವಿಧಿಸುವುದು. ೩.ಪರಕೀಯ ಸರಕಾರದ ಪೊಲೀಸರು ಸ್ವಾತಂತ್ರ್ಯ ವೀರರಿಗೆ ಘಾತುಕರಾಗಿರುವ ಕಾರಣದಿಂದ ಅವರನ್ನು ದಂಡಿಸುವುದು.

ಭೂಗತರಾಗಿದ್ದ ಕಾರ್ಯಕರ್ತರ ಸುಳಿವು ಕೊಟ್ಟವರಿಗೆ ಪ್ರತಿಸರಕಾರ ಅತ್ಯಂತ ಕಠಿಣ ಶಿಕ್ಷೆಯನ್ನು ವಿಧಿಸಿದ್ದ ಕಾರಣದಿಂದ ಯಾರೂ ಅವರ ಸುಳಿವು ಕೊಡುತ್ತಿರಲಿಲ್ಲ. ಪ್ರತಿಸರಕಾರವು ಜನೋಪಯೋಗಿ ಕೆಲಸಗಳನ್ನು ಮಾಡಿ ಜನಮನ್ನಣೆಯನ್ನು ಕೂಡ ಗಳಿಸಿತು. ಈ ಕೊಲೆ ಸುಲಿಗೆಗಳಿಂದ ರಕ್ಷಿಸುವವರು ನಮ್ಮ ಕಾರ್ಯಕರ್ತರೇ ಎಂಬ ಅಭಿಮಾನ ಪ್ರತಿಸರಕಾರದ ಕಾರ್ಯಕರ್ತರ ಕುರಿತಾಗಿ ಜನತೆಯಲ್ಲಿತ್ತು. ಈ ರೀತಿಯಾಗಿ ಸತಾರೆಯಲ್ಲಿ ಪ್ರತಿಸರಕಾರವು ಸುಮಾರು ಮೂರುವರ್ಷಗಳವರೆಗೆ ಅಸ್ತಿತ್ವದಲ್ಲಿತ್ತು. ಶಿವಮೊಗ್ಗದ ಈಸೂರಿನಲ್ಲಿ ಕೂಡ ಇಂತಹುದೇ ಒಂದು ಸ್ವತಂತ್ರ ಸರಕಾರವನ್ನು ರೂಪಿಸಲು ಜನರು ಪ್ರಯತ್ನಿಸಿದರು. ಆದರೆ ತರಬೇತಿಯ ಕೊರತೆ, ಸರಿಯಾದ ಯೋಜನೆಯ ಕೊರತೆ, ಮಕ್ಕಳನ್ನು ಸಬ್‌ಇನ್ಸ್‌ಪೆಕ್ಟರ್ ಹಾಗೂ ಅಮಲ್ದಾರರಾಗಿ ನೇಮಿಸಿದ್ದು ಇವೆಲ್ಲವೂ ಈಸೂರಿನಲ್ಲಿ ಸ್ಥಾಪನೆಯಾದ ಸ್ವತಂತ್ರ ಸರಕಾರವನ್ನು ಬ್ರಿಟಿಷ್ ಸರಕಾರ ಕೆಲವೇ ದಿನಗಳಲ್ಲಿ ಹತ್ತಿಕ್ಕುತ್ತದೆ. ಆದರೂ ಕರ್ನಾಟಕದ ಶಿವಮೊಗ್ಗ ತಾಲೂಕಿನ ಈಸೂರು ಎಂಬ ಸಣ್ಣ ಹಳ್ಳಿ ಸ್ವಾತಂತ್ರ್ಯ ಹೋರಾಟದಲ್ಲಿ ನೀಡಿದ ಕೊಡುಗೆಯಂತೂ ಅಮೋಘವಾದುದು. ಈ ಊರಿನ ಐದು ಜನರಿಗೆ ಬ್ರಿಟಿಷ್ ಸರಕಾರ ಗಲ್ಲು ಶಿಕ್ಷೆಯನ್ನು ವಿಧಿಸುತ್ತದೆ. ಆದರೆ

ನಿರಪರಾಧಿಗಳಾದ ಆ ಐದು ಮಂದಿಯ ತ್ಯಾಗ, ಬಲಿದಾನವು ನಮ್ಮ ಇತಿಹಾಸದ ಪತ್ರಗಳಲ್ಲಿ ರಾರಾಜಿಸಲೇ ಇಲ್ಲ. ಕೇವಲ ಭಗತ್‌ಸಿಂಗ್, ರಾಜಗುರು, ಶುಕದೇವರ ಹೆಸರನ್ನೇ ಹೇಳುತ್ತಿರುವ ನಾವು, ಅವರ ಹೋರಾಟದ ಕುರಿತಾಗಿ ಸಿನಿಮಾ ತೆಗೆದು ಹಣ ಮಾಡುವ ನಿರ್ಮಾಪಕರು ಈಸೂರಿನ ಈ ವೀರರ ಕುರಿತಾಗಿ ಎಲ್ಲಿಯೂ ಪ್ರಸ್ತಾಪಿಸುವುದಿಲ್ಲ. ಬ್ರಿಟಿಷ್ ಆಡಳಿತದ ಸುಧಾರಣೆಗಳ ಕುರಿತು ಹೇಳುವ ನಮ್ಮ ಕರ್ನಾಟಕದ ಚರಿತ್ರೆಯಲ್ಲಿ ಈಸೂರಿನ ವೀರರ ಪ್ರಸ್ತಾಪಕ್ಕೆ ಮಹತ್ವ ಬರದಿರುವುದು ಇತಿಹಾಸದ ಜಾಣ ಕುರುಡುತನವನ್ನು ತೋರಿಸುತ್ತದೆ.

ಆರ್. ಬಸವರಾಜ್ ಅವರ 'ಈಸೂರಿನ ಚಿರಂಜೀವಿಗಳು' ಕಾದಂಬರಿಯು ಈಸೂರಿನಲ್ಲಿ ೧೯೪೨ರಲ್ಲಿ ನಡೆದ ಸ್ವಾತಂತ್ರ್ಯ ಚಳುವಳಿಯನ್ನು ಆಧರಿಸಿದ ಸತ್ಯಘಟನೆಯನ್ನು ಒಳಗೊಂಡಿದೆ. ಈಸೂರಿನ ಜನರು ಸ್ವತಂತ್ರ ಸರಕಾರವನ್ನು ರಚಿಸುತ್ತಾರೆ. ತಂತಿಕಂಬಗಳನ್ನು ಕತ್ತರಿಸುತ್ತಾರೆ. ಸೇತುವೆಗಳನ್ನು ಮುರಿಯುತ್ತಾರೆ. ಈಸೂರಿಗೆ ಸುತ್ತಮುತ್ತಲಿನ ಹಳ್ಳಿಯ ಜನರೂ ಬಂದು ಚಳುವಳಿಯನ್ನು ಬೆಂಬಲಿಸುತ್ತಾರೆ. ಕುಲಕರ್ಣಿ ಹಾಗೂ ಊರಗೌಡನ ಕೈಯಿಂದ ಕಂದಾಯದ ದಫ್ತರನ್ನು ಕಸಿದುಕೊಂಡು ಬೆಂಕಿಕೊಡುತ್ತಾರೆ. ಆದರೆ ಇದೊಂದು ಸತಾರೆಯಲ್ಲಿ ನಡೆದಂತಹ ವಿಭಿನ್ನಾದ ಚಳುವಳಿಯಾಗಿರಲಿಲ್ಲ. ವ್ಯವಸ್ಥಿತವಾದ ಯೋಜನೆಯನ್ನೂ ಈಸೂರಿನ ಜನತೆ ಮಾಡಿರಲಿಲ್ಲ. ಈಸೂರಿನಲ್ಲಿ ಸಬ್‌ಇನ್ಸೆಪೆಕ್ಟರ್ ಚೆನ್ನಕೃಷ್ಣಯ್ಯ ಮತ್ತು ಅಮಲ್ದಾರ ಕೆಂಚೇಗೌಡನವರ ಸಾವು ರಕ್ತಸಿಕ್ತ ಅಧ್ಯಾಯಕ್ಕೆ ನಾಂದಿಯಾಗುತ್ತದೆ. ಈ ಸುದ್ದಿ ಕೂಡಲೇ ಶಿವಮೊಗ್ಗದ ಡಿ.ಸಿ ನವನೀತಂ ನಾಯ್ಡುರವರಿಗೆ ತಲುಪುತ್ತದೆ. ಪೋಲೀಸರು ಹಾಗೂ ಊರಿನವರ ಸಹಾಯದಿಂದ ಆರೋಪಿಗಳ ಪಟ್ಟಿ ಸಿದ್ಧವಾಗುತ್ತದೆ. ಊರಿಗೆ ಬಂದ ಅಮಲ್ದಾರ್ ಅವರು ಊರಿನ ಜನತೆಯಲ್ಲಿ ಒರಟಾಗಿ ನಡೆದುಕೊಂಡು ತಾವೆ ಮೊದಲಾಗಿ ಗುಂಡು ಹಾರಿಸುತ್ತಾರೆ. ಅಲ್ಲಿ ನೆರೆದಿದ್ದ ಜನರು, ಮಕ್ಕಳು ಕೈಗೆ ಸಿಕ್ಕಿದ ಬಡಿಗೆ, ಕಟ್ಟಿಗೆಗಳಿಂದ ಬಡಿದು ಅವರಿಬ್ಬರನ್ನು ಸಾಯಿಸುತ್ತಾರೆ. ಸಾಯಿಸಿ ಅವರಿಬ್ಬರ ಹೆಣವನ್ನು ಸುಟ್ಟು ಹಾಕಲು ಯೋಚಿಸುತ್ತಾರೆ. ಆ ಸಮಯದಲ್ಲಿ ಊರಿನ ಹಿರಿಯ ಬಸವಣ್ಯಪ್ಪನಿಗೆ ಗೊತ್ತಾಗಿ ಬಹಳ ದುಃಖವಾಗುತ್ತದೆ. ಅವರು ಹೆಣವನ್ನು ಸುಟ್ಟು ಹಾಕಲು ಆಸ್ಪದ ಕೊಡುವುದಿಲ್ಲ. ಇಲ್ಲಿ ಊರಿನ ಹಿರಿಯರ ಅನುಪಸ್ಥಿತಿಯಲ್ಲಿ ಇಂತಹ ಘಟನೆ ನಡೆಯುತ್ತದೆ. ಜನ ತಾವೇ ತಾವಾಗಿ ತಮಗೆ ತೋಚಿದ ರೀತಿಯಲ್ಲಿ ವರ್ತಿಸುತ್ತಾರೆ. ಚಿಕ್ಕ ಮಕ್ಕಳ ಕೈಗೆ ಊರಿನ ಅಧಿಕಾರವನ್ನು ಕೊಟ್ಟುದು ಕೂಡ ಇಂತಹ ಒಂದು ದುರ್ಘಟನೆ ನಡೆಯುವುದಕ್ಕೆ ಕಾರಣವಾಗುತ್ತದೆ.

ಈಸೂರಿನ ಪಟೇಲರು ಬ್ರಿಟಿಷ್ ಸರಕಾರದ ಪರವಾಗಿಯೇ ಇದ್ದವರು. ಅವರು ಮನಸ್ಸು ಮಾಡಿದ್ದರೆ ಈಸೂರಿನ ಜನರನ್ನು ರಕ್ಷಿಸಬಹುದಿತ್ತು. ಆದರೆ ಈಸೂರಿನಲ್ಲಿ ಕಣಿವೆಪ್ಪನಂತಹ ದೇಶದ್ರೋಹಿಗಳು ಚಳುವಳಿಗಾರರ ಸೋಗು ಹಾಕಿಕೊಂಡು ಸೇರಿಕೊಂಡಿದ್ದುದು ಪೋಲೀಸರಿಗೆ ಬಹಳ ಉಪಯೋಗವಾಗುತ್ತದೆ. ಈಸೂರಿನಲ್ಲಿ ಬ್ರಿಟಿಷ್ ಸರಕಾರವನ್ನು ಬಗ್ಗುಬಡಿಯಲು ಸುಮಾರು ೩,೦೦೦ಕ್ಕಿಂತಲೂ ಅಧಿಕ ಮಂದಿ ಬಂದು ಸೇರಿದ್ದರು. ಆದರೆ ಕಣಿವೆಯಪ್ಪ ಎಂಬ ದೇಶದ್ರೋಹಿ ಉಪಯವಾಗಿ ಜನರನ್ನು ಚದುರಿಸುತ್ತಾನೆ. ಪೋಲೀಸರು ಮಿಲಿಟರಿ ಅಧಿಕಾರಿಗಳೂ ಬರುವಾಗ

ಈಸೂರು ಬರಿದಾಗಿತ್ತು. ಪೊಲೀಸರ ಅಟ್ಟಹಾಸ ಮೇರೆ ಮೀರುತ್ತದೆ. ೧೯೪೨ರ ಚಳುವಳಿಯಲ್ಲಿ ಜನರ ಮನೆ ಮಠವನ್ನು ನಾಶ ಮಾಡಿ ವಿಕೃತ ಆನಂದವನ್ನು ಪಡೆದುಕೊಳ್ಳುತ್ತಿದ್ದುದು ನಮ್ಮ ಭಾರತದ ಪೊಲೀಸ್ ಅಧಿಕಾರಿಗಳು. ಈಸೂರಿನಲಿ ಪೊಲೀಸರ ವಿಕಟ ನರ್ತನವನ್ನು ವಿವರಿಸಲು ಇದೊಂದು ಉದಾಹರಣೆಯೇ ಸಾಕೆನಿಸುತ್ತದೆ–"ಶ್ರೀಮಂತರ ಮನೆಗಳು ಧಗಧಗನೇ ಉರಿದವು. ಬಡವರ ಮನೆಗಳು ನೆಲಸಮವದವು. ಪೆಟ್ಟಿಗೆಗಳ ಬೀಗ ಒಡೆದು ಬೆಲೆಬಾಳುವ ನಗ ನಾಣ್ಯಗಳನ್ನು ಅಪಹರಿಸುತ್ತಾರೆ. ಪ್ರತಿಭಟಿಸಿದ ಮುದುಕರು, ಮಕ್ಕಳನ್ನು ಮೂಲೆಗೆ ತಳ್ಳಿ ಬಂದೂಕುಗಳನ್ನು ಎದೆಗೊಡ್ಡಿ ಎದುರಿಸಿದರು. ಕಣ್ಣಿಗೆ ಕಂಡವರ ಕೈಗೆ ಕಬ್ಬಣದ ಬೇಡಿ ತೊಡಿಸಿ ಖೂನಿ ಮತ್ತು ದರೋಡೆಯ ಆಪಾದನೆಯ ಮೇಲೆ ದಸ್ತಗಿರಿ ಮಾಡಿದರು. ಲಾಠಿಗಳಿಂದ ತಿವಿಯುತ್ತಾ ಬೂಟುಗಾಲುಗಳಿಂದ ಒದೆಯುತ್ತಾ ಕ್ಯಾಂಪಿಗೆ ಎಳೆದೊಯ್ದರು"[೬೩] ಈ ರೀತಿ ೧೯೪೨ರ ಹೋರಟದಲ್ಲಿ ಈಸೂರಿನ ಜನತೆ ತಮ್ಮ ಸರ್ವಸ್ವವನ್ನು ಕೂಡ ಬಲಿಕೊಟ್ಟರು. "ದೇಶದ್ರೋಹಿಗಳಾಗಿ ಬದುಕುವುದಕ್ಕಿಂತ ದೇಶಪ್ರೇಮಿಗಳಾಗಿ ಸಾಯೋಣ. 'ಮಾಡು ಇಲ್ಲವೆ ಮಡಿ' ಎಂಬುದು ನಮ್ಮ ಜೀವನ ಮಂತ್ರವಾಗಲಿ"[೬೪] ಎಂಬದಾಗಿ ಈಸೂರಿನ ಜನರು ತೀಮಾನಿಸುತ್ತಾರೆ.

ಜನರನ್ನು ರಕ್ಷಿಸಬೇಕಾದ ಸರಕಾರದ ಅಧಿಕಾರಿಗಳೇ ಜನರನ್ನು ಭಕ್ಷಿಸತೊಡಗಿದರು. ಯಾವುದೇ ಸಂದರ್ಭದಲ್ಲಿಯೂ ಬ್ರಿಟಿಷ್ ಸರಕಾರದಲ್ಲಿ ಜನಸಮಾನ್ಯರಿಗೆ ರಕ್ಷಣೆಯಿರಲಿಲ್ಲ. ಊರ ಗೌಡನಿಂದ ಹಿಡಿದು ಸರಕಾರದ ಅಧಿಕಾರಿಗಳವರೆಗೆ ಎಲ್ಲರೂ ಒಂದಲ್ಲ ಒಂದು ರೀತಿಯಲ್ಲಿ ಬಡ ಜನರನ್ನು ಹರಿದು ಮುಕ್ಕಿ ತಿನ್ನುತ್ತಿದ್ದರು. ನಿಜವಾಗಿಯೂ ಭಾರತೀಯರು ತಲೆತಗ್ಗಿಸುವ ಸಂಗತಿಯೆಂದರೆ ಇಂತಹ ಪೊಲೀಸರ ಜೊತೆಯಲ್ಲಿ ಸೇರಿ ಕೆಲವು ಮಂದಿ ದೇಶದ್ರೋಹಿಯಾದ ನಮ್ಮವರೆ ಆದ ಊರಿನ ಜನತೆ ಕೂಡ ಇಂತಹ ದರೋಡೆಗಳಲ್ಲಿ ಭಾಗವಹಿಸಿದ್ದು. ಊರ ಪಟೇಲರು ಕೊಟ್ಟ ಪಟ್ಟಿಯನ್ನು ಅನುಸರಿಸಿ ಒಟ್ಟು ೪೧ ಮಂದಿಯ ಮೇಲೆ ಛಾರ್ಜ್‌ಶೀಟ್ ಸಿದ್ಧವಾಯಿತು. ಅಪರಾದಿಗಳ ವಿಚಾರಣೆಗೆಂದೇ ಸಾಗರದಲ್ಲಿ ಸ್ಪೆಷಲ್ ಮ್ಯಾಜಿಸ್ಟ್ರೇಟರ ಕೋರ್ಟು ಪ್ರಾರಂಭವಾಯಿತು. ತನಿಖೆಯ ನಾಟಕಮಾಡಿ ಎಲ್ಲರನ್ನೂ ಫಾಸಿಗೆ ಹಾಕಬೇಕೆಂದು ಬ್ರಿಟಿಷ್ ಸರಕಾರ ಹಾತೊರೆಯಿತು. ಆದರೆ ಬಂಧಿಸಿದ ಬಹಳಷ್ಟು ಮಂದಿ ನಿಜವಾಗಿಯೂ ನಿರಪರಾಧಿಗಳು. ಕೈಗೆ ಸಿಕ್ಕಿದವರನ್ನೆಲ್ಲಾ ಬಂಧಿಸಿ ಸ್ವಾತಂತ್ರ್ಯಯೋಧರನ್ನು ಕ್ರಿಮಿನಲ್ ಅಪರಾಧಿಗಳೆಂದು ಘೋಷಿಸಲಾಯಿತು. ತನಗೆ ಇಷ್ಟ ಬಂದಂತೆ ಹೊಸ ಕಾನೂನುಗಳನ್ನು ರೂಪಿಸಿಕೊಳ್ಳುವುದು, ತನಗೆ ಅನನುಕೂಲವಾದ ಕಾನೂನುಗಳನ್ನು ರದ್ದುಪಡಿಸುವುದು ಬ್ರಿಟಿಷ್ ಸರಕಾರದಲ್ಲಿ ಸರ್ವೇಸಾಮಾನ್ಯ ವಿಷಯವಾಗಿತ್ತು. ಅವರು ಮಾಡಿದ್ದೇ ಕಾನೂನು, ನೀಡಿದ್ದೇ ತೀರ್ಪು. ನ್ಯಾಯಾಲಯಗಳಲ್ಲಿ ಹೂಡಲಾಗುತ್ತಿದ್ದ ಮೊಕದ್ದಮೆಗಳ ವಿಚಾರವೂ ಅಷ್ಟೇ. ಆ ವಿಚಾರಣೆಗಳ ನಾಟಕ ಕೇವಲ ಜನರ ಕಣ್ಣೊರೆಸುವುದಕ್ಕಾಗಿ. ಸ್ವಾತಂತ್ರ್ಯ ಬೇಕೆಂದ ಪ್ರಜೆಗಳನ್ನು ಜೈಲಿಗೆ ತಳ್ಳಲು ಅವು ಎಷ್ಟು ಬೇಕೋ ಅಷ್ಟು ಕೆಲಸವನ್ನು ನಿರ್ವಿಘ್ನವಾಗಿ ನೆರವೇರಿಸುತ್ತಿದ್ದವು. ಪ್ರಜೆಗಳಿಗೆ ಹಿಂಸಾತ್ಮಕವಾದ ಇಂತಹ ವಿಚಾರಣೆಗಳಲ್ಲಿ ಭಾಗವಹಿಸುವುದೇ ಪಾಪಕಾರ್ಯವೆಂದು ಭಾವಿಸಿ ಎಷ್ಟೋ ಜನರು ತಮ್ಮ ವಕೀಲಿ ಕೆಲಸಕ್ಕೆ ರಾಜೀನಾಮೆ ಕೊಟ್ಟಿದ್ದರು.[೬೫]

ಈಸೂರಿನ ಚಳುವಳಿಯಲ್ಲಿ ಕೊನೆಗೂ ಐದುಮಂದಿಗೆ ಮರಣದಂಡನೆ ಕಾಯಂ ಆಗುತ್ತದೆ. ಆ ಐದು ಮಂದಿ ವೀರರೆಂದರೆ ಗುರಪ್ಪ, ಮಲ್ಲಪ್ಪ, ಶಂಕರಪ್ಪ, ಹಾಲಪ್ಪ, ಸೂರ್ಯನಾರಾಯಣಾಚಾರ್. ೧೯೪೩ ಮಾರ್ಚ್ ತಿಂಗಳಲ್ಲಿ ಈ ಐವರನ್ನು ಗಲ್ಲಿಗೇರಿಸಲಾಯಿತು. ಮೈಸೂರಿನ ಮಹಾರಾಜರು ಮನಸ್ಸು ಮಾಡಿದ್ದರೆ ಆ ಮರಣದಂಡನೆಯನ್ನು ತಪ್ಪಿಸಬಹುದಿತ್ತೇನೋ. ಆದರೆ ಬ್ರಿಟಿಷ್ ಸರಕಾರದ ಕೃಪಾಕಟಾಕ್ಷದಲ್ಲಿ ಬದುಕುತ್ತಿರುವ ಅವರು ಪ್ರಜೆಗಳ ಸಲುವಾಗಿ ಘನವೆತ್ತ ಸರಕಾರದಲ್ಲಿ ನಿಷ್ಠುರ ಕಟ್ಟಿಕೊಳ್ಳಲು ಸಿದ್ಧರಾಗಿರಲಿಲ್ಲ. ಹೀಗೆ ೧೯೪೨ರ ಚಳುವಳಿಯಲ್ಲಿ ಈಸೂರೆಂಬ ಚಿಕ್ಕ ಹಳ್ಳಿಯಲ್ಲಿ ನಿರಪರಾಧಿಗಳಾದ ಐವರು ಸ್ವಾತಂತ್ರ್ಯವೀರರ ತಲೆದಂಡವಾಗುತ್ತದೆ. ಆದರೆ ಇತಿಹಾಸ ಅಧ್ಯಯನ ಮಾಡುವ ನಮ್ಮ ವಿದ್ಯಾರ್ಥಿಗಳು ಕೇವಲ ಕೆಲವೇ ಕೆಲವು ಮಂದಿಯಿಂದ ನಮ್ಮ ಭಾರತ ಸ್ವತಂತ್ರವಾಯಿತೆಂಬ ಅತೀ ರಂಜನೀಯ ಚರಿತ್ರೆಯನ್ನೇ ಓದುತ್ತಿದ್ದಾರೆ. ನಮ್ಮ ಹತ್ತಿರದ ಊರುಗಳಲ್ಲೇ ನಡೆದ ಚಳುವಳಿ, ಜನರ ತ್ಯಾಗ ಬಲಿದಾನಗಳ ಕುರಿತು ನಮ್ಮ ವಿದ್ಯಾರ್ಥಿಗಳು ಇನ್ನೂ ಅಜ್ಞಾನಿಗಳಾಗಿದ್ದಾರೆ.

'ಗಾಂಧೀ ಕೀ ಜೈ' 'ಭಾರತ ಮಾತಾ ಕೀ ಜೈ' ಎಂಬುದಾಗಿ ಹೇಳುವುದು ಬಹಳ ದೊಡ್ಡ ಅಪರಾಧವಾಗಿತ್ತು. ಹೀಗೆ ಘೋಷಣೆ ಕೂಗಿದ ಪ್ರೈಮರಿ ಶಾಲೆಯ ಹುಡುಗರನ್ನು ಕೂಡ ಪೊಲೀಸರು ಹೊಡೆಯುತ್ತಿದ್ದರು. ಪೊಲೀಸರ ವರ್ತನೆ ನೋಡಿ ದೇಶಕ್ಕೆ ದೇಶವೇ ಅಸಹ್ಯಪಟ್ಟಿತು. ಅಧಿಕಾರಿಗಳ ಕೈವಾಡ ವಿದ್ಯಾರ್ಥಿಗಳ ಮೇಲೆಯೇ ನಡೆಯಿತು. ೪೨ನೇ ಆಗಸ್ಟಿನಿಂದ ಪೊಲೀಸರಿಗೆ ಲಾಠಿ ಬಾರಿಸುವುದೊಂದೇ ಕೆಲಸವಾಯಿತು. ಬಾಲಕರು ಶಾಲೆಗೆ ಹೋಗದಿದ್ದರೂ ದಸ್ತಗಿರಿ, ಮೆರವಣಿಗೆ ಹೊರಟರೂ ದಸ್ತಗಿರಿ– ಹೀಗೆ ಜಗತ್ತಿನ ಯಾವ ಭಾಗದಲ್ಲಿ ನಡೆಯದಷ್ಟು ದಸ್ತಗಿರಿ, ಶಿಕ್ಷೆ ವಿದ್ಯಾರ್ಥಿಗಳ ಮೇಲೆಯೂ ನಡೆಯಿತು.

೧೯೪೨ರ ಸಮಯದಲ್ಲಿ ಜಿಲ್ಲಾ ಲಾಕಪ್ಪುಗಳನ್ನೆಲ್ಲಾ ಸಬ್ ಜೈಲುಗಳನ್ನಾಗಿ ಮಾಡಿದರು. ಈ ಎಲ್ಲಾ ಜೈಲುಗಳು ದೇಶಭಕ್ತ ಕೈದಿಗಳಿಂದ ಭರ್ತಿಯಾದಾಗ ಹೊಸ ಹೊಸ ಜೈಲುಗಳನ್ನು ಏರ್ಪಡಿಸುವುದು ಕೂಡ ಸರಕಾರಕ್ಕೆ ಸವಾಲಿನ ಕೆಲಸವಾಗಿತ್ತು. ಛತ್ರಗಳು, ದನದ ಕೊಟ್ಟಿಗೆಗಳು, ಕಿವುಡರ ಮೂಗರ ಪಾಠಶಾಲೆಗಳು, ಅನಾಥ ನಿಶ್ಶಕ್ತರ ಆಶ್ರಯ ಸ್ಥಾನಗಳೂ ಸೆರೆಮನೆಗಳಾಗಿ ಪರಿವರ್ತನೆಗೊಂಡವೆಂಬುದಾಗಿ ಲೇಖಕ ಗೊರೂರು ಅವರು ಹೇಳುತ್ತಾರೆ. ಅವರು ಸ್ವತಃ ಚಳುವಳಿಯಲ್ಲಿ ಭಾಗವಹಿಸಿ ಸೆರೆಮನೆವಾಸವನ್ನು ಅನುಭವಿಸಿದರಾದ ಕಾರಣ ಇಲ್ಲಿ ಅವರ ಅನುಭವವು ಅತ್ಯಂತ ಮಹತ್ವದ್ದು. ಆಗ ಹಾಸನದ ಸೆರೆಮನೆಯಲ್ಲಿ ನಮ್ಮ ದೇಶದ ಮುಖಂಡರನ್ನೆಲ್ಲ ಇಟ್ಟಿದ್ದರು. ಸುದರ್ಶನನು ಅಲ್ಲೇ ಇದ್ದನು. ಅಂದು ಹಾಸನದ ಸೆರೆಮನೆಯಲ್ಲಿ ಕೆ.ಟಿ. ಭಾಷ್ಯಂ, ಕೆ. ಪಟ್ಟಾಭಿರಾಮನ್, ಟಿ. ಸುಬ್ರಹ್ಮಣ್ಯಂ, ತಗಡೂರು ರಾಮಚಂದ್ರ ರಾಯರು, ಆರ್. ಮಾಧವರಾವ್ ಮುಂತಾದ ಪ್ರಮುಖರಿದ್ದರು.

೧೯೪೨ರ ಸಮಯದಲ್ಲಿ ಯಾವ ಜೈಲಿನಲ್ಲಿ ಕೂಡಾ ಸ್ಥಳವಿರಲಿಲ್ಲ. ದಿನಂಪ್ರತಿ ನೂರಾರು ಕೈದಿಗಳು ಬರುತ್ತಿದ್ದರು. ದರೋಡೆಕೋರರು, ಕಳ್ಳರು, ಸುಳ್ಳರಿಗಾಗಿ ಮಾಡಿದ ಜೈಲುಗಳಲ್ಲಿ ದೇಶದ

ಕುಲೀನ ಮನೆತನದ ದೇಶಪ್ರೇಮಿಗಳನ್ನೆಲ್ಲಾ ತುಂಬಿಸಿದರೆ ಸ್ಥಳವೆಲ್ಲಿಯದು? ಎಂಬುದಾಗಿ ಲೇಖಕರು ಮನಸ್ಸಿನಲ್ಲಿ ಯೋಚಿಸುತ್ತಾರೆ. ಪೊಲೀಸರು ಸತ್ಯಾಗ್ರಹಿಗಳನ್ನು ಹಿಡಿದು ನಡುರಾತ್ರಿಯಲ್ಲಿ ಕಾಡಿನಲ್ಲಿ ಬಿಟ್ಟು ಬರುತ್ತಿದ್ದರು. ಆದರೂ ಸತ್ಯಾಗ್ರಹಿಗಳ ಸಂಖ್ಯೆಯೇನೂ ಕಡಿಮೆಯಾಗಲಿಲ್ಲ. ಕೆಲವೊಂದು ಜಿಲ್ಲಾಧಿಕಾರಿಗಳು ಹಾಗೂ ಪೊಲೀಸ್ ಅಧಿಕಾರಿಗಳು ಜನರ ಮನಸ್ಸಿನಲ್ಲಿ ಜಾತಿ ಮತ ಭೇದದ ವಿಷಬೀಜವನ್ನು ಬಿತ್ತಿ ಕಾಂಗ್ರೆಸನ್ನು ಒಡೆಯಲು ಪ್ರಯತ್ನಿಸುತ್ತಿದ್ದರು. ಆದರೂ ದೇಶಪ್ರೇಮದ ಕಿಚ್ಚು ಎಲ್ಲಾ ಜಾತಿ ಮತ ಧರ್ಮಗಳನ್ನು ಮೀರಿದುದಾಗಿತ್ತು. ಆದುದರಿಂದ ಅಷ್ಟೊಂದು ಸುಲಭದಲ್ಲಿ ಜನರ ಮನಸ್ಸನ್ನು ಒಡೆಯಲು ಅಧಿಕಾರಗಳಿಗೆ ಸಾಧ್ಯವಾಗುತ್ತಿರಲಿಲ್ಲ.

೧೯೪೩ರ ಚಳುವಳಿಯ ಸಂದರ್ಭದಲ್ಲಿ ಸುಮಾರು ಮೂರು ಸಾವಿರ ಸತ್ಯಾಗ್ರಹಿಗಳು ಕೇಂದ್ರ ಸೆರೆಮನೆಯಲ್ಲಿದ್ದರು. ಕೆಲವು ದಂಪತಿಗಳು ಕೂಡ ಚಳುವಳಿಯಲ್ಲಿ ಭಾಗವಹಿಸಿ ಜೊತೆಯಾಗಿ ಜೈಲು ಸೇರಿದ್ದರು. ಬ್ರಿಟಿಷ್ ಸರಕಾರದಲ್ಲಿ ಕಾಂಗ್ರೆಸ್ಸಿನವರಿಗೆ ಅನ್ನ ಹಾಕಿದ್ದಕ್ಕೆ, ಹೋಟೆಲಿನವರು ತಿಂಡಿ ಕೊಟ್ಟರೆ, ಗಾಂಧಿಟೋಪಿ ಹಾಕಿಕೊಂಡರೆ ಎಲ್ಲವೂ ದಸ್ತಗಿರಿಗೆ ಕಾರಣವಾಗುತ್ತಿದ್ದವು. ಚಳುವಳಿಗೆ ಸಹಕರಿಸದಿದ್ದರೆ ಊರಿನವರ ನಿಷ್ಠುರ ಕಟ್ಟಿಕೊಳ್ಳಬೇಕಾಗುತ್ತಿತ್ತು. ಊರಿನವರು ಅವರನ್ನು ಬಹಿಷ್ಕರಿಸುತ್ತಿದ್ದರು. ಅದಕ್ಕೆ ಕೆಲವರು ಮನಸ್ಸಿಲ್ಲದಿದ್ದರೂ ಭಯದಿಂದ ಚಳುವಳಿಗೆ ಸಹಕರಿಸುತ್ತಿದ್ದರು.

ದಸ್ತಗಿರಿ ಮಾಡುವುದಕ್ಕೆ ಯಾವುದೇ ಒಂದು ಗಂಭೀರವಾದ ಕಾರಣ ಇರಬೇಕಾಗಿರಲಿಲ್ಲ. ದಸ್ತಗಿರಿ ಮಾಡಿದವರ ವಿರುದ್ಧ ಸಾಕ್ಷಿ ಹೇಳಲು ಊರಿನವರು ಯಾರು ಹೆಚ್ಚಿನ ಸಂದರ್ಭಗಳಲ್ಲಿ ಮುಂದೆ ಬರುತ್ತಿರಲಿಲ್ಲ. ಆಗ ಪೊಲೀಸಿನವರೇ ಅವರ ವಿರುದ್ಧ ಸಾಕ್ಷಿ ಹೇಳಬೇಕಿತ್ತು. ಅಂತಹ ಒಂದೆರಡು ನಿದರ್ಶನಗಳನ್ನು ಈ ಕಾದಂಬರಿ ನೀಡುತ್ತದೆ. ತೀರ್ಥಹಳ್ಳಿಯ ವಿದ್ಯಾರ್ಥಿಗಳನ್ನು ದಸ್ತಗಿರಿ ಮಾಡಲಾಗುತ್ತದೆ. ವಿದ್ಯಾರ್ಥಿಗಳ ಮೊಕದ್ದಮೆಯಲ್ಲಿ ಮೊಸಳೆ ಮಡುವಿನಲ್ಲಿ ಎರಡು ಲಾರಿ ತಂತಿ ಸಿಕ್ಕಿದುದಲ್ಲದೆ ಅವರುಗಳ ಕೊಠಡಿಯನ್ನು ಹುಡುಕಿದಾಗ ಇನ್ನೂ ಏನೇನೋ ಸಿಕ್ಕಿತು. ಕಟಾಂಜನದಲ್ಲಿ ನಿಂತ ಪೋಲೀಸ್ ಜವಾನನನ್ನು ಇನ್ಸ್‌ಪೆಕ್ಟರು ಇವರ ಕೊಠಡಿಯಲ್ಲಿ ಏನೇನು ಸಿಕ್ಕಿತು ಎಂದು ಕೇಳಿದಾಗ– "ಕರ್ನಾಟಕ ವೀರರೇ ಏಳಿರೇಳಿ ಒಂದು ಸಿಕ್ಕಿತು" ಎಂದನು. ನ್ಯಾಯಾಧಿಪತಿಗಳು "ಅದೇನು ಆಯುಧವೇ, ಬಂದೂಕವೇ, ಬಾಂಬೇ" ಎಂದು ಕೇಳಿದರು. ಸಾಕ್ಷಿಗೆ ಅದು ಸರಿಯಾಗಿ ತಿಳಿದಿರಲಿಲ್ಲ. ಅವನು "ಅದೊಂದು ಕಾಗದ" ಎಂದನು. ನ್ಯಾಯಾಧಿಪತಿಗಳು "ಆ ಕಾಗದ ಯಾಕೆ ಇವರ ಕೈಲಿ ಇರಬಾರದು?" ಎಂದರು. ಸಾಕ್ಷಿ ಪೆಚ್ಚಾದನು ಇನ್ಸ್‌ಪೆಕ್ಟರ್ ಅಪರಾಧಿಯನ್ನು ತೋರಿಸಿ "ಇವರು ಯಾರು?" ಎಂದರು. ಸಾಕ್ಷಿಯು "ಕಾಂಗ್ರೆಸ್ಸಿನವರು" ಎಂದನು. ಇನ್ಸ್‌ಪೆಕ್ಟರು "ಇವರು ಏನು ಮಾಡಿದರು?" ಸಾಕ್ಷಿಯು "ಲೆಕ್ಚರ್" ಎಂದ. ಇನ್ಸ್‌ಪೆಕ್ಟರು

"ಏನಂತ?"

ಸಾಕ್ಷಿ – ಅದೇ ಲೆಕ್ಚರ್, ಹೆಂಡಕುಡೀಬೇಡಿ ಅಂತ ಎಂಬುದು ಪೋಲೀಸಿನವರ ಮೊಕದ್ದಮೆ

ಇನ್ಸ್‌ಪೆಕ್ಟರ್ – ಆಮೇಲೆ

ಸಾಕ್ಷಿ– ಅದೇ; ಖಾದಿ ಹಾಕಿಕೊಳ್ಳಿ.

ಇನ್ಸ್‌ಪೆಕ್ಟರ್ –ಆಮೇಲೆ

ಸಾಕ್ಷಿ– ಅದೇ ಸಾರ್, ಒಗ್ಗಟ್ಟಾಗಿರಬೇಕು

ಇನ್ಸ್‌ಪೆಕ್ಟರ್ – ಆಮೇಲೆ

ಸಾಕ್ಷಿ– ಆಮೇಲೆ; ಆಮೇಲೆ ಸ್ವರಾಜ್ಯ

ಅವನ ಕೈಯಿಂದ ಜವಾಬ್ದಾರಿ ಸರಕಾರ ಅಥವಾ ಕಾನೂನಿಗೆ ವಿರುದ್ಧವಾಗಿ ಏನೋ ಹೇಳಿದ್ದಾನೆ ಎಂದು ಹೇಳಿಸಬೇಕೆಂದು ಇನ್ಸ್‌ಪೆಕ್ಟರ್ ಇಚ್ಛೆ. ಆದರೆ ಸಾಕ್ಷಿಗೆ ಅದು ತಿಳಿಯಲಿಲ್ಲ. ಪೊಲೀಸಿನವರು ಬರಿಯ "ಕರ್ನಾಟಕ ವೀರರೇ ಏಳಿರೇಳಿ" ಪತ್ರ ತೆಗೆದುಕೊಂಡು ಹೋಗಲು ಹೇಳಿದನು.[೬೬] ಇಷ್ಟು ಭಾರತ ರಕ್ಷಣೆಗೆ ವಿರೋಧವಾದ ಸಾಮಾನು ಆ ವಿದ್ಯಾರ್ಥಿಯಲ್ಲಿ ಸಿಕ್ಕದ ಕೂಡಲೇ ಅವನನ್ನು ದಸ್ತಗಿರಿ ಮಾಡಿ ಸೆರೆಯಲ್ಲಿಟ್ಟಿದ್ದರು. ಆದುದರಿಂದಲೇ ಭಾರತ ದೇಶದ ಸೆರೆಮನೆಗಳೆಲ್ಲವೂ ಚಳುವಳಿಯ ಸಂದರ್ಭಗಳಲ್ಲಿ ತುಂಬಿ ತುಳುಕುತ್ತಿದ್ದವು.

## ಗಾಂಧಿಯ ಪರ–ವಿರೋಧ ವಿಚಾರಗಳು

೧೯೨೦ರಲ್ಲಿ ಸ್ವಾತಂತ್ರ್ಯ ಚಳುವಳಿಗೆ ಗಾಂಧೀಜಿಯ ಪ್ರವೇಶ ಆದಂದಿನಿಂದ ೧೯೪೭ರವರೆಗೆ ಭಾರತಕ್ಕೆ ಸ್ವಾತಂತ್ರ್ಯ ದೊರಕುವವರೆಗೂ ಗಾಂಧೀಜಿ ಸ್ವಾತಂತ್ರ್ಯ ಚಳುವಳಿಯ ನಿಜವಾದ ಸೇನಾಧಿಪತಿ. ಸ್ವಾತಂತ್ರ್ಯ ಚಳುವಳಿ ಕುರಿತಾಗಿ ನಡೆದ ಬೇರೆ ಬೇರೆ ಕ್ರಾಂತಿಗಳ ರುವಾರಿ ಗಾಂಧಿಯೆಂದರೆ ತಪ್ಪಾಗಲಾರದು. ಕೇವಲ ಕೆಲವರ ಹೋರಾಟವಾಗಿದ್ದ ಸ್ವಾತಂತ್ರ್ಯ ಚಳುವಳಿಯನ್ನು ಜನಸಮಾನ್ಯರ ಹೋರಾಟವಾಗಿ ಮಾರ್ಪಡಿಸಿದವರು ಗಾಂಧೀಜಿ. ಹಳ್ಳಿಯ ಅನಕ್ಷರಸ್ಥ ಜನತೆಯಿಂದ ಹಿಡಿದು ಹೆಣ್ಣುಮಕ್ಕಳಾದಿಯಾಗಿ ದೇಶಕ್ಕೋಸ್ಕರ ಸರ್ವತ್ಯಾಗಕ್ಕೂ ಸಿದ್ಧರಾದರು. ಈ ಮಟ್ಟದಲ್ಲಿ ರಾಷ್ಟ್ರೀಯ ಚಳುವಳಿಯೊಂದನ್ನು ಜನಸಾಮಾನ್ಯರ ಚಳುವಳಿಯನ್ನಾಗಿಸಿದ ಕೀರ್ತಿ ಖಂಡಿತವಾಗಿಯೂ ಗಾಂಧೀಜಿಗೆ ಸಲ್ಲಬೇಕು.

ಭಾರತದ ರಾಜಕೀಯ ರಂಗದಲ್ಲಿ ಗಾಂಧಿ ಕಾಲಿಡುವ ಹೊತ್ತಿಗೆ ನಮ್ಮ ರಾಷ್ಟ್ರೀಯ ಪ್ರಜ್ಞೆ ಎತ್ತರಗೊಂಡಿತ್ತು. ಆದರೆ ಆ ಸ್ವಾತಂತ್ರ್ಯ ಹೋರಾಟದಲ್ಲಿ ನಮ್ಮೆಲ್ಲರ ಪಾಲೂ ಇದೆ ಎಂಬ ಸಾಮೂಹಿಕ ಪ್ರಜ್ಞೆ ಅಷ್ಟಾಗಿ ಬಂದಿರಲಿಲ್ಲ. ಗಾಂಧಿ ಬಂದ ಮೇಲೆ ಜನತೆಯಲ್ಲಿ ಒಂದು ಅದ್ಭುತವಾದ ಮಾರ್ಪಾಡು ಕಾಣಿಸಿಕೊಂಡಿತು. ಅದನ್ನು ಕುರಿತು ಜವಾಹರಲಾಲ್ ನೆಹರು

ಕವಿಸಹಜ ಶೈಲಿಯಲ್ಲಿ ಹೇಳಿದರಂತೆ–'ಬಿರುಗಾಳಿಯಂತೆ ಬಂದ ಅವರು ನಾನಾ ವಸ್ತುಗಳನ್ನು ಪಲ್ಲಟಗೊಳಿಸಿದರು; ಆದರೆ ಎಲ್ಲಕ್ಕಿಂತ ಹೆಚ್ಚಾಗಿ ಅವರು ಪಲ್ಲಟಗೊಳಿಸಿದ್ದು ಜನರ ಆಲೋಚನಾಧರೆಯನ್ನು'.

ಅಹಿಂಸಾಮಾರ್ಗವಲ್ಲದೆ ಗಾಂಧೀಜಿಯವರ ಸ್ವಾತಂತ್ರ್ಯ ಹೋರಾಟದ ಕಲ್ಪನೆಯಲ್ಲಿ ಇನ್ನೂ ಒಂದು ವಿಶೇಷವಿತ್ತು. ಅವರು ರಾಜಕೀಯ ಹೋರಾಟದೊಂದಿಗೆ ಸಮಾಜ ಸುಧಾರಣೆಯನ್ನು ಕೈಗೊಂಡರು. ಈ ಗಾಂಧಿಯೆಂಬ ಬಿರುಗಾಳಿ ಭಾರತದ ಮೂಲೆ ಮೂಲೆಗೂ ಬೀಸಿತು. ದೊಡ್ಡ ದೊಡ್ಡ ಶಹರುಗಳಲ್ಲದೆ ಸಣ್ಣ ಪುಟ್ಟ ಊರುಗಳು, ಹಳ್ಳಿಗಳಲ್ಲೆಲ್ಲ ಬೀಸಿತು. ಯುವಕರು, ಹಿರಿಯರು, ಮುದುಕರು, ಕೆಲಸಗಾರರು, ದಣಿಗಳು, ಪ್ರತಿಷ್ಠಿತರು, ದೀನರು ಮೇಲ್ಜಾತಿಯವರು, ಅತ್ಯಂತ ಕೆಳಜಾತಿಯವರು– ಎಲ್ಲರಿಗೂ ಸ್ವಾತಂತ್ರ್ಯ ಸಂಗ್ರಾಮದ ಕರೆ ಇತ್ತಿತು. ಅದಕ್ಕೆ ಎಲ್ಲರೂ ಒಂದೇ ರೀತಿಯಲ್ಲಿ ಓಗೊಟ್ಟರೆಂದು ಹೇಳಲಾಗದಿದ್ದರೂ ಹಿಂದೆಂದೂ ಕಂಡಿರದಷ್ಟು ಜನ, ಊಹಿಸಲಾರದಷ್ಟು ಜನ ಈ ಕರೆಗೆ ಓಗೊಟ್ಟರು. ಅದರ ಪ್ರಭಾವಕ್ಕೆ ಒಳಗಾದರು, ಜನರ ಮನಸ್ಸುಗಳಲ್ಲಿ, ಸಂಸಾರಗಳಲ್ಲಿ, ರಾಜಕೀಯದಲ್ಲಿ ಬದಲಾವಣೆಗಳು ಕಾಣಿಸತೊಡಗಿದವು.[೬೨]

ಅವರ ದೃಷ್ಟಿಯಲ್ಲಿ ಸ್ವಾತಂತ್ರ್ಯವೆಂದರೆ ಬರಿಯ ಹೋರಾಟವಲ್ಲ; ಸಮಾಜ ಸುಧರಣೆ ಕೂಡ ಅದರ ಒಂದು ಭಾಗ. ಸಮಾಜ ಸುಧರಣೆಯಾದರೆ ಮಾತ್ರ ಬ್ರಿಟಿಷರನ್ನು ಭಾರತದಿಂದ ಓಡಿಸಲು ಸಾಧ್ಯವೆಂಬುದಾಗಿ ಅವರು ಮನಗಂಡಿದ್ದರು. ಆದುದರಿಂದ ಸ್ವಾತಂತ್ರ್ಯದ ಅವಿಭಾಜ್ಯ ಅಂಗವಾಗಿ ಅಹಿಂಸಾ ಹೋರಾಟದ ಜೊತೆ ಜೊತೆಯಲ್ಲಿ ಸಮಾಜಸುಧಾರಣೆ ಸಾಗಲಾರಂಭಿಸಿತು. ಹರಿಜನೋದ್ಧಾರ, ಗ್ರಾಮೋದ್ಧಾರ, ಪಾನ ನಿರೋಧ, ಸ್ತ್ರೀ ಸಮಾನತೆ, ಸಾಮಾಜಿಕ ಸಮಾನತೆ, ಹಿಂದು ಮುಸ್ಲೀಂ ಐಕ್ಯತೆ – ಇವೆಲ್ಲವೂ ಗಾಂಧೀಜಿಯ ಕನಸಾಗಿತ್ತು. ಇವುಗಳನ್ನು ಸಾಧಿಸಿದರೆ ಮಾತ್ರ ಭಾರತ ಸ್ವಾತಂತ್ರ್ಯವನ್ನು ಪಡೆದು ಕೊಳ್ಳಲು ಸಾಧ್ಯವೆಂಬುದು ಅವರ ದೃಢವಾದ ನಂಬಿಕೆಯಾಗಿತ್ತು. ಅವರ ಅನುಯಾಯಿಗಳು ಅವರ ಈ ಎಲ್ಲಾ ಆದರ್ಶಗಳನ್ನು ಸಮಾಜದಲ್ಲಿ ಅಳವಡಿಸಲು ಪ್ರಾರಂಭಿಸಿದರು. ಅದರೆ ಗಾಂಧೀಜಿ ಒಬ್ಬರು ರಾಷ್ಟ್ರೀಯ ನಾಯಕರಾದರೂ ಕೂಡ, ಬಹಳಷ್ಟು ಹಳ್ಳಿಯ ಜನ ಅವರ ತತ್ವಕ್ಕೆ ಮಾರು ಹೋಗಿದ್ದರೂ ಸಹ ಎಲ್ಲಾ ಜನರಿಗೆ ಗಾಂಧಿಯ ತತ್ವ ಆದರ್ಶದ ಕುರಿತು ಒಪ್ಪಿಗೆಯಿರಲಿಲ್ಲ. ಗಾಂಧೀಜಿಯವರದ್ದು ಒಂದು ರೀತಿಯಲ್ಲಿ ಸರ್ವಾಧಿಕಾರಿ ಧೋರಣೆಯೆಂಬುದು ಕೆಲವರ ಅಭಿಮತ. ತಮ್ಮ ಮನಸ್ಸಿಗೆ ಬಂದುದೇ ನಡೆಯಬೇಕು; ಇಲ್ಲದಿದ್ದರೆ ಸತ್ಯಾಗ್ರಹದ ಬೆದರಿಕೆ. ಕಟ್ಟಾ ಸಂಪ್ರದಾಯಸ್ಥರು ಕೂಡ ಗಾಂಧಿಯ ಆದರ್ಶ ಹಾಗೂ ಸಾಮಾಜಿಕ ಸಮಾನತೆಯನ್ನು ವಿರೋಧಿಸುತ್ತಿದ್ದರು. ಅಹಿಂಸೆಯ ಹೋರಾಟದಲ್ಲಿ ನಂಬಿಕೆಯಿಲ್ಲದ ಬಹಳಷ್ಟು ಮಂದಿ, ಸಶಸ್ತ್ರ ಹೋರಾಟದಲ್ಲಿ ನಂಬಿಕೆಯಿಟ್ಟಂತಹ ಜನರು ಗಾಂಧೀಜಿಯ ತತ್ವಗಳನ್ನು ಒಪ್ಪುತ್ತಿರಲಿಲ್ಲ. ಹೀಗೆ ಕೆಲವೊಂದು ಸೈದ್ಧಾಂತಿಕ ಭಿನ್ನಾಭಿಪಾಯಗಳು ಕಂಡುಬರುತ್ತಿದ್ದವು. ಆದರೆ ಕೆಲವರ ಪಾಲಿಗಂತೂ ಗಾಂಧೀಜಿ ಶ್ರೀಕೃಷ್ಣ ಪರಮಾತ್ಮನ ಅವತಾರವೇ ಆಗಿದ್ದರು. ಭಾರತ ದೇಶಕ್ಕೆ ಸ್ವಾತಂತ್ರ್ಯವನ್ನು ತಂದುಕೊಡಲೆಂದೇ ಜನ್ಮ ತಾಳಿದ ಮಹಾತ್ಮ, ಗಾಂಧೀಜಿಯ ಆದರ್ಶವನ್ನು ಅವರು ಅಕ್ಷರಶಃ ಪಾಲಿಸುತ್ತಿದ್ದರು. ಗಾಂಧಿ ಯಾವ ನಿರ್ಧಾರ

ಕೈಗೊಂಡರೂ ಸರಿಯೇ ಅವರು ದೇಶದ ಒಳಿತನ್ನು ದೃಷ್ಟಿಯಲ್ಲಿಟ್ಟುಕೊಂಡೇ ಕೈಗೊಳ್ಳುತ್ತಾರೆಂಬುದು ಗಾಂಧಿವಾದಿಗಳ ಅಚಲವಾದ ನಂಬಿಕೆ. ಈ ಕಾರಣಗಳಿಂದ ಅವರು ಗಾಂಧಿಯ ತತ್ವಗಳನ್ನು ಅಕ್ಷರಶಃ ಪಾಲಿಸುತ್ತಿದ್ದರು.

ಗಾಂಧೀಜಿಯ ವಿಚಾರಗಳನ್ನು ಒಪ್ಪದೆ ಇದ್ದ ಜನರು ಕೂಡಾ ಗಾಂಧೀಜಿಯ ವರ್ಚಸ್ಸು, ದೇಶದ ಎಲ್ಲಾ ಜನಕೋಟಿಯನ್ನು ಕಾಂಗ್ರೆಸ್ಸಿನಡಿ ಸ್ವಾತಂತ್ರ್ಯ ಹೋರಾಟಕ್ಕೆ ಎಲ್ಲಾ ಅಸಮಾನತೆಗಳನ್ನು ಮರೆಸಿ ಒಂದುಗೂಡಿಸಿತು ಎಂಬ ವಿಚಾರವನ್ನು ಒಪ್ಪಿಕೊಳ್ಳುತ್ತಾರೆ. 'ಅಮರ ಆಗಸ್ಟ್' ಕಾದಂಬರಿಯಲ್ಲಿ ಮಾನಪ್ಪನು– "ಹತ್ತುವರ್ಷಗಳ ಅನ್ಯಾಧೃಶ್ಯಸೇವೆಯಿಂದ ಗಾಂಧೀಜಿ ಭಾರತದ ಚಿತ್ತದಾಸ್ಯವನ್ನು ನೀಗಿದರು. ಕ್ರಾಂತಿಯನ್ನು ಶಾಂತಿ, ಸಮನ್ವಯ, ಸಮತೆಗಳ ಹಿಡಿತದಲ್ಲಿಟ್ಟು ರಕ್ತಪಾತ ತಡೆದರು. ಕಾರಣವಿಷ್ಟೇ– ಬಾಪೂ ಲೆನಿನನಂತೆ ಕೇವಲ ರಾಜಕಾರಣ ಪಟುವಾಗಿಲ್ಲ. ಧರ್ಮರಕ್ಷಕರೂ ಆಗಿದ್ದಾರೆ. ನಮ್ಮದೇಶದಲ್ಲಿ ಸಾಮಾನ್ಯ ಮನುಷ್ಯನ ಆರ್ಥಿಕ ದೆಸೆ ಸುಧಾರಿಸಿ, ಅವನು ಅನ್ನ, ವಸತಿ, ವಸ್ತ್ರಗಳಿಗೆ ಚಿಂತೆಮಾಡದಂತಾಗಬೇಕೆಂಬುದು ಗಾಂಧೀಜಿಯವರ ಇಚ್ಚೆ. ಸಾಮಾನ್ಯ ಮನುಷ್ಯನ ಆರ್ಥಿಕ ದೆಸೆ ಸುಧಾರಿಸಬೇಕಾದರೆ ಅವನು ಪರಾವಲಂಬನೆ ಹೋಗಬೇಕು. ಖಾದಿ ತಕ್ಕಮಟ್ಟಿಗೆ ಅವನ ಒಂದು ಸಮಸ್ಯೆಯನ್ನಾದರೂ ಪರಿಹರಿಸುತ್ತದೆ. ಗಾಂಧೀಜಿಯ ಪೂರ್ವದಲ್ಲಿದ್ದ ಯಾವ ರಾಜಕಾರಣಿಯೂ ಸಾಮಾನ್ಯ ಮನುಷ್ಯನ ಪರಿಭಾಷೆಯಲ್ಲಿ ರಾಜಕಾರಣವನ್ನು ನೋಡಲಿಲ್ಲ."[೬೮] ಹೀಗೆ ಗಾಂಧೀಜಿಯ ಸ್ವಾತಂತ್ರ್ಯದ ಜೊತೆಯಲಿ ಬಡಜನತೆಯು ಸ್ವಾವಲಂಬನೆಯಿಂದ ಬದುಕಬೇಕೆಂದು ಬಯಸಿದವರು.

ಹಳ್ಳಿಯ ರೈತರಿಗೆ ಕೂಡಾ ಗಾಂಧಿ ಬಗ್ಗೆ ತಿಳಿದಿತ್ತು. ಗಾಂಧಿಯೊಬ್ಬರು ಜನಮನವನ್ನು ಆಕ್ರಮಿಸಿದ ರಾಜಕಾರಣಿ. ಹಳ್ಳಿಗಳಲ್ಲಿ ಗಾಂಧಿ ಕುರಿತಾಗಿ ಲಾವಣಿಗಳು ಹುಟ್ಟಿಕೊಂಡವು. ಇವು ಬೆಳಗಾವಿ ಪ್ರಾಂತ್ಯದ ಹಳ್ಳಿ ಹಳ್ಳಿಗಳಲ್ಲಿ ಬಹಳಷ್ಟು ಜನಪ್ರಿಯವಾಗಿದ್ದವು. ಹಿಂದುಸ್ಥಾನಕೆ ಅವನೇ 'ತಂದೆ' ಎಂದು ಹಳ್ಳಿಯ ಜನರು ಒಪ್ಪಿಕೊಂಡಿದ್ದರು. ವಿಚಾರವಾದಿ ವಿದ್ಯಾವಂತರಿಗಿಂತ ಹೆಚ್ಚಾಗಿ ಹಳ್ಳಿಯ ಜನರಿಗೆ ಗಾಂಧಿಯ ಬಗ್ಗೆ ಪ್ರೀತಿ ವಿಶ್ವಾಸವಿತ್ತು. ಗಾಂಧಿ ತೆಗೆದುಕೊಳ್ಳುವ ಪ್ರತಿಯೊಂದು ತೀರ್ಮಾನದ ಹಿಂದೆ ಹಿಂದುಸ್ಥಾನದ ಹಿತ ಅಡಗಿದೆಯೆಂಬುದು ಅವರ ಅಚಲವಾದ ನಂಬಿಕೆ. ನಮ್ಮ ಸೃಜನಶೀಲ ಸಾಹಿತಿಗಳು ಗಾಂಧಿಯ ಕುರಿತು, ಸ್ವಾತಂತ್ರ್ಯ ಚಳುವಳಿಯ ಕುರಿತು ಕವನಗಳನ್ನು ರಚಿಸುವ ಮೊದಲೇ ಅನಕ್ಷರಸ್ಥ ಹಳ್ಳಿಯ ಜನರು ಅವರ ಕುರಿತಾಗಿ ಲಾವಣಿಗಳನ್ನು ರಚಿಸಿ ಅವರನ್ನು ಇನ್ನಷ್ಟು ಜನಪ್ರಿಯಗೊಳಿಸಿದರು. 'ರಕ್ತತರ್ಪಣ' ಕಾದಂಬರಿಯಲ್ಲಿ ಗೌರಜ್ಜಿಯಂಂತಹ ಸಂಪ್ರದಾಯಸ್ಥ ಮಹಿಳೆಗೆ ಕೂಡ ಗಾಂಧೀಜಿಯ ಬಗ್ಗೆ ಗೌರವವಿತ್ತು. ಗಾಂಧೀಜಿ ಬಿಡುಗಡೆಯಾದರೆ ತಾನೊಂದು ಸತ್ಯನಾರಾಯಣ ಪೂಜೆ ಮಾಡಿಸುವುದಾಗಿ ಹರಕೆ ಹೊರುತ್ತಾಳೆ. ಗಾಂಧೀಜಿಯ ಹೆಸರನ್ನು ಕೇಳದ ಹಳ್ಳಿಯ ಜನರಿರಲಿಲ್ಲ. ಅವರೆಲ್ಲರಿಗೂ ಗಾಂಧೀಜಿಯ ಬಗ್ಗೆ ಗೌರವವಿತ್ತು. ಗಾಂಧೀಜಿಯವರಿಂದ ತಮ್ಮ ಗಂಡಂದಿರು ಕುಡಿತ ಬಿಟ್ಟರೆ ಚೆನ್ನಾಗಿರುತ್ತಿತ್ತು ಎಂಬ ಅಭಿಪ್ರಾಯ ಹಳ್ಳಿಯ ಹೆಣ್ಣುಮಕ್ಕಳಲ್ಲಿತ್ತು. ಅವರಿಗೆ ಗಾಂಧೀಜಿಯನ್ನು ಕಣ್ಣಿನಿಂದ ನೋಡುವುದೇ ಮಹಾಭಾಗ್ಯವೆಂಬ ಭಾವನೆಯಿತ್ತು. ಗಾಂಧಿ ಉಪವಾಸ ಕೈಗೊಂಡರೆ ತಾವೂ ಅನ್ನ ನೀರು

ಬಿಡುವ ಜನರು ಹಳ್ಳಿಯಲ್ಲಿದ್ದರು. ಮುಗ್ಧ ಹಳ್ಳಿಯ ಜನರಿಗೆ ಗಾಂಧಿಯೆಂದರೆ ದೇವರು. ಅವರು ಮಾಡುವ ಪ್ರತಿಯೊಂದು ಕೆಲಸವೂ ಯಾವುದೋ ಒಂದು ಘನ ಉದ್ದೇಶದಿಂದ ಕೂಡಿದೆ ಎಂಬುದನ್ನು ಅವರು ದೃಢವಾಗಿ ನಂಬಿದ್ದರು. ಗಾಂಧಿಯ ಜನಪ್ರಿಯತೆಗೆ ಹಳ್ಳಿಯ ಜನರ ಕೊಡುಗೆ ಅಪಾರ. ಗಾಂಧೀಜಿಯ ದರ್ಶನಕ್ಕೋಸ್ಕರ ಹಗಲಿರುಳು ಕಾಯುವ ಜನರಿದ್ದರು. ರಾಷ್ಟ್ರಪುರುಷ ಕಾದಂಬರಿಯಲ್ಲಿ ಅಜಿತನಂಥ ಬಾಲಕ ಕೂಡ ಗಾಂಧೀಜಿಯ ದರ್ಶನದಿಂದ–'ದೇಶ ಸೇವೆಗಾಗಿಯೇ ತನ್ನ ಆತ್ಮವನ್ನು ಸಮರ್ಪಿಸಲು' ನಿರ್ಧರಿಸುತ್ತಾನೆ. ಅದೇ ತನ್ನ ಕರ್ತವ್ಯ, ಅದೇ ತನ್ನ ಧ್ಯೇಯ, ಅದರಲ್ಲಿಯೇ ತನ್ನ ಜನ್ಮ ಸಾರ್ಥಕವೆಂದು ನಿಶ್ಚಯಿಸುತ್ತಾನೆ. ಹೀಗೆ ಜನರ ಮನಸ್ಸಿನಲ್ಲಿ ಅಪಾರವಾದ ಪ್ರಭಾವವನ್ನು ಬೀರುವ ಯಾವುದೋ ಒಂದು ಅದ್ಭುತವಾದ ಶಕ್ತಿ ಗಾಂಧಿಯಲ್ಲಿತ್ತು.

ವಿದ್ಯಾರ್ಥಿಗಳು ಕೂಡ ಮಹಾತ್ಮಗಾಂಧಿಯವರ ಮಾತಿಗೆ ಬಹಳ ಬೆಲೆಯನ್ನು ಕೊಡುತ್ತಿದ್ದರು. ಅವರಿಂದಾಗಿ ಆರಂಭವಾದ ಪ್ರತ್ರಿಯೊಂದು ಚಳುವಳಿಯಲ್ಲೂ ವಿದ್ಯಾರ್ಥಿಗಳು ಸಕ್ರಿಯ ಪಾತ್ರವನ್ನು ವಹಿಸುತ್ತಾರೆ. ಗಾಂಧೀಜಿ ಶಾಲಾ ಕಾಲೇಜುಗಳನ್ನು ಬಹಿಷ್ಕರಿಸಲು ಹೇಳಿದುದೇ ತಡ, ವಿದ್ಯಾರ್ಥಿಗಳೆಲ್ಲರು ನಿರೀಕ್ಷೆ ಮೀರಿ ಗಾಂಧೀಜಿಯ ಮಾತಿಗೆ ಸ್ಪಂಧಿಸುತ್ತಾರೆ. ಕೆಲವೊಮ್ಮೆ ಮಹಾನ್ ಕ್ರಾಂತಿ ಮಾಡಿ ಬ್ರಿಟಿಷರನ್ನು ಓಡಿಸಬೇಕೆಂಬ ಉದ್ದೇಶದಿಂದ ಶಾಲಾ-ಕಾಲೇಜುಗಳನ್ನು ಬಿಟ್ಟ ವಿದ್ಯಾರ್ಥಿಗಳಿಗೆ ಹಳ್ಳಿಯಲ್ಲಿ ವಿಧಾಯಕ ಕಾರ್ಯಕ್ರಮಗಳನ್ನು ಮಾಡಲು ಗಾಂಧೀಜಿ ಹೇಳುತ್ತಿದ್ದರು. ಇದು ವಿದ್ಯಾರ್ಥಿಗಳಿಗೆ ಅತ್ಯಂತ ಸರಳ ವಿಚಾರವಾಗಿ ತೋರುತ್ತದೆ.

ಗಾಂಧೀಜಿ ನಮ್ಮ ಜನರಲ್ಲಿ ಮಲಗಿ ನಿದ್ರಿಸುತ್ತಿದ್ದ ಆತ್ಮಶಕ್ತಿಯನ್ನು ಎಚ್ಚರಗೊಳಿಸುವ ಕೆಲಸವನ್ನು ಮಾಡಿದರು. ಪ್ರತಿಯೊಂದು ಹಳ್ಳಿ ಹಳ್ಳಿಯ ಮೂಲೆ ಮೂಲೆಯ ಜನರು ಎಚ್ಚೆತ್ತುಕೊಂಡರು. ದೇಶದ ಜನಮನವನ್ನು ಸಂಸ್ಕಾರಗೊಳಿಸುವ ವಿಧಾಯಕ ಕಾರ್ಯಕ್ರಮದ ಮಹತ್ವವನ್ನು ಅವರು ಮನಗಂಡಿದ್ದರು. ಯಾಕೆಂದರೆ ದೇಶದ ಜನರನ್ನು ಚಳವಳಿಗೆ ಸಿದ್ಧಗೊಳಿಸಬೇಕಾದರೆ ವಿಧಾಯಕ ಕಾರ್ಯಕ್ರಮ ಮುಖ್ಯವಾಗಿತ್ತು. ಪ್ರತಿಯೊಂದು ಹಳ್ಳಿಯಲ್ಲೂ ಕೂಡ ವಿಧಾಯಕ ಕಾರ್ಯಕ್ರಮದ ಜೊತೆ ಜೊತೆಯಲ್ಲಿ ಜನಜಾಗೃತಿ, ಹೋರಾಟದ ಸಿದ್ಧತೆ ನಡೆಯುತ್ತಿತ್ತು. ಅಜ್ಞಾನಿಗಳಾಗಿದ್ದ ಜನರಲ್ಲಿ ರಾಷ್ಟ್ರಪ್ರೇಮವನ್ನು ಜಾಗೃತಗೊಳಿಸುವ ಒಂದು ಮಾಧ್ಯಮವಾಗಿ ಕೂಡ ವಿಧಾಯಕ ಕಾರ್ಯಕ್ರಮ ಬಳಕೆಯಗುತ್ತದೆ. ಅನೇಕ ವಿದ್ಯಾವಂತರು ಕೂಡ ಗಾಂಧೀಜಿಯ ಅಹಿಂಸಾ ಚಳುವಳಿಯನ್ನು ಸಮರ್ಥಿಸಿಕೊಳ್ಳುತ್ತಾರೆ. "ಸತ್ಯದ ಹೋರಾಟದಲ್ಲಿ ಅಹಿಂಸೆಯೇ ದಿವ್ಯವಾದ ಅಸ್ತ್ರ. ಸತ್ಯಾಗ್ರಹವೇ ಬತ್ತಳಿಕೆ. ಇದರ ಮುಂದೆ ಹಿಂಸೆ ನಿಲ್ಲಲಾರದು. ಅದು ಕ್ರೂರವಾಗಬಹುದು. ಆದರೆ ಹಿಂಸೆ ಎಂದಿಗೂ ಸತ್ಯವನ್ನು ಜಯಿಸಲಾರದು" ೬೯ ಎಂಬುದಾಗಿ ಅಂದಿನ ಕಾಲದ ಜನರು ಬಲವಾಗಿ ನಂಬಿದ್ದರು.

ಅಂದಿನ ಕಾಲದಲ್ಲಿ ಗಾಂಧೀಜಿಯ ಸತ್ಯ, ಅಹಿಂಸೆಯ ಹೋರಾಟಕ್ಕೆ ಹಳ್ಳಿಗಳಲ್ಲಿ ಅಷ್ಟೊಂದು ಬೆಂಬಲಸಿಗುವುದಕ್ಕೆ ಒಂದು ಕಾರಣ ಹಳ್ಳಿಯ ಜನರ ಧರ್ಮಬೀರು ಮನೋಭಾವ.

ಹಳ್ಳಿಯ ಜನರಿಗೆ ಗಾಂಧೀಜಿ ನಮ್ಮ ದೇಶವನ್ನು ಬ್ರಿಟಿಷರ ಕೈಯಿಂದ ರಕ್ಷಿಸಲು ಬಂದಂತಹ ಅವತಾರ ಪುರುಷನೆಂದೇ ಭಾವಿಸಿದರು. 'ಸತ್ಯಮೇವ ಜಯತೇ' ಎಂಬುದು ನಮ್ಮ ಸಂಸ್ಕೃತಿಯಾದ ಕಾರಣ ದುಷ್ಟರಾದ ಬ್ರಿಟಿಷರ ವಿರುದ್ಧ ನಮ್ಮ ನ್ಯಾಯಬದ್ಧವಾದ ಹೋರಾಟಕ್ಕೆ ಖಂಡಿತವಾಗಿಯೂ ಜಯ ಸಿಕ್ಕೇ ಸಿಗುತ್ತದೆಂಬುದು ನಮ್ಮ ಜನರ ನಂಬಿಕೆಯಾಗಿತ್ತು. ಹಳ್ಳಿಯ ಮುಗ್ಧ ಜನರು ಪಟ್ಟಣದ ವಿದ್ಯಾವಂತ ಜನರಂತೆ ಗಾಂಧಿಯ ವಿಚಾರಗಳೆಲ್ಲವನ್ನು ವಿಮರ್ಶೆ ಮಾಡಲು ಹೋಗುವುದಿಲ್ಲ. ಅವರು ಒಬ್ಬ ವ್ಯಕ್ತಿಯನ್ನು ನಂಬಿದರೆಂದರೆ ಅವರಿಗಾಗಿ ಯಾವ ತ್ಯಾಗಕ್ಕೂ ಸಿದ್ಧರು. ಅಂತಹ ಒಂದು ವಿಶ್ವಾಸ, ನಂಬಿಕೆಯನ್ನು ಗಾಂಧೀಜಿಯವರಲ್ಲಿ ನಮ್ಮ ಜನರು, ಅದರಲ್ಲಿಯೂ ಹಳ್ಳಿಗಾಡಿನ ಜನರಿಟ್ಟಿದ್ದರು. ಅದಕ್ಕೋಸ್ಕರವೇ ಗಾಂಧೀಜಿಯ ಕರೆಗೆ ಅವರು ಆ ಮಟ್ಟದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು.

ಆದರೆ ಸಂಪ್ರದಾಯಸ್ಥ ಮೇಲ್ಜಾತಿಯವರು ಗಾಂಧಿಯ ತತ್ವಗಳನ್ನು ವಿರೋಧಿಸುತ್ತಿದ್ದರು. 'ಗಾಂದಿಯೊಬ್ಬ ತಮ್ಮ ಧರ್ಮ ಸಂಸ್ಕೃತಿಯನ್ನು ಹಾಳು ಮಾಡಲು ಬಂದವನು' ಎಂಬ ಭಾವನೆಯಿದೆ. ೧೯೨೦ರ ನಂತರ ಸಮಾಜದಲ್ಲಿ ಒಂದು ಬಗೆಯ ಹೊಸ ಗಾಳಿ ಬೀಸಲಾರಂಭಿಸುತ್ತದೆ. ಈ ಮೊದಲು ಹಲವಾರು ಸಾಮಾಜಿಕ ಸುಧಾರಣೆಗಳಾದರೂ ಕೂಡಾ ಜನರು ಈ ಮಟ್ಟದಲ್ಲಿ ಪ್ರಭಾವಕ್ಕೆ ಒಳಗಾಗಲಿಲ್ಲ. ಆದರೆ ಗಾಂಧೀಜಿಯ ಧೋರಣೆಗಳನ್ನು ಬಹತೇಕ ಕಿರಿಯ ತಲೆಮಾರಿನವರು ಒಪ್ಪುತ್ತಾರೆ. ಒಂದು ರೀತಿಯ 'ಸಾಂಸ್ಕೃತಿಕ ಕ್ರಾಂತಿ' ಈ ಕಾಲಘಟ್ಟದಲ್ಲಿ ನಡೆಯುತ್ತದೆ. ಹಳೆಯ ತಲೆಮಾರಿನ ಜನರಿಗೆ ಇದನ್ನು ಅರಗಿಸಿಕೊಳ್ಳಲು ಕಷ್ಟವಾಗುತ್ತದೆ. ತಮ್ಮ ಜಾತಿ, ತಮ್ಮ ಸಂಸ್ಕೃತಿಯೇ ಶ್ರೇಷ್ಠ ಎಂಬುದಾಗಿ ಭಾವಿಸಿದವರಿಗೆ ಗಾಂಧಿವಾದವು ಒಂದು ಬಗೆಯ ಅಭದ್ರತೆಯನ್ನುಂಟು ಮಾಡುತ್ತದೆ. ಇದಕ್ಕೆ ತಮ್ಮ ಕೌಟುಂಬಿಕ ವಲಯದಲ್ಲಿ ತಮ್ಮದೇ ಆದ ನೆಲೆಯಲ್ಲಿ ಅವರು ಪ್ರತಿಭಟಿಸುತ್ತಾರೆ.

'ಹೆಜ್ಜೆ' ಕಾದಂಬರಿಯಲ್ಲಿ ವಿದ್ಯಾಧರನ ಹೆಂಡತಿ ಸಾವಿತ್ರಿ ಗಾಂಧಿಭಕ್ತೆ. ಬಾಲ್ಯದಲ್ಲಿಯೇ ತನ್ನ ಚಿಕ್ಕಪ್ಪ ಪಚ್ಚೆ ಶಂಕರನಿಂದಾಗಿ ಗಾಂಧಿಯ ಪ್ರಭಾವಕ್ಕೆ ಒಳಗಾಗುತ್ತಾಳೆ. ಕಟ್ಟಾ ಸಂಪ್ರದಾಯವಾದಿಯಾದ ಶ್ರೀಕಂಠಶಾಸ್ತ್ರಿಗಳ ಮನೆಗೆ ಸೊಸೆಯಾಗಿ ಬಂದಾಗ ತನ್ನ ಜೊತೆಯಲ್ಲಿ ಒಂದು ಗಾಂಧಿಯ ಭಾವಚಿತ್ರನ್ನು ತರುತ್ತಾಳೆ. ಆದರೆ ಅವಳ ಗಾಂಧಿಭಕ್ತಿಯು ಆ ಮನೆಮಂದಿಗೆ ಇಷ್ಟವಾಗುವುದಿಲ್ಲ. ಅವಳ ಮಾವ ಶ್ರೀಕಂಠಶಾಸ್ತ್ರಿಗಳ ಮನೆಯಲ್ಲಿ ಗಾಂಧಿಯ ಕುರಿತ ಅಸಮಧಾನವು ವ್ಯಕ್ತವಾಗಿದೆ– "ಸಾವಿತ್ರೀ ಏನಮ್ಮ, ನೀನು ಈ ಮನೆ ತುಂಬ ಸಂಪ್ರದಾಯಸ್ಥರ ಮನೆ ಅಂತ ತಿಳಿದಿದ್ದೂ ಆ ಕಲಿ ಪುರುಷ ಗಾಂಧೀನ್ನ ಪೂಜೆ ಮಾಡೋದಿಕ್ಕೆ ಶುರಮಾಡಿದ್ದೀಯಂತಲ್ಲಾ. ನಮ್ಮ ಮನೆಯಲ್ಲಿ ಗಾಂಧಿಗೆ ಸ್ಥಾನ ಇಲ್ಲ ಅನ್ನೋದು ನಿನಗೆ ತಿಳಿಯದಿದ್ದರೆ ಇನ್ನಾದರೂ ತಿಳ್ಕೊಳ್ಳೋದು ಒಳ್ಳೇದು. . . . . ನನಗೆ ಗೊತ್ತು, ನಿನ್ನ ಆ ಪಚ್ಚೆ ಚಿಕ್ಕಪ್ಪ ಗಾಂಧಿ ಜತೆ ಸೇರ್ಕೊಂಡು ದಾಂಡಿ ಗಿಂಡೀ ಎಂತ ಉಪ್ಪು ಮಾಡೋದಿಕ್ಕೆ ಹೋಗಿ ಚೆನ್ನಾಗಿ ಪೊಲೀಸಿನವರ ಕೈಯಲ್ಲಿ ಏಟು ತಿಂದು, ಕಣ್ಣನೂರಿನ ಜೈಲಿನಲ್ಲಿದ್ದು ಜಾತಿ ಕೆಡಿಸ್ಕೊಂಡು ಬಂದಿದ್ದಾಂತ... ಆ ಸಂಸ್ಕಾರವನ್ನೆಲ್ಲ ನಮ್ಮಲ್ಲಿಗೆ ತರಬಾರದು ಸಾವಿತ್ರಿ.... ಏನೋ ಋಣಾನುಬಂಧ

ಕೂಡಿತ್ತೂಂತ ವಿದ್ಯಾಧರನಿಗೆ ನಿನ್ನನ್ನು ತಂದುಕೊಂಡೆ... ಈ ಮನೆಯ ಜವಾಬ್ದಾರಿ ಉಳಿಸೋ ಹೊಣೆ ನಿನ್ನ ಮೇಲೇನೂ ಇದೇಂತ ತಿಳ್ಕೊಳ್ಳಬೇಕಮ್ಮಾ... ನೋಡು, ನಾನು ಮಹಾಲಿಂಗೇಶ್ವರ ದೇವಸ್ಥಾನದ ಮೊಕ್ತೇಸರ, ಈ ಊರಲ್ಲಿ ಧರ್ಮಶಾಸ್ತ್ರಕ್ಕೆ ಸಂಬಂಧಿಸಿದ ಏನು ಸಮಸ್ಯೆಯಿದ್ದರೂ ಪರಿಹಾರ ಹೇಳಬೇಕಾದವನು. ಇಲ್ಲಿ ಬ್ರಾಹ್ಮಣ ಸಮಾಜವೆಲ್ಲ ನಾನು ಯಾವ ಹಾದಿಯಲ್ಲಿ ಹೋಗ್ತೇನೇಂತ ಕಣ್ಣಿಟ್ಟು ನೋಡ್ತಾ ಇರುವಾಗ ನೀನು ತುಂಬ ಎಚ್ಚರಿಕೆಯಿಂದ ಹೆಜ್ಜೆ ಇಡಬೇಕಮ್ಮ... ಧರ್ಮ, ಸಂಪ್ರದಾಯವನ್ನೆಲ್ಲ ಮನಬಂದಂತೆ ತಿರುಚೋಕ್ಕಾಗುವುದಿಲ್ಲ. ಎಲ್ಲಿಂದ ಬಂದನೋ ಆ ಗಾಂಧಿ- ನಮ್ಮ ಸಂಸ್ಕಾರಗಳನ್ನೆಲ್ಲಾ ಹಾಳುಗೆಡವುದಕ್ಕೆ... ಸತ್ಯಾಗ್ರಹವಂತೆ... ಸತ್ಯ ಇವನಿಗೊಬ್ಬನಿಗೆ ತಿಳಿದಿರೋ ಹಾಗೆ. ಇದೆಲ್ಲ ದುರಾಗ್ರಹ... ಗುರುವಾಯೂರು ದೇವಸ್ಥಾನಕ್ಕೂ ಹೊಲೆಯರು ಹೋಗಬೇಕು, ಇಲ್ಲವಾದರೆ ಉಪವಾಸ ಅಂತ ಇದಕ್ಕೆ ಬೆದರಿಕೆ ಬೇರೆ... ತಿರುವಾಂಕುರಿನ ಅನಂತಶಯನ ದೇವಸ್ಥಾನಕ್ಕೂ ಹಾಗೇ ಅಂತೆ. ನಮ್ಮ ಏಕಾದಶಿ ಇವನಿಗೆ ಹಟದ ಒಂದು ಅಸ್ತ್ರವಾಗಿದೆ. ಅದಕ್ಕೆ ಉಪವಾಸ, ಇದಕ್ಕೆ ಉಪವಾಸ, ಇಲೆಕ್ಷನ್ ಅಂತೆ, ಪಿಲೆಕ್ಷನ್ ಅಂತೆ. ಅದಕ್ಕೂ ಉಪವಾಸ. ಸರಕಾರದ ವಿರುದ್ಧ ಉಪವಾಸ... ಆ ಫರಂಗಿ ಜನ ಇದಕ್ಕೆಲ್ಲ ಹೆದರ್‍ಕೋತಾರೆಯೇ? ಈ ಕಾಂಗ್ರೆಸ್ ಕಾಂಗ್ರೆಸ್ ಅಂತ ಧರ್ಮಲಂಡರೇ ಮೇಲೆ ಬರೋ ಹಾಗಾಗಿದೆ. ನಮ್ಮದು ಸಂಪ್ರದಾಯಸ್ಥರ ಮನೆ ಸಾವಿತ್ರಿ, ನಿನ್ನ ಗಾಂಧಿ ಪೂಜೆ ಹುಚ್ಚೆಲ್ಲ ಇಲ್ಲಿ ಬೇಡ."[೭೦] ಎನ್ನುತ್ತಾರೆ. ಶ್ರೀಕಂಠಯ್ಯನವರ ಈ ಮಾತಿನಲ್ಲಿ ಗಾಂಧಿಯ ಬಗ್ಗೆ ಇದ್ದ ಅಸಮಧಾನವನ್ನು ಕಾಣಬಹದು. ಗಾಂಧೀಜಿಯ ಹರಿಜನರನ್ನು ದೇವಸ್ಥಾನ ಪ್ರವೇಶ ಮಾಡಿಸುವ ವಿಚಾರದ ಕುರಿತು ಸಂಪ್ರದಾಯಸ್ಥ ಬ್ರಾಹ್ಮಣರು ಮೂಗು ಮುರಿಯುತ್ತಿದ್ದರು-"ಇವ ಹೊಲೆಯರನ್ನು ದೇವರಗುಡಿಯೊಳಗೆ ಬಿಟ್ಟುಕೊಳ್ರಿ ಅಂತಾನಲ್ಲ. ಇದು ಸಾಧ್ಯವಾಧೀತೆ? ಎಲ್ಲಾ ವರ್ಣ ಸಂಕರ ಮಾಡಿ, ಜಾತಿ ಕೆಡಿಸಿ ಹಾಳು ಮಾಡ್ತಾನೆ ಪುಣ್ಯಾತ್ಮ..."[೭೧] ಲಿಂಗಾಯಿತರಲ್ಲಿ ಕೂಡ ಕೆಲವು ಮಡಿವಂತರು "ಈ ಹುಚ್ಚಪ್ಪ ಗಾಂಧಿ ಮಾತು ಕೇಳಿ ಹೊಲೇರ ಮಾದಿಗರನ್ನು ಗುಡಿಗೆ ಬಿಟ್ಟುಗಂಡ್ರೆ ತಲೆ ಉರುಳಿ ಹೋದಾವು..."[೭೨] ಎಂದುಕೊಳ್ಳುತ್ತಿದ್ದರು. ಲಿಂಗಾಯಿತರಿಗೆ ಬ್ರಾಹ್ಮಣರ ಬಗ್ಗೆ ಅಸಮಧಾನವಿದ್ದರೂ 'ದೇವಸ್ಥಾನ ಪ್ರವೇಶ'ದ ಪ್ರಶ್ನೆ ಬರುವಾಗ ಇವರಿಬ್ಬರ ಅಭಿಪ್ರಾಯದಲ್ಲಿ ಭಿನ್ನಾಭಿಪ್ರಾಯವಿರಲಿಲ್ಲ. ಸನಾತನಿಗಳೊಬ್ಬರು ಅಸ್ಪೃಶ್ಯರನ್ನು 'ಹರಿಜನ'ರೆಂದು ಕರೆದು ಕೂಡಿಸಿ ಆರ್ಯಸಂಸ್ಕೃತಿಯನ್ನೇ ಮಹಾತ್ಮ ನಾಶ ಮಾಡಿದರೆಂದರು.

ದೇಶದಲ್ಲಿ ಜಾತಿ ಜಾತಿಗಳ ನಡುವೆ ಪೈಪೋಟಿಯಿತ್ತು. ಕಾಂಗ್ರೆಸ್ಸನ್ನು ಬೆಂಬಲಿಸುವಾಗ ಕೂಡ ಇಂತಹ ಒಂದು ಪೈಪೋಟಿ ಹಾಗೂ ಅಸಮಧಾನವನ್ನು ನಾವು ಕಾಣುತ್ತೇವೆ. ಬಳ್ಳಾರಿಯಲ್ಲಿ ನಡೆದ ಕಾಂಗ್ರೆಸ್ ಸಭೆಗೆ ದೇಶದ ಮೂಲೆ ಮೂಲೆಯಿಂದ ವಿವಿಧ ಜಾತಿಯ ಜನರು ಬಂದಿದ್ದರು. ಆದರೆ ನಗರದ ಶ್ರೀಮಂತ ವೈಶ್ಯ ಮತ್ತು ಲಿಂಗಾಯಿತ ಮುಂದಾಳುಗಳು ಸಭೆಯಲ್ಲಿ ಕಾಣುತ್ತಿರಲಿಲ್ಲ. ಕಾರಣ 'ಈ ಗಾಂಧಿ ಚಳುವಳಿ ಬ್ರಾಹ್ಮಣರ ಚಳುವಳಿ' ಎಂಬ ಭಾವನೆ ಬಾಯಿಬಿಟ್ಟು ಹೇಳದಿದ್ದರೂ ಒಳಗೊಳಗೆ ಸುಳಿದಾಡುತ್ತಿತ್ತು.[೭೩]

ಗಾಂಧೀಜಿಯವರ ಚಳುವಳಿಯಲ್ಲಿ ಕಂಡು ಬರುವ ಒಂದು ಆಶ್ಚರ್ಯಕರವಾದ ಸಂಗತಿಯೆಂದರೆ ಗಾಂಧಿಯನ್ನು ಪ್ರೋತ್ಸಾಹಿಸುವವರಲ್ಲಿ ಕೂಡ ಅಧಿಕ ಸಂಖ್ಯೆಯಲ್ಲಿ ಬ್ರಾಹ್ಮಣರಿದ್ದರು. ಗಾಂಧಿಯವರನ್ನು ಟೀಕಿಸುವವರಲ್ಲಿಯೂ ಬ್ರಾಹ್ಮಣರ ಸಂಖ್ಯೆ ಅಧಿಕವಾಗಿತ್ತು. ಇದಕ್ಕೆ ಮುಖ್ಯ ಕಾರಣವೆಂದರೆ ಅದೊಂದು ಸಾಂಸ್ಕೃತಿಕ ಪಲ್ಲಟದ ಕಾಲಾವಧಿ. ಸಂಸ್ಕೃತ ಪಾಂಡಿತ್ಯವನ್ನು ಗಳಿಸಿ, ವೇದೋಪನಿಷತ್ತುಗಳನ್ನು ಅರಗಿಸಿಕೊಂಡ ಮಡಿವಂತ ಬ್ರಾಹ್ಮಣರಿಗೆ ಗಾಂಧಿಯೊಬ್ಬರು ಧರ್ಮಲಂಡರಾಗಿ ಕಂಡುಬರುತ್ತಿದ್ದರು. ಆಧುನಿಕ ಇಂಗ್ಲಿಷ್ ಶಿಕ್ಷಣದ ಬೆಳಕಿನಲ್ಲಿ, ಇಂಗ್ಲಿಷ್ ಚಿಂತನೆಯ ಬೆಳಕಿನಲ್ಲಿ ನಮ್ಮ ಸಂಸ್ಕೃತಿಯನ್ನು ನೋಡ ಬಯಸಿದ ಆಧುನಿಕ ವಿಚಾರವಾದಿ ಬ್ರಾಹ್ಮಣರಿಗೆ ವೈದಿಕ ಸಂಸ್ಕೃತಿಯಲ್ಲಿ ಕೆಲವೊಂದು ಜೀವ ವಿರೋಧಿ ತತ್ವಗಳು ಅಡಗಿವೆ. ಗಾಂಧೀಜಿ ಅದನ್ನು ಮನರುಜ್ಜೀವನಗೊಳಿಸುವ ಮಹಾತ್ಮ, ಅವರನ್ನು ನಾವು ಬೆಂಬಲಿಸುವುದೆಂದರೆ ನಮ್ಮನ್ನು ನಾವು ಆಧುನಿಕ ಚಿಂತನೆಗೆ ತೆರೆದುಕೊಂಡಂತೆ ಎಂಬ ಭಾವನೆಯಿತ್ತು.

ಗಾಂಧಿಯ ವಿಚಾರದ ಕುರಿತಾಗಿ ನಾವು ಎರಡು ವಿಧದ ಭಿನ್ನಾಭಿಪ್ರಾಯಗಳನ್ನು ನಾವು ಕಾಣಬಹುದು. ಅವುಗಳೆಂದರೆ– ಒಂದು ಸಾಂಸ್ಕೃತಿಕ ಭಿನ್ನಾಭಿಪ್ರಾಯ, ಇನ್ನೊಂದು ಸೈದ್ಧಾಂತಿಕ ಭಿನ್ನಾಭಿಪ್ರಾಯ. ವ್ಯಕ್ತಿಗತವಾಗಿ ಗಾಂಧೀಜಿಯ ಕುರಿತು ಅಪಾರ ಗೌರವಿದ್ದರೂ ಕೂಡ ಅವರ ಅಹಿಂಸೆ, ಸತ್ಯಾಗ್ರಹದಿಂದ ಸ್ವಾತಂತ್ರ್ಯ ಲಭಿಸುತ್ತದೆಂಬ ಬಗ್ಗೆ ಕೆಲವರಿಗೆ ನಂಬಿಕೆಯಿರಲಿಲ್ಲ. ಆದರೆ ಇಡೀ ದೇಶವನ್ನು ಒಗ್ಗೂಡಿಸುವ ಶಕ್ತಿ ಇರುವುದು ಗಾಂಧೀಜಿಗೆ ಮಾತ್ರ ಎಂಬ ಸತ್ಯವನ್ನು ಎಲ್ಲರೂ ಒಪ್ಪಿದ್ದರು. ಕೆಲವರಿಗಂತೂ ಗಾಂಧಿಯ ಅಹಿಂಸಾ ತತ್ವದಿಂದ ಸ್ವಾತಂತ್ರ್ಯ ಬರುವುದು ಕೇವಲ ಭ್ರಮೆಯ ಮಾತುಗಳಾಗಿ ತೋರುತ್ತದೆ. 'ಹೆಜ್ಜೆ' ಕಾದಂಬರಿಯಲ್ಲಿ ಸಾವಿತ್ರಿಯ ಗಂಡ ವಿದ್ಯಾಧರನೇ ಗಾಂಧೀಜಿಯ ಕೆಲವು ನಿಲುವುಗಳನ್ನು ವಿರೋಧಿಸಿ ಕಮ್ಯುನಿಸ್ಟ್ ಪಕ್ಷವನ್ನು ಬೆಂಬಲಿಸುತ್ತಾನೆ. "ದೇಶಕ್ಕೆ ಸ್ವಾತಂತ್ರ್ಯ ಬಂದರೆ ಗಾಂಧಿ ಒಬ್ಬರಿಂದಲೇ ಬರೋದಿಲ್ಲ"[೬೪] ಎಂದು ಹೇಳುತ್ತಾನೆ. ಅವನ ಮಾತಿನಲ್ಲಿ ಸತ್ಯ ಇಲ್ಲದಿಲ್ಲ. ದೇಶಕ್ಕೆ ಸ್ವಾತಂತ್ರ್ಯ ದೊರಕಲು ಆ ಕಾಲಘಟ್ಟದಲ್ಲಿ ನಡೆದ ಹಲವಾರು ಘಟನೆಗಳು ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಕಾರಣವಾಗಿರುತ್ತದೆ. 'ಇಡಿಯ ಭಾರತವನ್ನು ಒಗ್ಗೂಡಿಸುವ ಶಕ್ತಿ ಇರುವುದು ಗಾಂಧಿಗೆ ಮಾತ್ರ' ಎಂಬುದು ಎಲ್ಲರೂ ಒಪ್ಪಿಕೊಂಡ ವಿಚಾರವೇ ಆಗಿದ್ದರೂ ಕೂಡ ಅವರ ಸತ್ಯ, ಅಹಿಂಸೆ, ಸತ್ಯಾಗ್ರಹದಿಂದ ಬ್ರಿಟಿಷರು ಓಡಿಹೋಗುತ್ತಾರೆಂಬ ವಿಚಾರದಲ್ಲಿ ಬಹಳಷ್ಟು ಜನರಿಗೆ ನಂಬಿಕೆಯಿರಲಿಲ್ಲ. 'ಹೆಜ್ಜೆ' ಕಾದಂಬರಿಯಲ್ಲಿ ಮಖನ್‌ವಾಲಾರಿಗೆ ಗಾಂಧಿಯ ಬಗ್ಗೆ ಗೌರವವಿದ್ದರೂ ಕೂಡ ಅಹಿಂಸೆ, ಅಸಹಕಾರದಿಂದ ಬ್ರಿಟಿಷರು ಭಾರತ ಬಿಟ್ಟು ಹೋಗುವುದಿಲ್ಲವೆಂದು ದೃಢವಾಗಿ ನಂಬಿದ್ದರು. "ಗಾಂಧಿ 'ಚಲೇಜಾವ್' ಎಂದಾಕ್ಷಣ ಬ್ರಿಟಿಷರು ಭಾರತ ಬಿಟ್ಟು ಓಡಿಹೋಗುತ್ತಾರೆಯೇ? ಇಂಡಿಯ ಅವರಿಗೆ ಚಿನ್ನದ ತತ್ತಿ ಇಡುವ ಕೋಳಿ... .ಗಾಂಧೀಜಿಗೆ ಇಡಿಯ ದೇಶವನ್ನೇ ಒಗ್ಗೂಡಿಸುವ ಶಕ್ತಿ ಇದೇಂತ ಅವರಿಗೆ ಗೊತ್ತು. ಆದರೆ ಅವರ ಕೈಯಲ್ಲಿ ಕೋವಿ ಇದೆಯಲ್ಲ... ಎಲ್ಲಿಯತನಕ ನಮ್ಮ ಸೈನಿಕರು ಕೋವಿ ಹಿಡಿದು ಅವರ ಇದಿರು ನಿಲ್ಲುವುದಿಲ್ಲವೋ ಅಲ್ಲಿಯ ತನಕ ಅವರು ಹೋಗುವ ಪ್ರಯತ್ನವನ್ನೇ ಮಾಡೋಲ್ಲ. ಸುಭಾಷ್‌ಗೆ

ಇದು ಗೊತ್ತು. ಆದರೆ ವಿದ್ಯಾನಿಗೆ ಹೇಗೆ ಗೊತ್ತಾಗೋದು?...[೭೫] ಎನ್ನುತ್ತಾರೆ. ಇಲ್ಲಿ ಮಖನ್‌ವಾಲಾರಿಗೆ ಗಾಂಧಿಯ ಕುರಿತಾಗಿ ಯಾವುದೇ ಪೂರ್ವಾಗ್ರಹ ಇಲ್ಲ. ಗಾಂಧಿಯ ಶಕ್ತಿಯ ಅರಿವಿದೆ. ಆದರೆ ಗಾಂಧಿಯ ಸಿದ್ಧಾಂತದ ಮಿತಿಯನ್ನು ಅವರು ವಿಶ್ಲೇಷಿಸುತ್ತಾರೆ. 'ಅಮರ ಆಗಸ್ಟ್' ಕಾದಂಬರಿಯಲ್ಲಿ ಕೂಡ ಗಾಂಧಿ ವಿಚಾರದಲ್ಲಿ ಪುಟ್ಟು ಮತ್ತು ಮಾನಪ್ಪನ ನಡುವೆ ಭಿನ್ನಾಭಿಪ್ರಾಯವಿದೆ. ಪುಟ್ಟುವಿಗೆ ಗಾಂಧೀಜಿ ಬಂಡವಾಳಗಾರರನ್ನು 'ಸಾಮಾನ್ಯಜನತೆಯ ಮೊಕ್ತೇಸರರು' ಎಂದು ಕರೆದದು ಒಪ್ಪಿಗೆಯಾಗಲಿಲ್ಲ. ಪುಟ್ಟು ಅಲ್ಲದೆ ಇನ್ನಿತರರು ಕೂಡಾ ಗಾಂಧೀಜಿಯವರನ್ನು ಬಂಡವಾಳಶಾಹಿಗಳ ಪ್ರತಿನಿಧಿಯೆಂದು ಕರೆಯುತ್ತಿದ್ದರು. "ಬಂಡವಾಳಗಾರರ ಕೈಯಲ್ಲಿ ಬಡವರ ಹಿತಾಹಿತಗಳನ್ನಿಡುವುದೆಂದರೆ ತೋಳನ ವಶಕ್ಕೆ ಕುರಿಯ ಯೋಗಕ್ಷೇಮ ಒಪ್ಪಿಸಿದಂತೆಯೇ॥"[೭೬] ಎಂಬುದು ಅವನ ಭಾವನೆ.

ಗಾಂಧೀಜಿಯ ಅಹಿಂಸಾವ್ರತದ ಬಗ್ಗೆ ಕೆಲವರಿಗೆ ನಂಬಿಕೆಯಿರಲಿಲ್ಲ. ಅಹಿಂಸೆಯ ಹೋರಾಟದಿಂದ ಬ್ರಿಟಿಷರು ಭಾರತವನ್ನು ಬಿಟ್ಟು ತೊಲಗುವುದು ಅಸಾಧ್ಯದ ಮಾತಾಗಿ ತೋರುತ್ತದೆ. ಬ್ರಿಟಿಷರನ್ನು ಭಾರತದಿಂದ ತೊಲಗಿಸಲು ಸಶಸ್ತ್ರ ಕ್ರಾಂತಿಯೇ ಸರಿಯಾದ ಮಾರ್ಗವೆಂಬುದು ಕೆಲವರ ದೃಢವಾದ ನಂಬಿಕೆಯಾಗಿತ್ತು. "ಭಾರತ ಸ್ವಾತಂತ್ರ್ಯ ಸಂಪಾದನೆಗೆ ಸೈನಿಕರು ಬೇಕು; ನೂಲುವ ಜೇಡಗಳಲ್ಲ."[೭೭] ಎಂಬದು ವಕೀಲ ಹರಿಹರ ರಾಯರ ಅಭಿಪ್ರಾಯವಾಗಿತ್ತು.

ಸ್ಯಾಂಡರ್ಸ್ ಹತ್ಯೆಯನ್ನು, ಕ್ರಾಂತಿಕಾರಿಗಳ ಚಟುವಟಿಕೆಯನ್ನು ಗಾಂಧೀಜಿ 'ಯಂಗ್ ಇಂಡಿಯಾ' ಪತ್ರಿಕೆಯಲ್ಲಿ ಕಟು ಮಾತಿನಿಂದ ಖಂಡಿಸುತ್ತಾರೆ. ಇದು ಬಹಳ ಮಂದಿ ಕಾಂಗ್ರೆಸ್ಸಿಗರಿಗೆ ಇಷ್ಟವಾಗುವುದಿಲ್ಲ. ಗಾಂಧೀಜಿಯನ್ನು ಅರ್ಥ ಮಾಡಿಕೊಳ್ಳುವುದು ಬಹಳ ಕಷ್ಟದ ವಿಚಾರವಾಗಿತ್ತು. ಕೆಲವೊಮ್ಮೆ ಗಾಂಧೀಜಿ ಬಿಡಿಸಲಾರದ ಒಗಟಿನಂತೆ ಕಂಡುಬರುತ್ತಿದ್ದರು. 'ಹೇಡಿತನಕ್ಕಿಂತ ಹಿಂಸೆ ಮೇಲು' ಎಂಬುದಾಗಿ ಹೇಳುವ ಗಾಂಧೀಜಿ ಕ್ರಾಂತಿಕಾರಿಗಳ ಕೃತ್ಯವನ್ನು ಕಟುವಾಗಿ ಟೀಕಿಸುತ್ತಾರೆ. ಗಾಂಧೀಜಿಯ ನಿಲುವಿನ ಕುರಿತು ಮದರಾಸಿನ ಹಿರಿಯ ಕಾಂಗ್ರೆಸ್ ನಾಯಕ ಪ್ರಕಾಶಂ ಪಂತುಲು ಹೀಗೆ ಹೇಳುತ್ತಾರೆ–"ಗಾಂಧೀಜಿ ಒಮ್ಮೊಮ್ಮೆ ದೊಡ್ಡ ಒಗಟಾಗಿ ಕಾಣ್ತಾರೆ. ಅವರನ್ನು ಸಂಪೂರ್ಣ ಒಪ್ಪುವುದು ನನಗೂ ಸಾಧ್ಯವಾಗಲ್ಲ. ಸುಭಾಸ್ ಜವಾಹರರಿಗೂ ಅವರ ಎಷ್ಟೋ ಮಾತು, ಕೃತಿ ಒಪ್ಪಿಗೆ ಆಗಲ್ಲ. ನೀವೆ ನೋಡಿದೀರಲ್ಲ. ಏನು ಮಾಡೋದು? ಅವರನ್ನು ಕೈ ಬಿಟ್ರೆ ಬೆಂಬಲ ಕಡಮೆಯಾಗ್ತದೆ. ಅವರ ಧೋರಣೆ ಒಪ್ಪಿಕೊಂಡ್ರೆ ಸ್ವರಾಜ್ಯ ಪ್ರಾಪ್ತಿ ವಿಳಂಬ ಆಗ್ತದೆ. ಕಾಂಗ್ರೆಸ್ ಇಬ್ಭಾಗವಾಗ್ತದೆ"[೭೮]. ಆದರೆ ಅವರಂತೆ ದೇಶದ ಜನತೆಯನ್ನು ಒಗ್ಗೂಡಿಸುವ ಸಮ್ಮೋಹಕ ಶಕ್ತಿ ಇನ್ಯಾವುದೇ ನಾಯಕರಿಗೆ ಇರಲಿಲ್ಲ. ಭಗತ್ ಸಿಂಗ್ ಅಸೆಂಬ್ಲಿಯಲ್ಲಿ ಬಾಂಬೆಸೆದುದನ್ನು ಖಂಡಿಸಿ ಗಾಂಧೀಜಿ 'ಯಂಗ್ ಇಂಡಿಯಾ' ಪತ್ರಿಕೆಗೆ ಬರೆದ ಲೇಖನದಲ್ಲಿ ಖಂಡಿಸಿದರು– "ಬಾಂಬು ಎಸೆದವರು ಯಾವ ಸ್ವಾತಂತ್ರ್ಯದ ಹೆಸರಿನಿಂದ ಬಾಂಬುಗಳನ್ನು ಎಸೆದರೋ ಆ ಸ್ವಾತಂತ್ರ್ಯದ ಧ್ಯೇಯೋದ್ದೇಶವನ್ನೇ ಅವಮಾನಿಸಿದ್ದಾರೆ" ಎಂಬುದಾಗಿ ಭಗತ್‌ಸಿಂಗ್‌ನ ಕೃತ್ಯವನ್ನು ಖಂಡಿಸಿದರು. ಆದರೆ ಇದು ಅನೇಕ ಮಂದಿಗೆ ಇಷ್ಟವಾಗುವುದಿಲ್ಲ. ಈ

ಲೇಖನವು ಸ್ವಾತಂತ್ರ್ಯವೀರನೊಬ್ಬನಿಗೆ ಮಾಡಿದ ಅವಮಾನವೆಂದು ಅನೇಕ ಮಂದಿ ಅಸಮಧಾನ ವ್ಯಕ್ತಪಡಿಸುತ್ತಾರೆ.[೭೯]

ತಾವು ನಂಬಿದ ತತ್ವವನ್ನು ಎಲ್ಲರೂ ಪಾಲಿಸಬೇಕೆಂಬುದು ಗಾಂಧೀಜಿಯವರ ದೋರಣೆಯಾಗಿತ್ತು. ಕೆಲವರಿಗೆ ಇದೊಂದು ರೀತಿಯ ಸರ್ವಾಧಿಕಾರಿ ಧೋರಣೆಯಂತೆ ಕಂಡುಬರುತ್ತಿತ್ತು. ಗಾಂಧೀಜಿ ತಾವು ನಂಬಿದ ಅಹಿಂಸಾ ವ್ರತವನ್ನು ದೇಶದಲ್ಲಿರುವ ಪ್ರತಿಯೊಂದು ಭಾರತೀಯ ಪ್ರಜೆ ಕೂಡಾ ಆಚರಿಸಬೇಕೆಂದು ಬಯಸುತ್ತಿದ್ದರು. ಆದರೆ ಭಗತ್‌ಸಿಂಗ್ ನಂತಹ ಯುವಕರ ನರನಾಡಿಗಳಲ್ಲಿ ಕೂಡಾ ಸ್ವಾತಂತ್ರ್ಯದ ಕುರಿತು ಹುಮ್ಮಸ್ಸು, ಅದಕ್ಕಾಗಿ ಎಂತಹ ಬಲಿದಾನಕ್ಕೂ ಅವರು ಸಿದ್ಧರಿದ್ದರು. ಆದರೆ ಗಾಂಧೀಜಿ ಅವನ ಕೃತ್ಯವನ್ನು ಕಟುವಾಗಿ ಟೀಕಿಸುತ್ತಿದ್ದರು. ಇವರ ಈ ಧೋರಣೆಯನ್ನು ಕುರಿತು ರಮಣಯ್ಯ – "ರಘುಪತಿ ರಾಘವ ರಾಜಾರಂ ಭಜನೆ ಮಾಡೋದೇ ಸ್ವಾತಂತ್ರ್ಯ ತರೋದು..." ಎಂದು ತನ್ನ ಅಸಮಧಾನವನ್ನು ವ್ಯಕ್ತಪಡಿಸುತ್ತಾನೆ. "ಅಂದರೆ ಈ ಸರಕಾರವನ್ನು ಉರುಳಿಸಬೇಕಾದರೆ, ಸ್ವರಾಜ್ಯ ಬರಬೇಕಾದರೆ ನಮ್ಮ ಜನ ಬೀದಿ ಗುಡಿಸುತ್ತ, ಕೇರಿಗಳ ಸ್ವಚ್ಚ ಮಾಡುತ್ತಾ ಇರಬೇಕು ಅಂದ ಹಾಗಯ್ತು"[೮೦] ಎನ್ನುತ್ತಾಳೆ ಕನಕಲಕ್ಷ್ಮಿ. ಗಾಂಧೀಜಿಯ ಸ್ವರಾಜ್ಯದ ಕಲ್ಪನೆ ಕೆಲವರಿಗಂತೂ ವಿಚಿತ್ರವಾಗಿ ತೊರುತ್ತಿತ್ತು. ವಿಧಾಯಕ ಕಾರ್ಯಕ್ರಮಗಳಿಂದ ಸ್ವರಾಜ್ಯ ಬರುತ್ತದೆಂಬುದನ್ನು ಕೆಲವರು ವಿಡಂಬಿಸುತ್ತಿದ್ದರು. ಆದರೆ ಭಾರತದಂತಹ ಅನಕ್ಷರಸ್ಥರ ಸಂಖ್ಯೆಯೇ ಜಾಸ್ತಿ ಇರುವ ದೇಶದಲ್ಲಿ ಸ್ವರಾಜ್ಯ ತರುವ ಮೊದಲು ಸ್ವರಾಜ್ಯದ ಕುರಿತಾಗಿ ಜನರಲ್ಲಿ ಕನಿಷ್ಠ ಮಟ್ಟದ ಜಾಗೃತಿಯನ್ನು ಮೂಡಿಸಲು ಗಾಂಧೀಜಿ ವಿಧಾಯಕ ಕಾರ್ಯಕ್ರಮವನ್ನು ಹಮ್ಮಿಕೊಂಡು ದೇಶಕ್ಕೋಸ್ಕರ ಹೋರಾಟ ಮಾಡುವ ಜನರನ್ನು ಸಿದ್ಧಗೊಳಿಸುವ ಅನಿವಾರ್ಯತೆಯಿತ್ತು. ನಮ್ಮನ್ನು ಯಾರು ಆಳುತ್ತಿದ್ದಾರೆ? ಸ್ವಾತಂತ್ರ್ಯ ಅಂದರೇನು? ಸ್ವರಾಜ್ಯಕ್ಕೋಸ್ಕರ ನಾವು ಯಾಕೆ ಹೋರಾಡಬೇಕು? ಎಂಬ ಕನಿಷ್ಠ ಜ್ಞಾನವಿಲ್ಲದ ಜನರು ಅಂದು ಭಾರತದಲ್ಲಿದ್ದರು. ಆದರೆ ಅಂತಹ ಜನರ ಮನಸ್ಸಲ್ಲೂ ಸ್ವಾತಂತ್ರ್ಯದ ಜ್ವಾಲೆಯನ್ನು ಉರಿಸಿದ ಕೀರ್ತಿ ಮಾತ್ರ ಖಂಡಿತವಾಗಿಯೂ ಗಾಂಧೀಜಿಯವರಿಗೆ ಸಲ್ಲಬೇಕು.

ಗಾಂಧೀಜಿಯ ಅಹಿಂಸಾವ್ರತದ ಬಗ್ಗೆ ಕೆಲವರಿಗೆ ಅಸಮಧಾನವಿತ್ತು. ಯಾವ ದೇಶದಲ್ಲಿ ಕೂಡ ಕೈದು, ಕರವಾಳಗಳಿಲ್ಲದೆ ಸ್ವಾತಂತ್ರ್ಯ ಲಭಿಸಿಲ್ಲ ಎಂಬುದು ಎಲ್ಲರಿಗೂ ತಿಳಿದ ವಿಷಯವಾಗಿತ್ತು. ಬೇರೆ ದೇಶದ ಸ್ವಾತಂತ್ರ್ಯ ಹೋರಾಟಗಾರರು ಸಶಸ್ತ್ರ ಹೋರಾಟದ ಅಗತ್ಯ ಮತ್ತು ಅನಿವಾರ್ಯತೆಯನ್ನು ಒತ್ತಿ ಹೇಳುತ್ತಿದ್ದರೆ ಗಾಂಧೀಜಿಯೊಬ್ಬರು ಮಾತ್ರ ಇದನ್ನು ವಿರೋಧಿಸುವುದು ನುಂಗಲಾರದ ತುತ್ತಾಗಿತ್ತು. "ಹೋರಾಟವಿಲ್ಲದೆ ದೌರ್ಜನ್ಯ, ದಾಸ್ಯಕ್ಕೊಳಗಾದ ಯಾವ ಜನಾಂಗವೂ ಎಂದೂ ಸ್ವಾತಂತ್ರ್ಯ ಪಡೆದಿಲ್ಲ"[೮೧] ಎಂಬುದು ಎಲ್ಲಾ ನಾಯಕರು ಅರ್ಥ ಮಾಡಿಕೊಂಡ ತತ್ವವಾಗಿತ್ತು. ಆದರೆ ಗಾಂಧೀಜಿಯ ನಂಬಿಕೆ ಇದಕ್ಕೆ ತದ್ವಿರುದ್ಧವಾಗಿತ್ತು.

ಕಮ್ಯುನಿಸ್ಟ್ ಪಕ್ಷವಂತೂ ಗಾಂಧೀಜಿಯ ಸಿದ್ಧಾಂತವನ್ನು ಸುತಾರಾಂ ಒಪ್ಪುವುದಿಲ್ಲ. ಅವರಿಗೆ ಗಾಂಧೀಜಿಯ ಅಹಿಂಸಾಮಾರ್ಗದಲ್ಲಾಗಲಿ, ವಿಧಾಯಕ ಕಾರ್ಯಕ್ರಮಗಳಲ್ಲಾಗಲಿ

ಒಂದಿನಿತೂ ನಂಬಿಕೆಯಿರಲಿಲ್ಲ. ಗಾಂಧೀಜಿಯ ಅಹಿಂಸಾವ್ರತ ಬ್ರಿಟಿಷ್ ಸರಕಾರಕ್ಕೆ ಪರಮ ರಕ್ಷೆಯಾಗಿತ್ತು. ಗಾಂಧೀಜಿಯವರು ಜೈಲಿನಲ್ಲಿದ್ದಾಗ ಹಿಂಸಾಕೃತ್ಯಗಳು ಹೆಚ್ಚುತ್ತಿದ್ದವು. ಕ್ರಾಂತಿಕಾರಿಗಳು ಉಗ್ರಗಾಮಿಗಳಾಗುತ್ತಿದ್ದರು. **ಗಾಂಧಿ ಇನ್ ಪ್ರಿಜನ್ ಈಸ್ ಮೋರ್ ಡೇಂಜರಸ್ ದ್ಯಾನ್ ಗಾಂಧಿ ಔಟ್‌ಸೈಡ್ ಆ್ಯಂಡ್ ಫ್ರೀ** ಎಂಬ ನಾಣ್ಣುಡಿಯು ಬ್ರಿಟಿಷರಲ್ಲಿ ಬಳಕೆಯಲ್ಲಿತ್ತು. ಸುಭಾಸ್ಚಂದ್ರ ಬೋಸರು ಲಾಹೋರ್ ಕಾಂಗ್ರೆಸ್ ಅಧಿವೇಶನದಲ್ಲಿ "ವಿಧಾಯಕ ಕಾರ್ಯಕ್ರಮದಿಂದ ಸ್ವಾತಂತ್ರ್ಯ ಪ್ರಾಪ್ತಿಗಾಗಿ ಪ್ರಯತ್ನಿಸ ಬೇಕೆಂಬುದು ಎಷ್ಟು ಸಮಂಜಸ...? ಕಳೆದ ಕೆಲವು ವರ್ಷಗಳಿಂದ ವಿಧಾಯಕ ಕಾರ್ಯಕ್ರಮವನ್ನು ಹಮ್ಮಿಕೊಂಡಿದ್ದೇವೆ. ಅದು ಎಷ್ಟರ ಮಟ್ಟಿಗೆ ಯಶಸ್ವಿಯಾಗಿದೆ? ಅದರಿಂದ ಏನು ಪ್ರಯೋಜನವಾಗಿದೆ?"[೮೨] ಎಂಬುದಾಗಿ ಪ್ರಶ್ನಿಸುತ್ತಾರೆ.

೧೯೩೧ರಂದು ಗಾಂಧಿ–ಇರ್ವಿನ್ ಒಪ್ಪಂದಕ್ಕೆ ಗಾಂಧೀಜಿ ಸಹಿ ಹಾಕಿದರು. ಕೇವಲ ಕರನಿರಾಕರಣೆಯಲ್ಲಿ ಭಾಗವಹಿಸಿದ ಕೈದಿಗಳನ್ನು ಬಿಡುಗಡೆ ಮಾಡಲು ಸರಕಾರ ಒಪ್ಪಿಕೊಂಡಿತು. ಕ್ರಾಂತಿಕಾರಿ ಹೋರಾಟಗಾರರನ್ನು ಬಿಡುವಂತೆ ಗಾಂಧೀಜಿ ಒತ್ತಾಯಿಸಬಹುದಿತ್ತು. ಹಾಗೆ ಮಾಡಿದ್ದರೆ ಭಗತ್‌ಸಿಂಗ್ ಮುಂತಾದ ಕ್ರಾಂತಿಕಾರಿಗಳ ಬಿಡುಗಡೆಯು ಅಗುತ್ತಿತ್ತು. ಒಪ್ಪಂದಕ್ಕೆ ಸಹಿ ಹಾಕದಿದ್ದರೂ ಚಳುವಳಿ ತೀವ್ರಗೊಂಡು ಬ್ರಿಟಿಷ್ ಸರಕಾರದ ಬೇರನ್ನು ಅಲುಗಾಡಿಸಲು ಸಾಧ್ಯವಾಗುತ್ತಿತ್ತು. ಹೋರಾಟದ ಕಾವು ತೀವ್ರಗೊಳ್ಳುತ್ತಿರುವ ಭಯದಿಂದಲೇ ಚಾಣಕ್ಯರಾದ ಬ್ರಿಟಿಷರು ಈ ಒಪ್ಪಂದಕ್ಕೆ ಗಾಂಧೀಜಿಯನ್ನು ಆಹ್ವಾನಿಸಿದರು. ಇದರ ಕುರಿತು ಸುಭಾಸ್‌ಚಂದ್ರ ಬೋಸರು ತಮ್ಮ ಅಸಮಧಾನವನ್ನು ಹೀಗೆ ವ್ಯಕ್ತಪಡಿಸುತ್ತಾರೆ–"ಅಸಹಕಾರ ಚಳುವಳಿಯ ಕಾವು ಏರುತ್ತಿತ್ತು. ಬ್ರಿಟಿಷ್ ಸರಕಾರ ತಲ್ಲಣಿಸುತ್ತಿತ್ತು. ಜಾಗತಿಕ ಅಭಿಪ್ರಾಯ ಬ್ರಿಟಿಷರ ವಿರುದ್ಧವಾಗಿ ರೂಪುಗೊಳ್ಳುತ್ತಿತ್ತು. ಕಾರ್ಮಿಕ ವರ್ಗ ಮಲೆತು ನಿಂತಿತ್ತು. ಸೈನಿಕರಲ್ಲಿ ಅತೃಪ್ತಿ ಉಂಟಾಗಿತ್ತು. ಈಗ ಕಬ್ಬಿಣ ಕಾದಾಗ ಬಡಿದು ಬಗ್ಗಿಸುವುದನ್ನು ಬಿಟ್ಟು ಜನತೆಯ ಉತ್ಸಾಹಕ್ಕೆ ತಣ್ಣೀರೆರಚಿದಂತಾಯಿತು."[೮೩]

'ಬೇಡಿ ಕಳಚಿತು ದೇಶ ಒಡೆಯಿತು' ಕಾದಂಬರಿಯು ಸ್ವಾತಂತ್ರ್ಯ ಹೋರಾಟದ ಸಮಗ್ರ ಚಿತ್ರಣ ಹಾಗೂ ಗಾಂಧೀಜಿಯವರ ಬಹುಮುಖಿ ವ್ಯಕ್ತಿತ್ವವನ್ನು ರೂಪಿಸುವಲ್ಲಿ ಯಶಸ್ವಿಯಾಗಿದೆ. ಗಾಂಧೀಜಿಯವರ ಧರ್ಮಸೂಕ್ಷ್ಮವನ್ನು ಅರ್ಥಮಾಡಿಕೊಳ್ಳುವುದು ಸಾಮಾನ್ಯ ಜನರಿಗೆ ಅಸಾಧ್ಯದ ಮಾತಾಗಿತ್ತು. ಭಗತ್‌ಸಿಂಗ್ ಅವರ ಅಹಿಂಸಾತತ್ವಕ್ಕೆ ವಿರುದ್ಧವಾಗಿ ನಡೆದುಕೊಂಡರು ಎಂಬ ಕಾರಣಕ್ಕೆ ಅವರನ್ನು ಸೆರೆಯಿಂದ ಬಿಡಿಸಲು ಗಾಂಧೀಜಿ ಹೇಳಿಕೊಳ್ಳುವಂತಹ ಪ್ರಯತ್ನವನ್ನು ಮಾಡಲಿಲ್ಲ. "ಆದರೆ ಅದೇ ಗಾಂಧೀಜಿ ಸ್ವಾಮಿ ಶ್ರದ್ಧಾನಂದರನ್ನು ಕೊಂದ ಅಬ್ದುಲ್ ರಷೀದನನ್ನು ಉಳಿಸಲು ಪ್ರಯತ್ನಿಸಿದರಲ್ಲ? ಅಬ್ದುಲ್ ರಷೀದನನ್ನು 'ನನ್ನ ಸೋದರ ಎಂದು ಗಾಂಧೀಜಿ ಕರೆದರು'. ಹಾಗಾದರೆ ಭಗತ್‌ಸಿಂಗ್‌ನನ್ನು ತಮ್ಮ ಮಗನೆಂದಾದರೂ ಯಾಕೆ ಭಾವಿಸಬಾರದು?"[೮೪] ಎಂಬುದಾಗಿ ರಮಣಯ್ಯ ತನ್ನ ಅಸಮಧಾನವನ್ನು ತೋಡಿಕೊಳ್ಳುತ್ತಾನೆ. ಮುಸ್ಲಿಮರನ್ನು ಓಲೈಸುವ ಪ್ರಯತ್ನವನ್ನು ಗಾಂಧೀಜಿ ಮಾಡುತ್ತಾರೆ. ದಿನದಿಂದ ದಿನಕ್ಕೆ ಹೆಚ್ಚುತ್ತಿರುವ ಮುಸ್ಲಿಮರ

ಅಸಮಧಾನವನ್ನು ತಡೆಗಟ್ಟಲು ಅವರು ಅಬ್ದುಲ್ ರಷೀದನನ್ನು ಸೆರೆಯಿಂದ ಬಿಡಿಸಲು ಪ್ರಯತ್ನಿಸುತ್ತಾರೆ. ಆದರೆ ಕೊನೆಗೂ ಅವರಿಗೆ ದೇಶ ವಿಭಜನೆಯನ್ನು ತಪ್ಪಿಸಲು ಸಾಧ್ಯವಾಗಲಿಲ್ಲ.

ಗಾಂಧೀಜಿಯ ಕರನಿರಾಕರಣೆಗೆ ಓಗೊಟ್ಟು ಜೈಲು ಸೇರಿದವರು ಊರಿಗೆ ಬಂದಾಗ ಮನೆಯ ಸ್ಥಿತಿ ಇನ್ನಷ್ಟು ಬಿಗಾಡಾಯಿಸಿತು. ಒಂದು ವರ್ಷದಲ್ಲಿ ಸ್ವರಾಜ್ಯ ಬರಲಿಲ್ಲ. ಆದರೆ ಆ ಕರೆಗೆ ಓಗೊಟ್ಟು ಸ್ವಾತಂತ್ರ್ಯಕ್ಕೆ ದುಮುಕಿದ ಬಡವರ ಸ್ಥಿತಿ ಇನ್ನಷ್ಟು ಹದಗೆಟ್ಟಿತ್ತು. ಜೈಲು ಸೇರಿದ ಮಕ್ಕಳ ನಿರೀಕ್ಷಣೆಯಲ್ಲಿಯೇ ಕೆಲವು ಮುದುಕರು ಪ್ರಾಣ ನೀಗಿದರು. ಸೊಲ್ಲಾಪುರದ ಧನಶೆಟ್ಟಿ ಮಲ್ಲಪ್ಪನಂತಹವರು ಮರಣದಂಡನೆಗೊಳಗಾಗಬೇಕಾಯಿತು. ಆದರೆ ಗಾಂಧೀಜಿ ಮಾತ್ರ ಇರ್ವಿನ್‌ನೊಂದಿಗೆ ಒಪ್ಪಂದ ಮಾಡಿಕೊಂಡು ಜೈಲಿನಿಂದ ಹೊರಬಂದಿದ್ದರು.

ಭಗತ್‌ಸಿಂಗ್, ರಾಜಗುರು, ಶುಕದೇವರನ್ನು ಗಲ್ಲಿಗೇರಿಸುವುದನ್ನು ತಪ್ಪಿಸಲು ಗಾಂಧೀಜಿಗೆ ಆಗಲಿಲ್ಲ. ಅವರನ್ನು ಗಲ್ಲಿಗೇರಿಸಿದ ಮರುದಿನ ಗಾಂಧೀಜಿ ಕರಾಚಿಗೆ ೧೨ ಮೈಲು ದೂರದ ರೈಲ್ವೆ ನಿಲ್ದಾಣಕ್ಕೆ ತಲುಪಿದಾಗ ಕುಪಿತರಾದ ಯುವಕರ ಗುಂಪೊಂದು ಗಾಂಧೀಜಿಗೆ ಕಪ್ಪು ಬಾವುಟ ತೋರಿಸಿ "ಗಾಂಧೀಜಿ ಹಿಂದಕ್ಕೆ ಹೋಗಿ, ಗಾಂಧಿಯಿಜಂಗೆ ಧಿಕ್ಕಾರ, ಭಗತ್ ಸಿಂಗ್ ಚಿರಾಯುವಾಗಲಿ" ಎಂದು ಘೋಷಣೆ ಕೂಗಿದರು. ಕೆಲವರು ಕಪ್ಪು ಕಾಗದದ ಹೂವಿನ ಮಾಲೆಯನ್ನು ಗಾಂಧೀಜಿಯ ಕೊರಳಿಗೆ ಹಾಕಿ ಕೂಗಾಡಿದರು. ಇನ್ನೂ ಕೆಲವರು ಕಪ್ಪು ಬಟ್ಟೆಯ ಹೂಗುಚ್ಚವನ್ನು ಗಾಂಧೀಜಿಯ ಕೈಗಿತ್ತರು."[೮೫] ಈ ರೀತಿಯಾಗಿ ಭಾರತದ ಯುವಕರು ಪ್ರಪ್ರಥಮ ಬಾರಿಗೆ ಗಾಂಧೀಜಿಯ ಕುರಿತಾದ ಅಸಮಧಾನವನ್ನು ಬಹಿರಂಗವಾಗಿ ವ್ಯಕ್ತಪಡಿಸಿದರು.

ದೇಶದಲ್ಲಿ ಹಿಂದು ಮುಸ್ಲಿಮರ ನಡುವೆ ತೀವ್ರ ಭಿನ್ನಾಭಿಪ್ರಾಯ ತಲೆತೋರಿದ ಸಂದರ್ಭದಲ್ಲಿ ಗಾಂಧೀಜಿ–"ನನ್ನ ಮಟ್ಟಿಗೆ ಹೇಳುವುದಾದರೆ ಮುಸಲ್ಮಾನರಿಗೆ ಕೇಳಿದುದನ್ನೆಲ್ಲಾ ಕೊಡಲು ನಾನು ಸಿದ್ಧ... ಈ ಹಿಂದು ಮುಸ್ಲಿಂ ಕಗ್ಗಂಟು ಬಿಡಿಸಿದರೆ ಮಾತ್ರ ಸ್ವರಾಜ್ಯ ಸಿದ್ಧಿ..." ಎಂದು ಹೇಳುತ್ತಾರೆ. ಗಾಂಧೀಜಿಯ ಈ ಬಹಿರಂಗ ಹೇಳಿಕೆ ಕೇಳಿದ ಕೂಡಲೇ ಹಿಂದು ಮಹಾಸಭೆಯ ಶ್ರೀ ಮುಂಜೆ, ಎಂ.ಎಸ್.ಅಣೆ ಮುಂತಾದವರು "ಈ ದೇಶ ಗಾಂಧೀಜಿಯ ಖಾಸಗಿ ಆಸ್ತಿಯಲ್ಲ. ಮುಸ್ಲಿಮರಿಗೆ ಬೇಕಾದ್ದನ್ನೆಲ್ಲ ಕೊಡಲು ಇವರು ಯಾರು? ಇವರಿಗೆ ಆ ಅಧಿಕಾರ ಕೊಟ್ಟವರು ಯಾರು?"[೮೬] ಎಂದು ಪ್ರತಿಕ್ರಿಯಿಸುತ್ತಾರೆ. ಹೀಗೆ ಗಾಂಧಿಯಿಜಂ ಬಗ್ಗೆ, ಗಾಂಧೀಜಿಯ ಒಂದರ್ಥದಲ್ಲಿ ಸರ್ವಾಧಿಕಾರಿ ಧೋರಣೆಯ ಬಗ್ಗೆ ಅನೇಕ ಸಂಘ ಸಂಸ್ಥೆಗಳಲ್ಲಿ ಹಂತ ಹಂತವಾಗಿ ಅಸಮಧಾನ ಬೆಳೆಯುತ್ತಾ ಹೋಗುತ್ತದೆ. ಮೊದಮೊದಲು ಗುಪ್ತವಾಗಿದ್ದ ಅಸಮಧಾನ ನಂತರ ವ್ಯಕ್ತವಾಗಿ ಪ್ರಕಟಗೊಳ್ಳುತ್ತದೆ. "ಹಿಂದು ಬಾಂಧವರೇ ಕಾಂಗ್ರೆಸ್ಸು, ಗಾಂಧಿ ಒಡ್ಡಿದ ಬಲೆಯಲ್ಲಿ ಬೀಳದಿರಿ, ಎಚ್ಚರಿಕೆ!"[೮೭] ಇಂತಹ ಕರಪತ್ರಗಳು ದೇಶದ ಹಳ್ಳಿ ಹಳ್ಳಿಗಳಲ್ಲಿ ಹರಿದಾಡತೊಡಗಿದವು. ಗಾಂಧೀಜಿಯ ಅಭಿಪ್ರಾಯವನ್ನು ತೀವ್ರವಾಗಿ ಖಂಡಿಸಿದವರೆಂದರೆ ಹಿಂದು ಮಹಾಸಭೆ, ಮುಸ್ಲೀಂಲೀಗ್, ಅಂಬೇಡ್ಕರ್, ಉಗ್ರಗಾಮಿ ಸಂಘಟನೆ, ಕಮ್ಯುನಿಸ್ಟ್ ಪಕ್ಷ ಇತ್ಯಾದಿ.

ಕಮ್ಯುನಿಸ್ಟ್ ಪಕ್ಷದ ಕಂಡಾಲ್ಕರ್ ಅವರು ಗಾಂಧೀಜಿಯ ಕುರಿತು–"ಒಂದು ಕಡೆಯಿಂದ ಮುಸ್ಲಿಂ ಲೀಗ್ ದಾಳಿಯಿಡ್ತಾ ಇದೆ. ಇನ್ನೊಂದು ಕಡೆಯಿಂದ ಅಂಬೇಡ್ಕರ್ ಮುತ್ತಿಗೆ ಹಾಕ್ತಿದ್ದಾರೆ. ಮತ್ತೊಂದು ಕಡೆಯಿಂದ ಹಿಂದೂ ಮಹಾಸಭೆ ರಣಘೋಷ ಮಾಡಿ ಮುನ್ನುಗ್ಗುತ್ತಿದೆ. ಮಗದೊಂದು ಕಡೆಯಿಂದ ಆರ್.ಎಸ್.ಎಸ್ ಮುತ್ತಿಗೆ ಹಾಕಿದೆ. ಪಾಪ ಮುದುಕ... ಇನ್ನೊಂದು ಕಡೆಯಿಂದ ಸಿಖ್ಖರು ರಾಷ್ಟ್ರಧ್ವಜದಲ್ಲಿ ತಮ್ಮ ಧರ್ಮದ ಪ್ರತೀಕವಾದ ಬಣ್ಣವನ್ನು ಸೇರಿಸಬೇಕೆಂದು ಗದ್ದಲ ಎಬ್ಬಿಸಿದ್ದಾರೆ... ಗಾಂಧೀಜಿ ಫಜೀತಿ ಯಾರಿಗೂ ಬೇಡ"[೪೮] ಎಂದರು. ಬಹುಜಾತಿ, ಧರ್ಮ, ಸಂಸ್ಕೃತಿ, ಅಸಮಾನತೆಯ ಭಾರತದಂತಹ ದೇಶದಲ್ಲಿ ಯಾವುದೋ ಒಂದು ನಿರ್ದಿಷ್ಟವಾದ ಧ್ಯೇಯ ಮತ್ತು ತತ್ವದಡಿಯಲ್ಲಿ ಜನರೆಲ್ಲರನ್ನು ಒಟ್ಟುಗೂಡಿಸುವುದು ಸುಲಭದ ಮಾತಾಗಿರಲಿಲ್ಲ. ಒಬ್ಬರನ್ನು ಒಲಿಸಲು ಪ್ರಯತ್ನಿಸಿದರೆ ಇನ್ನೊಬ್ಬರ ಟೀಕೆ ಸಿದ್ಧವಾಗಿರುತಿತ್ತು. ಆದರೂ ಗಾಂಧೀಜಿಯವರು ತಮ್ಮ ಕೈಲಾದ ಪ್ರಯತ್ನವನ್ನು ಮಾಡುತ್ತಲೇ ಇದ್ದರು.

ಬಳ್ಳಾರಿ ಕೇಂದ್ರ ಕಾರಾಗೃಹದಲ್ಲಿ ರಾಯದುರ್ಗದಿಂದ ಬಂದಿದ್ದ ಮಲ್ಲಯ್ಯನೆಂಬ ಕೈದಿ– "ಗಾಂಧೀಜಿ ಲಂಡನ್ನಿನಲ್ಲಿ ಕಡಿದು ಒಟ್ಟಿದ್ದೇನು? ಕಾರ್ಮಿಕರ ಬಗ್ಗೆ ಒಂದು ಮಾತಾಡಿದ್ರಾ? ಅಥವಾ ಇಲ್ಲಿದ್ದಾಗ ಯಾವುದಾದರೂ ಕಾರ್ಮಿಕರ ಹೋರಾಟದಲ್ಲಿ ಪಾಲುಗೊಂಡಿದ್ರಾ? ಅವರಿಗೆ ಬಿರ್ಲಾ, ಬಜಾಜ್ ಬ್ಯಾಂಕರ್‌ಗಳು ಬೇಕೇ ಹೊರ್ತು ಬಡ ರೈಲ್ವೇ ಕಾರ್ಮಿಕರು ಬೇಕಾ?"[೪೯] ಎಂದು ತನ್ನ ಅಸಮಧಾನವನ್ನು ವ್ಯಕ್ತಪಡಿಸುತ್ತಾನೆ. ಗಾಂಧೀಜಿಯ ದೃಷ್ಟಿಯಲ್ಲಿ ಅವರು ಹೇಳಿದುದನ್ನು ಚಾಚೂ ತಪ್ಪದವರು ಮಾತ್ರ ದೇಶಪ್ರೇಮಿಗಳು. ತಮಗೆ ಆಗದ ಕೆಲಸ ಮಾಡಿದವರನ್ನು ಖಂಡಿಸಿದ್ದಾರೆ. ವೈಸ್ರಾಯಿ ಇರ್ವಿನ್ ಪ್ರಯಾಣ ಮಾಡುತ್ತಿದ್ದ ರೈಲುಗಾಡಿ ಸ್ಫೋಟಿಸಲು ಸಂಚು ಮಾಡಿದ ಉಗ್ರಗಾಮಿಗಳನ್ನು ಗಾಂಧೀಜಿ ಬಹಿರಂಗವಾಗಿ ಖಂಡಿಸಿದರು. ಉಪ್ಪಿನ ಸತ್ಯಾಗ್ರಹದ ಕಾಲಕ್ಕೆ ಕಾರ್ಮಿಕರು ದೊಂಬಿ ಎದ್ದಾಗ, ಸಿಖ್ ಸೈನಿಕರು ಅವರ ಮೇಲೆ ಗುಂಡು ಹಾರಿಸಲು ನಿರಾಕರಿಸಿದರು. ಪೇಷಾವರದಲ್ಲಿ ಪಠಾಣರು ಸತ್ಯಾಗ್ರಹ ಮಾಡಿದಾಗ ಅವರ ಮೇಲೆ ಘರವಾಲ ಸೈನಿಕರು ಗುಂಡು ಹಾರಿಸಲು ನಿರಾಕರಿಸಿದರು. ಅವರನ್ನೆಲ್ಲ ಕೋರ್ಟು ಮಾರ್ಷಲ್ ಮಾಡಿ ಸರಕಾರ ತುರಂಗಕ್ಕೆ ಕೂಡಿತು. ಆದರೆ ಗಾಂಧೀ ಅವರನ್ನು ಬಿಡಿಸಲು ಸರಕಾರವನ್ನು ಒತ್ತಾಯಿಸಲಿಲ್ಲ.

ಕ್ರಾಂತಿಕಾರಿಗಳಲ್ಲಿ ನಂಬಿಕೆಯಿಟ್ಟವರು ಗಾಂಧೀಜಿಯ ದ್ವಂದ್ವ ನಿಲುವನ್ನು ಕಟುವಾದ ಮಾತಿನಿಂದ ಟೀಕಿಸುತ್ತಿದ್ದರು. ಒಂದು ಹಿಡಿ ಉಪ್ಪು ತಯಾರಿಸಿದ್ದಕ್ಕೆ ಬ್ರಿಟಿಷರ ಗುಂಡಿಗೆ ಗಡಗಡ ನಡುಗಿದರೆ ಒಬ್ಬ ಆಂಗ್ಲನಿಗೆ ಗುಂಡು ಹಾಕಿ ಕೊಂದರೆ ಇಡೀ ಬ್ರಿಟಿಷ್ ಸಾಮ್ರಾಜ್ಯದ ಬುನಾದಿಯೇ ಗಡಗಡ ನಡುಗುತ್ತದೆ ಎಂಬುದು ಅವರ ನಿಲುವು. ಕಮ್ಯುನಿಸ್ಟರಂತೂ ಗಾಂಧೀಜಿಯವರನ್ನು ಬೂರ್ಜ್ವಾ ನಾಯಕರೆಂಬುದಾಗಿ ಟೀಕಿಸುತ್ತಿದ್ದರು. ಗಾಂಧೀಜಿ ಪದೇ ಪದೇ ಕೈಗೊಳ್ಳುವ ಉಪವಾಸವ್ರತ ಅಸಹಾಕಾರ ಚಳುವಳಿಯ ತೀವ್ರತೆಯನ್ನು ಕಡಿಮೆಗೊಳಿಸುತ್ತದೆಂಬುದು ಕೆಲವರ ವಾದವಾಗಿತ್ತು. ಒಂದರ್ಥದಲ್ಲಿ ಇದು ನಿಜವಾಗಿತ್ತು. ಯಾಕೆಂದರೆ ಜನರ ಗಮನ ಅಸಹಕಾರ ಚಳುವಳಿಯಿಂದ ಗಾಂಧೀಜಿಯ ಉಪವಾಸ ವ್ರತದ ಕಡೆಗೆ ತಿರುಗುತ್ತಿತ್ತು. 'ಸರಕಾರಕ್ಕೆ ಅಸಹಕಾರ

ಚಳುವಳಿಯನ್ನು ಹತ್ತಿಕ್ಕೋದು ಸಾಧ್ಯವಾಗುತ್ತಿರಲಿಲ್ಲ. ಅದರೆ ಗಾಂಧೀಜಿ ಉಪವಾಸವ್ರತ ಮಾಡಿ ಅಸಹಕಾರ ಚಳುವಳಿಯ ಬಿಗುವನ್ನು ಕಡಿಮೆಗೊಳಿಸಿ ಸರಕಾರಕ್ಕೆ ಉಪಕಾರ ಮಾಡಿದರೆಂದು ಕೆಲವು ವಿಚಾರವಂತರು ಯೋಚಿಸುತ್ತಾರೆ'.

ಹರಿಜನೋದ್ಧಾರದ ನೆಪದಲ್ಲಿ ಗಾಂಧೀಜಿ ಮೇಲಿಂದ ಮೇಲೆ ಮಾಡಿದ ಉಪವಾಸ ಸತ್ಯಾಗ್ರಹದಿಂದಾಗಿ ಭಾರತದಲ್ಲಿ ಹಿಂದು–ಮುಸ್ಲಿಂರ ನಡುವೆ ಒಡಕಿರುವುದು ಮಾತ್ರವಲ್ಲದೆ ಹಿಂದು–ಹಿಂದುಗಳ ನಡುವೆಯೂ ಒಡಕಿದೆಂಬುದನ್ನು ಪರದೇಶಕ್ಕೆ ತಿಳಿಸಿದಂತಾಯಿತು. ಇವರ ಉಪವಾಸ ಸತ್ಯಾಗ್ರಹವು ಬ್ರಿಟಿಷರಿಗೆ ಉಪಕಾರವಾಗಿ ಪರಿಣಮಿಸುತ್ತದೆ. ಸತ್ಯಾಗ್ರಹಿಗಳ ಸಂಖ್ಯೆ ಕ್ರಮೇಣ ಕುಸಿಯುತ್ತದೆ. ಸರಕಾರಕ್ಕೆ ಸಂತೊಷವಾಗುತ್ತದೆ. ವೈಸ್ರಾಯಿ ವೆಲ್ಲಿಂಗ್‌ಡನ್, ಸ್ಯಾಮುಲ್ ಹೋರ್‌ಗೆ ಒಂದು ಕೇಬಲ್ ಸಂದೇಶ ಕಳಿಸಿದನು–"ಗಾಂಧೀ ಅಸ್ಪೃಶ್ಯತಾ ನಿವಾರಣೆಯಲ್ಲಿ ತೊಡಗಿಸಿಕೊಳ್ಳುವುದು ನಿಶ್ಚಯವಾಗಿಯೂ ನಮಗೆ ಅನುಕೂಲವೆಂದೇ ನಾವು ಭಾವಿಸಬೇಕು. ಇದರಿಂದ ಜನರ ಗಮನ ನಿರ್ಧಿಷ್ಟ ರಾಜಕೀಯ ಸಮಸ್ಯೆಗಳಿಂದಲೂ ಶಾಸನಭಂಗ ಚಳುವಳಿಯಿಂದಲೂ ವಿಚಲಿತವಾಗಿ ಬೇರೆ ಕಡೆಹರಿಯುವುದು".[೧೦] ಎಂದು ಸಂತೋಷಪಡುತ್ತಾನೆ.

ಗಾಂಧೀಜಿಯ ಕೆಲವೊಂದು ವಾದಗಳ ಕುರಿತಾಗಿ ಸ್ವತಃ ಕಾಂಗ್ರೆಸ್ಸಿಗರಿಗೆ ಸಮಧಾನವಿರಲಿಲ್ಲ. ನೆಹರು ಅವರೇ ಅಂತರಂಗದಲ್ಲಿ ಗಾಂಧೀಜಿಯ ಸತ್ಯ, ಅಹಿಂಸಾವ್ರತವನ್ನು ಇಷ್ಟಪಡುತ್ತಿರಲಿಲ್ಲ. ಆದರೆ ಬಹಿರಂಗವಾಗಿ ಗಾಂಧೀಜಿಯನ್ನು ವಿರೋಧೀಸಿ ನಿಷ್ಠುರರಾಗುವುದು ಅವರಿಗೆ ಬೇಕಿರಲಿಲ್ಲ. ಕೆಲವೊಮ್ಮೆ ಗಾಂಧೀಜಿ ವಿಚಿತ್ರವಾಗಿ ತೋರುತ್ತಿದ್ದರು. ತಮ್ಮ ಮನಸ್ಸಿಗೆ ಬಂದ ಹಾಗೆ ತಮ್ಮ ನಿರ್ಧಾರಗಳನ್ನು ಬದಲಾಯಿಸುತ್ತಿದ್ದರು. "ಮೊದಲು ಗಾಂಧೀಜಿ ಹೊಸ ಸಂವಿಧಾನದ ಪ್ರಕಾರ ಚುನಾವಣೆಯಲ್ಲಿ ಭಾಗವಹಿಸಲೇಬಾರ್ದು ಅಂತ ಹೇಳ್ತಿದ್ರು, ಆಮೇಲೆ ಅದೇಕೋ ಭಾಗವಹಿಸಲಿ ಅಂತ ಅಪ್ಪಣೆ ಕೊಟ್ರು, ಆ ತರುವಾಯ ಗೆದ್ದು ಬಂದ ಮೇಲೆ ಮಂತ್ರಿಮಂಡಲ ರಚಿಸಬಾರ್ದು ಅಂತ ಅವರೇ ಹೇಳಿದ್ರು, ಆಮೇಲೆ ಮಂತ್ರಿ ಮಂಡಲ ಮಾಡಲಿ ಅಂತ ಕಾಂಗ್ರೆಸ್ ಕಾರ್ಯಕಾರಿ ಸಮಿತಿಯಲ್ಲಿ ಠರಾವು ಮಾಡಿಸಿದ್ರು, ಒಂದೀಟೂ ಅರ್ಥವಾಗಲ್ಲ ಈ ಮಹತ್ಮರ ಮಾತು! ಸಾಕಾಗಿ ಹೋಯ್ತು"[೧೧] ಎಂದು ಜನರು ಮಾತನಾಡಿಕೊಳ್ಳುತ್ತಿದ್ದರು.

ಯುರೋಪಿನಲ್ಲಿ ಯುದ್ಧದ ಕಾರ್ಮೋಡ ಕವಿಯುತ್ತದೆ. ಭಾರತವು ಜರ್ಮನಿಯ ವಿರುದ್ಧ ಹೋರಾಡಬೇಕೆಂದು ಬ್ರಿಟಿಷ್ ಸರಕಾರ ಯೋಚಿಸುತ್ತದೆ. ಆದರೆ ಗಾಂಧೀಜಿಯು 'ಯುದ್ಧಕ್ಕೆ ಸಹಾಯ ಮಾಡಬೇಡಿ' ಎಂದು ಒಂದೇ ಒಂದು ಘೋಷಣೆಯನ್ನು ಕೂಗಲು ಕರೆ ನೀಡುತ್ತಾರೆ. ಈ ಘೋಷಣೆಯನ್ನು ಮೊದಲು ಕೂಗಿ ವಿನೋಬಾಜಿ, ನೆಹರು, ಸರೋಜಿನಿದೇವಿ ಮುಂತಾದವರು ಸೆರೆಯಾಗುತ್ತಾರೆ. ಬ್ರಿಟಿಷರು ಯುದ್ಧದಲ್ಲಿ ತತ್ತರಿಸುತ್ತಿರುವಾಗ ಭಾರತದಲ್ಲಿ ಜನಾಂದೋಲನ ರಚಿಸಿ ಅವರನ್ನು ಭಾರತದಿಂದ ಓಡಿಸಬಹುದಿತ್ತು. ಆದರೆ ಗಾಂಧೀಜಿಯ ಈ ಧೋರಣೆಯಿಂದ ಬ್ರಿಟಿಷರ ಒಂದು ಕೂದಲೂ ಕೊಂಕುವುದಿಲ್ಲ ಎಂಬುದು ಹಲವರ ಅಭಿಪ್ರಾಯವಾಗಿತ್ತು. ಎರಡನೇ ಮಹಾಯುದ್ಧದ ಸಮಯದಲ್ಲಿ ಗಾಂಧೀಜಿ ಜರ್ಮನಿಯವರ ಅನ್ಯಾಯವನ್ನು ಸಹಿಸಿಕೊಂಡು

ಅಹಿಂಸೆಯನ್ನು ಪಾಲಿಸಲು ಬ್ರಿಟನ್ನಿಗೂ ಮನವಿ ಮಾಡುತ್ತಾರೆ. ಇದನ್ನು ಕುರಿತು ಕೆಲವು ಭಾರತೀಯರು. "ಗಾಂಧೀಜಿ ತಮ್ಮ ಅಹಿಂಸಾತತ್ವಶಾಸ್ತ್ರವನ್ನು ಜಗತ್ತಿನ ಮೇಲೆ ಪ್ರಯೋಗ ಮಾಡುವುದು ಯಶಸ್ವಿಯಾಗದು. ಹೊಸದಾಗಿ ಕಂಡುಹಿಡಿದ ಮದ್ದನ್ನು ಮುಗ್ಧ ರೋಗಿಗಳ ಮೇಲೆ ಪ್ರಯೋಗ ಮಾಡಿದಂತೆ ಗಾಂಧೀಜಿ ಯತ್ನ. ಜನರಿಟ್ಟ ಭಕ್ತಿ, ಶ್ರದ್ಧೆಯನ್ನು ಹೀಗೆ ತಪ್ಪು ದಾರಿಗೆ ಎಳೆಯಬಾರದು. ಅವರಿಗೆ ಇದೆಲ್ಲ ತಿಳಿಯೋದಿಲ್ಲ, ಪಾಪ!"[೨] ಎನ್ನುತ್ತಾರೆ ವಿಚಾರವಾದಿ ಜನರು. ಗಾಂಧೀಜಿಯವರಿಗೆ ಅಂತರಾಷ್ಟ್ರೀಯ ಪ್ರಜ್ಞೆಯಿಲ್ಲವೆಂಬುದು ಕೆಲವರ ಅಭಿಪ್ರಾಯ. ಯುದ್ಧ ಆರಂಭವಾದಾಗ ಬ್ರಿಟಿಷರನ್ನು ಬಗ್ಗುಬಡಿಯಲು ಇದು ಸಕಾಲವೆಂದು ಅನೇಕ ಮಂದಿ ಕಾಂಗ್ರೆಸ್ ನಾಯಕರು ಪಟ್ಟು ಹಿಡಿದಿದ್ದರು. ಆದರೆ ಆ ಸಮಯದಲ್ಲಿ ಗಾಂಧೀಜಿ ಸಾಮೂಹಿಕ ಸತ್ಯಾಗ್ರಹ, ಶಾಸನ ಭಂಗ ಕೂಡದೆಂದು ವಿರೋಧಿಸಿದರು. ಆಗ ಬ್ರಿಟಿಷರಿಗೆ ತೊಂದರೆಯಾಗಬಾರದೆಂದು, ಯುದ್ಧಕ್ಕೆ ಅಡಚಣೆಯಾಗಬಾರದೆಂದು ಲಂಡನ್ ಹಾಳಾಗುವುದನ್ನು ನೋಡಲಾರೆನೆಂದು ವ್ಯಥೆ ಪಟ್ಟ ಗಾಂಧೀಜಿ ಈಗ ಅಂದರೆ ೧೯೪೨ರಲ್ಲಿ ಜಪಾನ್ ಭಾರತದ ಮೇಲೆ ದಾಳಿ ಮಾಡುತ್ತದೆಂಬ ಸುದ್ದಿ ಹಬ್ಬಿದಾಗ ಚಳುವಳಿಗೆ ಕರೆಕೊಡುತ್ತಾರೆ. ಗಾಂಧೀಜಿಯ ಸ್ವಭಾವವನ್ನು ಜನರಿಗೆ, ಅವರ ಆಪ್ತ ವಲಯದವರಿಗೆ ಕೂಡ ಅರ್ಥ ಮಾಡಿಕೊಳ್ಳಲು ಕಷ್ಟವಾಗುತ್ತದೆ.

ಗಾಂಧೀಜಿ ಹರಿಜನೋದ್ಧಾರ, ಸತ್ಯಾಗ್ರಹ ಮಾಡುತ್ತಾರೆಯೇ ಹೊರತು ಭಾರತದಾದ್ಯಂತ ಇರುವ ಕೋಟ್ಯಾಂತರ ಬಡವರ, ಕಾರ್ಮಿಕರ ಸಮಸ್ಯೆಯ ಕುರಿತು ಎಲ್ಲೂ ಚಕಾರವೆತ್ತುವುದಿಲ್ಲ. ಹಿಂಸೆಯ ಪ್ರತೀಕಾರ ಅಹಿಂಸೆಯೆಂಬುದು ಒಂದು ರೀತಿಯಲ್ಲಿ ಅವ್ಯವಹಾರಿಕದಂತೆ ಕೆಲವರಿಗೆ ತೋರುತ್ತದೆ. 'ಚರಕ ತಿರುಗಿಸಿ ೨೦ನೇ ಶತಮಾನದಲ್ಲಿ ಗಿರಣಿಗಳ ಹಾವಳಿಯನ್ನು ನಿಲ್ಲಿಸಲಾದೀತೇ? ಇದರಿಂದ ಜಗತ್ತಿನ ಕಾರ್ಮಿಕರ ಸಂಖ್ಯೆ ಬಗೆಹರಿದೀತೆ?' ಎಂಬುದಾಗಿ 'ರಾಷ್ಟ್ರ ಪುರುಷ' ಕಾದಂಬರಿಯ ನಾಯಕ ಅಜಿತ ಯೋಚಿಸುತ್ತಾನೆ. ಕೆಲವು ಪ್ರಗತಿಪರರು –'ಕಾಂಗ್ರೆಸ್ಸಿನಲ್ಲಿ ಸತ್ಯ ಅಹಿಂಸೆಗಳಿಗೆ ಇಲ್ಲದ ಮಹತ್ವ ಕೊಟ್ಟು ರಾಜಕೀಯ ಸಂಸ್ಥೆಯನ್ನು ಮಠವನ್ನಾಗಿ ಮಾಡಿದರು ಮಹಾತ್ಮರು'[೩] ಎಂದು ಕೊರಗಿದರು.

ಗಾಂಧೀಜಿಯನ್ನು ಅವತಾರ ಪುರುಷನೆಂದು ಅರಾಧಿಸಿ ಅವರ ಮಾತನ್ನು ವೇದವಾಕ್ಯದಂತೆ ಪಾಲಿಸುವ, ಅವರ ಒಂದು ದರ್ಶನಕ್ಕಾಗಿ ಹಾತೊರೆಯುವ, ಅವರ ಒಂದು ಮಾತಿಗಾಗಿ ತಮ್ಮ ಸರ್ವಸ್ವವನ್ನು ತ್ಯಾಗ ಮಾಡುವ ಜನರು ಅಂದು ಭಾರತದಲ್ಲಿ ಬಹುಸಂಖ್ಯೆಯಲ್ಲಿದ್ದರು. ಅದೇ ರೀತಿ ಗಾಂಧೀಜಿಯ ಅಹಿಂಸಾ ತತ್ವವನ್ನು, ಅವರ ವಿಧಾಯಕ ಕಾರ್ಯಕ್ರಮಗಳು ಸ್ವಾತಂತ್ರ್ಯವನ್ನು ಇನ್ನಷ್ಟು ದೂರ ಮಾಡುತ್ತವೆ ಎಂಬುದಾಗಿ ನಂಬಿದ ಜನರಿದ್ದರು. ಗಾಂಧೀಜಿ ಒಂದರ್ಥದಲ್ಲಿ ಸರ್ವಾಧಿಕಾರಿ ಧೋರಣೆಯನ್ನು ತೋರುತ್ತಾರೆ. ತಾವು ಹೇಳಿದುದು ನಡೆಯದಿದ್ದರೆ ಉಪವಾಸದ ಬೆದರಿಕೆಯಿಂದ ಇಡೀ ಭಾರತ ದೇಶವನ್ನು ಬಗ್ಗಿಸಲು ನೋಡುತ್ತಾರೆಂಬ ಆರೋಪ ಕೂಡ ಅವರ ಮೇಲೆ ಕೇಳಿ ಬರುತ್ತಿತ್ತು. ಅದೇ ರೀತಿಯಾಗಿ ಗಾಂಧೀಜಿಯ ತತ್ವವನ್ನು ಒಂದಿನಿತೂ ಒಪ್ಪದ ಹಿಂದು ಮಹಾಸಭೆ, ಮುಸ್ಲೀಂ ಲೀಗ್, ಕಮ್ಯುನಿಸ್ಟ್

ಪಕ್ಷ, ಅಂಬೇಡ್ಕರ್, ಬ್ರಿಟಿಷರಿಗೆ ಪರವಾಗಿದ್ದ ಜಸ್ಟೀಸ್ ಪಾರ್ಟಿ, ಹಲವಾರು ಮಂದಿ ಕ್ರಾಂತಿಕಾರಿಗಳು ಅಂದು ಭಾರತದಲ್ಲಿದ್ದರು. ಕಾಂಗ್ರೆಸ್ಸಿನಲ್ಲಿಯೂ ಗಾಂಧೀಜಿಯ ತತ್ವವನ್ನು ಒಪ್ಪದ ಹಲವಾರು ಮಂದಿ ಇದ್ದರು. ಅವರ ಆಪ್ತ ವಲಯದಲ್ಲಿಯೇ ಕೆಲವೊಮ್ಮೆ ಅವರ ಧೋರಣೆಯ ಕುರಿತು ಅಸಮಧಾನವಿತ್ತು. ಈ ಎಲ್ಲಾ ಪ್ರತಿಕೂಲ ಸ್ಥಿತಿಗಳ ನಡುವೆಯೂ ಗಾಂಧೀಜಿಯ ಹೋರಾಟ ನಡೆಯಿತು.

## ಪೊಲೀಸ್ ದೌರ್ಜನ್ಯ ಹಾಗೂ ಮಾನವೀಯತೆ

ಸ್ವಾತಂತ್ರ್ಯ ಚಳುವಳಿಯ ಸಂದರ್ಭದಲ್ಲಿ ಪೊಲೀಸರದೇ ಅಟ್ಟಹಾಸ. ಚಳುವಳಿಯನ್ನು ಹತ್ತಿಕ್ಕಲು ಇವರು ಯಾವ ಅನ್ಯಾಯ ಮಾಡಿದರೂ ಬ್ರಿಟಿಷ್ ಸರಕಾರ ಇವರನ್ನು ರಕ್ಷಿಸುತ್ತಿತ್ತು. ಭಾರತೀಯರಾದ ಪೊಲೀಸರ ಮತ್ತು ಸೇನೆಯ ಬಲದಿಂದಲೇ ಸುಮಾರು ಇನ್ನೂರು ವರ್ಷಕ್ಕಿಂತಲೂ ಹೆಚ್ಚು ಕಾಲ ಬ್ರಿಟಿಷರು ರಾಜ್ಯವಾಳಲು ಸಾಧ್ಯವಾಯಿತು. ಬ್ರಿಟಿಷ್ ಮೇಲಾಧಿಕಾರಿಗಳನ್ನು ಮೆಚ್ಚಿಸಲು, ಕೆಲಸದಲ್ಲಿ ಭಡ್ತಿ ಪಡೆಯಲು ಈ ಪೊಲೀಸರು ಎಂತಹ ಹೀನ ಕೃತ್ಯಕ್ಕೂ ಹೇಸುತ್ತಿರಲಿಲ್ಲ. ನಮ್ಮವರನ್ನೇ ನಾವು ಹಿಂಸಿಸುತ್ತಿದ್ದೇವೆ ಎಂಬ ಕನಿಷ್ಠ ಪರಿಜ್ಞಾನವು ಇವರಿಗೆ ಇದ್ದಂತಿರಲಿಲ್ಲ. ಮುಂದೊಂದು ದಿನ ಸ್ವಾತಂತ್ರ್ಯ ಬಂದರೆ ದೇಶದ ಮುಂದಿನ ಪೀಳಿಗೆಯು ನಮ್ಮ ಕೃತ್ಯವನ್ನು ತಿಳಿದು ಅಸಹ್ಯಪಟ್ಟುಕೊಳ್ಳಬಹುದೆಂದು ಯಾವ ಭಾರತೀಯ ಪೊಲೀಸನೂ ಯೋಚಿಸಲಿಲ್ಲ. ಹೋರಾಟಗಾರರನ್ನು ಹಿಂಸಿಸುವುದರಲ್ಲಿ ವಿಕೃತ ಆನಂದವನ್ನು ಇವರು ಪಡೆದುಕೊಳ್ಳುತ್ತಿದ್ದರು. ನೈತಿಕತೆ, ಮಾನವೀಯತೆ ಎಂಬ ಪದಕ್ಕೆ ಅವರ ಬದುಕಿನಲ್ಲಿ ಸ್ಥಾನವಿರಲಿಲ್ಲ. ಆದರೆ ಬಹಳ ಅಪರೂಪಕ್ಕೆ ಕೆಲವೊಬ್ಬರು ಒಳ್ಳೆಯ, ಚಳುವಳಿಗಾರರ ಬಗ್ಗೆ ಸಹಾನುಭೂತಿಯಿರುವ ಪೊಲೀಸರೂ ಕೂಡಾ ಇದ್ದರು. ಹೊಟ್ಟೆಪಾಡಿಗೋಸ್ಕರ ಈ ವೃತ್ತಿಯನ್ನು ಆಯ್ಕೆ ಮಾಡಿಕೊಂಡರೂ ಕೂಡ ಸ್ವಲ್ಪ ಪ್ರಮಾಣದ ದೇಶಪ್ರೇಮವು ಇವರಲ್ಲಿ ಮನೆ ಮಾಡಿತು. ಕನ್ನಡ ಕಾದಂಬರಿಗಳು ಪೊಲೀಸ್ ಶಿಕ್ಷೆಯ, ದೌರ್ಜನ್ಯದ ಹಾಗೂ ಕೆಲವೊಮ್ಮೆ ಮಾನವೀಯತೆ ಮೆರೆದ ಹಲವಾರು ಪ್ರಸಂಗಗಳನ್ನು ಅನಾವರಣಗೊಳಿಸುತ್ತವೆ. ಹಳ್ಳಿಗಳಿಗೆ ಪೊಲೀಸರ ಕಾಲಿಡುತ್ತಾರೆಂದರೆ ಜನರು ಭಯದಿಂದ ತತ್ತರಿಸುತ್ತಿದ್ದರು. ಅಳುವ ಮಕ್ಕಳು ಅಳು ನಿಲ್ಲಿಸುತ್ತಿದ್ದರು. ಹೆಣ್ಣು ಮಕ್ಕಳು ಮನೆಯ ಬಾಗಿಲು ಮುಚ್ಚುತ್ತಿದ್ದರು. ಹೊಲಗದ್ದೆಗಳಲ್ಲಿ ಕೆಲಸ ಮಾಡುವವರು ಓಡಿ ಹೋಗಿ ಅವಿತುಕೊಳ್ಳುತ್ತಿದ್ದರು. ಪೊಲೀಸರು ಹಳ್ಳಿಗಳಿಗೆ ಬಂದರೆ ಹಳ್ಳಿಯ ಬೀದಿ ಬೀದಿಗಳಲ್ಲಿ ಯಮದೂತರಂತೆ ಸಂಚರಿಸುತ್ತಿದ್ದರು. ಯಾರ ತೋಟದಲ್ಲಾಗಲಿ ಬೆಳೆದ ಒಳ್ಳೆಯ ಹಣ್ಣು, ತರಕಾರಿಗಳು ಇವರಿಗೆ ಬೇಕಿತ್ತು. ಊರಗೌಡ, ಪಟೇಲರು, ಶಾನುಭೋಗರುಗಳು ಇವರಿಗೆ ಬಾಡೂಟವನ್ನು ನೀಡಿ ತೃಪ್ತಿಪಡಿಸಿ ಸೋತುಹೋಗುತ್ತಿದ್ದರು. ಕೆಲವೊಂದು ಸಂದರ್ಭದಲ್ಲಿ ಹಲವಾರು ದಿವಸ ಪೊಲೀಸ್ ಮಿಲಿಟರಿ ಪಡೆ ಊರಿನಲ್ಲಿ ಬೀಡು ಬಿಟ್ಟರೆ ಸರಕಾರದ ಕೃಪಾಕಟಾಕ್ಷದಲ್ಲಿ ಬದುಕುತ್ತಿರುವ ಊರ ಗೌಡರು ಇವರ ತೃಷೆಯನ್ನು ತೀರಿಸುವುದಕ್ಕೆ ಹೆಣ್ಣು ಮಕ್ಕಳನ್ನು ಕೂಡ ಒದಗಿಸಿಕೊಡಬೇಕಾಗಿತ್ತು. ಸ್ವಾತಂತ್ರ್ಯ ಚಳುವಳಿಯಲ್ಲಿ ತೊಡಗಿದ ಹಳ್ಳಿಯ ಜನರು ತಮ್ಮ ಊರಿಗೆ ಪೊಲೀಸರು ಬರುವ ಸುದ್ದಿ ತಿಳಿದರೆ ತಮ್ಮ ಮನೆಯ ಹೆಣ್ಣು ಮಕ್ಕಳನ್ನು

ಸಂಬಂಧಿಕರ ಮನೆಗೋ, ಪಕ್ಕದ ಊರನಲ್ಲೋ ಬಚ್ಚಿಡುತ್ತಿದ್ದರು. ಸ್ವಾತಂತ್ರ್ಯ ಹೋರಾಟದ ಸಮಯದಲ್ಲಿ ಹೋರಾಟದಲ್ಲಿ ಭಾಗವಹಿಸಿದವರ ಮನೆಯ ಹೆಣ್ಣುಮಕ್ಕಳನ್ನು ಹಾಗೂ ಹೋರಾಟದಲ್ಲಿ ಭಾಗವಹಿಸಿದ ಹೆಣ್ಣುಮಕ್ಕಳನ್ನು ಅತ್ಯಾಚಾರವೆಸಗಿದ ಉದಾಹರಣೆಗಳೂ ಬೇಕಾದಷ್ಟಿವೆ.

ಚಳುವಳಿಯಲ್ಲಿ ಭಾಗವಹಿಸಿದ ಜನರು ಊರುಬಿಟ್ಟು ಪೊಲೀಸರ ಕಣ್ಣು ತಪ್ಪಿಸಿಕೊಳ್ಳುವುದು ಸಾಮಾನ್ಯ ವಿಷಯವಾಗಿತ್ತು. ಅಂತಹ ಸಂದರ್ಭದಲ್ಲಿ ಪೊಲೀಸರು ಊರ ದೊಡ್ಡ ದೊಡ್ಡ ಮನೆಗಳಿಗೆ ಬೆಂಕಿ ಹಚ್ಚುತ್ತಿದ್ದರು. ಅವು ಧಗಧಗ ಉರಿದು ಭಸ್ಮವಾಗುವುದನ್ನು ನೋಡಿ ವಿಕೃತ ಆನಂದವನ್ನು ಅನುಭವಿಸುತ್ತಿದ್ದರು. ಬಡವರ ಮನೆಗಳು ನೆಲಸಮ ಮಾಡುತ್ತಿದ್ದರು. ಪೆಟ್ಟಿಗೆಗಳ ಬೀಗ ಹೊಡೆದು ಬೆಲೆ ಬಾಳುವ ನಗ ನಾಣ್ಯಗಳನ್ನು ಅಪಹರಿಸುತ್ತಿದ್ದರು. ಪ್ರತಿಭಟಿಸಿದ ಮಕ್ಕಳು ಮುದುಕರನ್ನು ಮೂಲೆಗೆ ತಳ್ಳಿ ಬಂದೂಕುಗಳನ್ನು ಎದೆಗೊಡ್ಡಿ ಹೆದರಿಸುತ್ತಿದ್ದರು. ಕಣ್ಣಿಗೆ ಕಂಡವರ ಮೇಲೆ ಖೂನಿ ಮತ್ತು ದರೋಡೆಯ ಅಪಾದನೆಯ ಮೇಲೆ ದಸ್ತಗಿರಿ ಮಾಡುತ್ತಿದ್ದರು. ಲಾಟಿಗಳಿಂದ ತಿವಿಯುತ್ತಾ, ಬೂಟುಗಾಲುಗಳಿಂದ ಒದೆಯುತ್ತಾ ಕ್ಯಾಂಪಿಗೆ ಎಳೆದೊಯ್ಯುತ್ತಿದ್ದರು. ರಾಕ್ಷಸರಂತೆ ಬರುವ ಪೊಲೀಸರನ್ನು ನೋಡಿದರೆ ದನ ಕರುಗಳು ಹಗ್ಗ ಕಿತ್ತುಕೊಂಡು ಓಡಿಹೋಗುತ್ತಿದ್ದವು. ಈಸೂರಿಗೆ ಬಂದ ಪೊಲೀಸರು ಬೆಂಕಿಯ ದೊಂದಿಗಳನ್ನು ಮನೆಯ ಸೂರುಗಳ ಮೇಲೆ ಹುಲ್ಲು ಬಣವೆಗಳ ಮೇಲೆ ಒಗೆದರು. ಅದೇ ಬೆಂಕಿಯಲ್ಲಿ ಚಳಿ ಕಾಯಿಸಿಕೊಂಡರು. 'ಈಸೂರಿನ ಚಿರಂಜೀವಿಗಳು' ಕಾದಂಬರಿ ಕೂಡ ಪೊಲಿಸರ ಅಟ್ಟಹಾಸದ ಚಿತ್ರಣವನ್ನು ನೀಡುತ್ತದೆ. 'ಊರಿನ ಸಾಹುಕಾರ ಬಸವಣ್ಯಪ್ಪನೇ ಇವರಿಗೆಲ್ಲಾ ನಾಯಕನಂತೆ. ಅವನಿಗೆ ತಿನ್ನಲು ಅನ್ನವಿಲ್ಲದಂತೆ, ನಿಲ್ಲಲು ನೆಲೆಯಿಲ್ಲದಂತೆ, ಮಾಡಿದರೆ ಇವರ ಸ್ವಾತಂತ್ರ್ಯ ಹೋರಾಟ ತನಗೆ ತಾನೇ ಸತ್ತು ಹೋಗುತ್ತೆ. ಕೈಗೆ ಸಿಕ್ಕದ್ದರೆ ಅವನನ್ನೇ ಬೆಂಕಿ ಹಚ್ಚಿ ಸುಡಬಹುದಿತ್ತು. ಕಣ್ಣಿಗೆ ಮಣ್ಣೆರಚಿ ತಪ್ಪಿಸಿಕೊಂಡ ಬದ್ಮಾಷ್' – ಹೀಗೆ ಕೋಪದಿಂದ ಸಿಡಿದೆದ್ದ ಪೊಲೀಸರು ಊರಿನ ಸಾಹುಕಾರ ಬಸವಣ್ಯಪ್ಪನ ಮನೆಗೆ ಬೆಂಕಿ ಹಚ್ಚಿದರು. ಕಬ್ಬಿಣದ ಪೆಟ್ಟಿಗೆಗಳನ್ನು ಒಡೆದು ಹಣವನ್ನು ದೋಚಿದರು. ಬಂಗಾರವನ್ನು ಕದ್ದರು. ಬ್ರಿಟಿಷ್ ಸರಕಾರದಲ್ಲಿ ಪೊಲೀಸರು ಏನೇ ಮಾಡಿದರೂ ಯಾವುದೇ ಕಾನೂನು ಕಟ್ಟಳೆಗಳಿರಲಿಲ್ಲ. ಪ್ರಜೆಗಳನ್ನು ರಕ್ಷಿಸಬೇಕಾದ ಸರಕಾರವೇ ಭಕ್ಷಿಸುತ್ತಿತ್ತು. ಚಳುವಳಿಯನ್ನು ಹತ್ತಿಕ್ಕಲು ಪೊಲೀಸರು ಮಾಡುವ ಯಾವ ಕೆಟ್ಟ ಕೆಲಸಕ್ಕೂ ಸರಕಾರದ ಬೆಂಬಲವಿತ್ತು. ಹೀಗೆ ಇಂದು ಕೂಡ ನಾವು ಆಗಾಗ ಕೇಳುವ ಪೊಲೀಸ್ ದೌರ್ಜನ್ಯವು ಬ್ರಿಟಿಷ್ ಸಾಮ್ರಾಜ್ಯಶಾಹಿಯ ಪಳೆಯುಳಿಕೆಯಾಗಿದೆ.

ಊರಿಗೆ ಪೊಲೀಸರು ನುಗ್ಗಿದರೆ ಎಷ್ಟೋ ಮನೆಗಳಲ್ಲಿ ಮಾಡಿದ ಅಡುಗೆ ಅವರ ವಶವಾಗುತ್ತಿತ್ತು. ಊರಿನ ಕುರಿ, ಕೋಳಿಗಳು ಅವರ ರಾಕ್ಷಸ ಹೊಟ್ಟೆ ಸೇರುತ್ತಿದ್ದವು. ಹೆಣ್ಣುಮಕ್ಕಳ ಮೇಲೆ ದೌರ್ಜನ್ಯವೆಸಗುತ್ತಿದ್ದರು. ಸ್ವಾತಂತ್ರ್ಯವೀರರ ಬಾಯಿ ಬಿಡಿಸಲು ಮನ ಬಂದಂತೆ ಥಳಿಸುತ್ತಿದ್ದರು. ಮುಖಕ್ಕೆ ಉಗುಳುತ್ತಿದ್ದರು. ಮೀಸೆಯ ಎರಡೂ ತುದಿಗಳನ್ನು ಹಿಡಿದು ಮೇಲೆತ್ತುತ್ತಿದ್ದರು. ಬಟ್ಟೆ ಬರೆಗಳನ್ನು ಬಿಚ್ಚಿಸಿ ಬರಿ ಮೈಗೆ ಚಾವಟಿಯಿಂದ ಬಡಿದರು. ಮತ್ತೆ ಕೆಲವರನ್ನು ತಲೆಕೆಳಗಾಗಿ ಕಟ್ಟಿ ಮೆಣಸಿನ ಪುಡಿಯ 'ಊದರ' ಹಾಕಿದರು. ಇನ್ನು ಕೆಲವರನ್ನು

ಚುಚ್ಚುವ ಮೊಳೆಗಳಿದ್ದ ಬುಟುಗಾಲುಗಳಿಂದ ಒದ್ದರು. ಹುಳಗಳನ್ನು ಹೊಸಕುವಂತೆ ಹೊಸಕುತ್ತಿದ್ದರು. ಮತ್ತೆ ಕೆಲವರಿಗೆ ಸ್ವಮೂತ್ರಪಾನ, ಬಲವಂತ ಮೂತ್ರಪಾನ ಮಾಡಿಸುತ್ತಿದ್ದರು.[೯೪] ತಂಗಳು ಅನ್ನಕ್ಕೆ ಹಳಸಿದ ಸಾರು ಹೊಯ್ದು ಅದಕ್ಕೆ ಕಲ್ಲು ಮಣ್ಣು ಸೇರಿಸಿ ಬಡಿಸುತ್ತಿದ್ದರು. ನೀರು ಕೇಳಿದವರ ಮುಖಕ್ಕೆ ತಾಂಬೂಲವನ್ನು ಉಗುಳುತ್ತಿದ್ದರು. ಕೊಠಡಿಯ ನೆಲಕ್ಕೆ ನೀರು ಹೊಯ್ದು ಕೈದಿಗಳನ್ನು ಅದರ ಮೇಲೆ ಮಲಗಿಸುತ್ತಿದ್ದರು. ಇಪ್ಪತ್ತು ಜನ ಹಿಡಿಸುವ ಕೊಠಡಿಗಳಲ್ಲಿ ಇನ್ನೂ ಇಪ್ಪತು ಜನರನ್ನು ತುರುಕುತ್ತಿದ್ದರು.[೯೫] ಕುಲೀನ ಮನೆತನದ ಮಹಿಳಾ ಕೈದಿಗಳಿಗೆ 'ಮುಂಡೆ, ರಂಡೆ, ಬೋಸುಡಿ' ಎಂಬ ಅವಾಚ್ಯ ಶಬ್ದಗಳನ್ನು ಬಳಸುತ್ತಿದ್ದರು. ಕೆಲವೊಮ್ಮೆ ಇತರ ಪ್ರಮುಖ ಸತ್ಯಾಗ್ರಹಿಗಳ ಸುಳಿವನ್ನು ಬಾಯಿಬಿಡಿಸಲು ಬಯೊನೆಟ್ಟಗಳಿಂದ, ಕಿರುಗತ್ತಿಗಳಿಂದ ಮಾಂಸ ಖಂಡಗಳನ್ನು ತಿವಿಯುತ್ತಿದ್ದರು. ಆದರೂ ಸತ್ಯಾಗ್ರಹಿಗಳು ಇತರ ತಪ್ಪಿಸಿಕೊಂಡಿದ್ದ ಸತ್ಯಾಗ್ರಹಿಗಳ ಸುಳಿವನ್ನು ನೀಡುತ್ತಿರಲಿಲ್ಲ. ಪೊಲೀಸ್ ಹಿಂಸೆಯೆಂಬುದು ನರಕಯಾತನೆಯಾಗಿತ್ತು. ಗಾಯದ ಮೇಲೆ ಉಪ್ಪು ಸುರಿಯುತ್ತಿದ್ದರು. ಕೆಲವರು ಮುಖಂಡರು ಲಾಠಿ ಏಟಿನಿಂದ ಮರಣಹೊಂದಿದ ಪ್ರಸಂಗವೂ ಇದೆ. ಹೆಣ್ಣುಮಕ್ಕಳು ಪೊಲೀಸರ ಕೈಗೆ ಸಿಕ್ಕಿದರೆ ಅವರ ಶೀಲವನ್ನು ರಕ್ಷಿಸಿಕೊಳ್ಳುವುದೇ ದೊಡ್ಡ ಹೊಣೆಯಾಗಿತ್ತು. ಕೆಲವೊಂದು ಹೆಣ್ಣುಮಕ್ಕಳು ಪೊಲೀಸರಿಂದ ತಮ್ಮ ಶೀಲವನ್ನು ರಕ್ಷಿಸಿಕೊಳ್ಳಲು ಆತ್ಮಹತ್ಯೆ ಮಾಡಿದ ಪ್ರಕರಣಗಳು ಇವೆ. ರಾಜಾರಾಮ್ ಮುಜಲೀಕರ್ ಅವರ 'ಶ್ರದ್ಧಾಂಜಲಿ' ಕಾದಂಬರಿಯಲ್ಲಿ ರುದ್ರಮ್ಮ ಎಂಬ ಹೋರಾಟಗಾರ್ತಿ ಪೊಲೀಸರ ಕೈಯಿಂದ ತನ್ನ ಶೀಲ ರಕ್ಷಿಸಿಕೊಳ್ಳಲು ಅವರ ಬಂದೂಕನ್ನೇ ಸಿಡಿಸಿ ಅವರ ಕಣ್ಣಮುಂದೆಯೇ ಆತ್ಮಹತ್ಯೆ ಮಾಡಿಕೊಳ್ಳುತ್ತಾರೆ. ಗಾಂಧೀಜಿ ಹೇಳಿದ 'ಹೆಣ್ಣುಮಕ್ಕಳು ಮಾನ ಹೋಗುವ ಸಂದರ್ಭ ಬಂದಾಗ ಆತ್ಮಹತ್ಯೆ ಮಾಡಿಕೊಳ್ಳಬೇಕೆಂಬ' ಮಾತನ್ನು ಅವಳು ಅಕ್ಷರಶಃ ಪಾಲಿಸುತ್ತಾಳೆ. ಅದೆಷ್ಟೋ ಹೆಣ್ಣುಮಕ್ಕಳು ಪೊಲೀಸರಿಂದ ಅತ್ಯಾಚಾರಕ್ಕೊಳಗಾಗಿ ಆತ್ಮಹತ್ಯೆ ಮಾಡಿಕೊಂಡಿದ್ದಾರೆ. ಡಾ. ಸೂರ್ಯನಾಥ ಕಾಮತ್ ಅವರು ಬರೆದ 'ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು' ಇದರಲ್ಲಿ ಮಹಿಳೆಯರ ಮೇಲೆ ಪೊಲೀಸ್ ದೌರ್ಜನ್ಯದ ನೈಜ ಚಿತ್ರಣವನ್ನು ನಾವು ಕಾಣಬಹುದು. ತಿಗಡೊಳ್ಳಿಯ ಭೂಗತ ಹೋರಾಟಗಾರರಾದ ಬಸಪ್ಪ ಹಂಚಿನಮನಿ ಹಾಗೂ ವೀರಪ್ಪ ಹೊಸೂರು ಇವರ ಹೆಂಡಂದಿರನ್ನು ಪೊಲೀಸರ ಬಂಧಿಸಿ ಊರ ಹೊರಗಿನ ಕಲಮೇಶ್ವರ ಗುಡಿಯಲ್ಲಿ ಒಯ್ದು ಅವರ ಗಂಡಂದಿರು ಎಲ್ಲಿರುವರೆಂದು ಹೇಳಲು ಒತ್ತಾಯಿಸಿದರು. ತಮಗೆ ಗೊತ್ತಿಲ್ಲವೆಂದು ಅವರು ಹೇಳುತ್ತಲೇ ಅವರನ್ನು ಗರ್ಭಗುಡಿಯಲ್ಲಿ ಒಯ್ದು ವಿವಸ್ತ್ರ ಮಾಡಿ ಹೊಡೆದರು. ಆ ನರರಾಕ್ಷಸರ ಅಮಾನುಷ ಕೃತ್ಯದಿಂದ ಎಳ್ಳಷ್ಟೂ ಹೆದರದೆ ಆ ವೀರ ಮಹಿಳೆಯರು ಹೊಡೆತ ಅವಮಾನಗಳನ್ನು ಸಹಿಸಿಕೊಂಡು ಪೊಲೀಸರಿಗೆ ಚಕಾರ ಶಬ್ದಗಳನ್ನು ಸಹ ಹೇಳದೆ ತಮ್ಮ ಧೈರ್ಯ ತೋರಿಸಿದರು. ಬಸಪ್ಪನ ಹೆಂಡತಿ ಬಸವ್ವ ತುಂಬು ಗರ್ಭಿಣಿ. ಕ್ರೂರ ಪೊಲೀಸ್ ಅಧಿಕಾರಿ ಅವರ ಸ್ತನ ಹಿಚುಕಿ ಹಾಲು ಚಿಮ್ಮಿಸಿದನು. ಆದರೂ ಅವಳು ಎಲ್ಲಾ ವೇದನೆಗಳನ್ನು ಅವಮಾನಗಳನ್ನು ಧೈರ್ಯದಿಂದ ಸಹಿಸಿದಳು. ತನ್ನ ಪತಿಯ ಬಗ್ಗೆ ಏನನ್ನೂ ಹೇಳಲು ನಿರಾಕರಿಸಿದಳು.[೯೬]

ಕೆಲವೊಂದು ಸಂದರ್ಭದಲ್ಲಿ ಶಾಂತವಾಗಿ ಸಾಗುತ್ತಿದ್ದ ಪ್ರಭಾತಪೇರಿ ಮೆರವಣಿಗೆಯು ಸಂದರ್ಭದಲ್ಲಿ ಪೊಲೀಸರೇ ಕಲ್ಲು ತೂರಾಟ ಆರಂಭಿಸಿ ಗಲಭೆ ಎಬ್ಬಿಸಿದ ಪ್ರಸಂಗವೂ ಇದೆ. ವೈಯಕ್ತಿಕ ದ್ವೇಷವನ್ನು ಸಾಧಿಸಿದ ಉದಾಹರಣೆಗಳು ಕಂಡು ಬರುತ್ತದೆ. 'ರಾಷ್ಟ್ರ ಪುರುಷ' ಕಾದಂಬರಿಯಲ್ಲಿ ವಸಂತನೆಂಬ ಫೌಜುದಾರ ಜಾಧವ ಮಾಸ್ತರರಿಗೆ ಗುಂಡಿಕ್ಕಲು ತಾನೇ ಮೆರವಣಿಗೆಯಲ್ಲಿ ಗಲಭೆ ಎಬ್ಬಿಸುತ್ತಾನೆ. ಇಲ್ಲಿ ವಸಂತ ಹೇಳುವ ಮಾತುಗಳು ಉಲ್ಲೇಖನೀಯ– "ಸಾದ ಅರಿವೆಗಳನ್ನು ಧರಿಸಿದ ನಾಲ್ಕಾರು ಜನ ಪೊಲೀಸರನ್ನು ಮೆರವಣಿಗೆಯಲ್ಲಿ ಕಳಿಸಿ ಪೊಲೀಸರ ಮೇಲೆ ಕಲ್ಲು ಎಸೆಯಲು ಹೇಳಿದೆ. ಮರುಕ್ಷಣದಲ್ಲಿ ಜನತೆಯಲ್ಲಿ ಬಿರುಗಾಳಿ ಬೀಸಿದಂತಾಯಿತು. ಕಲ್ಲಿನ ಸುರಿಮಳೆ ಆರಂಭಯಿತು. ಫಯರ್ ಮಾಡಲು ಆರ್ಡರ್ ಕೊಟ್ಟೆ ನಾನೇ ಸ್ವತಃ ಜಾಧವ ಮಾಸ್ತರ ಎದೆಗೆ ಪಿಸ್ತೂಲಿನ ಗುರಿಯಿಟ್ಟೆ"[೭] ಈ ರೀತಿ ಪೊಲೀಸರು ಕೆಲವೊಮ್ಮೆ ತಮ್ಮ ವೈಯಕ್ತಿಕ ದ್ವೇಷವನ್ನು ಸಾಧಿಸಲು ಇಂತಹ ಹೇಯ ಮಾರ್ಗವನ್ನೂ ಅನುಸರಿಸುತ್ತಿದ್ದರು. ಶಾಂತವಾಗಿ ಸಾಗುತ್ತಿದ್ದ ಕಾಂಗ್ರೆಸ್ ಮೆರವಣಿಗೆಯಲ್ಲಿ ತಾವೇ ಸ್ವತಃ ಅಶಾಂತಿಯನ್ನುಂಟುಮಾಡಿ ಗೋಳೀಬಾರ್ ಮಾಡುತ್ತಿದ್ದರು. ೧೯೩೦ ಮೇ ೫ರಂದು ಉಪ್ಪಿನ ಸತ್ಯಾಗ್ರಹದ ಸಂದರ್ಭದಲ್ಲಿ ಗಾಂಧೀಜಿಯವರನ್ನು ಸೆರೆಮನೆಗೆ ತಳ್ಳುತ್ತಾರೆ. ಆಗ ಗಾಂಧೀಜಿಯ ಮಗ ಮಣಿಲಾಲ್ ಗಾಂಧಿ ಹಾಗೂ ಸರೋಜಿನಿ ನಾಯ್ಡು ಅವರ ನೇತೃತ್ವದಲ್ಲಿ ಸತ್ಯಾಗ್ರಹ ಮುಂದುವರಿಯುತ್ತದೆ. "ಮೆರವಣಿಗೆಯಲ್ಲಿ ಹೋಗುತ್ತಿದ್ದ ಸತ್ಯಾಗ್ರಹಿಗಳತ್ತ ದೊಣ್ಣೆ ಹಿಡಿದ ಪೊಲೀಸರು ನುಗ್ಗಿ, ಅವರನ್ನು ಬೀಸಿ ಬೀಸಿ ಬಾರಿಸತೊಡಗಿದರು. ಸತ್ಯಾಗ್ರಹಿಗಳು ಒಬ್ಬರಾದರೂ ಏಟು ತಪ್ಪಿಸಿಕೊಳ್ಳಲು ಪ್ರಯತ್ನಿಸಲಿಲ್ಲ. ಸತ್ಯಾಗ್ರಹಿಗಳು ತಲೆ ಒಡೆದು ನೆಲಕ್ಕೆ ಬಿದ್ದರು. ಮುಂದೆ ಸಾಗುವ ಸತ್ಯಾಗ್ರಹಿಗಳತ್ತ ಮತ್ತೆ ಮತ್ತೆ ಪೊಲೀಸರು ಬೀಸಿ ಬೀಸಿ ದೊಣ್ಣೆಯಿಂದ ಹೊಡೆದರು. ಮೊದಲಿನಂತೆ ಈ ಸತ್ಯಾಗ್ರಹಿಗಳ ತಲೆಯೂ ಒಡೆದು ರಕ್ತ ಚಿಮ್ಮಿ ನೆಲಕ್ಕೆ ಬಿದ್ದರು". ಆದರೂ ತಾವು ಮಾತ್ರ ಅಹಿಂಸೆಯನ್ನು ಬಿಡಲಿಲ್ಲ.

ಹೆಚ್.ಎಲ್. ಬ್ರೆಯಿಲ್ಸ್ ಫೋರ್ಡ್ ಎಂಬ ಪತ್ರಕರ್ತ ಜುಲೈ ೧೯೩೦ರಂದು ಲಂಡನ್ನಿನ ಪ್ರಧಾನಿಗೆ ಬರೆದ ಪತ್ರದಲ್ಲಿ ಪೊಲೀಸ್ ಕ್ರೌರ್ಯ, ದೌರ್ಜನ್ಯ ಹಾಗೂ ಹಿಂಸೆಯ ಚಿತ್ರಣವನ್ನು ಮನಮುಟ್ಟುವಂತೆ ವಿವರಿಸಿದ್ದಾನೆ. "ಮುಂಬಯಿಯಲ್ಲಿ ಶಾಂತಿಯಿಂದ ನೆರೆದಿದ್ದ ಸಭಿಕರನ್ನು ಚದುರಿಸಲು ಪೊಲೀಸರು ಲಾಠಿ ಪ್ರಹಾರ ಮಾಡಿ ಜನರ ತಲೆ ಒಡೆದು ರಕ್ತ ಹರಿಸಿದರು. ಗಾಯಗೊಂಡವರಿಗೆ ಪ್ರಥಮ ಚಿಕಿತ್ಸೆ ನೀಡಲೂ ಅವಕಾಶ ಕೊಡಲಿಲ್ಲ. ಗೋಳೀಬಾರ್ ಮಾಡಿದಾಗ ಸತ್ತವರ ಹೆಣವನ್ನು ಒಯ್ಯಲೂ ಬಿಡಲಿಲ್ಲ. ಕಲ್ಕತ್ತಾ ಬೀದಿಗಳಲ್ಲಿ ಶಾಂತಿಯುತವಾಗಿ ಸಾಗುತ್ತಿದ್ದ ವಿದ್ಯಾರ್ಥಿಗಳ ಮೆರವಣಿಗೆಯ ಮೇಲೆ ಪೊಲೀಸರು ಲಾಠಿ ಪ್ರಹಾರ ಮಾಡಿದರು. ಲಾಹೋರಿನ ಕಾಲೇಜೊಂದರಲ್ಲಿ ವಿದ್ಯಾರ್ಥಿಗಳ ಜೊತೆಗೆ ಪ್ರಾಧ್ಯಾಪಕರನ್ನು ಲಾಠಿಯಿಂದ ಚಚ್ಚಲಾಯಿತು. ಅವರ ತಲೆ ಒಡೆದು ರಕ್ತದ ಓಕುಳಿ ಆಡಿದರು. ಬಂಗಾಳದಲ್ಲಿ ಕಾಂಟೈ ಎಂಬ ಹಳ್ಳಿಯಲ್ಲಿ ನೆರೆದಿದ್ದ ಗುಂಪನ್ನು ಚದುರಿಸುವಾಗ ಪೊಲೀಸರು ಐದು ಜನ ಹಳ್ಳಿಯವರನ್ನು ಕೆರೆಯಲ್ಲಿ ದೂಡಿ ಹತ್ಯೆ ಮಾಡಿದರು. ಮೀರತ್‌ನಲ್ಲಿ ಪ್ರತಿಭಟನಾ ಸಭೆಯ ಮುಖ್ಯ ಭಾಷಣಕಾರರಾಗಿದ್ದ ವಕೀಲರೊಬ್ಬರನ್ನು

ಕೈದು ಮಾಡಿ ಅವರನ್ನು ಮೈ ಮುರಿಯುವಂತೆ ಹೊಡೆದದ್ದಲ್ಲದೆ ಅತೀ ಹತ್ತಿರದಿಂದ ಅವರಿಗೆ ಗುಂಡಿಕ್ಕಿದರು. ಗುರಿತಪ್ಪಿ ಒಂದು ಅಂಗೈ ಛಿದ್ರವಾಯಿತು. ತೋಳು ಕತ್ತರಿಸಬೇಕಾಯಿತು. ಪ್ರತಿ ತಿಂಗಳು ೪ನೇ ತಾರೀಖು ಗಾಂಧಿ ಕೈದಾದ ಸ್ಮರಣಾದಿನದಂದು ಧ್ವಜ ದಿನಾಚರಣೆಯನ್ನು ಆಚರಿಸಲಾಗುತ್ತದೆ, ಒಂದು ಹಳ್ಳಿಯ ಮನೆಯ ಮೇಲೆ ಹಾರಿಸಿದ್ದ ಕಾಂಗ್ರೆಸ್ ಧ್ವಜವನ್ನು ಪೊಲೀಸರು ಕೆಳಗಿಳಿಸಿ ಹರಿದು ಚಿಂದಿ ಚಿಂದಿ ಮಾಡಿದರು. ಆ ಮನೆಯೊಡೆಯನನ್ನು ಥಳಿಸಿದರು. ಅಷ್ಟು ಮಾತ್ರವಲ್ಲದೆ ನೆರೆಮನೆಯವನ ಮೇಲೂ ಲಾಟಿ ಪ್ರಹಾರ ಮಾಡಿದರು.[೯೮] ಹೀಗೆ ಇಂಗ್ಲಿಷ್ ಪತ್ರಕರ್ತರಿಗೇನೆ ಬ್ರಿಟಿಷ್ ಸರಕಾರದ ಪೊಲೀಸರ ಸರಕಾರದ ಕುಮ್ಮಕ್ಕಿನಿಂದ ಭಾರತೀಯರಿಗೆ ನೀಡುವ ಶಿಕ್ಷೆಯನ್ನು ನೋಡಲಾಗುತ್ತಿರಲಿಲ್ಲ. ಇದು ಲಷ್ಕರಿ ಆಳ್ವಿಕೆಗಿಂತ ಕ್ರೂರವಾಗಿದೆಯೆಂದು ಅವರು ಹೇಳುತ್ತಾರೆ.

ಅಂಕೋಲಾ ಸತ್ಯಗ್ರಹಾದ ಸಂದರ್ಭದಲ್ಲಿ ಪೊಲೀಸರ ದೌರ್ಜನ್ಯ ಅವರ್ಣನೀಯ. ಹರಾಜಿನಲ್ಲಿ ಕೊಂಡು ಕೊಂಡ ಮನೆಗಳನ್ನು ಸ್ವಾಧೀನ ಪಡಿಸಿಕೊಳ್ಳಲು ಪೊಲೀಸರು ಬರುತ್ತಿದ್ದರು. ಮನೆಯೊಳಗೆ ಮಲಗಿದ್ದ ಮಕ್ಕಳನ್ನು ತಂದು ಹೊರಗೆ ನಡುಬಿದಿಯಲ್ಲಿ ಒಗೀತಿದ್ರು, ಹೆಂಗಸರನ್ನು ರಟ್ಟೆ ಹಿಡಿದು ಹೊರಗೆ ಹಾಕುತಿದ್ದರು. ಹೊರಗೆ ಹಾಕಿದ ಮೇಲೆ ಅವರನ್ನು ಬೂಟುಗಾಲಿನಿಂದ ಒದೀತಿದ್ದರು. ಒಮ್ಮೆ ಪೊಲೀಸರು ತಾಬಾಕ್ಕೆ ತಗೊಂಡು ಬೀಗ ಹಾಕಿದ್ದ ದೊಮ್ಮಯ್ಯ ನಾಯ್ಕ ಎಂಬವರ ಮನೆ ಬಾಗಿಲು ಮುರಿದು ಹೆಂಗಸರು ಒಳಗೆ ಹೊಕ್ಕು ಸತ್ಯಾಗ್ರಹಕ್ಕೆ ಕೂತರು. ಅವರಲ್ಲಿ ಮನುದೇವಿ ಎಂಬ ಹೆಣ್ಣುಮಗಳನ್ನು ಬೂಟು ಕಾಲಿನಿಂದ ಒದ್ದು ಬಡಿಗೆಯಿಂದ ಬಡಿದು ಎಚ್ಚರತಪ್ಪಿ ಬಿದ್ದಾಕೆಯ ದೇಹದ ಮೇಲೆ ಹತ್ತಿ ತುಳಿದರು.[೯೯] ಕೊಟ್ಟೂರಿನಲ್ಲಿ ಹೆಂಡದಂಗಡಿ ಪಿಕೆಟಿಂಗ್ ನಡೆಯುತ್ತಿದ್ದಾಗ ಸೇಂದಿ ಅಂಗಡಿ ಮಾಲಿಕರು ಅಬಕಾರಿ ಅಧಿಕಾರಿಗಳು, ಪೊಲೀಸರು, ಸತ್ಯಾಗ್ರಹಿಗಳನ್ನು ಹಿಡಿದು ಅವರ ಮೇಲೆ ಹೆಂಡ ಸುರಿದರು. ಕೆಲವರನ್ನು ನೆಲಕ್ಕೆ ಕೆಡವಿ ಅವರ ಬಾಯಲ್ಲಿ ಹೆಂಡ ಹೊಯ್ದರು. ಬೂಟುಗಾಲಿನಿಂದ ಒದ್ದರು.

೧೯೩೦-೩೧ರಲ್ಲಿ ಹತ್ತೇ ಹತ್ತು ತಿಂಗಳಲ್ಲಿ ೯೦ ಸಾವಿರ ಸತ್ಯಾಗ್ರಹಿಗಳನ್ನು ಶಿಕ್ಷಿಸಿ ಸೆರೆಮನೆಗೆ ತಳ್ಳಲಾಗಿತ್ತು. ೧೯೩೨ರ ಜನವರಿಯಿಂದ ಮೂರು ನಾಲ್ಕು ತಿಂಗಳಲ್ಲಿ ಕನಿಷ್ಠ ೭೦ ಸಾವಿರ ಜನರನ್ನು ಶಿಕ್ಷಿಸಿ ಸೆರೆಮನೆಗೆ ತಳ್ಳಲಾಗಿದೆ. ಶಿಕ್ಷಿಸದೆ ಬಡಿದು ಗಾಯಗೊಳಿಸಿ ಹಿಡಿದುಗೊಂಡು ಹೋಗಿ ಅರಣ್ಯದಲ್ಲಿ ಬಿಟ್ಟು ಬಂದವರ ಸಂಖ್ಯೆ ಅದರ ದುಪ್ಪಟ್ಟು ಇದ್ದರೂ ಇರಬಹುದು. ಚಳುವಳಿಗಾರರು ಮೆರವಣಿಗೆ ಹೊರಟಾಗ ಅವರನ್ನು ಚದುರಿಸಲು ಲಾಠಿಯಿಂದ ಹೊಡೆದು ಹೆಣಗಳು ಬೀಳುತ್ತವೆ. ಆ ಮೆರವಣಿಗೆಯನ್ನು ನೋಡಲು ನಿಂತ ಬೀದಿ ಬದಿಯ ಮಂದಿಯನ್ನು ದನ ಬಡಿದಂತೆ ಬಡಿದು ರಕ್ತ ಹರಿಸುತ್ತಿದ್ದರು.[೧೦೦]

'ಚಿರಸ್ಮರಣೆ' ಕಾದಂಬರಿ ಕೂಡ ಇಂತಹ ಪೊಲೀಸ್ ದೌರ್ಜನ್ಯದ ಕ್ರೂರತೆಯನ್ನು ಚಿತ್ರಿಸುತ್ತದೆ. ಕಯ್ಯೂರಿನಲ್ಲಿ ಬೀಡು ಬಿಟ್ಟಿದ್ದ ಪೊಲೀಸರ ದೌರ್ಜನ್ಯವಂತೂ ಹೇಳತೀರದು. ಕಾಯಿಲೆಬಿದ್ದ ಮಹಿಳೆ ಮೇಲೆ ನಾಲ್ಕಾರು ಜನ ಅತ್ಯಾಚಾರ ಮಾಡುತ್ತಾರೆ. ಉರಿಯುವ ಸಿಗರೇಟನ್ನು

ಮೂಗಿಗೆ ತುರುಕುವುದ, ಉಗುರುಗಳಿಗೆ ಸೂಜಿ ಚುಚ್ಚುವುದು, ಕೈಕಾಲು ಬಿಗಿದು ಬಾಯಿಗೆ ಹೊಲಸು ಸುರಿಯುವುದು... ಹೀಗೆ ಬ್ರಿಟಿಷ್ ಸರಕಾರದ ಸಮಯದಲ್ಲಿ ಪೊಲೀಸ್ ದೌರ್ಜನ್ಯ ವರ್ಣಿಸಲು ಪದಗಳೇ ಸಾಲದು. ದಸ್ತಗಿರಿಯಾದವರಿಗೆ ಶಿಕ್ಷಿಸುವುದಕ್ಕೆ ಯಾವುದೇ ರೀತಿಯ ಕಾನೂನಿನ ಮಾನದಂಡ ಇರಲಿಲ್ಲ.

ಇದು ಜಗತ್ತಿನ ದೃಷ್ಟಿಯಲ್ಲಿ ಅತ್ಯಂತ ನಾಗರಿಕ ದೇಶವೆಂದು ಮುಖವಾಡ ಹಾಕಿಕೊಂಡ ಬ್ರಿಟಿಷ್ ಸರಕಾರ ಭಾರತೀಯ ಸ್ವಾತಂತ್ರ್ಯ ಹೋರಾಟಗಾರರನ್ನು ಶಿಕ್ಷಿಸುತ್ತಿದ್ದ ಕೆಲವು ಮಾದರಿಗಳು. ಇಂತಹ ತಪ್ಪಿಗೆ ಇಂತಹ ಶಿಕ್ಷೆ ಎಂಬ ಯಾವ ನಿಯಮವೂ ಇರಲಿಲ್ಲ. ರಾಜಕೀಯ ಕೈದಿಗಳನ್ನು ಕೂಡ ಅತ್ಯಂತ ಹೀನಾಯವಾಗಿ ನಡೆಸಿಕೊಳ್ಳುತ್ತಿದ್ದರು. ಇವರು ನೀಡುತ್ತಿದ್ದ ಶಿಕ್ಷೆಯು ಮಾನವತೆಗೆ ಒಡ್ಡಿದ ಸವಾಲು. ಚಳುವಳಿಯನ್ನು ಬಗ್ಗುಬಡಿಯಲು ಬ್ರಿಟಿಷರು ಉಪಯೋಗಿಸಿದ ಮಾರ್ಗವಂತೂ ಮಾನವ ಕೋಟಿ ತಲೆತಗ್ಗಿಸುವಂತಹುದು. ಅಹಿಂಸೆಯಲ್ಲಿ ನಿರತರಾದ ಮುಗ್ಧ ಚಳುವಳಿಗಾರರಿಗೆ ಈ ರೀತಿಯ ಶಿಕ್ಷೆ, ಅವಮಾನವನ್ನು ಸರಕಾರದ ಪೊಲೀಸರು ನೀಡುತ್ತಿದ್ದರೂ ಅಂತಹ ಪೊಲೀಸರ ವಿರುದ್ಧ ಕ್ರಮ ತೆಗೆದುಕೊಂಡ ಒಂದೇ ಒಂದು ಉದಾಹರಣೆಗಳು ಕೂಡ ಬ್ರಿಟಿಷ್ ಸರಕಾರದಲ್ಲಿ ಇರಲಿಲ್ಲ. ಅತ್ಯಂತ ಕ್ರೂರಿಯಾದವನು ಬೇಗನೇ ಉನ್ನತ ಹುದ್ದೆಗೆ ಏರುತ್ತಿದ್ದನು. ಹೀಗೆ ಬ್ರಿಟಿಷ್ ಸರಕಾರದ ಪೊಲೀಸ್ ಇಲಾಖೆಯಲ್ಲಿ ಮುಂಭಡ್ತಿಯನ್ನು ಪಡೆಯುವುದಕ್ಕೆ ಅಮಾನವೀಯತೆ ಹಾಗೂ ಕ್ರೌರ್ಯವೆ ಮಾನದಂಡವಾಗಿತ್ತು.

ಪೊಲೀಸ್ ಇಲಾಖೆಯಲ್ಲಿ ಎಷ್ಟೇ ದುಷ್ಟರಿದ್ದರೂ ಅಪರೂಪಕ್ಕೆ ಮಾನವೀಯತೆಯುಳ್ಳವರು, ದೇಶಭಕ್ತಿಯುಳ್ಳವರು ಇದ್ದರು. ಹೊಟ್ಟೆಪಾಡಿಗೋಸ್ಕರ ಪೊಲೀಸ್ ಇಲಾಖೆ ಸೇರಿದರೂ ದೇಶಪ್ರೇಮಿಗಳಿಗೋಸ್ಕರ ಎಲ್ಲೋ ಒಂದು ಕಡೆ ಅವರ ಅಂತಃಕರಣ ಮಿಡಿಯುತ್ತಿತ್ತು. 'ಸೆರೆಮನೆಯ ಶೂರ' ಕಾದಂಬರಿಯಲ್ಲಿ ಒಬ್ಬ ಪೊಲೀಸ್ ಅಧಿಕಾರಿಯ ಪಾತ್ರವಿದೆ. ಅವನನ್ನು ಗಡ್ಡದ ಸಾಬನೆಂದೇ ಕರೆಯುತ್ತಿದ್ದರು. ಅವನು ಕೈದಿಗಳ ಜೊತೆಯಲ್ಲಿ ಹಾರ್ದಿಕವಾಗಿ ನಡೆದುಕೊಳ್ಳುತ್ತಿದ್ದನು. ಹಲವಾರು ಕಡೆಗಳಲ್ಲಿ ನಡೆಯುವ ಹೋರಾಟದ ಕತೆಯನ್ನು ಬಂದು ಕೈದಿಗಳಿಗೆ ಹೇಳುತ್ತಿದ್ದನು. 'ಯಾವ ಕೆಲಸಕ್ಕೆ ಹೋದರೂ ಪೊಲೀಸ್ ಕೆಲಸಕ್ಕೆ ಮಾತ್ರ ಹೋಗಬಾರದು' ಎಂಬುದು ಅವನ ಅಭಿಪ್ರಾಯವಾಗಿತ್ತು. "ಒಂದು ಪಾಯೀಖಾನೀ ಕಲ್ಲಾಗಿ ಕಂಡವರ ಕಾಲ್ತುಳಿತ ತಾಳ್ಬಹುದು. ಕಲ್ಲಿನಕಿಂತ ಕಲ್ಲ ಎದೀ ಪೊಲೀಸಾಗ್ಬಾರ್ದು"[೧೦೧] ಎಂಬುದು ಗಡ್ಡದ ಸಾಬನ ಅಭಿಮತ. ಕೆಲವು ಪ್ರದೇಶಗಳಲ್ಲಿ ಚಳುವಳಿ ಬಿರುಸಿನಿಂದ ನಡೆಯಲು, ಹಾಗೂ ಹೋರಾಟಗಾರರು ಸರಕಾರದ ಕಣ್ಣು ತಪ್ಪಿಸಿ ದೀರ್ಘ ಕಾಲದವರೆಗೆ ಭೂಗತರಾಗಿ ತಮ್ಮ ಚಟುವಟಿಕೆಗಳನ್ನು ವಿಸ್ತರಿಸಲು ಕೆಲವು ಪೊಲೀಸರ ಹೃದಯದಲ್ಲಿ ಸುಪ್ತವಾಗಿದ್ದ ದೇಶಪ್ರೇಮವೇ ಕಾರಣ. ಆನಂದ ಕಂದರ 'ಮಗಳ ಮದುವೆ' ಕಾದಂಬರಿಯಲ್ಲಿ ಹನುಮಂತಪ್ಪ ಎಂಬ ಪೊಲೀಸ್ ಅಧಿಕಾರಿ ರತ್ನಾಕರನ ವಾರಂಟ್ ವಿಷಯವನ್ನು ಅವನಿಗೆ ಬಂದು ತಿಳಿಸಿ ತಲೆಮರೆಸಿಕೊಳ್ಳಲು ಹೇಳುತ್ತಾನೆ. ರತ್ನಾಕರ ಹನುಮಂತಪ್ಪನನ್ನು ಕುರಿತು "ಹನುಮಂತಪ್ಪಾ, ನಿಮ್ಮದು ಮತ್ತೆ ಕಟ್ಟೀರಾಮ್ ಸಾಹೇಬರದ್ದು ಸ್ವದೇಶ ಪ್ರೀತಿ ನಮ್ಮ ಈ ಚಳುವಳಿ ಜನರಿಗಿಂತ ಯಾವ

ರೀತಿಯಿಂದಲೂ ಕಡಿಮೆಯಾದುದೇನೂ ಅಲ್ಲ. ನಿಮ್ಮಂತಹ ಸ್ವದೇಶಪ್ರಿಯ ಪೊಲೀಸರ ಸಹಕಾರ, ಸಹಾನುಭೂತಿಗಳು ನಮಗೆ ಸಿಕ್ಕದೆ ಹೋಗಿದ್ದರ ನಮ್ಮ ಅನೇಕ ಕಾರ್ಯಗಳು ಸಹಜವಾಗಿ ಸಾಧಿಸುತ್ತಿರಲಿಲ್ಲ. ಈಗ ನಮ್ಮ ಜನರು ಪೊಲೀಸರು ಅಂದರ ತಿರಸ್ಕಾರದ ದೃಷ್ಟಿಯಿಂದ ನೋಡುತ್ತಾರೇನೋ ನಿಜ. ಆದರೆ ನಿಮ್ಮಂಥ ಜನರೂ ಪೊಲೀಸರೊಳಗ ಇದ್ದಾರೆಂಬುದು ಬಹಳ ಜನರಿಗೆ ಗೊತ್ತಿಲ್ಲ"[೧೦೨] ಎಂಬುದಾಗಿ ಅವನನ್ನು ಹೊಗಳುತ್ತಾನೆ. ಇಂತಹ ಪೊಲೀಸರ ದೇಶಸೇವೆ ಅವರ ವೃತ್ತಿಯ ದೃಷ್ಟಿಯಿಂದ ರಾಜದ್ರೋಹವೆನಿಸಿದರೂ ಅವರ ಅಂತರಾಳದಲ್ಲಿ ಹುದುಗಿದ್ದ ಸ್ವದೇಶ ಪ್ರೇಮವು ಅವರಿಂದ ಇಂತಹ ಕೆಲಸವನ್ನು ಮಾಡಿಸುತ್ತದೆ.

ಕೆಲವೊಬ್ಬರು ಪೊಲೀಸ್ ಇಲಾಖೆಯಲ್ಲಿದ್ದರೂ ಎಲ್ಲೋ ಒಂದು ಕಡೆ ಅವರ ಆತ್ಮ ಚುಚ್ಚುತ್ತಿತ್ತು. ಈ ಇಲಾಖೆಯಲ್ಲಿ ಉನ್ನತ ಸ್ಥಾನದಲ್ಲಿದ್ದವರು ಕೂಡ ಯಾವುದೋ ಒಂದೊಂದು ಸಂದರ್ಭದಲ್ಲಿ ತನಗೂ ಸ್ವಾತಂತ್ರ್ಯ ಚಳುವಳಿಯ ಮುಖಂಡರಾದ ಗಾಂಧಿ, ನೆಹರು ಬಗ್ಗೆ ಗೌರವವಿದೆಯೆಂಬುದಾಗಿ ಹೇಳಕೊಳ್ಳುತ್ತಿದ್ದರು. 'ಶ್ರದ್ಧಾಂಜಲಿ' ಕಾದಂಬರಿಯಲ್ಲಿ ಒಬ್ಬ ಪೊಲೀಸ್, ಕಾದಂಬರಿಯ ನಾಯಕ ರಮೇಶನಲ್ಲಿ "ಹೊಟ್ಟೆ ಚಿಂತಿ ಹೆಂಡ್ರು ಮಕ್ಳು ಇದ್ದಿರಲಿಲ್ಲ ಅಂದ್ರ ನಾ ಏನು ಈ ಕತ್ತೆ ಚಾಕರಿ ಮಾಡ್ತಿರಲಿಲ್ಲ ನೋಡಿ ಸಾಬ್"[೧೦೩] ಎಂದು ತನ್ನ ಮನದಾಳವನ್ನು ಬಿಚ್ಚಿಡುತ್ತಾನೆ. ಅಂದಿನ ಕಾಲದಲ್ಲಿ ಸುಲಭದಲ್ಲಿ ಸಿಗುತ್ತಿದ್ದ ನೌಕರಿಯೆಂದರೆ ಪೊಲೀಸ್ ಕೆಲಸ. ಭಾರತೀಯರನ್ನು ಹತ್ತಿಕ್ಕಲು ಬ್ರಿಟಿಷರಿಗೆ ಭಾರತೀಯ ಪೊಲೀಸರೇ ಬೇಕಾಗಿತ್ತು. ಅದಕ್ಕೆ ಹೆಚ್ಚಿನ ವಿದ್ಯಾಭ್ಯಾಸದ ಅವಶ್ಯಕತೆ ಇರಲಿಲ್ಲ. ಅದಕ್ಕಿರಬೇಕಾಗಿದ್ದ ಬಹಳ ಮುಖ್ಯವಾದ ಅರ್ಹತೆಯೆಂದರೆ ಕ್ರೌರ್ಯತೆ ಹಾಗೂ ಆತ್ಮಸಾಕ್ಷಿ ಇಲ್ಲದಿರುವುದು. ಪೊಲೀಸ್ ಇಲಾಖೆಗೆ, ಅದರಲ್ಲೂ ಪೊಲೀಸ್ ಪೇದೆಯಾಗಿ ಸೇರಿಕೊಳ್ಳುತ್ತಿದ್ದವರೆಲ್ಲರೂ ಹೆಚ್ಚಾಗಿ ಬಡವರಾಗಿದ್ದರು. ಹೊಟ್ಟೆ ಪಾಡಿಗೋಸ್ಕರವೇ ಅವರು ಈ ವೃತ್ತಿಯನ್ನು ಆಯ್ದುಕೊಳ್ಳುತ್ತಿದ್ದರು. ಭಾರತೀಯರು ಹೆಚ್ಚು ಹೆಚ್ಚು ಇಂತಹ ಪೊಲೀಸ್ ಪೇದೆಗಳಾಗುವುದು ಬ್ರಿಟಿಷ್ ಸರಕಾರಕ್ಕೆ ಬೇಕಾದ ವಿಚಾರವೇ ಆಗಿತ್ತು. ಯಾಕೆಂದರೆ ಒಬ್ಬ ಈ ಇಲಾಖೆಯನ್ನು ಸೇರಿಕೊಂಡನೆಂದರೆ ಬ್ರಿಟಿಷ್ ಸರಕಾರದ ವಿರುದ್ಧ ಕತ್ತಿ ಮಸೆಯುವ ಒಬ್ಬ ದೇಶಪ್ರೇಮಿ ಕಡಿಮೆಯಾದಂತೆಯೇ.

ಸ್ವಾತಂತ್ರ್ಯ ಚಳುವಳಿ ಯಶಸ್ಸನ್ನು ಕಾಣುವುದಕ್ಕೆ ಒಂದು ಕಾರಣವೆಂದರೆ ನಮ್ಮ ಭಾರತೀಯರು ಬ್ರಿಟಿಷರಿಗಿಂತ ಹೆಚ್ಚಾಗಿ ಸರಕಾರದ ಅಧಿಕಾರ ಸ್ಥಾನದಲ್ಲಿದ್ದುದು. ಇದರಿಂದ ಕೆಲವೊಂದು ಬ್ರಿಟಿಷ್ ಸರಕಾರದ ಗುಪ್ತ ಮಾಹಿತಿಗಳು ಕೂಡಾ ಸೋರಿಕೆಯಾಗುತ್ತಿದ್ದವು. ಕೆಲವು ನೌಕರರಂತೂ ಎದುರಿನಿಂದ ಪಕ್ಕಾ ಕಾಂಗ್ರೆಸ್ ವಿರೋಧಿಗಳಂತೆ ಸೋಗು ಹಾಕಿಕೊಂಡು ಗುಪ್ತವಾಗಿ ಕಾಂಗ್ರೆಸ್‌ಗೆ ಬೇಕಾದ ಸಹಾಯವನ್ನು ಮಾಡುತ್ತಿದ್ದರು. ಬ್ರಿಟಿಷ್ ಸರಕಾರದ ಭದ್ರ ಕೋಟೆಯಲ್ಲಿ ಕೇವಲ ಆಂಗ್ಲರೇ ತುಂಬಿಕೊಂಡಿದ್ದರೆ ಅದರ ಕೆಲವೊಂದು ಮಾಹಿತಿಗಳು ನಮಗೆ ದೊರಕುತ್ತಿರಲಿಲ್ಲ. ಆದುದರಿಂದ ನಮ್ಮವರು ಅಧಿಕಾರದಲ್ಲಿರುವುದು ಒಳ್ಳೆಯದೆಂದು ಕೆಲವರು ಅಭಿಪ್ರಾಯ ಪಡುತ್ತಿದ್ದರು. 'ಹಬ್ಬಿದ ಬಳ್ಳಿ' ಕಾದಂಬರಿಯಲ್ಲಿ ಕೂಡಾ ಪೊಲೀಸರು ಭೂಗತವಾಗಿದ್ದ ಚಳುವಳಿಗಾರರಿಗೆ ಗುಪ್ತವಾಗಿ ಸಹಾಯ ಮಾಡುವ ಉಲ್ಲೇಖ ಬರುತ್ತದೆ. ಭೂಗತರಾಗಿರುವ

ಅನೇಕ ಕಾರ್ಯಕರ್ತರು ಅಧಿಕಾರಿಗಳ ಆಶ್ರಯದಲ್ಲಿಯೇ ಕೆಲಸ ಮಾಡುತ್ತಾರೆ. "ಅನೇಕ ಅಧಿಕಾರಗಳು ನಮಗೆ ಗುಪ್ತವಾಗಿ ಸಹಾಯ ಮಾಡುತ್ತಾರೆ. ಭೂಗತವಾಗಿರುವ ಅನೇಕ ಕಾರ್ಯಕರ್ತರು ಅಧಿಕಾರಿಗಳ ಆಶ್ರಯದಲ್ಲೇ ಕೆಲಸ ಮಾಡುತ್ತಾರೆ"[೧೦೮] ಎಂದು ವಾಸುದೇವ ಹೇಳುತ್ತಾನೆ.

ಹೀಗೆ ಅಪರೂಪದಲ್ಲಿ ಪೊಲೀಸರು ಮಾನವೀಯತೆ ಮೆರೆದ ಪ್ರಸಂಗವು ಅಲ್ಲಲ್ಲಿ ಕಂಡುಬರುತ್ತದೆ. ಎಲ್ಲೋ ಕೆಲವರ ಅಂತರಾಳದಲ್ಲಿ ದೇಶಭಕ್ತಿಯ ಕಿಡಿ ಉರಿಯುತ್ತಿತ್ತು. ಆದುದರಿಂದ ಅವರು ಹೊಟ್ಟಪಾಡಿಗಾಗಿ ಪೊಲೀಸ್ ಇಲಾಖೆಯನ್ನು ಅವಲಂಬಿಸಿದರೂ ಸಂಪೂರ್ಣವಾಗಿ ತಮ್ಮನ್ನು ತಾವು ಬ್ರಿಟಿಷ್ ಸರಕಾರಕ್ಕೆ ಮಾರಿಕೊಂಡಿರಲಿಲ್ಲ. ಚಳುವಳಿಗಾರರಿಗೆ ಅಲ್ಪ ಸ್ವಲ್ಪ ಸಹಯ ಮಾಡಿ ದೇಶದ ಋಣವನ್ನು ಒಂದಿನಿತು ತೀರಿಸುತ್ತಿದ್ದರು. ಆದರೆ ಪೊಲೀಸ್ ಇಲಾಖೆಯಲ್ಲಿದ್ದ ಬಹುತೇಕ ಮಂದಿ ಮಾನವೀಯತೆಯನ್ನೇ ಬ್ರಿಟಿಷ್ ಸರಕಾರಕ್ಕೆ ಒತ್ತೆಯಿಟ್ಟು ಬದುಕುತ್ತಿದ್ದರು. ರಾಜಕೀಯ ಕೈದಿಗಳನ್ನು ಕ್ರಿಮಿನಲ್ ಕೈದಿಗಳಿಗಿಂತ ಕಡೆಯಾಗಿ ನಡೆಸಿಕೊಳ್ಳತ್ತಿದ್ದರು. ತಮ್ಮದೇ ದೇಶಬಾಂಧವರನ್ನು ತಾವು ತುಳಿಯುತ್ತಿದ್ದೇವೆ, ಮುಂದೊಂದು ದಿವಸ ದೇಶ ಸ್ವಾತಂತ್ರ್ಯ ಆದಾಗ ನಮ್ಮ ಈ ಇತಿಹಾಸವನ್ನು ಓದಿದ ಭಾರತೀಯರ ದೃಷ್ಟಿಯಲ್ಲಿ ನಾವು ಪಶುವಿಗಿಂತ ಕೀಳಾಗುತ್ತೇವೆ ಎಂಬ ಕನಿಷ್ಠ ಪ್ರಜ್ಞೆಯು ಅವರಿಗೆ ಇದ್ದಂತಿರಲಿಲ್ಲ.

## ಸಾಮಾಜಿಕ ಪಲ್ಲಟಗಳು

ಇಡೀ ನಮ್ಮ ಇತಿಹಾಸವನ್ನು ಗಮನಿಸಿದರೆ ಹತ್ತೊಂಬತ್ತು ಮತ್ತು ಇಪ್ಪತ್ತನೆಯ ಶತಮಾನಗಳಲ್ಲಿ ಆದಷ್ಟು ಸ್ಥಿತ್ಯಂತರಗಳು ಹಾಗೂ ಬದಲಾವಣೆಗಳು ಇನ್ನು ಯಾವ ಕಾಲಘಟ್ಟದಲ್ಲೂ ಆಗಿರಲಿಲ್ಲ. ಇದೊಂದು ಸಂಕ್ರಮಣಾವಸ್ಥೆಯ ಕಾಲಘಟ್ಟ, ಪಾಶ್ಚ್ಯಾತ್ಯ ಸಂಪರ್ಕವು ಭಾರತೀಯರಿಗೆ ದೊರೆತು ಭಾರತೀಯರ ಆಲೋಚನಾ ವಿಧಾನದಲ್ಲಿ ಬದಲವಣೆಯಾಗುತ್ತದೆ. ಬೌದ್ಧಿಕ ಬದಲಾವಣೆ, ಅದನ್ನು ಅವಲಂಬಿಸಿ ಸಾಮಾಜಿಕ ಸುಧಾರಣೆ, ಹಿಂದು ಸಂಸ್ಕೃತಿಯಲ್ಲಿದ್ದ ಹುಳುಕುಗಳನ್ನು ಸರಿಪಡಿಸಬೇಕೆಂಬ ಧೋರಣೆ ಅದರ ಜೊತೆ ಜೊತೆಯಲ್ಲಿ ತಮ್ಮ ಸಂಸ್ಕೃತಿಯು ಪಾಶ್ಚ್ಯಾತ್ಯ ಸಂಸ್ಕೃತಿಯ ಹುಚ್ಚು ಹೊಳೆಯಲ್ಲಿ ಕೊಚ್ಚಿ ಹೋಗದಂತೆ ಕಾಯ್ದು ಕೊಳ್ಳಬೇಕಾದ ಹೊಣೆಗಾರಿಕೆಯು ಅಂದಿನ ವಿದ್ಯಾವಂತ ವರ್ಗದ ಮೇಲಿತ್ತು. ಹತ್ತೊಂಭತ್ತನೆಯ ಶತಮಾನದಲ್ಲಿ ಭಾರತಕ್ಕೆ ಬ್ರಿಟಿಷರ ಸಂಪರ್ಕವು ಈ ನಾಲ್ಕು ಬಗೆಯಲ್ಲಿ ಒದಗಿ ಬಂತು. ೧.ಆಡಳಿತ, ವ್ಯವಹಾರ ೨.ಮುದ್ರಣ ಯಂತ್ರ, ೩.ಕ್ರಿಸ್ತ ಮತ ಪ್ರಚಾರ, ೪.ಹೊಸ ಶಿಕ್ಷಣ ಪದ್ಧತಿ ಮತ್ತು ಹೊಸ ವಿಚಾರ ಸರಣಿ[೧೦೫]. ಬ್ರಿಟಿಷರ ಆಡಳಿತದಲ್ಲಿ ಅವರ ಸ್ವಾರ್ಥ ಸಾಧನೆ ಎಷ್ಟೇ ಇರಲಿ, ಆಗ ಇದ್ದ ಸುವ್ಯವಸ್ಥೆ, ಬಿಗುವು ಆ ಹಿಂದಿನ ದೇಶೀಯ ರಾಜ್ಯಭಾರಗಳಲ್ಲಿ ವಿಶೇಷತಃ ೧೭-೧೮ನೇ ಶತಮಾನಗಳಲ್ಲಿ ಇರಲಿಲ್ಲ. ಬ್ರಿಟಿಷ್ ಅಧಿಕಾರಿಗಳ ಕಾರ್ಯ ಕ್ಷಮತೆಯಂತೂ ಸಾಮಾನ್ಯ ಭಾರತೀಯನನ್ನೂ ಬೆರಗುಗೊಳಿಸಿತು. ಕೆಲವೇ ಬ್ರಿಟಿಷ್ ಅಧಿಕಾರಿಗಳು ಇಡೀ ಜಿಲ್ಲೆಯೊಂದನ್ನು ಸಮರ್ಥವಾಗಿ ನಿಯಂತ್ರಿಸುತ್ತಿದ್ದಾಗ ಆಡಳಿತದ ಹಿಡಿತವು ದೇಶದ ಹಳ್ಳಿ ಹಳ್ಳಿಗೂ ಪಸರಿಸಿತು. ಅದರ ಹಿಂದೆ

ದೇಶದ ಆರ್ಥಿಕ ಶೋಷಣೆ ನಡೆದಿತ್ತಾದರೂ ಆ ಮುನ್ನಿನ ಅಸ್ಥಿರ ರಾಜಕೀಯದ ಅಶಾಂತ ವಾತಾವರಣವು ಕಣ್ಮರೆಯಾಗಿ ಜನತೆಗೆ ನೆಮ್ಮದಿ, ಭದ್ರತೆಗಳು ದೊರಕಿತೆಂಬುದು ನಿಜ.

ಇತ್ತ ಯುರೋಪಿನ ಔದ್ಯೋಗಿಕ ಸುಧಾರಣೆಗಳು ಒಂದೊಂದಾಗಿ ಭಾರತದಲ್ಲಿ ಕಾಲಿಡತೊಡಗಿದವು. ಉದ್ಯಮ, ಸಂಚಾರ ಸಾಧನ, ಕೈಗಾರಿಕೆಗಳಿಗೆ ಸಂಬಂಧಿಸಿದ ಯಂತ್ರ ಸಾಮಾಗ್ರಿ ಇವುಗಳಲ್ಲಿ ಕೆಲವು ಭಾರತೀಯರ ಊಹೆಗೂ ನಿಲುಕದಿದ್ದವುಗಳು. ಅದರಂತೆ ಅತ್ಯಂತ ಭಿನ್ನವಾದ ಪಾಶ್ಚಾತ್ಯ ನಾಗರಿಕತೆಯು ಜನರಿಗೆ ಆಕರ್ಷಕವಾಗಿ ತೋರಿತು. ಮುಖ್ಯವಾಗಿ ಅವರ ಚಿಕಿತ್ಸಕ ದೃಷ್ಟಿ, ವ್ಯಾವಾಹಾರಿಕ ಮನೋಭಾವ, ಜಾತಿ ತಾರತಮ್ಯ ಇಲ್ಲದ ವ್ಯವಹಾರ ಇವು ಭಾರತೀಯರ ಬದುಕಿನಲ್ಲಿ ಹರಡುತ್ತ ನಡೆದು ಅವರ ಜೀವನ ದೃಷ್ಟಿಯನ್ನು ಬದಲಿಸತೊಡಗಿದುವು. ಭಾರತದ ಸಾಂಸ್ಕೃತಿಕ ಪುನರುಜ್ಜೀವನಕ್ಕೆ ಒದಗಿ ಬಂದ ಅಮೂಲ್ಯ ಸಾಮಾಗ್ರಿ ಎಂದರೆ ಮುದ್ರಣ ಯಂತ್ರ, ಯಾವ ದೇಶದಲ್ಲಿಯೇ ಆಗಲಿ ಮುದ್ರಣವು ಮೊದಲು ಕಾಲಿರಿಸಿದ ಕೆಲವೇ ಕಾಲದಲ್ಲಿ ಆ ದೇಶವು ಪ್ರಗತಿ ಪಥದಲ್ಲಿ ಮನ್ನಡೆದುದು ಐತಿಹಾಸಿಕವಾಗಿ ಸಿದ್ಧವಾದ ಮಾತು. ಭಾರತದಲ್ಲಿಯೂ ಹಾಗೇ ಆಯಿತು. ಅದು ಶೈಕ್ಷಣಿಕ ಮತ್ತು ಸಾಹಿತ್ಯಿಕ ರಂಗದಲ್ಲಿ ಕ್ರಾಂತಿಯನ್ನುಂಟುಮಾಡಿತು. ಒಂದು ಕೈಯಲ್ಲಿ ಬೈಬಲ್, ಅದರ ಬೆನ್ನಿಗೇ ಮುದ್ರಣ ಸಾಮಾಗ್ರಿ ಇವನ್ನು ಹಿಡಿದುಕೊಂಡು ಬಂದ ಮಿಶನರಿಗಳು ಸ್ವಮತ ಪ್ರಸಾರದ ಕಾರ್ಯದಲ್ಲಿ ತೊಡಗಿದರು. ಆ ನಿಮಿತ್ತದಿಂದ ಸಾಹಿತ್ಯ, ಶಿಕ್ಷಣ ಕ್ಷೇತ್ರಗಳಲ್ಲಿ ನೇರವಾಗಿ ಪ್ರವೇಶಿಸಿದರು. ಪಾಶ್ಚಾತ್ಯ ಸಂಪರ್ಕಗಳಲ್ಲಿ ಹೊಸ ಶಿಕ್ಷಣ ಕ್ರಮವೇ ಎದ್ದು ಕಾಣುವಂಥದ್ದದು. ತಮ್ಮ ಅನುಕೂಲಕ್ಕೆ ಸರಕಾರವೂ ಮಿಶನರಿ ಜನರೂ ಇಂಗ್ಲಿಷ್ ಶಾಲೆಗಳನ್ನು ತೆರೆದೊಡನೆ ಭಾರತೀಯರು ಆ ವಿದ್ಯಾಪ್ರವಾಹದಲ್ಲಿ ಈಸು ಬಿದ್ದರು. ಅವರ ಅಧ್ಯಯನಕ್ಕಾಗಿ ಇದ್ದ ಆಧುನಿಕ ವಿಜ್ಞಾನ, ಪ್ರಪಂಚ ಪರಿಚಯ, ವಾಙ್ಮಯ, ಎಲ್ಲವೂ ಅವರಿಗೆ ಹೊಸತೊಂದು ಜಗತ್ತನ್ನು ತೆರೆದು ತೋರಿದುವು.

ಪಾಶ್ಚಾತ್ಯ ಸಂಪರ್ಕದ ಸಾಮಾಜಿಕ ರೀತಿಯ ಪರಿಣಾಮ ವಿಶೇಷವೆಂದರೆ ಮಧ್ಯಮ ವರ್ಗದ ಪ್ರತಿಷ್ಠಾಪನೆ ಮತ್ತು ಆ ವರ್ಗೀಯರು ಬೆಳೆಯಿಸಿಕೊಂಡ ಚಿಕಿತ್ಸಕ ಮನೋವೃತಿ. ತಾವು ಪಡೆದ ಹೊಸ ಶಿಕ್ಷಣದ ಪರಿಣಾಮವಾಗಿ ಅವರಲ್ಲಿ 'ಪುರಾಣಮಿತ್ಯೇವ ನಾ ಸಾಧು ಸರ್ವಂ' ಎಂಬ ಮನೋಭಾವ ಉದಯಿಸಿತು. ಹಿರಿಯರು ಹೇಳಿದುದೆಂಬ ಏಕಮೇವ ಕಾರಣದಿಂದ ಹಿಂದಿನದೆಲ್ಲವನ್ನೂ ಸ್ವೀಕರಿಸಲೊಲ್ಲದೆ, ಅದರ ಬಗ್ಗೆ ಅವರಲ್ಲಿ ಜಿಜ್ಞಾಸೆಯು ಬೆಳದು ಬಂದಿತು. ವಿ.ಸೀ. ಅವರ ಮಾತಿನಲ್ಲಿ ವಿವರಿಸುವುದಾದರೆ 'ವಿಜ್ಞಾನವು ವಿಜ್ಞಾನ ತಂತ್ರವೂ ದೈವವಾದವವನ್ನು ಪ್ರತಿಭಟಿಸುವಂತೆ ಹಬ್ಬಿದಾಗ ಅಲ್ಲಿನಂತೆ ಇಲ್ಲಿಯೂ ಆಸ್ತಿಕತೆಯೂ ಪೂರ್ವಾಚಾರವೂ, ಭಕ್ತಿ ಶ್ರದ್ಧೆಗಳೂ ಸಡಿಲವಾದುವು... ಯಾವುದನ್ನೂ ಕುರಿತು, ಏಕೆ ಹೀಗೆ? ವಿಧಾನ ಹೇಗೆ? ಈ ವಾದ, ಈ ನಿರ್ಣಯ ಏಕಾಗಬಾರದು? ಎಂಬ ಪ್ರಶ್ನೆಯ ಧಾರಳ ಸ್ವಾತಂತ್ರ್ಯ ಹುಟ್ಟಿತು.[೧೦೬]

ಸಾಮಾಜಿಕ ಸ್ಥಿತ್ಯಂತರದ ಇನ್ನೊಂದು ವೈಶಿಷ್ಟ್ಯವೆಂದರೆ, ಭಾರತೀಯರಲ್ಲಿ ಮೂಡಿಬಂದ ಲೌಕಿಕ ಹಾಗೂ ವ್ಯಕ್ತಿಗತವಾದ ದೃಷ್ಟಿಕೋನ. ಇದುವರೆಗೆ ಮತಧರ್ಮದ ಆವರಣದಲ್ಲಿ ಬೆಳೆದು

ಬಂದ ಅವನ ಮನೋವೃತ್ತಿಯು ಸಮಷ್ಟಿಯದಾಗಿತ್ತು. ಪಾಶ್ಚಿಮಾತ್ಯ ಪ್ರಭಾವದಿಂದ ಮೂಡಿದ ಲೌಕಿಕ ವಿಚಾರಗಳಿಂದಾಗಿ ಜೀವನಕ್ರಮವು ಹೆಚ್ಚು ಹೆಚ್ಚು ವ್ಯಕ್ತಿಪರವಾಗುತ್ತ ನಡೆಯಿತು. ಮತ್ತು ಇಹಲೋಕದ ನಡೆವಳಿಕೆಗಳಿಗೆ ಪ್ರಾಧಾನ್ಯವನ್ನೀಯಬೇಕಾದ ಪರಿಸ್ಥಿತಿಯು ತಲೆದೋರಿತು.

ಈ ಕಾಲಾವಧಿಯಲ್ಲಿ ಇನ್ನೂ ಅನೇಕ ಬದಲಾವಣೆಗಳು ವೈರುಧ್ಯಗಳು ಕಂಡುಬಂದುವು. ಒಂದು ಕಾಲದಲ್ಲಿ ಅತ್ಯಂತ ಗೌರವ. ಸ್ಥಾನಮಾನವನ್ನು ತಂದು ಕೊಡುತ್ತಿದ್ದ ಸಂಸ್ಕೃತ ಪಾಂಡಿತ್ಯ, ವೇದ ಉಪನಿಷತ್ತುಗಳ ಜ್ಞಾನವು ಮೂಲೆಗುಂಪಾಗತೊಡಗಿದುವು. ಅವುಗಳ ಸ್ಥಾನವನ್ನು ಇಂಗ್ಲೀಷ್ ಶಿಕ್ಷಣ ಆಕ್ರಮಿಸಿಕೊಂಡಿತು. ಇಂಗ್ಲೀಷ್ ಶಿಕ್ಷಣವನ್ನು ಪಡೆದುಕೊಂಡವರಿಗೆ ಸರಕಾರ ಉದ್ಯೋಗ ಸಿಗುವ ಆಮಿಷವಿದ್ದ ಕಾರಣ ಮಧ್ಯಮವರ್ಗದ ಹಾಗೂ ಶ್ರೀಮಂತರು ಕೂಡ ತಮ್ಮ ಮಕ್ಕಳನ್ನು ಸರಕಾರಿ ಶಾಲೆಗಳಿಗೆ ಕಳುಹಿಸತೊಡಗಿದ್ದರು. ಸಾರ್ವತ್ರಿಕ ಶಿಕ್ಷಣ ಪದ್ಧತಿ ಹಾಗೂ ಅದೇ ಸಮಯದಲ್ಲಿ ಗಾಂಧೀಜಿಯವರ ವಿಧಾಯಕ ಕಾರ್ಯಕ್ರಮಗಳಲ್ಲಿ ಒಂದಾದ ಹರಿಜನೋದ್ಧಾರದ ಪರಿಣಾಮವಾಗಿ ಸಮಾಜದಲ್ಲಿ ವಿದ್ಯಾಭ್ಯಾಸದಿಂದ ವಂಚಿತರಾಗಿದ್ದ ದಲಿತರ ಮಕ್ಕಳು ಕೂಡಾ ಶಾಲೆಗಳಿಗೆ ಹೋಗಲಾರಂಭಿಸಿದರು. ಸಂಪ್ರದಾಯವಾದಿಗಳಿಂದ ಕೆಲವೊಂದು ಕಡೆಗಳಲ್ಲಿ ಇದಕ್ಕೆ ವಿರೋಧವೂ ವ್ಯಕ್ತವಾಗುತ್ತದೆ.

ಈ ಸಂದರ್ಭದಲ್ಲಿ ಎರಡು ತಲೆಮಾರಿನ ಜನರ ನಡುವೆ ಆಲೋಚನಾ ವಿಧಾನದಲ್ಲಿ ಅಗಾಧವಾದ ವ್ಯತ್ಯಾಸವೂ ಉಂಟಾಗುತ್ತದೆ. ಹಳೆಯ ತಲೆಮಾರಿನ ಜನರು ಸಂಪ್ರದಾಯವನ್ನು ಒಪ್ಪಿಕೊಂಡು ಇಂಗ್ಲಿಷ್ ಶಿಕ್ಷಣ ಕ್ರಮದ ಪ್ರಭಾವದಿಂದ ದೊರೆತ ಆಧುನಿಕ ಜೀವನ ಪದ್ಧತಿಯನ್ನು ಒಪ್ಪಿಕೊಳ್ಳಲಾರದೆ, ಪೂರ್ಣ ತಿರಸ್ಕರಿಸಲು ಸಾಧ್ಯವಾಗದೆ ಒದ್ದಾಡುತ್ತಾರೆ. ಆದರೆ ಎರಡನೇ ಪೀಳಿಗೆಯ ಜನರು ಸಂಪೂರ್ಣವಾಗಿ ತಾವು ಆಧುನಿಕರೆಂದು ಎನಿಸಿಕೊಳ್ಳಲು ಶಿಕ್ಷಣದ ಜೊತೆ ಜೊತೆಯಲ್ಲಿ ಪಾಶ್ಚಿಮಾತ್ಯ ಸಂಸ್ಕೃತಿಯ ಪ್ರತೀಕವಾದ ಧೂಮಪಾನದಂತಹ ದುಶ್ಚಟಗಳನ್ನು ರೂಢಿಸಿಕೊಳ್ಳುತ್ತಾರೆ. ಮನೆ ಮನೆಗಳಲ್ಲಿ ಇಂತಹ ಆಲೋಚನಾ ಭಿನ್ನಾಭಿಪ್ರಾಯಗಳ ಫಲವಾಗಿ ಶಾಂತಿ ಮಾಯವಾಗುತ್ತದೆ. ಒಂದು ಕಡೆಯಿಂದ ಸಮಾಜೋದ್ಧಾರ, ಹರಿಜನೋದ್ಧಾರದಂತಹ ಕಾರ್ಯಕ್ರಮಗಳು ನಡೆಯುತ್ತಿರುತ್ತವೆ. ತಮ್ಮ ಸಂಸ್ಕೃತಿಯಲ್ಲಿದ್ದಂತಹ ಜೀವ ವಿರೋಧಿ ಪದ್ಧತಿಯನ್ನು ನಿರ್ಮೂಲನ ಮಾಡಲು ಕೆಲವು ವಿದ್ಯಾವಂತ ಯುವಜನತೆ ಹಾಗೂ ಗಾಂಧೀಜಿಯ ಪ್ರೇರಣೆಗೊಳಗಾದ ಜನರು ಪ್ರಯತ್ನಿಸುತ್ತಾರೆ.

ಈ ಕಾಲಘಟ್ಟದಲ್ಲಿ ಹಲವಾರು ಕಾದಂಬರಿಗಳಲ್ಲಿ ನಾವು ಗಮನಿಸಬಹುದಾದ ಇನ್ನೊಂದು ವಿಪರ್ಯಾಸವೆಂದರೆ ಅತ್ತ ಇಂಗೀಷ್ ಶಿಕ್ಷಣವನ್ನೂ ಪಡೆಯದ, ಇತ್ತ ಸಂಸ್ಕೃತದ ಅಥವಾ ದೇಶೀಯ ಶಿಕ್ಷಣವನ್ನೂ ಪಡೆಯದ ಶತಮೂರ್ಖರ ವರ್ಗವೊಂದು ನಿರ್ಮಾಣವಾಗುತ್ತದೆ. ಶಿಕ್ಷಣ ಪಡೆದವರಿಗೆಲ್ಲಾ ಸರಕಾರಿ ಉದ್ಯೋಗ ದೊರೆಯುವುದಿಲ್ಲವೆಂಬ ಧೋರಣೆಯಿಂದ ಇಂಗ್ಲಿಷ್ ಶಿಕ್ಷಣವನ್ನು ಕಡೆಗಣಿಸುತ್ತಾರೆ. ಅದೇ ರೀತಿಯಾಗಿ ಸಂಸ್ಕೃತ ಈಗ ಕೆಲಸಕ್ಕೆ ಬಾರದ್ದು ಎಂಬ ಕಾರಣದಿಂದ ದೇಶೀಯ ಶಿಕ್ಷಣವನ್ನೂ ಕಡೆಗಣಿಸುತ್ತಾರೆ. ಇವರ ಬದುಕು ದಾರ ಕಿತ್ತ

ಗಾಳಿಪಟದಂತೆ ಮಾರ್ಗದರ್ಶನವೇ ಇಲ್ಲದೆ ಕಂಗಾಲಾಗುತ್ತದೆ. ಮಹಾಭಾರತ, ರಾಮಯಣಗಳ ವಾಚನವೂ ಕಡಿಮೆಯಾಗಿ ಬದುಕಿಗೆ ದಾರಿತೋರಿಸುವ ಎಲ್ಲಾಮಾರ್ಗಗಳು ಮಚ್ಚಿಹೋಗುತ್ತವೆ. ಈ ರೀತಿಯಾಗಿ ಇಂಗ್ಲೀಷ್ ಶಿಕ್ಷಣದ ಅಬ್ಬರದಲ್ಲಿ ನಮ್ಮ ದೇಶೀಯ ಶಿಕ್ಷಣ ಪದ್ಧತಿ ಮೂಲೆಗುಂಪಾಗುತ್ತದೆ. 'ಮೆರವಣಿಗೆ' ಕಾದಂಬರಿಯು ಶಿಕ್ಷಣದಲ್ಲಾದ ಈ ಪಲ್ಲಟವನ್ನು ಬಹಳ ಸುಂದರವಾಗಿ ತೆರೆದಿಡುತ್ತದೆ. ಮಲ್ಲಿಗೆ ಹಳ್ಳಿ ಯಜಮಾನರು ಹೇಳುತ್ತಿದ್ದರು–"ಇಂಗ್ಲಿಷ್ ಸಾಧ್ಯವಿರುವವರು ಹೋಗಿ ಆ ವಿದ್ಯೆ ಕಲಿಯಿರಯ್ಯ. ಆದರೆ ನಮ್ಮ ದೇಶದಲ್ಲಿ ಆ ವಿದ್ಯಗೆ ಖರ್ಚು ಬಹಳ. ಉಳಿದವರು ಇಂಗ್ಲೀಷಿನಿಂದ ಪ್ರಯೋಜನ ಇಲ್ಲವೆಂದು ಸುಮ್ಮನೆ ಇದ್ದು ಬಿಡುವುದರಿಂದ ವಿದ್ಯೆ ಬಂತೆ? ನನಗೆ ಇಂಗ್ಲೀಷು ಬರುತ್ತದೆಯೇ? ನಮ್ಮ ತಂದೆಯವರಿಗೆ ಬರುತ್ತಿತ್ತೇ? ನಮ್ಮೂರ ಶಾನುಭೋಗರಿಗೆ ಬರುತ್ತಿತ್ತೆ? ಆದರೆ ಅವರ ಸಂಸ್ಕೃತ ಪಾಂಡಿತ್ಯ ಯಾರಿಗಿಂತ ಕಡಿಮೆ ಇತ್ತು? ಅವರು ಯಾರಿಗಾದರೂ ಹೆದರುತ್ತಿದ್ದರೆ? ಅವರಿಗೆ ಏನಾದರೂ ಅಂತಹ ಬಲವಾದ ಆಸ್ತಿ ಇತ್ತೇ? ಅಥವಾ ಅವರು ಸರಕಾರದ ಅಧಿಕಾರದ ಆಸೆಯಿಂದ ವಿದ್ಯೆ ಕಲಿತರೆ? ಆ ವಿದ್ಯೆ ಕಲಿಯುವುದಕ್ಕೆ ಅವರು ಎಲ್ಲಿಗೆ ಹೋದರು? ಈಗ ನೀವು ನೋಡಿ ಸುಮಾರು ಮೂವತ್ತು ಜನ ಇದ್ದೀರಿ. ಲೋವರ್ ಸೆಕೆಂಡರಿ ಮಾಡಿದಿರಿ. ಕೊಸ್‌ಪಸ್ ಅಂತ ಸ್ವಲ್ಪ ಇಂಗ್ಲಿಷು ಕಲಿತಿರಿ. ಆದರೆ ಅದು ಸಾಲದು, ನಮ್ಮ ದೇಶದ ವಿದ್ಯೆ ಕಲಿಯಬೇಕು; ರಾಮಾಯಣ, ಭಾರತ ಓದಬೇಕು, ಸಂಸ್ಕೃತ ಸಂಸ್ಕೃತಿ ಮೈಗೂಡಬೇಕು. ಇಂಗ್ಲೀಷಿಗೆ ಹೋಗುವವರು ಹೋಗಲಿ. ಆದರೆ ಉಳಿದವರು ಸುಮ್ಮನೆ ಕೂತರೆ ಆಗುತ್ತದೆಯೆ? ವಿದ್ಯೆ ನಮ್ಮ ಹಕ್ಕು. ಇದೇ ನಮ್ಮ ಆಯುಧ. ಇದೇ ನಮ್ಮ ಬೆಳಕು. ಈ ಬೆಳಕನ್ನು ನಾವು ಬೆಳಗಬೇಕು. ನಿಮ್ಮ ಬುದ್ಧಿ ಚುರುಕಾಗಬೇಕಾದರೆ ಯಾವುದಾದರೂ ಒದು ವಿದ್ಯೆ ಬೇಕು. ಕಲಿತ ವಿದ್ಯೆಗೆಲ್ಲಾ ಗಿರಾಕಿ, ಕೊಳ್ಳುವವರು ಇರಬೇಕೆಂದು ನಿರೀಕ್ಷಿಸಬೇಡಿ"[೧೦೭]

ಅಂದು ಭಾರತದಲ್ಲಿ ಪ್ರತಿಯೊಬ್ಬರು ಶಿಕ್ಷಣವನ್ನು ಪಡೆಯದೇ ಇದ್ದರೂ ಶಿಕ್ಷಣವನ್ನು ಪಡೆದ ಒಬ್ಬಿಬ್ಬರಿಂದ ಇಡೀ ಹಳ್ಳಿಯ ಜನತೆ ಪ್ರಯೋಜನವನ್ನು ಪಡೆದುಕೊಳ್ಳುತ್ತಿತ್ತು. ಅಂದು ವಿದ್ವಾಂಸರಲ್ಲಿ ಸ್ವಾರ್ಥ ಇರಲಿಲ್ಲ. ಇಡಿ ಹಳ್ಳಿಯ ಜನರಿಗೆ ಅವರು ಗುರುಗಳಂತಿರುತ್ತಿದ್ದರು. ಯಾವುದೇ ಕುಟುಂಬದ ಯಾವುದೇ ಒಂದು ಸಮಸ್ಯೆಯನ್ನು ಅವರು ತಾವು ಪಡೆದ ಜ್ಞಾನದ ಬೆಳಕಿನಲ್ಲಿ ಪರಿಹರಿಸುತ್ತಿದ್ದರು. ಅವರ ಮನೆಗಳಲ್ಲಿ ಪ್ರತಿ ವಾರ ಬಿಡುವಿದ್ದಾಗ ಕುಮಾರವ್ಯಾಸ ಭಾರತ, ರಾಮಾಯಣಗಳ ವಾಚನವೂ ನಡೆಯುತ್ತಿತ್ತು. ಅಲ್ಲಿಯ ಘಟನೆಗಳನ್ನು ರಸವತ್ತಾಗಿ ಕಣ್ಣಿಗೆ ಕಟ್ಟುವಂತೆ ಹಳ್ಳಿಗರಿಗೆಲ್ಲಾ ವಿವರಿಸುತ್ತಿದ್ದರು. ತಮ್ಮ ಬದುಕಿನ ಸಮಸ್ಯೆಗಳಿಗೆ ಅದರಲ್ಲಿ ಪರಿಹಾರವಿರುತ್ತಿತ್ತು. ಇದನ್ನು ಕೇಳಲು ಇಡೀ ಹಳ್ಳಿಗೆ ಹಳ್ಳಿಯೇ ನೆರೆಯುತ್ತಿತ್ತು. ಅಂದು ಅವರು ಪಡೆದುಕೊಳ್ಳುತ್ತಿದ್ದ ಶಿಕ್ಷಣದ ಮುಖ್ಯ ಉದ್ದೇಶ ಜ್ಞಾನಾರ್ಜನೆಯೇ ಹೊರತು ಧನಾರ್ಜನೆಯಾಗಿರಲಿಲ್ಲ. ಅದರೆ ಯಾವಾಗ ಇಂಗ್ಲೀಷ್ ಶಿಕ್ಷಣ ಭಾರತಕ್ಕೆ ಕಾಲಿಟ್ಟಿತೊ ಶಿಕ್ಷಣದ ಮೂಲ ಉದ್ದೇಶವೇ ಕಡೆಗಣಿಸಿ 'ಧನಾರ್ಜನೆಗೋಸ್ಕರ ಮಾತ್ರ ಶಿಕ್ಷಣ' ಎಂಬ ಸ್ವಾರ್ಥ ಜನರಲ್ಲಿ ನಿಧಾನವಾಗಿ ಮನೆ ಮಾಡಿಕೊಳ್ಳುತ್ತದೆ.

ಶಿಕ್ಷಣದಲ್ಲುಂಟಾದ ಇಂತಹ ಸಮಾಜಕ್ಕೆ ಮಾರಕವಾದ ಪಲ್ಲಟವನ್ನು ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರ 'ಮೆರವಣಿಗೆ' ಕಾದಂಬರಿಯು ಬಹಳ ಚೆನ್ನಾಗಿ ಚಿತ್ರಿಸುತ್ತದೆ. ಬ್ರಾಹ್ಮಣರಾದ 'ಘನಪಾಠಿ'ಯು ಸಕಲ ವಿದ್ಯೆಗಳಲ್ಲಿ ಪಾರಂಗತರಾಗಿರುತ್ತಿದ್ದರು. ಬ್ರಾಹ್ಮಣರಾದವರು ವಿದ್ಯೆ ಕಲಿಯಬೇಕೆ ಹೊರತು ಅದನ್ನು ಹಣಕ್ಕೋಸ್ಕರ ಮಾರಲು ಇಡಬಾರದೆಂಬುದು ಅವರ ಉದ್ದೇಶವಾಗಿತ್ತು. ಮಲ್ಲಿಗೆಹಳ್ಳಿಯೆಂಬ ಊರಿನ ಯಜಮಾನರು ಕೂಡ 'ಘನಪಾಠಿ'ಗಳ ಕೈಯಲ್ಲಿ ವಿದ್ಯೆ ಕಲಿತು ಪಂಡಿತರಾದರು. ಅದನ್ನು ಮಲ್ಲಿಗೆ ಹಳ್ಳಿಯ ಜನರಿಗೆ ಸಂದರ್ಭನುಸಾರವಾಗಿ ಕಲಿಸುತ್ತಿದ್ದರು. ಪಂಪ, ರನ್ನ, ಕುಮಾರವ್ಯಾಸರನ್ನು ಕೇಳಿದ ಅಂದಿನ ಜನರ ಬುದ್ಧಿ ಚುರುಕಾಯಿತು. ಲೋಕ ವ್ಯವಹಾರ, ಕಷ್ಟಗಳನ್ನು ಸಹಿಸಿ ಎದುರಿಸುವ ಶಕ್ತಿ, ತ್ಯಾಗ, ತೃಪ್ತಿ, ಸಂತೃಪ್ತ ಭಾವ ಎಲ್ಲವೂ ಅವರಲ್ಲಿ ಬೆಳೆಯಿತು. ಇದನ್ನು ಗಳಿಸುವುದಕ್ಕೆ ಅವರು ಯಾವ ವಿಶ್ವವಿದ್ಯಾಲಯಕ್ಕೂ ಹೋಗಲಿಲ್ಲ.

ಆದರೆ ಕ್ರಮೇಣ ಇಂಗ್ಲಿಷ್ ವಿದ್ಯಾಭ್ಯಾಸ ಆರಂಭವಾಯಿತು. ಪ್ರಾರಂಭದಲ್ಲಿ ಕಲಿತರಿಗೆಲ್ಲಾ ಹುದ್ದೆಗಳು ದೊರಕಿದವು. ಅಷ್ಟು ವರ್ಷಗಳಲ್ಲಿ ಇಷ್ಟೊಂದು ಪುಸ್ತಕವನ್ನು ಓದಿ ಮುಗಿಸಿದರೆ ಸಾಕು ಎಂಬ ಸೀಮಿತ ಜ್ಞಾನದ ಪರಿಕಲ್ಪನೆಯನ್ನು ಇಂಗ್ಲೀಷ್ ವಿದ್ಯಾಭ್ಯಾಸ ತಂದುಕೊಟ್ಟಿತು. ಇಂಗ್ಲೀಷ್ ವಿದ್ಯಾಭ್ಯಾಸದ ಪರಿಣಾಮವಾಗಿ ಜನರು ತಿಳಿದುಕೊಳ್ಳುವ ಹವ್ಯಾಸ ನಶಿಸಿಹೋಯಿತು. ನಿತ್ಯ ಜೀವನಕ್ಕೆ ಸಂಸಾರ ಜೀವನಕ್ಕೆ ಸಹಾಯ ಮಾಡುತಿದ್ದ ನಮ್ಮ ಪುರಾತನ ವಿದ್ಯೆಯು ನಾಶಹೊಂದಿತು. ಇಂಗ್ಲೀಷ್ ವಿದ್ಯೆಯು ಗುಲಾಮಿ ಪ್ರವೃತ್ತಿ, ಸ್ವಾರ್ಥ, ಮುಂತಾದ ಗುಣಗಳನ್ನೇ ಜನರಲ್ಲಿ ಬೆಳೆಯಿಸಿತು. ಒಂದು ಕಾಲದಲ್ಲಿ ವಿದ್ಯಾವಂತರ ಗ್ರಾಮವೆಂದು ಪ್ರಸಿದ್ಧಿ ಪಡೆದ ಮಲ್ಲಿಗೆ ಹಳ್ಳಿ ಈಗ ಒಂದು ಕುಗ್ರಾಮವಾಗಿ ಮಾರ್ಪಾಡು ಹೊಂದುತ್ತದೆ. ಇಂಗ್ಲೀಷ್ ವಿದ್ಯೆಯಿಂದಾಗಿ ನಾವು 'ವಿದ್ಯೆಯನ್ನು ಮಾರಟಕ್ಕಿಡುವ' ಒಂದು ಸಂಸ್ಕೃತಿಯನ್ನು ಬೆಳೆಸಿಕೊಂಡೆವು. ಅಂದು ಕವಿರಾಜಮಾರ್ಗಕಾರನು ಹೇಳಿದ್ದ 'ಕುರಿತೋದಯಂ ಕಾವ್ಯಪ್ರಯೋಗ ಪರಿಣತಮತಿಗಳ್' ಇವರ ಸಂಖ್ಯೆ ನಿಧಾನವಾಗಿ ಕಡಿಮೆಯಾಗತೊಡಗಿತು.

ಆಧುನಿಕ ಯುವಜನತೆ ಕೆಲಸ ಸಿಗುವುದಿಲ್ಲ'ವೆಂದು ಇಂಗ್ಲಿಷ್ ಶಿಕ್ಷಣವನ್ನು ಕೂಡಾ ಕಲಿಯುವುದನ್ನು ಕಡಿಮೆ ಮಾಡಿತು. ಬ್ರಿಟಿಷ್ ಸರಕಾರ ಬಂದ ನಂತರ ಸರಕಾರಿ ಉದ್ಯೋಗದ ಹುಚ್ಚು ಜಾಸ್ತಿಯಾಯಿತು. ಇತ್ತ ಸಂಸ್ಕೃತ ಅಥವಾ ದೇಶೀಯವಾದ ಪ್ರಾಚೀನ ವಿದ್ಯೆಯನ್ನೂ ಕಲಿಯುವವರ ಸಂಖ್ಯೆಯು ಗಣನೀಯವಾಗಿ ಕಡಿಮೆಯಾಯಿತು. ಹೀಗೆ ಅಜ್ಞಾನಿಗಳಾದ, ಬುದ್ಧಿಹೀನರಾದ ಪೀಳಿಗೆಯೊಂದು ಬೆಳೆಯಲಾರಂಬಿಸಿತು. ಒಂದು ಕಾಲದಲ್ಲಿ ವೇದ, ಶಾಸ್ತ್ರದಲ್ಲಿ ಪಾಂಡಿತ್ಯವನ್ನು ಗಳಿಸಿಕೊಂಡು ವಿದ್ಯಾವಂತರ ಗ್ರಾಮವೆಂದು ಪ್ರಸಿದ್ಧಿ ಪಡೆದಿದ್ದ ಮಲ್ಲಿಗೆಹಳ್ಳಿ ದಡ್ಡರ ಗ್ರಾಮವಾಗಿ ಪರಿವರ್ತನೆಯಾಯಿತು. ಹಿರೇಹಳ್ಳಿ, ಮಲ್ಲಿಗೆಹಳ್ಳಿಗಳಲ್ಲೆ ಎಲ್ಲಾ ಕಡೆ ದಡ್ಡರು, ಮೂರ್ಖರು ತುಂಬಿಕೊಂಡಿದ್ದರು. ಸ್ವಲ್ಪ ಬುದ್ಧಿವಂತರೆನಿಸಿಕೊಂಡವರು ಇವರನ್ನು ಸುಲಭವಾಗಿ ಮೋಸ ಮಾಡುತ್ತಿದ್ದರು. ಅವರ ಹಿರಿಯರು ವೇದ, ಶಾಸ್ತ್ರ, ಕಲಿತು ಯಾರ ಕೈಯಲ್ಲೂ ಮೋಸ ಹೋಗುತ್ತಿರಲಿಲ್ಲ. ಅವರಲ್ಲಿದ್ದ ವಿದ್ಯೆಗೆ ಜನರು ಬೆಲೆಕೊಡುತ್ತಿದ್ದರು.

ಈ ರೀತಿಯಾಗಿ ಕೆಲವೇ ಕೆಲವು ಮಂದಿ ಇಂಗ್ಲೀಷ್ ಶಿಕ್ಷಣವನ್ನು ಪಡೆದುಕೊಂಡು ಸರಕಾರಿ ಉದ್ಯೋಗವನ್ನು ಪಡೆದುಕೊಳ್ಳುತ್ತಿದ್ದರು. ಆದರೆ ಬಹಳಷ್ಟು ಮಂದಿ ಯಾವುದೇ ವಿದ್ಯೆಯಿಲ್ಲದೆ ಅಜ್ಞಾನಿಗಳಾಗಿ ಬದುಕಿನ ಬವಣೆಯಲ್ಲಿ ಬೇಯುತ್ತಿದ್ದರು. ಯಾವುದೇ ರೀತಿಯ ಜ್ಞಾನವಿಲ್ಲದುದುರ ಪರಿಣಾಮವಾಗಿ ಆತ್ಮವಿಶ್ವಾಸ ನಶಿಸಿತು. ಚಿಕ್ಕ ಪುಟ್ಟ ಕಷ್ಟ ನಷ್ಟಗಳಿಗೆ ಅವರು ಬೇಗನೇ ಎದೆಗುಂದುತ್ತಿದ್ದರು. ಇಂಗ್ಲೀಷ್ ಶಿಕ್ಷಣವನ್ನು ಕೂಡ ಮೊದಲು ಪಡೆದುಕೊಂಡವರು ಬ್ರಾಹ್ಮಣರು. ಆಧುನಿಕ ಕಾಲಕ್ಕೆ ಸಂಸ್ಕೃತ ಶಿಕ್ಷಣ ನಿರುಪಯೋಗವೆನಿಸಿದ ತಕ್ಷಣವೇ ಎರಡನೆಯ ಪೀಳಿಗೆಯ ಜನರು ತಮ್ಮ ಮಕ್ಕಳನ್ನು ವಿದ್ಯಾಭ್ಯಾಸಕ್ಕೋಸ್ಕರ ದೂರದೂರಿಗೆ ಕಳುಹಿಸತೊಡಗಿದರು. ಬದಲಾವಣೆಯ ಗಾಳಿಯು ಕೂಡ ಕಟ್ಟಾ ಸಂಪ್ರದಾಯವಾದಿಗಳ ಮನೆಯಿಂದಲೇ ಆರಂಭವಾದುದು ವಿಶೇಷ. ಶ್ರೀನಿವಾಸ ವೈದ್ಯರ 'ಹಳ್ಳ ಬಂತು ಹಳ್ಳ' ಕಾದಂಬರಿಯಲ್ಲಿ ಸ್ವತಃ ಪಂತರೇ ಆದುನಿಕ ವಿದ್ಯಾಭ್ಯಾಸಕ್ಕೆ ತಮ್ಮನ್ನು ತಾವು ತೆರೆದುಕೊಳ್ಳುವ ಬಗೆಯನ್ನು ನಾವು ಕಾಣುತ್ತೇವೆ. ತಮ್ಮ ಮನೆಯ ಕಿರಿಯ ಮೂವರು ಮಕ್ಕಳನ್ನು ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಧಾರವಾಡಕ್ಕೆ ಕಳುಹಿಸುತ್ತಾರೆ. ವೇದ, ಸಂಸ್ಕೃತ ಓದಬೇಕಾದ ಮಕ್ಕಳನ್ನು ಇಂಗ್ಲಿಷ್ ಶಿಕ್ಷಣಕ್ಕೆ ಕಳುಹಿಸುವಂತಹ ಮಾನಸಿಕ ಪರಿವರ್ತನೆ ಪಂತರಲ್ಲಿ ಸುಮಾರು ೧೯೧೦ಳನೇ ಇಸವಿಯಲ್ಲೆ ಉಂಟಾಗುತ್ತದೆ.

ನವಲಗುಂದ ಹೇಳಿಕೊಳ್ಳುವಂತಹ ಒಂದು ಊರಾಗಿರಲಿಲ್ಲ. ಅಂತಹ ಹಳ್ಳಿಯಲ್ಲೇ ಆಧುನಿಕ ಶಿಕ್ಷಣದ ವ್ಯಾಮೋಹಕ್ಕೆ ಜನರು ತೆರೆದುಕೊಳ್ಳುವುದನ್ನು ಈ ಮಾತುಗಳು ವ್ಯಕ್ತಗೊಳಿಸುತ್ತವೆ–"ಕಳೆದ ನಾಲ್ಕಾರು ವರುಷದಾಗ ನವಲಗುಂದದ ಹಿರಿಯರಲ್ಲಿ ತಮ್ಮ ಮಕ್ಕಳನ್ನು ಹೆಚ್ಚಿನ ಶಿಕ್ಷಣಕ್ಕೆ ದೊಡ್ಡ ದೊಡ್ಡ ಊರುಗಳಿಗೆ ಕಳಿಸಬೇಕೆನ್ನುವ ಜಾಗೃತಿ ಉಂಟಾಗಿತ್ತು. ಇದಕ್ಕೂ ಮೊದಲು ಕೂಡ ಆಗೊಮ್ಮೆ, ಈಗೊಮ್ಮೆ ಒಬ್ಬಿಬ್ಬರು ಶಿಕ್ಷಣಕ್ಕೆಂದು ಹೊರಗೆ ಹೋಗಿದ್ದಾರೆ. ಆದರೆ ಪಂತರ ವಾಸುದೇವಾಚಾರ್ಯರ ಮನೀ ಹುಡುಗರು ಓದಲಿಕ್ಕೆಂದು ಧಾರವಾಡಕ್ಕೆ ಹೋದಾಗಿನಿಂದ ಶಿಕ್ಷಣಾರ್ಥಿಗಳ ಈ ದೌಡು ವೇಗ ಪಡೆದುಕೊಂಡಿತ್ತು".[೧೦೮] ಈ ಹೇಳಿಕೆಯನ್ನು ಗಮನಿಸಿದಾಗ ಆಧುನಿಕ ಶಿಕ್ಷಣಕ್ಕೆ ಕೂಡಾ ಮೇಲ್ಪಂಕ್ತಿಯನ್ನು ಹಾಕಿಕೊಟ್ಟವರು ಸಂಪ್ರದಾಯನಿಷ್ಠ ಬ್ರಾಹ್ಮಣರೆಂಬುದು ತಿಳಿಯುತ್ತದೆ. ಆಧುನಿಕ ವಿದ್ಯೆಯನ್ನು ಸರಿಯಾಗಿ ಪಡೆದುಕೊಂಡ ಕೆಲವು ಜನರ ಆಲೋಚನಾಕ್ರಮದಲ್ಲಿ ಕೆಲವು ಮೂಲಭೂತ ಬದಲಾವಣೆಗಳು ಗೋಚರಿಸತೊಡಗಿದವು. ಜಾತಿಭೇದ ಕಡಿಮೆಯಾಗತೊಡಗಿತು. ಸಮಾಜದಲ್ಲಿ ಶೋಷಣೆಗೊಳಗಾದವರ ಬದುಕಿನಲ್ಲಿ ಬೆಳಕು ಕಾಣಿಸಲು ಯೋಚಿಸಿದರು. ಇದಕ್ಕೆ ಮುಖ್ಯ ಕಾರಣ ಗಾಂಧಿಯ ವಿಧಾಯಕ ಕಾರ್ಯಕ್ರಮಗಳು ಕೂಡ ಆಗಿವೆ. ವ್ಯಾಸರಾಯರ 'ಹೆಜ್ಜೆ' ಕಾದಂಬರಿಯು ಇಂತಹ ಅನೇಕ ಸಾಮಾಜಿಕ ಬದಲಾವಣೆಗಳ ಮೇಲೆ ಬೆಳಕು ಚೆಲ್ಲುತ್ತದೆ. ಶ್ರೀಕಂಠಶಾಸ್ತ್ರಿಗಳ ಸಹೋದರ ನಾರಾಯಣಶಾಸ್ತ್ರಿಗಳ ಮಗಳು ಶಾಂಭವಿಯ ಗಂಡ ಅಕಾಲ ಮರಣವನ್ನಪ್ಪುತ್ತಾನೆ. ಶಾಂಭವಿಯ ಕೇಶಮುಂಡನದ ಪ್ರಶ್ನೆ ಎದುರಾದಾಗ ಶ್ರೀಕಂಠ ಶಾಸ್ತ್ರಿಗಳು ತಮ್ಮ ಸೊಸೆ ಸಾವಿತ್ರಿಯ ಅಭಿಪ್ರಾಯವನ್ನು ಕೇಳುತ್ತಾರೆ. ಆಗ ಅವಳು "ಮಾವಯ್ಯ, ನಾನೇನು ನಿಮ್ಮಂತೆ ಶಾಸ್ತ್ರ ಓದಿದವಳಲ್ಲ, ಸಂಪ್ರದಾಯದ ಬಗೆಗೂ ಗೊತ್ತಿಲ್ಲ.

ಶಾಂಭವಿಯನ್ನು ನಾನೂ ತುಂಬ ಹಚ್ಚಿಕೊಂಡಿದ್ದೇನೆ. ಈ ಅನಾಹುತ ಆದಮೇಲೆ ಆಕೆಯನ್ನು ನೋಡಿಲ್ಲ. ಆದರೆ ಮಾವಯ್ಯಾ, ನೀವು ನನ್ನ ಅಭಿಪ್ರಾಯ ಕೋಳೋದಾದರೆ... ನಿಮ್ಮ ಸಂಪ್ರದಾಯದ ಹೆಸರಿನಲ್ಲಿ ಅವಳನ್ನು ಹೆಣವಾಗಿ ಬದುಕುವಂತೆ ಮಾಡಬೇಡಿ. ಮನುಷ್ಯಳಾಗಿ ಬಾಳಲು ಬಿಡಿ..."[೧೦೯] ಇಲ್ಲಿ ಪಕ್ಕಾ ಸಂಪ್ರದಾಯಸ್ಥರಾದ ಶ್ರೀಕಂಠಶಾಸ್ತ್ರಿಗಳು ಕೂಡಾ ಸಾಮಿತ್ರಿಯ ಮಾತಿಗೆ ಬೆಲೆ ಕೊಟ್ಟು ಶಾಂಭವಿಯ ಕೇಶ ಮುಂಡನ ಬೇಡವೆಂದು ತೀರ್ಮಾನಿಸುತ್ತಾರೆ. ಧರ್ಮದ ಕಟ್ಟುಪಾಡುಗಳು ಕಾಲಕ್ಕನುಗುಣವಾಗಿ ಬದಲಾಗಬೇಕೆಂಬ ನಿಲುವನ್ನು ತಳೆಯುವುದರ ಹಿಂದೆ ಕೂಡ ಅವರಗೆ ಅರಿವಿಲ್ಲದೆಯೇ ಗಾಂಧಿತತ್ವದ ಪ್ರಭಾವವನ್ನು ಕಾಣಬಹುದು.

ಶ್ರೀಕಂಠಶಾಸ್ತ್ರಿಗಳ ಹಿರಿಯ ಮಗ ತನ್ನ ತಂದೆಯ ಸಂಸ್ಕೃತ ವೇದಾಂತದಿಂದ ಏನೂ ಲೌಕಿಕ ಲಾಭವಿಲ್ಲವೆಂಬ ತೀರ್ಮಾನಕ್ಕೆ ಬರುತ್ತಾನೆ. ಪ್ರಪಂಚದ ಬದಲಾಗುತ್ತಿರುವ ಅರಿವು ಮತ್ತು ತನ್ನ ತಂದೆ ಸಂಪ್ರದಾಯದ ಹೆಸರಿನಲ್ಲಿ ತಮಗೂ ಹಣಗಳಿಸುವ ಹೊಸ ವೃತ್ತಿಯನ್ನು ಆಯ್ಕೆ ಮಾಡಿಕೊಳ್ಳಲು ಅವಕಾಶ ನೀಡುವುದಿಲ್ಲೆಂಬ ಅಸಮಧಾನವು ಅವನ ಮಾತುಗಳಲ್ಲಿ ವ್ಯಕ್ತವಾಗುತ್ತದೆ "ಅಪ್ಪಯ್ಯಾ ನಿಮ್ಮ ಸಂಸ್ಕೃತ ಪಾಂಡಿತ್ಯದಿಂದ ಈಗೇನೂ ಉಪಯೋಗವಿಲ್ಲ. ಸಂಸ್ಕೃತದಿಂದ ದುಡ್ಡು ಬರುವುದಿಲ್ಲ. ದಕ್ಷಿಣೆಯ ದುಡ್ಡಿನಿಂದ ಸಂಸಾರ ನಡೆಯುವಂತೆಯೂ ಇಲ್ಲ. ಆ ಕಮ್ತಿ ನೋಡಿ, ನಿಮ್ಮ ಹತ್ತಿರ ಚಕ್ಕಂದ ಮಾತನಾಡ್ತಾ, ಮಾತನಾಡ್ತಾ ಇದ್ರೂ ತನ್ನ ಅಂಗಡಿ ಲೆಕ್ಕಾಚಾರ ಎಷ್ಟು ಚೆನ್ನಾಗಿ ನೋಡಿಕೊಳ್ತಾ ಇದ್ದಾರೆ ಗೊತ್ತೇ...ಸಂಜೆ ಹೋಗಿ ನೋಡಬೇಕು ಅವರ ಅಂಗಡಿಗೆ ಬರುವ ಮೀನು ಮಾರುವ ಹೆಣ್ಣುಗಳು, ಹೂವು ಮಾರುವ ಕಿರಸ್ತಾನರು, ಗಡಂಗಿಗೆ ಹೋದವರು...ಎಲ್ಲಾ ಒಟ್ಟಾಗಬೇಕೂಂತಲ್ವೆ ಆ ಗಾಂಧಿ ಹೇಳ್ತಾ ಇರೋದು. ಇನ್ನು ಹಾಕಿಕೊಳ್ಳೋದು ಗಾಂಧಿ ಟೋಪೀನೇ. ನೀವು ನೋಡ್ತಾ ಇದ್ದೀರಿ ಕಮ್ತಿ ಅಂಗಡಿಯಲ್ಲಿ ಎಲ್ಲಾ ಒಟ್ಟು ಆಗ್ತಾರೆ. ಅವನ ಸಂಪತ್ತನ್ನು ಹೆಚ್ಚಿಸ್ತಾರೆ. ನೀವು ದೇವಸ್ಥಾನದಲ್ಲಿ ವೇದಾಂತ ಹೇಳ್ತಾ ಇರಿ. ಹೆಚ್ಚಿಗೆ ದುಡಿಲ್ಲಾಂತ ಆಸ್ತೀನೂ ಮಾರೋದಕ್ಕೆ ಹೊರಡಿ. ನಮಗೆ ಹೋಟೆಲು, ಗೀಟ್ಲು ಮಾಡಿ ಎರಡು ಕಾಸು ಮಾಡೋಣಾಂದ್ರೆ ಅದಕ್ಕೂ ಬಿಡಬೇಡಿ".[೧೧೦] ಒಂದು ಕಾಲದಲ್ಲಿ ಭಾರತೀಯ ಸಂಸ್ಕೃತಿಯಲ್ಲಿ ಅನ್ನ 'ದಾನ' ಮಾಡುವ ವಸ್ತುವೇ ಹೊರತು 'ವಿಕ್ರಯ' ಮಾಡುವ ವಸ್ತುವಲ್ಲ ಎಂಬ ಭಾವನೆಯಿತ್ತು. ನಮ್ಮ ದೇಶಗಳಲ್ಲಿ ಅಲ್ಲಲ್ಲಿ ಧರ್ಮಛತ್ರ, ಅರವಟ್ಟಿಗೆಗಳಿದ್ದುವೇ ಹೊರತು ಹೋಟೆಲುಗಳಿರಲಿಲ್ಲ. ಆದರೆ ಬ್ರಿಟಿಷರ ವ್ಯಾಪಾರಿ ಮನೋವೃತ್ತಿಯು ಪಕ್ಕಾ ಸಂಪ್ರದಯವಾದಿ ಮನೆತನದ ಯುವಕರ ಆಲೋಚನಾ ವಿಧಾನದಲ್ಲೂ ಪ್ರತಿಬಿಂಬಿಸುವುದನ್ನು ನಾವು ಕಾಣುತ್ತೇವೆ. ಶ್ರೀಕಂಠಶಾಸ್ತ್ರಿಗಳ ಅರಿವೆಗೆ ಬರುವ ಮೊದಲೆ ಅವರ ಮನೆಯಲ್ಲೂ ಅನೇಕ ಬದಲಾವಣೆಯ ಗಾಳಿ ಬೀಸತೊಡಗಿತು. ಅವರ ಮಗ ಶಶಿಧರ ಬೀಡಿ, ಸಿಗರೇಟು ಆಧುನಿಕತೆಯ ಲಕ್ಷಣವೆಂದು ತಿಳಿದುಕೊಂಡನು. ಇನ್ನೊಬ್ಬ ಮಗ ಶ್ರೀಧರನು ಉಡುಪಿಯ ಕ್ರಿಶ್ಚಿಯನ್ ಹೈಸ್ಕೂಲಿನಲ್ಲಿ ವಿದ್ಯಾಭ್ಯಾಸಕ್ಕೆ ಸೇರಿಕೊಂಡನು. ಎಷ್ಟೇ ಸಂಸ್ಕೃತ ಸಂಪ್ರದಾಯವನ್ನು ಉಳಿಸುವ ಪ್ರಯತ್ನ ಮಾಡಿದರೂ ಸಮಾಜದಲ್ಲಾಗುವ ಬದಲಾವಣೆಯು ಕಡು ಸಮಪ್ರದಾಯವಾದಿಗಳ ಮನೆಯನ್ನು ಪ್ರವೇಶಿಸಲು ತಡವಾಗಲಿಲ್ಲ.

ಮದ್ರಾಸಿನಲ್ಲಿ ಕಾಂಗ್ರೆಸ್ ಸರಕಾರ ಬಂದು ಹರಿಜನ ಮಕ್ಕಳೂ ಶಾಲೆಗೆ ಸೇರಲಾರಂಭಿಸುತ್ತಾರೆ. ಕೊಡದೂರಿನ ಶಿಕ್ಷಕರು ಕೂಡ ಹರಿಜನರ ಮಕ್ಕಳನ್ನು ಶಾಲೆಗೆ ಸೇರಿಸುವಲ್ಲಿ ಮುತುವರ್ಜಿ ತೋರಿಸುತ್ತಾರೆ, ಸಂಸ್ಕೃತ ಶಿಕ್ಷಣದಿಂದ ಹೊಟ್ಟೆ ತುಂಬುವುದಿಲ್ಲವೆಂಬ ಅರಿವು ಕೊಡದೂರಿನಂತಹ ಹಳ್ಳಿಯ ಜನರಿಗೂ ಉಂಟಾಗಿ ತಮ್ಮ ಮಕ್ಕಳನ್ನು ಹಳ್ಳಿಯಲ್ಲೇ ಇರುವ ಪ್ರಾಥಮಿಕ ಶಾಲೆಗಳಿಗೆ ಸೇರಿಸಿದರು. ಶಾಲೆಯಲ್ಲಿ ಒಂದೇ ತರಗತಿಯಲ್ಲಿ ಹರಿಜನರೂ ಬ್ರಾಹ್ಮಣರೂ ಕುಳಿತು ಓದುವುದು ಸಂಪ್ರದಾಯವಾದಿ ಬ್ರಾಹ್ಮಣರಿಗೆ ಒಗ್ಗದ ವಿಚಾರ. ಈ ಕಾರಣಕ್ಕಾಗಿಯೇ ಶ್ರೀಕಂಠಶಾಸ್ತ್ರಿಗಳ ಹಿರಿಯ ಮಗ ಗಂಗಾಧರ ತನ್ನ ಮಗ ಗಣೇಶನನ್ನು ಶಾಲೆ ಬಿಡಿಸುತ್ತಾನೆ. ಇಲ್ಲಿ ಗಂಗಾದರನಂತಹ ವ್ಯಕ್ತಿಗಳ ವ್ಯಕ್ತಿತ್ವದಲ್ಲಿರುವ ದ್ವಂದ್ವವನ್ನು ನಾವು ಗುರುತಿಸಬಹುದು. ಹಣಗಳಿಸುವುದಕ್ಕೋಸ್ಕರ ತಮ್ಮ ಸಂಪ್ರದಾಯವನ್ನು ಮುರಿದು ಹೋಟೆಲಿಡುವುದರಲ್ಲಿ ಗಂಗಾಧರನಿಗೆ ಯಾವ ತಪ್ಪೂ ಕಾಣಿಸುವುದಿಲ್ಲ. ಆದರೆ ತನ್ನ ಮಗ ಹರಿಜನರ ಜೊತೆಯಲ್ಲಿ ಕುಳಿತು ವಿದ್ಯೆ ಕಲಿಯುವುದು ಮಾತ್ರ ಅವನ ಸಂಪ್ರದಾಯಕ್ಕೆ ವಿರೋಧವಾಗುತ್ತದೆ. ಹೀಗೆ ಆ ಕಾಲದಲ್ಲಿ ಇಂತಹ 'ಅನುಕೂಲ ಶಾಸ್ತ್ರ'ಗಳನ್ನು ರೂಢಿಸಿಕೊಳ್ಳುವ ಜನರ ಗುಂಪೊಂದು ಬೆಳವಣಿಗೆ ಹೊಂದುತ್ತದೆ. ಸಾವಿತ್ರಿ ಕೆಂಚನಿಗೆ ತಂದುಕೊಡುವ ಗಾಂಧಿಟೋಪಿ ಶ್ರೀಕಂಠ ಶಾಸ್ತ್ರಿಗಳ ಮನೆಯಲ್ಲಿ ಅಸಮಧಾನದ ಅಲೆಯನ್ನೇ ಎಬ್ಬಿಸಿತ್ತದೆ. ಸಾವಿತ್ರಿಯ ಗಂಡ ವಿದ್ಯಾದರನೂ ಜುಟ್ಟು ಕತ್ತರಿಸಿ, ಜನಿವಾರ ಕಿತ್ತಿಟ್ಟು ಗಾಂಧಿಟೋಪಿ ಹಾಕಿಕೊಳ್ಳುವುದು ಆ ಮನೆಯ ಸಂಪ್ರದಾಯವಾದಿಗಳಿಗೆ ನುಂಗಲಾರದ ತುತ್ತಾಗುತ್ತದೆ.

ಗಾಂಧೀಜಿಯ ಪ್ರೇರಣೆಯಿಂದಾಗಿ ಧರ್ಮದ ಹೆಸರಿನಲ್ಲಿ ಕೆಳಜಾತಿಯ ಜನರನ್ನು ತಾವು ಶೋಷಿಸುತ್ತದ್ದೇವೆ ಎಂಬ ಅರಿವು ಆಧುನಿಕ ವಿದ್ಯಾಭ್ಯಾಸವನ್ನು ಪಡೆದಂತಹ ವಿದ್ಯಾಧರನಂತಹವರಿಗೆ ಉಂಟಾಗುತ್ತದೆ. ಇಂತಹ ಜೀವ ವಿರೋಧಿ ಆಚರಣೆಗಳನ್ನು ಅವರು ಖಂಡಿಸುವುದಕ್ಕೆ ಆಂಭಿಸುತ್ತಾರೆ. ಸಂಪ್ರದಾಯದ ಹೆಸರಿನಲ್ಲಿ ಮನೆಯ ಎಂಜಲೆಲೆಯಲ್ಲಿ ಉಳಿದ ಅನ್ನವನ್ನು ದಲಿತರು ತಿನ್ನುವುದನ್ನು ವಿದ್ಯಾಧರ ಪ್ರತಿಭಟಿಸುತ್ತಾನೆ– "ನೋಡಿ, ಅವುಗಳನ್ನೆಲ್ಲಾ ಅಲ್ಲಿರುವ ತಿಪ್ಪೆಯ ಗುಂಡಿಗೆ ಹಾಕಿ. ಒಳಗೆ ಅಡುಗೆ ಮನೆಯಲ್ಲಿ ಉಳಿದಿರುವ ಏನನ್ನಾದರೂ ತಂದು ಇಲ್ಲಿ ಕಾಯುತ್ತಿರುವ ಕೊರಗರಿಗೆ ಕೊಡಿ. ಎಂಜಲು ತಿನ್ನಲು ಅವರೇನೂ ಪ್ರಾಣಿಗಳಲ್ಲ; ಮನುಷ್ಯರು".[೧೧೧] ಇಂತಹ ಉದಾರ ಜೀವನ ದೃಷ್ಟಿಯು, ಸಂಪ್ರದಾಯದ ಹುಳುಕನ್ನು ಸರಿಪಡಿಸುವ ವೈಚಾರಿಕ ಮನೋಭಾವವು ಕೆಲವು ಯುವಕರಲ್ಲಿ ಮೊಳಕೆಯೊಡೆಯುತ್ತದೆ. ಕೊಡದೂರಿನಂತಹ ಹಳ್ಳಿಯಲ್ಲಿ, ಶ್ರೀಕಂಠಶಾಸ್ತ್ರಿಗಳಂತಹ ಕಟ್ಟಾ ಸಂಪ್ರದಯವಾದಿಗಳ ಮನೆಯಲ್ಲೇ ಗಣನೀಯ ಪ್ರಮಾಣದ ಸ್ಥಿತ್ಯಂತರಗಳು ಉಂಟಾಗುತ್ತವೆಂದರೆ ಇನ್ನು ದೇಶದಲ್ಲಿ ಯಾವ ಪ್ರಮಾಣದ ಬದಲಾವಣೆಯಾಗಬಹುದೆಂಬುದನ್ನು ನಾವು ಊಹಿಸಬಹುದು. ಶ್ರೀಕಂಠಶಾಸ್ತ್ರಿಗಳ ಹಿರಿಯ ಮಗ ಸಕಲೇಶಪುರದಲ್ಲಿ ಹೋಟೆಲಿಟ್ಟು ಕೈ ತುಂಬಾ ಹಣ ಸಂಪಾದಿಸುತ್ತಾನೆ. ಒಂದು ಕಾಲದಲ್ಲಿ ಶ್ರೀಕಂಠಶಾಸ್ತ್ರಿಗಳ ಪಾಲಿಗೆ ಗೌರವ, ಮನ್ನಣೆ, ಸಂಪಾದನೆ ಎಲ್ಲವನ್ನೂ ತಂದುಕೊಟ್ಟಂತಹ ಸಂಸ್ಕೃತ ವಿದ್ವತ್ತು ಅವರ ಮಕ್ಕಳ ಕಾಲಕ್ಕಾಗುವಾಗ ಪ್ರಯೋಜನಕ್ಕೆ ಬಾರದ

ವಿಷಯವಾಗುತ್ತದೆ. ಇಂಗ್ಲಿಷ್ ಹಾಗೂ ಆಧುನಿಕ ಜ್ಞಾನವನ್ನು ಗಳಿಸಿಕೊಂಡ ವಿದ್ಯಾ, ಸಾವಿತ್ರಿ ಶಾಂಭವಿಯವರಿಗಿರುವ ಆತ್ಮವಿಶ್ವಾಸ ಹಾಗೂ ಅವರು ಬದುಕನ್ನು ಎದುರಿಸುವ ರೀತಿಯು ಆಧುನಿಕ ಶಿಕ್ಷಣದ ಜ್ಞಾನವಿಲ್ಲದ ಪಾರ್ವತಿಗಾಗಲಿ ಗಂಗಾಧರನಿಗಾಗಲಿ ಸಾಧ್ಯವಿರಲಿಲ್ಲ. ಗಾಂಧಿಯಿಂದ ಆರಂಭವಾದ ಬದಲಾವಣೆಯ ಗಾಳಿ ಸಂಪ್ರದಾಯಸ್ಥ ಮನೆತನದ ಶ್ರೀಕಂಠಶಾಸ್ತ್ರಿಗಳ ಬುಡವನ್ನೇ ಅಲುಗಾಡಿಸುತ್ತದೆ. ವಿದ್ಯಾ ಹಾಗೂ ಸಾವಿತ್ರಿ ಬ್ರಿಟಿಷ್ ಸರಕಾರಕ್ಕೆ ವಿರುದ್ಧವಾದ ರಾಷ್ಟ್ರೀಯತೆಯನ್ನು ಬೆಳೆಸಿಕೊಳ್ಳುತ್ತಾರೆ. ಕೊಡದೂರಿನಂತಹ ಒಂದು ಹಳ್ಳಿಯಲ್ಲಿ ಅಸ್ಪೃಶ್ಯರ ಕುರಿತಾದ ಚರ್ಚೆ, ಪರ – ವಿರೋಧ ವಿಚಾರಗಳು ನಡೆಯುತ್ತಿದ್ದವು.

ವಿಧವೆಯಾದ ಶಾಂಭವಿಯನ್ನು ಮದುವೆಯಾಗಲು ಗೌಡರ ಯುವಕ ರಘು ಮುಂದೆ ಬರುತ್ತಾನೆ. ಇದು ಬ್ರಾಹ್ಮಣ ಸಮಾಜದಲ್ಲಿ ದೊಡ್ಡ ಬಿರುಗಾಳಿಯನ್ನೇ ಎಬ್ಬಿಸುತ್ತದೆಂಬ ಅರಿವಿದ್ದರೂ ಕೂಡ ಅವರಿಬ್ಬರು ಮದುವೆಯಾಗಲು ನಿರ್ಧರಿಸುತ್ತಾರೆ. ಕೊಡದೂರಿನಂತಹ ಹೇಳಿಕೊಳ್ಳಲು ಏನೊಂದೂ ಮಹತ್ವ ಇಲ್ಲದ ಹಳ್ಳಿ ತಮ್ಮ ತಮ್ಮ ಜಾತಿ ಸಂಪ್ರದಾಯದ ಕಟ್ಟುಪಾಡುಗಳಲ್ಲಿ ಭದ್ರವಾಗಿತ್ತು. ಆಗ ಆರಂಭವಾದ ಗಾಂಧಿಯ ಕಾಂಗ್ರೆಸ್ ಹೋರಾಟ, ದೇಶದ ಸ್ವಾತಂತ್ರ್ಯದ ಬಯಕೆ ಇಂತಹ ಹಳ್ಳಿಗೂ ತಟ್ಟಿ ಸಂಪ್ರದಾಯವನ್ನೇ ನೆಚ್ಚಿಕೊಂಡಿದ್ದ ಜನಜೀವನದಲ್ಲಿ ಅಸಮಧಾನದ ಕಿಡಿಯನ್ನು ಉರಿಸುತ್ತದೆ. ಆದರೆ ಕ್ರಮೇಣ ಜನರ ಮನೋಭಾವವು ಇನ್ನಷ್ಟು ಉದಾರೀಕರಣಗೊಳ್ಳುತ್ತಾ ಹೋಗುತ್ತದೆ. ದಲಿತರನ್ನು ಶಾಲೆಗೆ ಕರೆತರುವ ವಿಚಾರವನ್ನು ಬಹಳಷ್ಟು ಮಂದಿ ಪ್ರೋತ್ಸಾಹಿಸತೊಡಗಿದರು. ಕೊಡದೂರಿನ ಶಾಲೆಗೆ ಇನ್ನು ನಾಲ್ಕು ಮಂದಿ ದಲಿತರ ಹುಡುಗರು ಸೇರಿಕೊಳ್ಳುತ್ತಾರೆ.

'ಹಳ್ಳ ಬಂತು ಹಳ್ಳ' ಕಾದಂಬರಿ ಕೂಡ ಬ್ರಾಹ್ಮಣ ಕುಟುಂಬವೊಂದರಲ್ಲಿ ಆಗುವ ಮಹತ್ತರವಾದ ಬದಲಾವಣೆಯನ್ನು ಹೇಳುವ ಮೂಲಕವೇ ಸಾಮಾಜಿಕ ಬದಲಾವಣೆಯನ್ನು ಪ್ರತಿಬಿಂಬಿಸುತ್ತದೆ. ೧೯೪೨ನೇ ಇಸವಿಯಲ್ಲಿ ಆರಂಬವಾದ 'ಕ್ವಿಟ್ ಇಂಡಿಯಾ' ಚಳುವಳಿಯಲ್ಲಿ ವಾಸುದೇವ ಪಂತರ ಮೂರನೇ ತಲೆಮಾರಿನ ಹುಡುಗರು ಗಾಂಧಿಟೋಪಿ ಧರಿಸಿಕೊಂಡು ಪ್ರಭಾತಪೇರಿಯಲ್ಲಿ ಭಾಗವಹಿಸುತ್ತಿದ್ದರು. ಅವರ ಸೊಸೆ ಪರಿಮಳ ಹಸಿರು ಅಂಚಿನ ಬಿಳಿ ಖಾದಿ ಸೀರೆ ಉಟ್ಟು ದಿನ ನಿತ್ಯ ಯಾವ ಯಾವುದೊ ಮೆರವಣಿಗೆ, ಮೀಟಿಂಗು ಎಂದು ಒಬ್ಬಳೇ ಹೊರಗೆಲ್ಲ ಓಡಾಡುತ್ತಿರುವುದನ್ನು ಕಂಡು ಪಂತರು ದಿಗ್ಭ್ರಮೆ ಗೊಳ್ಳುತ್ತಾರೆ. ತಮ್ಮ ಜಗತ್ತಿಗೂ, ತಮ್ಮ ಹುಡುಗರ ಜಗತ್ತಿಗೂ ಎಷ್ಟೊಂದು ಬದಲಾವಣೆಗಳಾಗಿವೆಯೆಂಬುದಾಗಿ ಚಕಿತರಾಗುತ್ತಾರೆ. ಪಂತರ ಮೂರನೇ ತಲೆಮಾರು ಅಂದರೆ ಬೋಧರಾಯನ ಮಗ 'ಧೀರ' ಅಂತರ್ಜಾತಿಯ ಹುಡುಗಿಯನ್ನು ಇಷ್ಟಪಟ್ಟು ಮದುವೆಯಾಗುತ್ತಾನೆ. ಇದನ್ನು ಪಾಂಡುವಿನ ಹೆಂಡತಿಯು ಬೆಂಬಲಿಸುತ್ತಾಳೆ. ತುಳಸಕ್ಕ ಮತ್ತು ವಾಸುದೇವಾಚಾರ್ಯರು ತಮ್ಮ ಮುದಿ ಪ್ರಾಯದಲ್ಲಿ ಬೋಧರಾಯನ ಸೊಸೆ ಶರಯೂವನ್ನು ಒಪ್ಪಿಕೊಳ್ಳುತ್ತಾರೆ. ಕಟು ಸಂಪ್ರದಾಯಸ್ಥ ಬ್ರಾಹ್ಮಣ ಮನೆತನದಲ್ಲೂ ಅಂತರ್ಜಾತಿಯ ಮದುವೆ, ಹಿರಿಯರು ಕೂಡ ಕೊನೆಗೆ ಅದನ್ನು ಅರಗಿಸಿಕೊಳ್ಳುವ ಹಂತವನ್ನು ತಲುಪುತ್ತಾರೆ. ಮುಂಬಯಿಯಲ್ಲಿ ವಾಸ ಮಾಡುವ ಶುದ್ಧ ಬ್ರಾಹ್ಮಣರ ಮನೆಯಲ್ಲಿ ಕೂಡ ಮರಾಠಿ ನುಸುಳುತ್ತದೆ.

ಹೆಣ್ಣು ಮಕ್ಕಳ ಸ್ಥಾನ-ಮಾನದಲ್ಲಿ ಗಣನೀಯವಾದ ಬದಲಾವಣೆಯಾಗುತ್ತದೆ. ಹುಡುಗಿಯರು ಕೂಡ ಹುಡುಗರಂತೆ ಬೈಸಿಕಲ್ಲಿನಲ್ಲಿ ಓಡಾಡಲು ಆರಂಭಿಸುತ್ತಾರೆ. ವಾಸುದೇವಾಚಾರ್ಯರು ಸತ್ತ ನಂತರ ಅವರ ಪತ್ನಿ 'ತುಳಸಕ್ಕ'ನ ಕೂದಲು ಬೋಳಿಸುವ ವಿಚಾರ ಬಂದಾಗ ಪರಿಮಳ, ಶಾಂತ, ಕೇಶವ ತಡೆಯುತ್ತಾರೆ.

ದಲಿತರ ಕೇರಿಯಲ್ಲಿ ಬಾವಿ ತೋಡಿಸುವುದು, ಮದ್ಯಪಾನ ನಿಷೇಧ ಚಳುವಳಿ, ರಾತ್ರಿ ಶಾಲೆಯಲ್ಲಿ ಅಕ್ಷರಾಭ್ಯಾಸ, ಶುಚಿತ್ವದ ಬಗ್ಗೆ ತಿಳುವಳಿಕೆ ಮೂಡಿಸುವ ಕಾರ್ಯಕ್ರಮಗಳು ಆರಂಭವಾಗುತ್ತದೆ. ಹಳ್ಳಿಹಳ್ಳಿಗಳಲ್ಲಿ ಶಾಲಗಳು ತೆರೆಯಲ್ಪಡುತ್ತವೆ. ಚಿಕ್ಕ ಚಿಕ್ಕ ಮಕ್ಕಳನ್ನೆಲ್ಲಾ ಕಡ್ಡಾಯವಾಗಿ ಶಾಲೆಗೆ ಸೇರಿಸಬೇಕೆಂಬ ಭಾವನೆ ಹಳ್ಳಿಯ ಜನರಲ್ಲಿ ಉಂಟಾಗುತ್ತದೆ. ಕೆಲವೊಂದು ಹೆಣ್ಣುಮಕ್ಕಳಲ್ಲಿ ಕೂಡಾ ಮದುವೆಗಿಂತ ವಿದ್ಯಾಭ್ಯಾಸವೆ ಮುಖ್ಯ ಎಂಬ ಭಾವನೆ ಬೆಳೆಯುವುದಕ್ಕೆ ಆರಂಭವಾಗುತ್ತದೆ.

ಕಟ್ಟೀಮನಿಯವರ 'ಸ್ವಾತಂತ್ರ್ಯದೆಡೆಗೆ' ಕಾದಂಬರಿಯಲ್ಲಿ ಶೇಖರ ಎನ್ನುವ ಯುವಕ ಹಳ್ಳಿ ಹಳ್ಳಿಗಳಲ್ಲಿ ರೈತ ಸಮ್ಮೇಳನಗಳನ್ನು ಏರ್ಪಡಿಸುತ್ತಾನೆ. ಜಮೀನುದಾರರು, ಸಾಹುಕಾರರು, ಪರಕೀಯ ಸರಕಾರದವರು- ಈ ಮೂವರ ವಿರುದ್ಧವೂ ರೈತ ಹೋರಾಟ ನಡೆಸಬೇಕಾಗಿದೆಯೆಂಬುದನ್ನು ಮನಗಾಣಿಸಿಕೊಡುತ್ತಾನೆ. ಊರೂರುಗಳಲ್ಲಿ ಸಭೆ ಜರುಗಿದುವು. ಗ್ರಾಮ ಸುಧಾರಣಾ ಸಂಘಗಳು ಹುಟ್ಟಿ ಕಾರ್ಯೋನ್ಮುಖವಾದುವು. ಚರಕಾ ಸಂಘಗಳು ಸ್ಥಾಪಿಸಲ್ಪಟ್ಟವು. ಊರಿನ ಜನರೆಲ್ಲ, ತಾಲೂಕಿನ ಜನರೆಲ್ಲ ಹೊಸ ಹುರುಪಿನಿಂದ ಹೊಸ ಹೋರಾಟದತ್ತ ಸಾಗತೊಡಗಿದರು.[೧೧೨] ಹೀಗೆ ಶೇಖರನೆಂಬ ಯುವಕನು ಗಾಂಧೀಜಿಯವರ ಗ್ರಾಮೋದ್ಧಾರದ ಕನಸನ್ನು ಅಕ್ಷರಶಃ ಕಾರ್ಯಗತಗೊಳಿಸಿದನು. ಸ್ವಾತಂತ್ರ್ಯದ ಕಡೆಗೆ ಸಾಗಬೇಕಾದರೆ ಮೊದಲು ಅದರ ಕುರಿತಾದ ಅರಿವು, ಅಜ್ಞಾನದ ನಿವಾರಣೆ, ತಾವು ಪರಾಧೀನದಲ್ಲಿ ಸಿಕ್ಕಿ ಅನುಭವಿಸುವ ಶೋಷಣೆಯ ಅರಿವು ಮುಖ್ಯವೆಂಬುದನ್ನು ಶೇಖರ ಅರಿತಿದ್ದನು. ಗಾಂಧೀಜಿಯವರ ಮದ್ಯನಿಷೇಧ ವಿಧಾಯಕ ಕಾರ್ಯಕ್ರಮದ ಭಾಗವಾಗಿ ಕಾರ್ಯಕರ್ತರು ಆರಂಭಿಸಿದ ಪಿಕೆಟಿಂಗ್‌ನಿಂದಾಗಿ ಕೆಲವರಾದರೂ ಕುಡಿತದ ಚಟದಿಂದ ಮುಕ್ತಿ ಪಡೆಯುತ್ತಾರೆ. ಕೆಲವೊಂದು ದೇವಾಲಯಗಳ ಬಾಗಿಲುಗಳು ಅಸ್ಪೃಶ್ಯರಿಗೂ ತೆರೆಯಲ್ಪಡುತ್ತದೆ.

ಈ ಆಧುನಿಕ ವಿದ್ಯಾಭ್ಯಾಸವನ್ನು ಪಡೆದುಕೊಂಡಂತಹ ಯುವಕರು ಮದುವೆಯಾಗಲು ಕನ್ಯೆಯನ್ನು ಅರಸುವಾಗ ಕೂಡಾ ಇಂಗ್ಲಿಷ್ ವಿದ್ಯಾಭ್ಯಾಸ ಪಡೆದ ಹುಡುಗಿಯರನ್ನೇ ಅರಸಲು ಆರಂಭಿಸುತ್ತಾರೆ. ೧೯೩೦ರ ಉಪ್ಪಿನ ಸತ್ಯಾಗ್ರಹ ಕಾಲಕ್ಕಾಗುವಾಗಲೇ ಇಂತಹ ಒಂದು ಬದಲಾವಣೆಯು ಸಮಾಜದಲ್ಲಿ ಕಂಡು ಬರುತ್ತದೆ. ಆ ಕಾಲದಲ್ಲಿ ಇಂಗ್ಲಿಷ್ ಶಿಕ್ಷಣವನ್ನು ಪಡೆದು ಆಧುನಿಕರೆನಿಸಿಕೊಂಡ ಮಂದಿ ಒಂದು ಕಡೆಯಾದರೆ, ಇನ್ನೂ ತಮ್ಮ ಸಂಪ್ರದಾಯ, ಆಚಾರ, ವಿಚಾರಗಳನ್ನೇ ನಂಬಿ ಕೂತಿರುವ ಮಂದಿ ಇನ್ನೊಂದು ಕಡೆ. ಮದುವೆಯಂತಹ ವಿಚಾರಗಳಲ್ಲೂ ಈ ಸಂಕ್ರಮಣ ಕಾಲ ಗೊಂದಲಕ್ಕೆ ಎಡೆ ಮಾಡಿಕೊಡುತ್ತದೆ. ಆನಂದ ಕಂದರ 'ಮಗಳ ಮದುವೆ'

ಕಾದಂಬರಿಯು ಕಾವೇರಿ ಎಂಬ ಹೆಣ್ಣುಮಗಳನ್ನು ವರ ನೋಡಲಿಕ್ಕೆ ಬರುವ ಸಂದರ್ಭದಿಂದ ಆರಂಭವಾಗುತ್ತದೆ. ಕೆಲವು ಹುಡುಗರು ಇಂಗ್ಲಿಷ್ ವಿದ್ಯೆ ಕಲಿತ ಹುಡುಗಿಯನ್ನೇ ಅಪೇಕ್ಷಿಸುತ್ತಾರೆ. ತೀರಾ ಸಂಪ್ರದಾಯನಿಷ್ಠ ಕುಟುಂಬದ ಹೆಣ್ಣುಮಕ್ಕಳು ಇಂಗ್ಲಿಷ್ ವಿದ್ಯೆಯನ್ನು ಕಲಿತಿರಲಿಲ್ಲ. ಸಂಕ್ರಮಣಾವಸ್ಥೆಯೊಂದು ಸಾಮಾಜಿಕ ವ್ಯವಸ್ಥೆಯಲ್ಲಿ ಉಂಟುಮಾಡುವ ತಲ್ಲಣಗಳನ್ನು, ಬದಲಾವಣೆಗಳನ್ನು ಈ ಕಾದಂಬರಿ ತಿಳಿಸುತ್ತದೆ. ಕಾವೇರಿ ಎಂಬ ಹೆಣ್ಣುಮಗಳ ಮದುವೆ ಮಾಡಲು ಅವಳ ತಂದೆ ತಾಯಿ ಪಡುವ ಕಷ್ಟಕ್ಕೆ ಆ ಕಾಲದಲ್ಲಿ ಉಂಟಾದ ಬದಲಾವಣೆ ಕಾರಣವಾಗಿದೆ.

ಈ ಕಾಲಘಟ್ಟದಲ್ಲಿ ತೀರಾ ಕಷ್ಟವನ್ನು ಅನುಭವಿಸಿದ ಜನರೆಂದರೆ ಬಡವರು ಹಾಗೂ ಕೆಳ ಮಧ್ಯಮವರ್ಗದ, ಕೃಷಿಯನ್ನೇ ನಂಬಿ ಜೀವನ ನಡೆಸುತ್ತಿದ್ದ ಬಡ ರೈತಾಪಿ ವರ್ಗ. ಮಳೆಬೆಳೆ ಇಲ್ಲದಿದ್ದರೂ ಕಂದಾಯ ಕೊಡುವುದು ತಪ್ಪುತ್ತಿರಲಿಲ್ಲ. ಒಂದು ಕಡೆ ಕಂದಾಯದ ದುಡ್ಡನ್ನು ವಸೂಲಿ ಮಾಡಲು ದನ, ಕರುಗಳನ್ನು ಜಪ್ತಿ ಮಾಡುತ್ತಿದ್ದರು. ಇನ್ನೊಂದೆಡೆಯಲ್ಲಿ ಬ್ರಿಟಿಷ್ ಸರಕಾರವು 'ಮಕ್ಕಳಿಗೆ ಹಾಲು ಕೊಡಿ' ಎಂದು ಹೇಳುತ್ತಿತ್ತು. ಹೀಗೆ ಮಗುವನ್ನು ಜಿಗುಟುವ ಹಾಗೂ ತೊಟ್ಟಿಲು ತೂಗುವ ಈ ಎರಡೂ ಕೆಲಸವನ್ನು ಬ್ರಿಟಿಷ್ ಸರಕಾರವೇ ಮಾಡುತ್ತಿತ್ತು. ಬ್ರಿಟಿಷ್ ಆಡಳಿತದಲ್ಲಿ ಬಿಳಿಯರು ತಮ್ಮ ಭಾರತೀಯ ಮೇಲಾಧಿಕರಿಗಳ ಮೇಲೂ ಗೌರವ ತೋರಿಸುತ್ತಿರಲಿಲ್ಲ. ಭಾರತೀಯರು ತಮ್ಮ ದೇಶಬಾಂಧವರನ್ನು ಮೆಟ್ಟುತ್ತಿದ್ದರೇ ಹೊರತು ತಮ್ಮ ಕೈ ಕೆಳಗಿನ ಬಿಳಿಯ ಅಧಿಕಾರಿಯ ವಿರುದ್ಧ ಕೂಡ ಯಾವುದೇ ಕ್ರಮ ತೆಗೆದುಕೊಳ್ಳುವ ಧೈರ್ಯ ಭಾರತೀಯ ಅಧಿಕಾರಿಗಳಿಗೆ ಇರಲಿಲ್ಲ.

**ಕಾಯ್ಕೆ ದೇವಾ ಜಾರ್ಜ್ ಭೂಪಾಲನಂ!**

ಆಗಿನ ಕಾಲದಲ್ಲಿ ಶಾಲೆಯಲ್ಲಿ ನಡೆಯುವ ಒಂದು ಪಾರ್ಥನೆಯು ಹೀಗಿತ್ತು–

"ಕಾಯ್ಕೆ ದೇವಾ ಜಾರ್ಜ ಭೂಪಾಲನಂ
ಸದಾ ದಯಾಳುವಂ! ಈಯೆ ಶ್ರೇಯಂಗಳಂ
ಜಾಯಮಂ ಕೀರ್ತಯಂ ಈ ನೃಪತಿಯೆ ನಮ್ಮನ್ನು ಸಲಹಲೆಂದು!!"[೧೧೩]

ಇದು 'God save the king' ಎಂಬ ಆಂಗ್ಲ ಗೀತೆಯ ಅನುವಾದವಾಗಿತ್ತು. ಎಲ್ಲೋ ಕಣ್ಣಲ್ಲಿ ಕಾಣದ, ಭಾರತೀಯರ ಯೋಗಕ್ಷೇಮದ ಕುರಿತು ಕನಸಿನಲ್ಲೂ ಯೋಚಿಸದ ಲಂಡನ್ನಿನ ದೊರೆಗೋಸ್ಕರ ಭಾರತದ ಶಾಲೆಗಳಲ್ಲಿ ಪ್ರತಿದಿನವೂ ವಿದ್ಯಾರ್ಥಿಗಳು ಪ್ರಾರ್ಥಿಸಬೇಕಾಗಿತ್ತು. ಭಾರತದಲ್ಲಿ ಲಕ್ಷಾಂತರ ರೈತರು ಹೊಟ್ಟೆಗಿಲ್ಲದೆ ನರಳುತ್ತಿದ್ದರೆ ಅವರಿಗೋಸ್ಕರ ಪ್ರಾರ್ಥಿಸುವವರು ಯಾರೂ ಇರಲಿಲ್ಲ.

## ಮತಾಂತರ

ಹಳ್ಳಿಗಳಲ್ಲಿ ಮತಾಂತರವು ಸದ್ದಿಲ್ಲದೆ ನಡೆಯುತ್ತಿರುವುದನ್ನು, ಮತಾಂತರ ಆಗುತ್ತಿದ್ದ ಹಿಂದುಗಳು ಕೊಡುವ ಕಾರಣಗಳನ್ನು ಹಾಗೂ ಮತಾಂತರ ಹೊಂದಿದ ಜನರು ತಮ್ಮ ಹೊಸ ಮತದಲ್ಲಿ ಅನುಭವಿಸುತ್ತಿದ್ದ ಯಾತನೆಯನ್ನು ಕೂಡ 'ಮೆರವಣಿಗೆ' ಕಾದಂಬರಿ ಅನಾವರಣಗೊಳಿಸುತ್ತದೆ. ಬದಲಾವಣೆಗೊಳಗಾಗದ ಹಿಂದು ಧರ್ಮದ ಕೆಲವು ಕಟು ಸಂಪ್ರದಾಯಗಳು ಕೂಡ ಮತಾಂತರಕ್ಕೆ ಕಾರಣವಾಗುತ್ತದೆ. ನಮ್ಮ ಧರ್ಮಗ್ರಂಥಗಳು ಕಾಲಕಾಲಕ್ಕೆ ಪರಿಷ್ಕರಿಸಲ್ಪಡದೆ ಇರುವುದು ಸಹ ಮತಾಂತರಕ್ಕೆ ಒಂದು ಕಾರಣವಾಗಿದೆ. ಹಿಂದು ಧರ್ಮದಲ್ಲಿ ಯಾರೆಲ್ಲ ಅಸಮಧಾನವನ್ನು ಹೊಂದಿದ್ದಾರೆಯೋ ಅವರನ್ನು ಉಪಾಯದಿಂದ ಕ್ರಿಸ್ತಮತಕ್ಕೆ ಮತಾಂತರಿಸುತ್ತಿದ್ದರು. ಆದರೆ ಧರ್ಮ ಬದಲಾವಣೆ ಮಾಡಿದ ಅವರ ಪಾಡು ಮಾತ್ರ ನಾಯಿಪಾಡಾಗಿರುವ ಚಿತ್ರಣವನ್ನು 'ಮೆರವಣಿಗೆ' ಕಾದಂಬರಿ ತೆರೆದಿಡುತ್ತದೆ. ಹಿಂದು ಧರ್ಮ ಕಾಲದಿಂದ ಕಾಲಕ್ಕೆ ಪರಿಷ್ಕೃತಗೊಳ್ಳಬೇಕು. ಹಿಂದಿನ ಕಾಲದಲ್ಲಿ ಋಷಿ–ಮುನಿಗಳು ಆ ಕೆಲಸವನ್ನು ಮಾಡುತ್ತಿದ್ದರು. ಈಗ ಮಠಾಧಿಪತಿಗಳು ಅಂತಹ ಕೆಲಸಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಳ್ಳಬೇಕು. ಆದರೆ ಇಂದಿನ ಮಠಾಧಿಪತಿಗಳು ಪಾಳೇಯಗಾರರಂತೆ ಸರಕಾರದ ಬಾಲಬುಡಕರಾಗುತ್ತಾ ತಮ್ಮ ಸ್ವಾರ್ಥದಲ್ಲಿ ಸಮಾಜದ ಹಿತವನ್ನು ಮರೆತಿದ್ದಾರೆಂಬ ನೋವನ್ನು ಈ ಕಾದಂಬರಿ ವ್ಯಕ್ತಪಡಿಸುತ್ತದೆ. ಸ್ವಧರ್ಮ ರಕ್ಷಣೆ, ಧರ್ಮವನ್ನು ಜನಪರವಾಗಿ ಮಾರ್ಪಾಡುಗೊಳಿಸುವುದು, ಧಾರ್ಮಿಕ ಸಮಸ್ಯೆಗಳು ಇನ್ನಷ್ಟು ಕಗ್ಗಂಟಾಗದ ಹಾಗೆ ಎಚ್ಚರ ವಹಿಸುವುದು ಮಠಾದಿಪತಿಗಳ ಕರ್ತವ್ಯ. ಅವರು ಜನರಿಂದ ದೂರ ಉಳಿಯದೆ ಜನಸ್ನೇಹಿಗಳಾಗಿದ್ದರೆ ಹಿಂದೂಧರ್ಮದ ಜನರು ಇಷ್ಟೊಂದು ಬೃಹತ್ ಪ್ರಮಾಣದಲ್ಲಿ ಮತಾಂತರ ಹೊಂದುತ್ತಿರಲಿಲ್ಲ. ಕ್ರೈಸ್ತ ಧರ್ಮಕ್ಕೆ ಮತಾಂತರ ಹೊಂದಿದ ಒಬ್ಬ ಹಿಂದು ವ್ಯಕ್ತಿ ಹೇಳುವ ಮಾತುಗಳು ಮತಾಂತರ ಹೊಂದಿದ ಬಹುತೇಕ ಹಿಂದುಗಳ ಅಂತರಾಳದ ಪ್ರತಿಬಿಂಬವಾಗಿದೆ– "ಅಯ್ಯೋ ಹಿಂದೂ ಸಮಾಜವೇ, ನನ್ನನ್ನು ಏನು ಮಾಡಿದರೂ ನಿನ್ನಲ್ಲಿ ಇರಗೊಡದೆ ಹೋದೆಯಲ್ಲ. ನಾನು ಬಹಿರಂಗವಾಗಿ ಗಂಡನು ಬಿಟ್ಟವಳೊಡನೆ ಸಂಸಾರ ಮಾಡುತ್ತೇನೆಂದರೆ ನನ್ನನ್ನು ಹೊರಕ್ಕೆ ಹಾಕಿದೆ. ಇಂತಹ ಠಕ್ಕರು ನಿನ್ನಲ್ಲಿ ಎಷ್ಟು ಜನ ಇದ್ದಾರೆ ಬಲ್ಲೆಯಾ? ಸರಳತೆ, ಧೈರ್ಯ, ಇವಕ್ಕೆ ನಿನ್ನಲ್ಲಿ ಪುರಸ್ಕಾರವಿಲ್ಲ. ಮೋಸ, ಹೇಡಿತನ, ಇವಕ್ಕೆ ನಿನ್ನ ಆದರಣೆ. ಇಂತಹ ಪರಿಸ್ಥಿತಿ ಹಿಂದೆ ಬಂದಿದ್ದರೆ ನಮ್ಮ ಪೂರ್ವಿಕರು ನನ್ನನ್ನು ಬಿಡುತ್ತಿರಲಿಲ್ಲ. ಪದ್ಧತಿಯನ್ನೇ ಬದಲಾಯಿಸುತ್ತಿದ್ದರು. ಇಂದಿಗೆ ಅನೇಕ ತಲೆಮಾರುಗಳಿಂದ ಬಂದಿದ್ದ ನನ್ನ ಹಿಂದುಮತ ಬದಲಾವಣೆಯಾಯಿತು."[೧೧೪] ಎಂದು ಎದೆಯೊಡೆಯುವಂತೆ ಅಳುವ ಚಿತ್ರಣವಿದೆ. ಈ ಪ್ರಕರಣವನ್ನು ನೋಡಿದರೆ ಸ್ವ–ಇಚ್ಛೆಯಿಂದ ಹಿಂದು ಧರ್ಮವನ್ನು ಯಾರೂ ಕೂಡಾ ತ್ಯಜಿಸುತ್ತಿರಲಿಲ್ಲ. ಹಿಂದು ಧರ್ಮವನ್ನು ತ್ಯಜಿಸುವುದಕ್ಕೆ ಈ ಧರ್ಮದಲ್ಲಿರುವ ಜೀವ ವಿರೋಧಿ ಕಟ್ಟುಪಾಡುಗಳೇ ಕಾರಣವಾಗಿತ್ತು. ಪಾದ್ರಿಗಳು ಕ್ರೈಸ್ತ ಮತಪ್ರಚಾರಕ್ಕೆ ವಿವಿಧ ತಂತ್ರಗಳನ್ನು ಬಳಸುತ್ತಿದ್ದರು. ಹೊಸದಾಗಿ ಮತಾಂತರಗೊಂಡಿದ್ದ ಕ್ರೈಸ್ತರಿಂದ ಕ್ರಿಸ್ತಮತ ಪ್ರಚಾರದ

ಉಪನ್ಯಾಸವನ್ನು ಮಾಡಿಸುತ್ತಿದ್ದರು. ಇದು ಇನ್ನಷ್ಟು ಹಿಂದುಗಳನ್ನು ಕ್ರೈಸ್ತ ಮತಕ್ಕೆ ಸೆಳೆಯುವ ತಂತ್ರವಾಗಿತ್ತು. "ರಾತ್ರಿಯ ಶಾಲೆಯ ಹೆಸರುಗಳಲ್ಲಿ ಮೇಷ್ಟರ ಸಂಬಳ ಇತರ ಗ್ರ್ಯಾಂಟು ಇತ್ಯಾದಿ ಸರಕಾರದಿಂದ ತೆಗೆದುಕೊಂಡು ವಠಾರದಲ್ಲಿ ವಾಸವಾಗಿರುತ್ತಿದ್ದ ಜಾತಿಕೆಟ್ಟ ಹಿಂದುವೊಬ್ಬನಿಂದ ಪ್ರಚಾರ ಕಾರ್ಯ ನಡೆಸುತ್ತಿದ್ದರು."[೧೧೫] ಈ ಪ್ರಚಾರ ಕಾರ್ಯವನ್ನು ಹೆಚ್ಚು ಹಳ್ಳಿಗಳಲ್ಲಿ ಮಾಡಲು ಚರ್ಚ್ ಸಂಸ್ಥೆಗೆ ಜನರ ಅವಶ್ಯಕತೆಯಿತ್ತು. ಹಳ್ಳಿಗಳಲ್ಲಿ ಹೊಸದಾಗಿ ಮತಾಂತರ ಹೊಂದಿದವರನ್ನು ಅವರು ಈ ಕೆಲಸಕ್ಕೆ ಬಳಸುತ್ತಿದ್ದರು. ಯಾಕೆಂದರೆ ನಿತ್ಯ ನಿತ್ಯ ಹೊಸಬರು ಈ ಮತಕ್ಕೆ ಬರುತ್ತಿದ್ದಾರೆ ಎಂಬುದನ್ನು ಪ್ರಚಾರ ಮಾಡುವುದೂ ಅವರ ಉದ್ದೇಶವಾಗಿತ್ತು.[೧೧೬]

ಹಿಂದುಗಳು ಯಾರೂ ಕೂಡ ಯೇಸುವಿನ ತತ್ವಕ್ಕೆ ಮನಸೋತು ಮತ ಬದಲಾಯಿಸಿದವರಲ್ಲ. ಪಾದ್ರಿಯ ಸವಿನುಡಿ ಕೇಳಿ ಮತ ಬದಲಾಯಿಸಿದ್ದರು. ಅವರೆಲ್ಲರೂ ಹಿಂದು ಮತವನ್ನು ದ್ವೇಷಿಸುತ್ತಿದ್ದರು. ಒಬ್ಬ ವ್ಯಕ್ತಿ ಮತಾಂತರ ಹೊಂದುವುದಕ್ಕೆ ಕಾಲದಿಂದ ಕಾಲಕ್ಕೆ ಪರಿಷ್ಕರಣೆಗೊಳ್ಳದಿರುವ ಕಟ್ಟುಪಾಡುಗಳು ಹಾಗೂ ನಿಯಮಾವಳಿಗಳು ಕಾರಣವಾಗಿವೆ. ಮತಾಂತರ ಹೊಂದಿ ಕ್ರಿಸ್ತರಾದವರು ಯಾರು ಕೂಡ ಸಂತೋಷದಿಂದಿರಲಿಲ್ಲ. ಆದರೂ ಅವರು ಮತಾಂತರವಾಗುವುದಕ್ಕೆ ಅನೇಕ ಕಾರಣಗಳನ್ನು ಈ ಕಾದಂಬರಿ ಗುರುತಿಸುತ್ತದೆ.

ಒಬ್ಬ ಬ್ರಾಹ್ಮಣ ಬ್ರಾಹ್ಮಣರ ಪೈಕಿ ಸ್ವಲ್ಪ ಕಡಿಮೆ ಜಾತಿಯವಳನ್ನು ಮದುವೆಯಾಗಿದ್ದನು. ಜನ ಅವನನ್ನು ಬಹಿಷ್ಕರಿಸಿದರು. ಅವನು ಕ್ರಿಸ್ತನಾದನು. ಇನ್ನೊಬ್ಬ ವಯಸ್ಸಾದ ಹಿಂದು, ವಯಸ್ಸಾದ ಒಬ್ಬಳು ವಿಧವೆಯನ್ನು ಸಂಸಾರದಲ್ಲಿ ಸಂಗಾತಿಯನ್ನಾಗಿ ಮಾಡಿಕೊಂಡನು. ಅವನನ್ನು ಜನ ಹಳ್ಳಿಗಳಿಂದ ಬೆಂಕಿ ನೀರು ಕೊಡದೆ ಓಡಿಸಿದರು, ಬಂದು ಅವನು ಕ್ರಿಸ್ತ ಮತಕ್ಕೆ ಸೇರಿದನು. ಇನ್ನು ಕ್ರಿಸ್ತರಾದ ಹರಿಜನರಿಗಂತೂ ಕಡಿಮೆಯಿಲ್ಲ. ಆದರೆ ಮತವನ್ನು ಬದಲಾಯಿಸಿದರಿಂದ ಅವರೆಲ್ಲರಿಗೂ ಪಶ್ಚಾತ್ತಾಪವಾಗಿದ್ದಿತು. ಆದರೆ ಹಿಂದೂ ಮತ ಹೆಚ್ಚು ಆಧುನಿಕವಾಗಬೇಕು ಎಂದು ಅವರೆಲ್ಲಾ ಹೇಳುತ್ತಿದ್ದರು. ನಮ್ಮಂತವರಿಗೆಲ್ಲಾ ನಮ್ಮ ಮತದಲ್ಲಿ ಜಾಗ ಸಿಕ್ಕುವಂತೆ ಅದು ವಿಶಾಲವಾಗಬೇಕು ಎಂದು ಅವರು ಹೇಳುತ್ತಿದ್ದರು. ಕೆಲವು ಹರಿಜನರು ಹಿಂದುಮತ ನಮ್ಮನ್ನು ಅಸ್ಪೃಶ್ಯರನ್ನಾಗಿ ಮಾಡಿದೆ, ಆದುದರಿಂದ ಕ್ರಿಸ್ತರಾದೆವು ಎನ್ನುತ್ತಿದ್ದರು.[೧೧೭]

ಆದರೆ ಮತಾಂತರಹೊಂದಿದ ಕ್ರಿಸ್ತರನ್ನೇನೂ ಮರ್ಯಾದೆಯಿಂದ ಅಲ್ಲಿ ನಡೆಸಿಕೊಳ್ಳುತ್ತಿರಲಿಲ್ಲ. ದನ, ನಾಯಿಗಳಿಗಿಂತ ಕಡೆಯಾಗಿ ನಡೆಸಿಕೊಳ್ಳುತ್ತಿದ್ದರು. ಮತಾಂತರ ಹೊಂದುವ ತನಕ ಪಾದ್ರಿ ತೋರಿಸುತ್ತಿದ್ದ ಆದರ, ಪ್ರೀತಿ, ಅವರೊಮ್ಮೆ ಗಾಳಕ್ಕೆ ಬಿದ್ದ ನಂತರ ಕಡಿಮೆಯಾಗುತ್ತಿತ್ತು. ಈ ರೀತಿಯಾಗಿ ಅಂದಿನ ಕಾಲಘಟ್ಟದಲ್ಲಿ ಒಂದು ಕಡೆಯಿಂದ ಸಾಮಾಜಿಕ, ಸಾಂಸ್ಕೃತಿಕ ಸ್ಥಿತ್ಯಂತರಗಳ ಜೊತೆ ಜೊತೆಯಲ್ಲೇ ಮತಾಂತರದ ಕಾರ್ಯವೂ ಸದ್ದಿಲ್ಲದೆ ನಡೆಯುತ್ತಿತ್ತು. ಭಾರತ ದೇಶವು ಕ್ರಿಸ್ತಮಯವಾದಷ್ಟು ಭಾರತೀಯರಿಂದ ಬ್ರಿಟಿಷ್ ಆಳ್ವಿಕೆಗೆ ಉಂಟಾಗುವ ಅಡ್ಡಿ ಆತಂಕಗಳು ನಿವಾರಣೆಯಾಗುತ್ತದೆಂಬ ಕಾರಣಕ್ಕೆ ಸರಕಾರವೂ ಈ

ಕಾರ್ಯಕ್ರಮನ್ನು ಸದ್ದಿಲ್ಲದೆ ಪ್ರೋತ್ಸಾಹಿಸುತ್ತಿತ್ತು. ಒಬ್ಬ ಹಿಂದು ಕ್ರಿಸ್ತನಾದರೆ ಬ್ರಿಟಿಷ್ ಸರಕಾರಕ್ಕೆ ಒಬ್ಬ ರಾಜದ್ರೋಹಿ ಕಡಿಮೆಯಾಗುತ್ತಿತ್ತು.

## ಎರಡನೆಯ ಮಹಾಯುದ್ಧ

ಎರಡನೇ ಮಹಾಯುದ್ಧದ ಸಮಯದಲ್ಲಂತೂ ಜನರು ಅನುಭವಿಸಿದ ಪಾಡು ಹೇಳತೀರದು. ಎಲ್ಲಿ ನೋಡಿದರೂ ಬಡತನ, ದಿನಬಳಕೆಯ ವಸ್ತುಗಳು ದುಬಾರಿ, ಒಂದು ಕಡೆಯಲ್ಲಿ ಯುದ್ಧ ಫಂಡುಗಳನ್ನು ಜನರಿಂದ ಬಲಾತ್ಕಾರವಾಗಿ ವಸೂಲು ಮಾಡುತ್ತಿದ್ದರು. ಇನ್ನೊಂದು ಕಡೆಯಿಂದ ಯುದ್ಧಕ್ಕೆ ಮಿಲಿಟರಿ ಭರ್ತಿ ಮಾಡಿಕೊಳ್ಳಲು ಆಸೆ ಆಮಿಷಗಳನ್ನೊಡ್ಡಿ ಅಥವಾ ಒತ್ತಾಯ ಪೂರ್ವಕವಾಗಿ ಹಳ್ಳಿಯ ಯುವಕರನ್ನು ಕರೆದೊಯ್ಯತ್ತಿದ್ದರು. ಕೋ ಚೆನ್ನಬಸಪ್ಪನವರ 'ಹಿಂದಿರುಗಿ ಬರಲಿಲ್ಲ' ಕಾದಂಬರಿಯು ಎರಡನೇ ಮಹಾಯುದ್ಧದ ಸಂದರ್ಭದಲ್ಲಿನ ಭಾರತದ ಚಿತ್ರಣವನ್ನು ಕಣ್ಣಿಗೆ ಕಟ್ಟುವಂತೆ ವಿವರಿಸುತ್ತದೆ. ಈ ಕಾದಂಬರಿಯ ನಾಯಕ ಜಯದೇವ ತನ್ನ ಮೊದಲನೆ ಆನರ್ಸ್ ಪದವಿ ಮುಗಿಸಿ ಊರಿಗೆ ಬರುತ್ತಾನೆ. ಊರಿನ ಚಿತ್ರಣವು ಅವನನ್ನು ಕಂಗೆಡಿಸುತ್ತದೆ. ಯಾರ ಮುಖದಲ್ಲಿಯೂ ಒಂದು ಹನಿ ರಕ್ತವಿಲ್ಲ; ಉಲ್ಲಾಸವಿಲ್ಲ. ಮಳೆ ಹೋಗಿ ಬೆಲೆ ಬತ್ತಿ ಉಣಲು ಕಾಳಿಲ್ಲದೆ ಊರೆಲ್ಲ ಸ್ಮಶಾನದಂತೆ ಕಾಣುತ್ತಿತ್ತು. ಜಯದೇವನಿಗೆ ಎಲ್ಲಿ ನೋಡಿದರೂ ಹಾಳು ಹಾಳು ಕಾಣಿಸುತಿತ್ತು. ಜನರು ಒಂದು ಹೊತ್ತಿನ ಊಟಕ್ಕಾಗಿ ಪರದಾಡುತ್ತಿರಬೇಕಾದರೆ ಯುದ್ಧ ನಿಧಿ ಸಂಗ್ರಹದ ಅಬ್ಬರ. ನಾಲ್ಕಾಣೆ ಕೂಲಿಯವನಿಂದ ಹಿಡಿದು ಎಂಥವನು ಯುದ್ಧಕ್ಕಾಗಿ ತನ್ನ ಕಾಣಿಕೆ ಸಲ್ಲಿಸಲೇಬೇಕಾಗಿತ್ತು. ದೇವರಿಗೆ ಮುಡಿಸುವ ಹೂವು ತಪ್ಪಿದರೂ ಯುದ್ಧ ನಿಧಿಗಾಗಿ ತಾನು ಸಲ್ಲಿಸಬೇಕಾದ ಕಾಣಿಕೆಯಲ್ಲಿ ಅರೆಕಾಸು ಕಡಿಮೆಯಾಗುವಂತಿರಲಿಲ್ಲ. ಜನ ತಮ್ಮ ಸಂಕಟವನ್ನು ಯಾರಲ್ಲೂ ಹೇಳಿಕೊಳ್ಳುವಂತೆಯೂ ಇರಲಿಲ್ಲ; ಸಹಿಸಿಕೊಳ್ಳುವಂತೆಯೂ ಇರಲಿಲ್ಲ. ಯುದ್ಧದಿಂದ ಜನರು ಕಂಗಾಲಾದ ಈ ಸಮಯದಲ್ಲೇ ಎಲ್ಲಾ ವಸ್ತುಗಳು ದುಬಾರಿಯಾಗಿದ್ದವು. ಯುದ್ಧ ಕಾಲದಲ್ಲಿ ಮೂರಾಣೆ ಕೊಟ್ಟರೆ ಒಂದು ಊಟ ದೊರೆಯುತ್ತಿದ್ದ ಹೋಟೆಲಿನಲ್ಲಿ ೧೦-೧೨ ಆಣೆ ತೆತ್ತರೂ ಹೊಟ್ಟೆ ತುಂಬ ಅನ್ನ ದೊರೆಯುವುದು ಕಷ್ಟವಾಗಿತ್ತು. ಧಾನ್ಯ ಸಂಗ್ರಹಕಾರರಿಗೂ ಕಳ್ಳಪೇಟೆಯ ಬಂಟರಿಗೂ ಇದೊಂದು ಸುಗ್ಗಿಯಾಗತೊಡಗಿತು. ಸರಕಾರಿ ನೌಕರರಲ್ಲಿ ಲಂಚವೂ ಬೆಲೆಯತೊಡಗಿತು.[೧೧೮]

ಯುದ್ಧ ಭಾರತಕ್ಕೂ ಆಕ್ರಮಿಸಬಹುದೆಂಬ ಭೀತಿಯಿಂದ ಶ್ರೀಮಂತರು ಬೇರೆದೇಶಗಳಿಗೆ ವಲಸೆ ಹೋಗಿದ್ದರು. ಆದರೆ ಬಡವರ ಬದುಕಿನಲ್ಲಿ ಮಾತ್ರ ಯಾವ ಬದಲಾವಣೆಯೂ ನಡೆದಿರಲಿಲ್ಲ. ಫುಟ್‌ಪಾತ್ ನಿವಾಸಿಗಳು ಮಾತ್ರ ತಮ್ಮ ಪೂರ್ವಾರ್ಜಿತ ಸಂಪತ್ತಾದ ಫುಟ್‌ಪಾತ್ ಬಿಟ್ಟು ಕದಲಿರಲಿಲ್ಲ. ಬ್ರಿಟಿಷರ ಬಂದೂಕದ ಗುಂಡು ಬಿದ್ದರೂ ಅವರಲ್ಲೇ; ಜಪಾನರ ಬಾಂಬು ಬಿದ್ದರೂ ಅವರು ಅಲ್ಲಿಯೇ. ಬಿಳಿಯ ಬ್ರಿಟಿಷರಾದರೂ ಅಷ್ಟೇ. ಕುಳ್ಳ ಜಪಾನರಾದರೂ ಅಷ್ಟೇ. ಅವರ ರಿಕ್ಷಾ ಎಳೆಯುವ ವಿಧಿಯೇನೂ ತಪ್ಪುವಂತಿರಲಿಲ್ಲ.[೧೧೯]

ದೇಶದ ತುಂಬ ಎಲ್ಲಿ ನೋಡಿದರೂ ಒಂದೇ ದೃಶ್ಯ, ನರಳುವ ಜನತೆ! ಎಲ್ಲಿ ಕೇಳಿದರೂ ಒಂದೇ ಚೀತ್ಕಾರ; ಅನ್ನ–ಅರಿವೆ, ಹಸಿವೆ–ದಾಹ! ದೌರ್ಜನ್ಯ–ತುಳಿತ! ಮಳೆಯೇ ನಿಂತು ಹೋಯಿತು! ಬೆಳೆಯೇ ಸುಟ್ಟು ಹೋದುವು! ಎಲ್ಲೋ ಎರಡು ಕಾಳು ಬೆಳೆದದ್ದು ಯುದ್ಧರಂಗಕ್ಕೆ ಸಾಗಿ ಹೋಯಿತು! ಸೈನಿಕರ ಸಮವಸ್ತ್ರಗಳಿಗಾಗಿಯೇ ಗಿರಣಿಗಳೆಲ್ಲ ಹಗಲಿರುಳು ದುಡಿದುವು! ಬಡಜನತೆಗೆ ಇನ್ನೆಲ್ಲಿಯ ವಸ್ತ್ರ? ವಸ್ತ್ರವಿದ್ದರೂ ಕೊಳ್ಳುವ ಶಕ್ತಿ ಎಲ್ಲಿದೆ? ಯುದ್ಧದ ಕಾಂಟ್ರ್ಯಾಕ್ಟ್ ತೆಗೆದುಕೊಂಡ ದಿವಾನ್ ಬಹದ್ದೂರ್, ಖಾನ್ ಬಹದ್ದೂರ್, ರಾವ್ ಸಾಹೇಬರುಗಳೆಲ್ಲರೂ ನೋಟಿನ ನಿಟ್ಟಿನ ಮೇಲೆಯೇ ತಮ್ಮ ಆಸನ ಮಾಡಿಕೊಂಡರು.[೧೨೦] ಊರಿನ ಬಡಜನರು ಸೀಮೆ ಎಣ್ಣೆ ಸಿಕ್ಕಲಾರದೆ ರಾತ್ರಿಯ ಹೊತ್ತು ಕತ್ತಲಲ್ಲೇ ಕೊಳ್ಳಿಯ ಬೆಳಕಿನಲ್ಲಿ ನೆಲಗಡಲೆ ಹುರಿದು ತಿಂದು ಬದುಕಲಾರಂಭಿಸಿದರು. ಹುಣಿಸೆ ಬೀಜವೇ ಬಹುಜನ ಬಡವರ ನಿತ್ಯದ ಆಹಾರವಾಯಿತು. ಅಲೆಬಳ್ಳಿಯ ಸೊಪ್ಪು ಕುಚ್ಚಿ ತಿನ್ನಲಾರಂಭಿಸಿದರು. ಅದಕ್ಕೆ ಒಂದು ಚಿಟಿಕೆ ಉಪ್ಪು ಸಿಕ್ಕವರೇ ಪುಣ್ಯವಂತರು. ಉಳ್ಳವರು ಬೀದಿಗೆಸೆದಿದ್ದ ಕೊಳೆತ ಮೆಣಸಿನಕಾಯಿಗಳನ್ನು ಆಯ್ದುಕೊಂಡು ಹೋಗಿ ಆ ಆಲೆಯ ಸೊಪ್ಪಿನ ಜೊತೆಗೆ ಹಾಕಿಕೊಂಡು 'ರುಚಿ' ಮಾಡಿಕೊಂಡು ತಿಂದರು! ಎಷ್ಟೋ ಜನರು ನೆರೆಯ ಪ್ರಾಂತ್ಯಕ್ಕೆ ಬದುಕಿಕೊಳ್ಳಲೆಂದು ಗುಳೆ ಹೋದರು! ನಡೆಯಲಾರದ ದನಗಳನ್ನು ಕೈಗೆ ಬಂದಷ್ಟಕ್ಕೆ ಮಾರಿ, ಕೊಳ್ಳುವವರಿಲ್ಲದಿದ್ದರೆ ಕಾಡುಪಾಲು ಮಾಡಿ ಹೊರಟುಹೋದರು. ತಿನ್ನಬಾರದ ದಿನಸನ್ನೆಲ್ಲ ತಿಂದು ಆರೋಗ್ಯ ಕೆಟ್ಟು ಬೇಧಿ ಜ್ವರ ಹಿಡಿದು ಎಷ್ಟೋ ಜನ ದಾರಿಯಲ್ಲೇ ಉದುರಿಹೋದರು![೧೨೧] ಈ ರೀತಿ ಜನರು ಯುದ್ಧದ ಕೆಟ್ಟ ಪರಿಣಾಮಗಳನ್ನು ಎದುರಿಸುತ್ತಿದ್ದರೂ ಕೂಡ ಸರಕಾರ ಯುದ್ಧ ಫಂಡಿಗಾಗಿ ಜನರನ್ನು ಪೀಡಿಸುತ್ತಿತ್ತು, ಶಿಕ್ಷಿಸುತ್ತಿತ್ತು. ಕೆಲವು ಮಂದಿ ಸ್ವಾರ್ಥಿಗಳಿಂದಾಗಿ ಕೃತಕ ಬರಗಾಲವು ದೇಶದಲ್ಲಿ ತಲೆದೋರಿತು. ಇಂತಹ ಸಂದರ್ಭದಲ್ಲಿ ಒಂದು ಕಡೆ ಜನರನ್ನೆಲ್ಲ ಸೈನ್ಯಕ್ಕೆ ಸೇರಿಸುವ ಯತ್ನವನ್ನು ಸರಕಾರ ಮಾಡುತ್ತದೆ. ಜನರು ಹೆದರಿ ಗುಡ್ಡದಲ್ಲಿ ಅವಿತುಕೊಳ್ಳುತ್ತಾರೆ. ಕಲ್ಕತ್ತದಲ್ಲಿ ಭೀಕರ ಬರಗಾಲ ಆರಂಭವಾಗುತ್ತದೆ. ಎಲ್ಲಿ ನೋಡಿದರಲ್ಲಿ ಅನ್ನದ ಕೂಗು ಕೇಳಿಸುತ್ತದೆ. ಅನ್ನಕ್ಕಾಗಿ ಕೂಗುತ್ತಿರುವ ಜನತೆಯ ಮೇಲೆ ಗುಂಡು ಹಾರಿಸುತ್ತದೆ ಸರಕಾರ. ಇಂತಹ ಕ್ರೌರ್ಯವು ಬ್ರಿಟಿಷರನ್ನು ಭಾರತದಿಂದ ಓಡಿಸುವ ನಿರ್ಧಾರವನ್ನು ಜನಮನದಲ್ಲಿ ಗಟ್ಟಿಗೊಳಿಸುತ್ತದೆ.

೧೯–೨೦ನೇ ಶತಮಾನದಲ್ಲಿ ಉಂಟಾದಷ್ಟು ಸಾಮಾಜಿಕ ಬದಲಾವಣೆಗಳು, ಗೊಂದಲಗಳು, ವಿಪ್ಲವಗಳು, ಹೋರಾಟಗಳು ಇತಿಹಾಸದ ಪುಟಗಳನ್ನು ಗಮನಿಸಿದರೆ ಇನ್ನು ಯಾವತ್ತೂ ನಡೆದಿಲ್ಲವೆಂದೇ ಹೇಳಬೇಕು. ವಿದ್ಯಾಭ್ಯಾಸದಲ್ಲಿ ಉಂಟಾದ ಪಲ್ಲಟವು ಜನರ ಆಲೋಚನಾಕ್ರಮವನ್ನೇ ಪಲ್ಲಟಿಸಿತು. ಆಧುನಿಕತೆಯನ್ನು ಮೈಗೂಡಿಸಿಕೊಳ್ಳುತ್ತಲೇ ರಾಷ್ಟ್ರೀಯ ಮನೋಭಾವವು ಜನರಲ್ಲಿ ಬೆಳೆಯತೊಡಗಿತು. ಜನರಲ್ಲುಂಟಾದ ಈ ಬದಲಾವಣೆಗೆ ಕೇವಲ ಇಂಗ್ಲಿಷ್ ವಿದ್ಯಾಭ್ಯಾಸವೊಂದೇ ಕಾರಣವಲ್ಲ, ಗಾಂಧೀಜಿಯವರ ಉದಾರ ಚಿಂತನೆಯು ಕೂಡ ಒಂದು ಪ್ರಮುಖ ಕಾರಣವಾಗಿದೆ.

*****

# ಟಿಪ್ಪಣಿಗಳು

[೧] ವ್ಯಾಸರಾಯ ಬಲ್ಲಾಳ,ಹೆಜ್ಜೆ ಪು. ೨೦
[೨] ಬಸವರಾಜ ಕಟ್ಟೀಮನಿ, ಸ್ವಾತಂತ್ರ್ಯದೆಡೆಗೆ, ಪು. ೪೯
[೩] ತ.ರಾ.ಸು, ರಕ್ತತರ್ಪಣ ಪು. ೩೩
[೪] ಕೋ ಚೆನ್ನಬಸಪ್ಪ, ಬೇಡಿ ಕಳಚಿತು ದೇಶ ಒಡೆಯಿತು, ಪು. ೪೯೧
[೫] ವಡೇಗನಹಳ್ಳಿ ಅಶ್ವಥನಾರಯಣ, ಬಿಡುಗಡೆಯ ಬೆಲೆ, ಪು. ೨೬
[೬] ವಾಸುದೇವಾಚಾರ್ಯ ಬುರ್ಲಿ, ಸೆರೆಮನೆಯ ಶೂರ, ಪು. ೨೦
[೭] ಅದೇ,ಪು. ೬೨
[೮] ಅದೇ,ಪು ೧೫೩
[೯] ಕೃಷ್ಣಮೂರ್ತಿ ಪುರಾಣಿಕ, ಹಬ್ಬಿದ ಬಳ್ಳಿ, ಪು. ೧೩೫
[೧೦] ಬಸವರಾಜ್ ಆರ್, ಈಸೂರಿನ ಚಿರಂಜೀವಿಗಳು, ಪು. ೩,೪,೫
[೧೧] ಪ.ಸು.ಭಟ್ಟ, ಆತ್ಮಾರ್ಪಣೆ, ಪು.೩
[೧೨] ಅದೇ, ಪು. ೮೧
[೧೩] ಕೋ.ಚೆನ್ನಬಸಪ್ಪ, ಹಿಂದಿರುಗಿ ಬರಲಿಲ್ಲ, ಪು.೬೭
[೧೪] ಅದೇ, ಪು . ೧೫೫
[೧೫] ಅದೇ, ಪು. ೩೬೭, ೩೬೮, ೩೬೯
[೧೬] ಅದೇ, ಪು. ೩೪೧
[೧೭] ಗೊರೂರು ರಾಮಸ್ವಾಮಿ ಅಯ್ಯಂಗಾರ್, ಮೆರೆವಣಿಗೆ ಪು. ೩೬೮,
[೧೮] ಹೋ. ಶ್ರೀನಿವಾಸಯ್ಯ,ಉಪ್ಪಿನ ಸತ್ಯಾಗ್ರಹ ಮತ್ತು ಮೈಲಾರ ಮಹಾದೇವ, ಪು. ೮
[೧೯] ಅದೇ,ಪು .೯
[೨೦] ಅದೇ, ಪು. ೩೬೯
[೨೧] ಅದೇ, ಪು.೩೭೦
[೨೨] ಅದೇ, ಪು. ೩೭೩
[೨೩] ಅದೇ, ಪು. ೩೭೪
[೨೪] ಕೋ.ಚೆನ್ನಬಸಪ್ಪ, ಬೇಡಿ ಕಳಚಿತು ದೇಶ ಒಡೆಯಿತು, ಪು. ೩೩೮
[೨೫] ಅದೇ, ಪು.೩೩೮
[೨೬] ಅದೇ, ಪು. ೩೩೯-೩೪೦
[೨೭] ಅದೇ, ಪು. ೩೪೩
[೨೮] ಶಂಕರನಾರಾಯಣ ರಾವ್ ಸ್ವಾತಂತ್ರ್ಯಗಂಗೆಯ ಸಾವಿರ ತೊರೆಗಳು, ಪು. ೧೬೯
[೨೯] ಅದೇ, ಪು. ೩೭೫
[೩೦] ಶ್ರೀನವಾಸ ವೈದ್ಯ, ಹಳ್ಳ ಬಂತು ಹಳ್ಳ, ಪು.ಸಂ ೨೨೦
[೩೧] ಅದೇ, ಪು. ೨೨೦
[೩೨] ಅದೇ, ಪು.'೦ ೨೨೦
[೩೩] ಆನಂದ ಕಂದ, ಮಗಳ ಮದುವೆ ಪು.ಸಂ ೨೧

[೩೪] ಅದೇ, ಪು. ೩೭
[೩೫] ಗೊರೂರು ರಾಮಸ್ವಾಮಿ ಅಯ್ಯಂಗಾರ್ , ಮೆರವಣಿಗೆ ಪು ೩೯೧
[೩೬] ಅದೇ, ಪು. ೩೯೪
[೩೭] ಶಿವರಾಮ ಕಾರಂತ, ಔದಾರ್ಯದ ಉರುಳಲ್ಲಿ ಪು. ೨೪೪
[೩೮] ಕೊ ಚೆನ್ನಬಸಪ್ಪ, ಬೇಡಿ ಕಳಚಿತು ದೇಶ ಒಡೆಯಿತು ಪು ೮೧೫
[೩೯] ಅದೇ, ಪು. ೮೨೦
[೪೦] ಎ.ಎಂ.ಇನಾಂದರ್, ಮೂರಾಬಟ್ಟೆ, ಪು
[೪೧] ಅ.ನ.ಕೃ, ಅಮರ ಆಗಸ್ಟ್, ಪು. ೯೭
[೪೨] ವ್ಯಾಸರಾಯ ಬಲ್ಲಾಳ, ಹೆಜ್ಜೆ ಪು. ೪೩೭
[೪೩] ಬಸವರಾಜ ಕಟ್ಟೀಮನಿ, ಮಾಡಿ ಮಡಿದವರು, ಪು ೧೩
[೪೪] ಅದೇ, ಪು. ೩೪
[೪೫] ಅದೇ, ಪು. ೨೦೦
[೪೬] ಅದೇ, ಪು. ೪೦
[೪೭] ಮಿರ್ಜಿ ಅಣ್ಣರಾಯ, ಪ್ರತಿಸರಕಾರ, ಪು. ೮೧
[೪೮] ಅದೇ, ಪು. ೮೭
[೪೯] ಬಸವರಾಜ ಕಟ್ಟೀಮನಿ, ಮಾಡಿ ಮಡಿದವರು, ಪು ಸಂ
[೫೦] ರಾಜಾರಾಮ್ ಮುಜಲೀಕರ್,ಶ್ರದ್ಧಾಂಜಲಿ, ಪು. ೧೬೩
[೫೧] ಜೀ.ಶಂ ಪರಮಶಿವಯ್ಯ(ಡಾ.), ಡಾ. ಗೊರೂರು ಜೀವನ ಸಾಧನೆ ಪು . ೨೩
[೫೨] ಅ.ನ.ಕೃ, ಅಮರ ಆಗಸ್ಟ್ ಪು. ೧೧೨
[೫೩] ಅದೇ, ಪು. ೧೧೩
[೫೪] ವಸುದೇವ ಭೂಪಾಲನಂ, ಆಂದೋಲನ ಪು. ೯
[೫೫] ಅದೇ, ಪು. ೨೨
[೫೬] ಅದೇ, ಪು. ೨೮
[೫೭] ಅದೇ, ಪು. ೫೮
[೫೮] ಎಸ್. ಆರ್.ರಾಮಸ್ವಾಮಿ, ಸ್ವಾತಂತ್ರ್ಯೋದಯದ ಮೈಲಿಗಲ್ಲುಗಳು ಪು .೧೯೩
[೫೯] ಮಿರ್ಜಿ ಅಣ್ಣರಾಯ, ಪ್ರತಿಸರಕಾರ ಪು. ಸಂ ೯೮
[೬೦] ಅದೇ, ಪು. ೬೧
[೬೧] ಅದೇ, ಪು. ೬೬
[೬೨] ಮಿರ್ಜಿ ಅಣ್ಣರಾಯ, ಪ್ರತಿಸರಕಾರ, ಪು. ೧೧೦
[೬೩] ಆರ್.ಬಸವರಾಜ್, ಈಸೂರಿನ ದುರಂತ ಪು. ೧೨೨
[೬೪] ಅದೇ, ಪು.
[೬೫] ಅದೇ, ಪು. ೧೫೫
[೬೬] ಗೊರೂರು ರಾಮಸ್ವಾಮಿ ಅಯ್ಯಂಗಾರ್, ಮೆರವಣಿಗೆ ಪು. ೫೪೦
[೬೭] ಎಚ್.ವೈ ರಾಜಗೋಪಾಲ್, ಗಾಂಧಿಯುಗಕ್ಕೆ ಕನ್ನಡಿ, ಪು.೧೫೪-೧೫೫
[೬೮] ಅ.ನ.ಕೃ,ಅಮರ ಆಗಸ್ಟ್, ಪು.ಸಂ ೫೯
[೬೯] ಕೃಷ್ಣಮೂರ್ತಿ ಪುರಾಣಿಕ, ಹಬ್ಬಿದ ಬಳ್ಳಿ, ಪು. ೧೩೬

೭೦ ವ್ಯಾಸರಾಯ ಬಲ್ಲಾಳ, ಹೆಜ್ಜೆ, ಪು ೧೩
೭೧ ಕೋ ಚೆನ್ನಬಸಪ್ಪ, ಬೇಡಿ ಕಳಚಿತು ದೇಶ ಒಡೆಯಿತು, ಪು. ೩೮
೭೨ ಅದೇ, ಪು. ೩೮
೭೩ ಅದೇ, ಪು. ೪೭
೭೪ ವ್ಯಾಸರಾಯ ಬಲ್ಲಾಳ,ಹೆಜ್ಜೆ,  ಪು. ೧೫೫
೭೫ ವ್ಯಾಸರಾಯ ಬಲ್ಲಾಳ, ಹೆಜ್ಜೆ ಪು. ೪೪೧
೭೬ ಅ.ನ.ಕೃ, ಅಮರ ಆಗಸ್ಟ್ ,ಪು. ೫೯
೭೭ ಕೋ ಚೆನ್ನಬಸಪ್ಪ, ಬೇಡಿ ಕಳಚಿತು ದೇಶ ಒಡೆಯಿತು, ಪು. ೨೧೭
೭೮ ಅದೇ, ಪು. ೧೨೬-೧೨೭
೭೯ ಅದೇ, ಪು. ೨೫೮
೮೦ ಅದೇ, ಪು. ೨೫೯
೮೧ ಅದೇ, ಪು. ೨೫೯
೮೨ ಅದೇ, ಪು. ೩೦೯
೮೩ ಅದೇ, ಪು. ೨೧೭
೮೪ ಅದೇ, ಪು. ೪೨೫
೮೫ ಅದೇ, ಪು. ೪೭೭
೮೬ ಅದೇ, ಪು. ೪೫೯
೮೭ ಅದೇ, ಪು. ೪೫೮
೮೮ ಅದೇ, ಪು. ೪೫೯
೮೯ ಅದೇ, ಪು. ೫೫೫
೯೦ ಅದೇ, ಪು. ೬೦೩
೯೧ ಅದೇ, ಪು. ೬೬೬
೯೨ ಅದೇ, ಪು. ೬೬೬
೯೩ ಅದೇ, ಪು. ೫೮೧
೯೪ ಆರ್. ಬಸವರಾಜ್, ಈಸೂರಿನ ಚಿರಂಜೀವಿಗಳು, ಪು. ೧೪೪
೯೫ ಅದೇ, ಪು. ೧೪೫
೯೬ ಸೂರ್ಯನಾರಾಯಣ ಕಾಮತ್, ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಪು. ೪೮೦
೯೭ ಮಿರ್ಜಿ ಅಣರಾಯ, ರಾಷ್ಟ್ರ ಪುರುಷ, ಪು. ೭೧೨
೯೮ ಕೊ ಚೆನ್ನಬಸಪ್ಪ, ಬೇಡಿ ಕಳಚಿತು ದೇಶ ಒಡೆಯಿತು, ಪು. ೪೦೬
೯೯ ಅದೇ, ಪು.  ೪೭೭
೧೦೦ ಅದೇ, ಪು. ೫೮೨
೧೦೧ ವಾಸುದೇವಾಚಾರ್ಯ ಬುರ್ಲಿ, ಸೆರೆಮನೆಯ ಶೂರ, ಪು. ೯೦
೧೦೨ ಆನಂದ ಕಂದ, ಮಗಳ ಮದುವೆ, ಪು. ೧೦೫
೧೦೩ ರಜಾರಾಮ ಮಜಲೀಕರ, ಶ್ರದ್ಧಾಂಜಲಿ, ಪು. ೧೪೪
೧೦೪ ರಜಾರಾಮ ಮಜಲೀಕರ, ಶ್ರದ್ಧಾಂಜಲಿ, ಪು. ೧೪೫
೧೦೫ ಶ್ರೀನಿವಾಸ ಹಾವನೂರು, ಹೊಸಗನ್ನಡದ ಅರುಣೋದಯ, ಪು.೮೯

೧೦೬ ಅದೇ, ಪು.೧೦
೧೦೭ ಅಯ್ಯಂಗಾರ್ ರಾಮಸ್ವಾಮಿ ಗೊರೂರು, ಮೆರವಣಿಗೆ, ಪು. ೨೫೦
೧೦೮ ಶ್ರೀನಿವಾಸ ವೈದ್ಯ, ಹಳ್ಳ ಬಂತು ಹಳ್ಳ, ಪು, ೧೭೧
೧೦೯ ವ್ಯಾಸರಾಯ ಬಲ್ಲಾಳ ,ಹೆಜ್ಜೆ ಪು.೨೩
೧೧೦ ಅದೇ, ಪು. ೫೨
೧೧೧ ಅದೇ, ಪು. ೧೭೦
೧೧೨ ಬಸವರಾಜ ಕಟ್ಟೀಮನಿ, ಸ್ವಾತಂತ್ರ್ಯದೆಡೆಗೆ, ಪು. ೧೯೯
೧೧೩ ಗೊರೂರು ರಾಮಸ್ವಾಮಿ ಅಯ್ಯಂಗಾರ್, ಮೆರವಣಿಗೆ, ಪು. ೯೩
೧೧೪ ಅದೇ, ಪು. ೨೧೩
೧೧೫ ಅದೇ, ಪು. ೨೧೪
೧೧೬ ಅದೇ, ಪು.  ೨೧೫
೧೧೭ ಅದೇ, ಪು. ೨೧೫
೧೧೮ ಕೋ ಚೆನ್ನಬಸಪ್ಪ, ಹಿಂದಿರುಗಿ ಬರಲಿಲ್ಲ, ಪು. ೧೩೮
೧೧೯ ಅದೇ, ಪು. ೧೪೦
೧೨೦ ಅದೇ, ಪು. ೧೪೧
೧೨೧ ಅದೇ, ಪು. 142

# ಅಧ್ಯಾಯ - ೫

# ಜನಸಾಮಾನ್ಯರು ಹಾಗೂ ಮಹಿಳೆಯರ ಪಾತ್ರ

## ಜನಸಾಮಾನ್ಯರು

ಸ್ವಾತಂತ್ರ್ಯ ಚಳುವಳಿಯು ಸಾಮಾನ್ಯ ಜನರಿಂದಲೇ ತೀವ್ರತೆಯನ್ನು ಪಡೆದುಕೊಂಡಿತು. ಕೆಲವೇ ಕೆಲವು ಪ್ರಮುಖರ, ಕೆಲವೇ ಕೆಲವು ಕ್ರಾಂತಿಕಾರಿಗಳ ಚಳುವಳಿಯಾಗಿದ್ದ ಇದೊಂದು ಗಾಂಧೀಜಿಯ ಪ್ರವೇಶದ ನಂತರ ಸಮಷ್ಟಿಯ ಚಳುವಳಿಯಾಗಿ ಮಾರ್ಪಾಡು ಹೊಂದಿತು. ಗಾಂಧೀಜಿಯ ಅಹಿಂಸಾ ತತ್ವದಿಂದ ಪ್ರೇರಣೆ ಪಡೆದುಕೊಂಡ ಭಾರತದ ಮೂಲೆ ಮೂಲೆಗಳ ಜನಸಮೂಹವು ಚಳುವಳಿಗೆ ಧುಮುಕಿತು. ಹೆಸರು ಕೀರ್ತಿಯ ಆಸೆ ಇವರಿಗೆ ಇರಲಿಲ್ಲ. ಭಾರತ ಸ್ವತಂತ್ರವಾದರೆ ಇವರಿಗೇನೂ ಅಂತಹ ದೊಡ್ಡ ಪದವಿಯೂ ದೊರಕುವ ಸಾಧ್ಯತೆಯಿರಲಿಲ್ಲ. ಅಥವಾ ಅಂತಹ ಆಸೆಯು ಇವರಿಗಿರಲಿಲ್ಲ. ಭಾರತ ಮಾತೆ ಸ್ವತಂತ್ರಳಾಬೇಕೆಂಬುದು ಮಾತ್ರ ಇವರ ಏಕಮಾತ್ರ ಧ್ಯೇಯವಾಗಿತ್ತು. ಅದಕ್ಕಾಗಿ ಇವರು ಯಾವ ತ್ಯಾಗಕ್ಕೂ ಸಿದ್ಧರಿದ್ದರು. ಅವರ ಪಾಲಿಗೆ ಗಾಂಧೀಜಿಯೊಬ್ಬರು ಪವಾಡಪುರುಷರಾಗಿದ್ದರು. ಗಾಂಧೀಜಿಯ ಮುಖಂಡತ್ವದಲ್ಲಿ ಭಾರತ ದೇಶವು ಬಿಡುಗಡೆಯಾಗುವುದರಲ್ಲಿ ಅವರಿಗೆ ಯಾವ ಸಂಶಯವೂ ಇರಲಿಲ್ಲ. ಹಳ್ಳಿಯ ಮುಗ್ಧ ಜನರು ಪಟ್ಟಣದ ವಿದ್ಯಾವಂತರಂತೆ ಗಾಂಧಿಯ ನಿರ್ಧಾರಗಳ ಹಾಗೂ ಅವರ ತತ್ವಗಳ ಸರಿ-ತಪ್ಪುಗಳನ್ನು ವಿಮರ್ಶಿಸಲು ಹೋಗದೆ ಅವರು ಹೇಳಿದ ಮಾರ್ಗವನ್ನು ಅನುಸರಿಸಲು ಅರಂಭಿಸಿದರು. ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದ ಸಾಮಾನ್ಯ ಜನರ ಪಾತ್ರವು ನಮ್ಮ ಚರಿತ್ರೆಯ ಪಸ್ತಕಗಳಲ್ಲಿ ದಾಖಲಾಗದಿದ್ದರೂ ನಮ್ಮ ಅನೇಕ ಕಾದಂಬರಿಗಳು ಮಾತ್ರ ಅಂತಹ

ಸಾಮಾನ್ಯ ಜನರ ಅಸಾಮಾನ್ಯ ಹೋರಾಟದ ಕತೆಯನ್ನು ನಮಗೆ ತೆರೆದಿಡುವ ಕೆಲಸವನ್ನು ಮಾಡಿವೆ.

'ಹೆಜ್ಜೆ' ಕಾದಂಬರಿಯಲ್ಲಿ ಕೂಡಾ ಸಾವಿತ್ರಿಯ ಶಂಕರ ಚಿಕ್ಕಪ್ಪ, ಪಾರ್ವತಿಯ ಸಾಕುಮಗ ಮಾಣು, ನಾಗಿಯ ತಮ್ಮ ವೇಣು, ಇವರೆಲ್ಲರೂ ಗಾಂಧೀಜಿಯ ಸತ್ಯ, ಅಹಿಂಸೆಯನ್ನು ನಂಬಿ ಕಾಂಗ್ರೆಸ್ಸನ್ನು ಸೇರಿ ಜೈಲುವಾಸ ಅನುಭವಿಸುತ್ತಾರೆ. ಸಾವಿತ್ರಿಯ ಗಂಡ ವಿದ್ಯಾಧರ ಮುಂಬಯಿಯ 'ಚಲೇಜಾವ್' ಚಳುವಳಿ ಸೇರಿ ಹುತಾತ್ಮನಾಗುತ್ತಾನೆ.

'ಮಾಡಿ ಮಡಿದವರು' ಕಾದಂಬರಿಯಲ್ಲಿ ಕಲ್ಲಾಪುರದ ಸಾಮಾನ್ಯ ರೈತನಾದ ಶೇಖರಪ್ಪ ಜನರನ್ನು ೧೯೪೨ರ ಚಳುವಳಿಗೆ ಒಗ್ಗೂಡಿಸುವ ಕೆಲಸವನ್ನು ಆರಂಬಿಸುತ್ತಾನೆ. ರಾಣಿ ಚೆನ್ನಮ್ಮನ ಆಣೆಯಾಗಿ ಕಲ್ಲಾಪುರದ ಜನ 'ಮಾಡುವೆವು' ಇಲ್ಲ 'ಮಡಿಯುವೆವು' ಎಂಬ ಪ್ರತಿಜ್ಞೆಗೆ ಬದ್ಧರಾಗುತ್ತಾರೆ. ಇದೇ ಕಾದಂಬರಿಯಲ್ಲಿ ಶಂಕರಪ್ಪನಂತಹ ಬೆಳೆದು ಸಂಪಾದಿಸುವ ಮಗನನ್ನು ತುಟಿಪಿಟಿಕೆನ್ನದೆ ಚಳುವಳಿಗೆ ಬಿಟ್ಟುಕೊಟ್ಟು ತಾವು ಕಷ್ಟವನ್ನು ಅನುಭವಿಸಿದರೂ ದೇಶ ಸ್ವತಂತ್ರವಾಗಲೆಂದು ಹಾರೈಸಿದ ಅವನ ಮನೆಯವರ ರಾಷ್ಟ್ರಾಭಿಮಾನವೇನೂ ಕಡಿಮೆಯದಲ್ಲ.

ಸ್ವಾತಂತ್ರ್ಯ ಚಳುವಳಿಯಲ್ಲಿ ಹಲವಾರು ಮಂದಿ ಅಧ್ಯಾಪಕರ ಪಾತ್ರ ಬಹಳ ಮಹತ್ವದ್ದು. ಇವರು ಹಳ್ಳಿಯ ಜನರನ್ನು ಹಾಗೂ ತಮ್ಮ ವಿದ್ಯಾರ್ಥಿಗಳನ್ನು ಬೇರೆ ಬೇರೆ ರೀತಿಯಲ್ಲಿ ಒಗ್ಗೂಡಿಸುವ ಕಾರ್ಯವನ್ನು ಮಾಡುತ್ತಾರೆ. ಪತ್ರಿಕೆಯನ್ನು ಓದಿ ಹೇಳುವ ಮೂಲಕ ಇರಬಹುದು, ತಮ್ಮ ಮೊನಚಾದ ವಾಗ್ವೈಖರಿಯ ಮೂಲಕ ಇರಬಹುದು, ರಾತ್ರಿ ಶಾಲೆಗಳ ಮೂಲಕ ಇರಬಹುದು; ಹೀಗೆ ಯಾವುದಾದರೊಂದು ಮಾಧ್ಯಮದ ಮೂಲಕ ಬಹಳಷ್ಟು ಮಂದಿ ಅಧ್ಯಾಪಕರು ಪರೋಕ್ಷವಾಗಿ ಚಳುವಳಿಯನ್ನು ಪ್ರೋತ್ಸಾಹಿಸುತ್ತಾರೆ. 'ಮಾಡಿ ಮಡಿದವರು' ಕಾದಂಬರಿಯಲ್ಲಿ ಶಂಕರಪ್ಪ ಮಾಸ್ತರು ತಮ್ಮ ಲಾವಣಿಯ ಮೂಲಕ ಯುವಕರನ್ನು ಒಗ್ಗೂಡಿಸುತ್ತಾರೆ. ಕಲ್ಲಾಪುರದ ಜನತೆಯೇ ಅವರ ಲಾವಣಿಗೆ ರೋಮಾಂಚನಗೊಳ್ಳುತ್ತಾರೆ.

ಹೊಲಾ ಬಿಟ್ಟು ಏಳಿರೋ । ತೋಟಾ ಬಿಟ್ಟು ಏಳಿರೋ
ಊಟಾ ಬಿಟ್ಟು ಏಳಿರೋ । ತಂದೆ ಗಾಂಧಿ ಒಂದೇ ಒಂದು
ಮಾತು ನಿಮಗೆ ಹೇಳಿದಾನೆ । ಕಿವಿಗೊಟ್ಟು ಕೇಳಿರೋ ।
ಮನಗೊಟ್ಟು ಕೇಳಿರೋ[೧]

ಈ ಲಾವಣಿ ಕಲ್ಲಾಪುರದ ಜನರ ಮೇಲೆ ಅತೀ ಪವಾಡ ಸದೃಶ್ಯವಾದ ಪ್ರಭಾವವನ್ನು ಬೀರುತ್ತದೆ. ಹಳ್ಳಿಯ ಸಾಮಾನ್ಯ ರೈತರೆಲ್ಲರಿಗೂ ಗಾಂಧಿ ದೇವತಾ ಸ್ವರೂಪಿಯಾಗಿದ್ದರು. ಮುದುಕ ಬಾಳಪ್ಪನಿಗಂತೂ ಗಾಂಧಿಯೆಂದರೆ ಪ್ರಾಣ. "ಮಾಡಿರಿ, ಮಾಡಿರಿ, ನಾನೂ ಬರ್ತೀನಿ ನಿಮ್ಮ ಸಂಗಡ. ಆ ಕೆಂಪು ಮೋತೀ ಮಂದಿನ್ನ ಹೊರಗೆ ಹಾಕಿಬಿಡೋಣ ಈ ಸರತಿ" ಎಂದು ಬಾಳಪ್ಪನಂತಹ ಮುದುಕರೇ ನುಡಿಯುತ್ತಾರೆ. ಮುದುಕ ಬಾಳಪ್ಪನನ್ನು ದೇಸಾಯಿ ಮತ್ತು

ಪೊಲೀಸರು ಹಿಡಿದು ಅವನನ್ನು ಚಳುವಳಿಯ ವಿಷಯ ಬಾಯಿಬಿಡಿಸಲು ಪ್ರಯತ್ನಿಸುತ್ತಾರೆ. ಆದರೆ ಏಟಿನ ಮೇಲೆ ಏಟು ಬಿದ್ದರೂ ಅವನು ಬಾಯಿ ಬಿಡಲಿಲ್ಲ. ಕೊನೆಗೆ ಅವನಿಗೆ ಬಹುಮಾನದ ಆಸೆಯನ್ನು ತೋರಿಸಲಾಯಿತು. ಆಗ ಆತ ಕೆರಳಿದ ಹುಲಿಯಂತೆ ಕನಲಿ ಒಂದೇ ಮಾತಿನಲ್ಲಿ ಉತ್ತರವಿತ್ತ–"ಕಿತ್ತೂರ ಚೆನ್ನವ್ವನ ನಾಡನಾಗ ಹುಟ್ಟಿ ಬೆಳೆದೀನಿ ನಾನು. ಇಂಥಾ ಹೇಸಿ ಕೆಲಸ ನಮ್ಮ ಮಂದಿ ಯಾರೂ ಮಾಡಾಕಿಲ್ಲ. ನಾಲಿಗೆ ಬಿಗಿ ಹಿಡಿದು ಮಾತಾಡಿರಿ". ಈ ರೀತಿಯ ನಿಷ್ಠೆಯ ಹಲವಾರು ಮಂದಿ ಭಾರತದಲ್ಲಿದ್ದುರಿಂದಲೇ ಅಂತಹ ಚಾಣಾಕ್ಷ ಬ್ರಿಟಿಷರು ಕೊನೆಗೂ ಇಲ್ಲಿ ರಾಜ್ಯಭಾರವನ್ನು ಮಾಡುವುದು ಅಸಾಧ್ಯದ ಕೆಲಸವೆಂದು ಮನಗಂಡರು.

ಈ ಕಾದಂಬರಿಯಲ್ಲಿ ೧೦೦–೧೫೦ ವರ್ಷಗಳ ಹಿಂದೆ ಕಿತ್ತೂರಿನ ರಾಣಿ ಚೆನ್ನಮ್ಮಳ ಶೌರ್ಯವು ಎಲ್ಲಾ ಚಳುವಳಿಗಾರರಿಗೆ ಸ್ಫೂರ್ತಿಯನ್ನು ನೀಡುವ ವೇಗವರ್ಧಕದಂತೆ ಕೆಲಸಮಾಡುವುದನ್ನು ನಾವು ಕಾಣಬಹುದು. ಹಿಂದಿನ ಹೋರಾಟದ ಕಿಡಿಯೊಂದು ಉರಿಯುತ್ತಲೇ ಇದ್ದು ಮುಂದಿನ ಹೋರಾಟಗಾರರಿಗೆ ಪ್ರೇರಣೆಯನ್ನು ನೀಡುತ್ತದೆ. ಸ್ವಾತಂತ್ರ್ಯ ಬಂದರೆ ಹಳ್ಳಿಯವರಿಂದ ಬರಬೇಕೆಂದು ಕಲ್ಲಾಪುರದ ಸ್ವಾಮೀಜಿ ಬಹಳ ಮಾರ್ಮಿಕವಾಗಿ ಹೇಳುತ್ತಾರೆ– "ನಿಮ್ಮಂಥ ಹಳ್ಳಿಯ ಬಂಟರೇ ಮಾಡಬೇಕು. ನಿಮ್ಮಿಂದಲೇ ಸ್ವಾತಂತ್ರ್ಯ ಬರುವ ಹಾಂಗಾಗಬೇಕು. ನೀವು ತಂದು ಕೊಡುವ ಸ್ವಾತಂತ್ರ್ಯವನ್ನು ಎಲ್ಲರೂ ಅನುಭವಿಸಲಿ."[೨] ನಿಜವಾದ ಸ್ವಾತಂತ್ರ್ಯ ಹೋರಟಗಾರರು ಹಳ್ಳಿಯ ರೈತರೇ ಹೊರತು ಪಟ್ಟಣದ ನಾಜೂಕಿನ ಜನವರ್ಗವಲ್ಲ.

ಈ ಚಳುವಳಿಯಲ್ಲಿ ಶೇಖರಪ್ಪನ ಕಾಲಿಗೆ ಪೊಲೀಸಿನವರ ಗುಂಡು ತಾಗುತ್ತದೆ. ಅಂತಹ ಸಂದರ್ಭದಲ್ಲಿಯೂ ಶೇಖರ ಹೇಮಾಳಲ್ಲಿ ಹೇಳುವ ಮಾತು ಅವನ ಹೇರಳವಾದ ದೇಶಭಕ್ತಿ, ಭಾರತವನ್ನು ಹೇಗಾದರೂ ಮಾಡಿ ಪರಕೀಯರ ಬಂಧನದಿಂದ ಮುಕ್ತಗೊಳಿಸಬೇಕೆಂಬ ಉತ್ಕಟೇಚ್ಛೆಯನ್ನು ಕಾಣಬಹುದು–"ಹಾಂಗೆಲ್ಲ ಮಾತನಾಡಬ್ಯಾಡ ಹೇಮಕ್ಕ. ಈಗ ಗೋಕಾವಿಗೆ ಹೋಗುತ್ತೀವಿ. ಅಲ್ಲೊಬ್ಬ ನಮ್ಮ ಮಿತ್ರ ಡಾಕ್ಟರ ಇದ್ದಾರ. ಅವರು ನಿನ್ನ ತೋಳಿನಾಗ ಗುಂಡು ತೆಗೆದು ನೆಟ್ಟಗ ಮಾಡತಾರ. ನನಗೂ ನೆಟ್ಟಗಾದೀತು, ಸ್ವಲ್ಪ ಶಕ್ತಿ ಬರುವ ತನಕ ಅಲ್ಲಿದ್ದು ಮತ್ತೆ ಗುಂಪು ಕೂಡಿಸೋಣ, ಮತ್ತೆ ಕೆಲಸ ಶುರು ಮಾಡೋಣ. ಇನ್ನೂ ಮುಗೀಲಿಲ್ಲ ನಮ್ಮ ಯುದ್ಧ ಹೇಮಾ! ಇನ್ನೂ ಮುಗೀಲಿಲ್ಲ. . . . .![೩] ಎಂಬುದಾಗಿ ಹೇಳುತ್ತಾಲೇ ಪ್ರಾಣ ಬಿಡುತ್ತಾನೆ.

ಕೆಲವೇ ಕೆಲವು ಮಂದಿ ವಿದ್ಯಾವಂತರು ಯಾವುದೋ ಹಳ್ಳಿಗಳಿಗೆ ತೆರಳಿ ಅಲ್ಲಿಯ ಅನಕ್ಷರಸ್ಥ ಜನರಿಗೆ ಸ್ವಾತಂತ್ರ್ಯದ ಮಹತ್ವವನ್ನು ಮನಗಾಣಿಸಿ ಅಲ್ಲೊಂದು ಪುಟ್ಟ ಹೋರಾಟಗಾರರ ಸೈನ್ಯವನ್ನು ಕಟ್ಟಿ ಬ್ರಿಟಿಷರ ವಿರುದ್ಧ ಸೆಣಸಿದ ಹಲವಾರು ನಿದರ್ಶನಗಳನ್ನು ನಾವು ಕಾದಂಬರಿಯಲ್ಲಿ ಕಾಣುತ್ತೇವೆ. 'ರಕ್ತತರ್ಪಣ' ಕಾದಂಬರಿಯಲ್ಲಿ ಚಂದ್ರಶೇಖರನೆಂಬ ಯುವಕ ತನ್ನ ಸ್ನೇಹಿತ ಸೋಮಶೇಖರ ಲಾಠಿಚಾರ್ಜಿಗೆ ಒಳಗಾಗಿ ಸತ್ತ ಸುದ್ದಿ ತಿಳಿದಾಗ ತುಂಬಾ ಉದ್ವಿಗ್ನಗೊಳ್ಳುತ್ತಾನೆ. ಸೊಲ್ಲಪುರದಲ್ಲಿ ಯಾರೂ ಗಂಡಸು ಜಾತಿಯೇ ಇಲ್ಲವೆಂದು

ಅವನು ಅಜ್ಜಿಗನನ್ನು ಹೀಯಾಳಿಸುತ್ತಾನೆ. ಆಗ ಅಜ್ಜಿಗ ತಾನು ಸ್ವಾತಂತ್ರ್ಯ ಹೋರಾಟದಲ್ಲಿ ಧುಮುಕುವ ದೃಢ ನಿರ್ಧಾರವನ್ನು ಮಾಡುತ್ತಾನೆ. ಅಜ್ಜಿಗ ಆ ಊರಿನಲ್ಲಿ ಸ್ವಾತಂತ್ರ್ಯಕ್ಕಾಗಿ ಹೋರಾಡುವ ೧೦-೧೨ ಜನ ಸಿಪಾಯಿಗಳನ್ನು ಕರೆತರುತ್ತಾನೆ. ಅಹಿಂಸೆಯಿಮದ ಗಾಂಧೀಜಿ ಹೇಳಿದಂತೆ ಚಳುವಳಿ ಮಾಡಲು ಅವರು ನಿರ್ಧರಿಸುತ್ತಾರೆ. ಚಂದ್ರಶೇಖರ ತಾವು ಅನುಭವಿಸುತ್ತಿರುವ ದಾಸ್ಯದ ಬಾಳನ್ನು ಅವರಿಗೆ ವಿವರಿಸುತ್ತಾನೆ. ಆಂಜನೇಯನ ಪಾದ ಮುಟ್ಟಿ ಅಲ್ಲಿ ನೆರೆದವರೆಲ್ಲರೂ "ನಾನು ನಮ್ಮ ದೇಶಕ್ಕೋಸ್ಕರ ಪ್ರಾಣ ಕೊಡಲಿಕ್ಕೂ ತಯಾರು. ಏನು ಬಂದ್ರೂ ಮೋಸ ಮಾಡಕಿಲ್ಲ. ಈ ಮಾತು ಸುಳ್ಳಾದ್ರೆ ಗೋತಾಯೀನ ತಿಂದ ಪಾಪ ಬರ್ಲಿ"[೫] ಎಂದು ಪ್ರಮಾಣ ಮಾಡಿದರು. ಇಲ್ಲಿ ಊರಿನ ದೇವರ ಹೆಸರಿನಲ್ಲಿ ಅಥವಾ ಆ ಊರಿನ ಐತಿಹಾಸಿಕ ವ್ಯಕ್ತಿಗಳ ಹೆಸರಿನಲ್ಲಿ ಪ್ರಮಾಣ ಮಾಡುವುದು ಸಾಮಾನ್ಯವಾಗಿತ್ತು. ಹಿಂದಿನ ಕಾಲದ ಜನರು ಧರ್ಮಭೀರುಗಳಾಗಿದ್ದ ಕಾರಣದಿಂದ ಒಮ್ಮೆ ಪ್ರಮಾಣ ಮಾಡಿದರೆ ಇವರು ಕೊಟ್ಟ ಮಾತಿಗೆ ತಪ್ಪುತ್ತಿರಲಿಲ್ಲ.

ಸೋಮಲಾಪುರದಂತಹ ಹಳ್ಳಿಯಲ್ಲಿ ಕೂಡಾ ಸ್ವಯಂಸೇವಕ ದಳವನ್ನು ಒಗ್ಗುಡಿಸುವ ಕೆಲಸ ಅಪೂರ್ವ ಉತ್ಸಾಹದಿಂದ ನಡೆಯುತ್ತಿತ್ತು. ದೇಶಭಕ್ತಿಗೀತೆ, ವಂದೇ ಮಾತರಂ ಆಡುಗಳನ್ನು ಓದು ಬರಹ ಬಾರದ ಆ ಜನರೂ ಕಲಿತುಕೊಂಡರು. ಸ್ವಾತಂತ್ರ್ಯದ ಉದ್ದಕ್ಕೂ 'ವಂದೇ ಮಾತರಂ' ಗೀತೆ ಭಗವದ್ಗೀತೆಯಂತೆ ಕೆಲಸ ಮಾಡಿದೆ. ಸೋಮಲಾಪುರದ ಒಬ್ಬ ಅನಕ್ಷರಸ್ಥ ರೈತನಾದ ಅಜ್ಜಿಗ ಕೂಡ ದಿಟ್ಟತನದಿಂದ ಪೋಲೀಸರನ್ನು ಎದುರಿಸುತ್ತಾನೆ. ತನ್ನ ತಾಯಿಗೆ ಅವನು ಕೆಟ್ಟ ಮಾತನಾಡಿದಾಗ ಪೊಲೀಸರಿಗೆ ಎರಡೇಟು ಬಿಗಿಯುವುದಕ್ಕೂ ಅವನು ಹೇಸುವುದಿಲ್ಲ.

ದಫೇಧಾರ ಬಾಲಾಜಿ, ಚಂದ್ರಶೇಖರ ಎಲ್ಲಿದ್ದಾನೆಂದು ತಿಳಿದುಕೊಳ್ಳಲು ಅಜ್ಜಿಗನಿಗೆ ಛಡಿಯೇಟು ಕೊಡುತ್ತಾನೆ. ಕಣ್ಣು, ಮುಖ, ಬಾಯಿ ಎಲ್ಲೆಂದರಲ್ಲಿ ಬೂಟುಕಾಲಿನಿಂದ ಒದೆಯುತ್ತಾನೆ. ರಕ್ತದ ಧಾರೆ ಹರಿದರೂ ಕೂಡಾ ಅಜ್ಜಿಗ ಚಂದ್ರಶೇಖರನ ವಿಷಯವನ್ನು ಬಾಯಿಬಿಡುವುದಿಲ್ಲ. ಒಬ್ಬ ಚಂದ್ರಶೇಖರನಿಂದಾಗಿ ಹಳ್ಳಿಯ ಸಾಮಾನ್ಯರೈತರು ದೇಶಕ್ಕೋಸ್ಕರ ತಮ್ಮ ಪ್ರಾಣವನ್ನೇ ಪಣಕ್ಕಿಡಲು ಸಿದ್ಧರಾಗುತ್ತಾರೆ. ಹಳ್ಳಿಯ ಜನರಲ್ಲಿ ಜಾಗೃತಿಯನ್ನು ಮೂಡಿಸಿದರೆ ಅವರು ನಿಷ್ಠೆ ಮತ್ತು ಪ್ರಾಮಾಣಿಕತೆಯಿಂದ ಭಾರತವನ್ನು ಬಂಧಮುಕ್ತಗೊಳಿಸಲು ಪ್ರಯತ್ನಿಸುತ್ತಾರೆಂಬ ಸತ್ಯವನ್ನು ಗಾಂಧೀಜಿ ಮನಗಂಡಿರಬೇಕು. ಅದಕ್ಕೋಸ್ಕರವೇ ಅವರು ಹಳ್ಳಿ ಹಳ್ಳಿಯಲ್ಲಿ ವಿಧಾಯಕ ಕಾರ್ಯಕ್ರಮದ ಮೂಲಕ ಜನಜಾಗೃತಿನ್ನು ಉಂಟುಮಾಡಲು ಪ್ರಯತ್ನಿಸಿದರು. ಏಕೆಂದರೆ ಅಂದು ದೇಶದ ಬಹುಸಂಖ್ಯಾತ ಜನರು ಹಳ್ಳಿಯಲ್ಲಿ ವಾಸವಾಗಿದ್ದರು. ಸ್ವಾತಂತ್ರ್ಯದಂತಹ ಒಂದು ಮಹಾನ್ ಹೋರಾಟಕ್ಕೆ ಬಹುಸಂಖ್ಯೆಯ ಜನರ ಬೆಂಬಲದ ಅಗತ್ಯವನ್ನು ಗಾಂಧೀಜಿ ಮನಗಂಡಿದ್ದರು. ಸೋಮಲಾಪುರದಂತಹ ಹಳ್ಳಿಯಲ್ಲಿ ಕೂಡ ಚಂದ್ರಶೇಖರನಿಂದಾಗಿ ದೇಶದ ಚರಿತ್ರೆಯನ್ನು ತಿಳಿದುಕೊಂಡ ಜನರು ಆ ಹಳ್ಳಿಯನ್ನು ಹೋರಾಟದ ಕಣವನ್ನಾಗಿ ಮಾರ್ಪಾಡಿಸುತ್ತಾರೆ.

ಈಸೂರಿನ ಸ್ವಾತಂತ್ರ್ಯ ಹೋರಾಟದಲ್ಲಿ ಕೂಡಾ ಪ್ರಮುಖ ಪಾತ್ರ ವಹಿಸಿದವರು ಸಾಮಾನ್ಯರೇ. ಈಸೂರಿನ ಚಿರಂಜೀವಿಗಳು ಕಾದಂಬರಿಯು ಸಾಮಾನ್ಯ ಜನರ ಅಸಾಧಾರಣವಾದ ಧೈರ್ಯ ತ್ಯಾಗದ ಚಿತ್ರಣವನ್ನು ನಿಡುತ್ತದೆ. ಇಲ್ಲಿ ಭರಮಣ್ಣ ಎಂಬ ವ್ಯಕ್ತಿಯು ಹಳ್ಳಿ ಹಳ್ಳಿಗಳಲ್ಲಿ ಕ್ರಾಂತಿಜ್ವಾಲೆಯನ್ನು ಹಬ್ಬಿಸುತ್ತಿದ್ದನು. ಅವನು ಗಾಂಧೀಜಿಯ ಸಾನ್ನಿಧ್ಯದಲ್ಲಿ ಕೆಲವು ದಿನಗಳನ್ನು ಕಳೆದಿದ್ದನು. ಗಾಂಧೀಜಿಯ ತತ್ವಕ್ಕನುಗುಣವಾಗಿ ನಡೆಯಲು ಅವನು ಯೋಚಿಸುತ್ತಿದ್ದನು.

ಈಸೂರಿನ ವೀರಭದ್ರದೇವರ ಪೂಜೆಯೊಂದಿಗೆ ಪ್ರಭಾತಪೇರಿಯಲ್ಲಿ ಭಾಗವಹಿಸುವುದು ಆ ಜನರ ದಿನಚರಿಯ ಒಂದು ಭಾಗವಾಗಿತ್ತು. ಇಡೀ ಊರಿಗೆ ಊರೇ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಲು ಯೋಚಿಸುತ್ತಿತ್ತು. ಈಸೂರಿನ ಜನರು ಸ್ವತಂತ್ರ ಸರಕಾರವನ್ನು ನಿರ್ಮಿಸುತ್ತಾರೆ. ಬಾಲಕರಾದ ಜಯಣ್ಣ ಮತ್ತು ಮಲ್ಲಣ್ಣನನ್ನು ಅಮಲ್ದಾರ ಹಾಗೂ ಸಬ್‌ಇನ್ಸ್‌ಪೆಕ್ಟರನ್ನಾಗಿ ನಿಯಮಿಸುತ್ತಾರೆ. ಗಂಭೀರವಾದ ಒಂದು ಪ್ರತಿಭಟನೆಯ ಸಂದರ್ಭದಲ್ಲಿ ಪ್ರಮುಖ ಹುದ್ದೆಗಳಿಗೆ ಬಾಲಕರನ್ನು ನಿಯಮಿಸಿದ್ದು ಈಸೂರಿನ ಜನರ ತಪ್ಪು ನಿರ್ಧಾರವೆನಿಸುತ್ತದೆ. ಯಾಕೆಂದರೆ ಈಸೂರಿನಲ್ಲಿ ಮುಂದೆ ನಡೆಯುವ ಮಾರಣಹೋಮಕ್ಕೆ ಇದು ಕೂಡಾ ಒಂದು ಕಾರಣವಾಗಿರುತ್ತದೆ. ಊರಿನ ಅಗಸೆ ಬಾಗಿಲಿನಲ್ಲಿ "ಬೇಜವಾಬ್ದಾರಿ ಸರಕಾರದ ಅಧಿಕಾರಿಗಳು ಊರೊಳಕ್ಕೆ ಬರಕೂಡದು. ಬಂದರೆ...?"[39] ಎಂಬ ಫಲಕ ಕಂಡು ಬರುತ್ತಿತ್ತು. ಇಂತಹ ಸಂದರ್ಭದಲ್ಲಿ ಕಂದಾಯ ವಸೂಲಿ ಮಾಡಲು ಗೌಡ ಈಸೂರಿಗೆ ತೆರಳಲು ನಿರ್ಧರಿಸುತ್ತಾನೆ. ತನ್ನೊಂದಿಗೆ ಶಾನುಭೋಗ ಕುಲಕರ್ಣಿಯನ್ನು ಬರಲು ಹೇಳುತ್ತಾನೆ. ಈಸೂರಿನ ಜನರ ಜೊತೆಯಲ್ಲಿ ಶಿವಮೊಗ್ಗದ ಕಾಲೇಜು ವಿದ್ಯಾರ್ಥಿಗಳು, ಇತರ ಹಳ್ಳಿಗಳ ಜನರೂ ಸೇರಿಕೊಂಡಿದ್ದರು. ಗಾಂಧೀಜಿಯ ಕರೆ ಹಳ್ಳಿಹಳ್ಳಗಳಲ್ಲಿ ಪ್ರತಿಧ್ವನಿಸಿ ಹಳ್ಳಿಯ ಜನರು ನಿರೀಕ್ಷೆಗಿಂತ ಹೆಚ್ಚಾಗಿ ಸ್ಪಂಧಿಸಿದ್ದರು. ಗೌಡ ಶಾನುಭೋಗ ಹಳ್ಳಿಗೆ ಬಂದಾಗ ಅವರಿಗೂ ಗಾಂಧೀಟೋಪಿ ಈಸೂರಿನ ಪ್ರಜೆಗಳು ಹಾಕಿಸ್ತಾರೆ. ಕಂದಾಯದ ಪುಸ್ತಕಗಳನ್ನು ಅವರ ಕೈಯಿಂದ ಪಡೆದು ಸುಟ್ಟು ಹಾಕಿದರು. ಅಷ್ಟೇ ಅಲ್ಲದೆ ಪಟೇಲ ಮತ್ತು ಶಾನುಭೋಗರರಿಗೆ ಒಂಟಿಕಾಲಿನ ಮೇಲೆ ಆ ರಣಬಿಸಿಲಿನಲ್ಲಿ ನಿಲ್ಲಿಸಿದರು. ಈ ರೀತಿಯಾಗಿ ಊರಿಗೆ ಬಂದ ಅಧಿಕಾರಗಳನ್ನು ಶಿಕ್ಷಿಸುವುದು ಗಾಂಧಿತತ್ವಕ್ಕೆ ವಿರೋಧವಾಗಿದ್ದರೂ ಕೂಡ ಈಸೂರಿನ ಜನತೆ ಮಾತ್ರ ಹೀಗೆ ನಡೆದುಕೊಂಡರು. ಶಸ್ತ್ರಾಸ್ತ್ರ ಕೈಯಲ್ಲಿ ಇಲ್ಲದ ಜನರು ಹಿಂಸಾತ್ಮಕ ಹೋರಾಟಕ್ಕಿಳಿದರೆ ದೊಡ್ಡ ಪ್ರಮಾಣದ ದುರಂತಕ್ಕೆ ದಾರಿ ಮಾಡಿಕೊಟ್ಟಂತಾಗುತ್ತದೆಂಬುದನ್ನು ಮನಗಂಡೇ ಗಾಂಧೀಜಿಯವರು ಅಹಿಂಸಾತ್ಮಕ ಹೋರಾಟಕ್ಕೆ ಕರೆಕೊಟ್ಟಿರಬೇಕು.

ಅಂದಿನ ರಾತ್ರಿ ಈಸೂರಿನ ಜನರೆಲ್ಲ ಸಭೆ ಸೇರಿ ಒಂದು ನಿರ್ಣಯಕ್ಕೆ ಬಂದರು. 'ಅದೇಂದರೆ ಬ್ರಿಟಿಷ್ ಸರಕಾರಕ್ಕೆ ನಾವು ಕಂದಾಯ ಕೊಡಬೇಕಾಗಿಲ್ಲ. ಈಗ ವಸೂಲಾಗಿರುವ ಕಂದಾಯದ ಹಣವೂ ಅವರಿಗೆ ದಕ್ಕದಂತೆ ಮಾಡಬೇಕು. ಇದು ಹೊಸದಾಗಿ ಕೈಗೊಂಡಿರುವ

ನಿರ್ಣಯವಲ್ಲ. ಟ್ರೆಜರಿಯನ್ನು ಲೂಟಿ ಮಾಡಿ ಹಣ ದೋಚುವುದು ಭಾರತದ ಎಲ್ಲಾ ಕಡೆಗಳಲ್ಲಿ ನಡೆಯುತ್ತಲೇ ಇದೆ. ಆ ಮಾರ್ಗವನ್ನು ನಾವು ಅನುಸರಿಸಬೇಕು.' ಎಂದು ನಿರ್ಧರಿಸುತ್ತಾರೆ.

ಪೊಲೀಸರು ಬಾರದ ಹಾಗೆ ಹೊನ್ನಾಳಿ, ಶಿಕಾರಿಪುರ, ಶಿರಾಳಕೊಪ್ಪ, ಅಮಟಿಕೊಪ್ಪ ಮುಂತಾದ ರೈತರೆಲ್ಲರೂ ಸೇರಿ ಸೇತುವೆಗಳನ್ನು ಕೆಡವಿದರು. ತಂತಿಗಳನ್ನು ಕತ್ತರಿಸಿದರು. ಸಾಲುಮರಗಳನ್ನು ಕತ್ತರಿಸಿ ರಸ್ತೆಯನ್ನು ಮುಚ್ಚಿಹಾಕಿದರು. ಸುತ್ತಮುತ್ತಲಿನ ಹಳ್ಳಿಯಿಂದ ಅಂದು ೨೦೦೦ಕ್ಕೂ ಹೆಚ್ಚು ಜನರು ಈಸೂರಿಗೆ ಬಂದಿದ್ದರು. ಅಂದು ಊರಿನ ಜನರು ಮತ್ತು ಬ್ರಿಟಿಷ್ ಸರಕಾರದ ಅಧಿಕಾರಿಗಳ ನಡುವೆ ಆದ ಮಾತುಕತೆ ವಿಕೋಪಕ್ಕೆ ತಿರುಗಿ ಅಮಲ್ದಾರ್ ಮತ್ತು ಸಬ್‌ಇನ್ಸ್‌ಪೆಕ್ಟರ್ ಅವರ ಕೊಲೆಯಲ್ಲಿ ಪರ್ಯಾವಸಾನವಾಗುತ್ತದೆ. ಈ ಕಾರಣದಿಂದಲೆ ಈಸೂರಿನ ಐದು ಮಂದಿ ನೇಣುಗಂಬಕ್ಕೆ ತಲೆಕೊಡುತ್ತಾರೆ.

ಕೆಲವೊಂದು ಹಳ್ಳಿಗಳಲ್ಲಿ ೧೮೫೭ರ ನಂತರ ತಣ್ಣಗಾಗಿದ್ದ ಹೋರಾಟದ ಕಾವು ಮೂರು ತಲೆಮಾರಿನ ನಂತರ ಅಂದರೆ ಗಾಂಧೀಜಿಯ ಪ್ರವೇಶದ ನಂತರ ಮತ್ತೆ ಕಾವೇರುತ್ತದೆ. ನವಲಗುಂದದಂತಹ ಒಂದು ಹಳ್ಳಿ ಕೂಡಾ ಇಂತಹ ಸ್ವಾತಂತ್ರ್ಯ ಹೋರಾಟದಲ್ಲಿ ಮಹತ್ವದ ಪಾತ್ರವನ್ನು ವಹಿಸುತ್ತದೆ. 'ಹಳ್ಳ ಬಂತು ಹಳ್ಳ' ಕಾದಂಬರಿಯಲ್ಲಿ ಸಂಪ್ರದಾಯಸ್ಥ ಮನೆತನದ ರಾಮೂ ಕೂಡಾ ಕಾಂಗ್ರೆಸ್ ಚಳುವಳಿಯಲ್ಲಿ ಆಸಕ್ತನಾಗಿ ಅದರ ಒಂದು ಭಾಗವಾಗುತ್ತಾನೆ. ೧೮೫೭ರಲ್ಲಿ ರಾಮುವಿನ ಅಜ್ಜ ಕಮಲನಾಭ ಪಂತ ಕೂಡಾ ನರಗುಂದದ ರಾಮಸಾಹೇಬನಿಗೇನೊ ಪತ್ರವನ್ನು ತೆಗೆದುಕೊಂಡು ಬಂದು ಕಾಶಿಯಿಂದ ಬಂದು ನಮಲಗುಂದದಲ್ಲಿ ಸಿಕ್ಕಿ ಬೀಳುತ್ತಾನೆ. ಅದೇ ದೇಶಪ್ರೇಮ ಹಾಗೂ ಕ್ರಾಂತಿಯ ರಕ್ತವು ರಾಮುವಿನಲ್ಲೂ ಹರಿಯುತ್ತಿರುವುದನ್ನು ಕಾಣಬಹುದು. ೧೮೫೭ರ ಪ್ರಥಮ ಸ್ವಾತಂತ್ರ್ಯ ಚಳುವಳಿಯ ನಂತರ ತಣ್ಣಗಾದ ಬ್ರಿಟಿಷರ ವಿರುದ್ಧದ ಬಂಡಾಯವು ಮೂರು ತಲೆಮಾರಿನ ನಂತರ ಲಾವಾರಸದಂತೆ ಮತ್ತೆ ಪುಟಿದೇಳುವುದನ್ನು ಕಾಣಬಹುದು.

ನವಲಗುಂದ ಎಷ್ಟೇ ನಿರ್ಲಿಪ್ತವಾಗಿದ್ದರೂ ಧಾರವಾಡ, ಹುಬ್ಬಳ್ಳಿಯಲ್ಲಿ ಆರಂಭವಾದ ಕಾಂಗ್ರೆಸ್ ಚಳುವಳಿ ನವಲಗುಂದಕ್ಕೂ ಹಬ್ಬಿತ್ತು. ಗಾಂಧೀಜಿಯ ಪ್ರಭೆಯು ನವಲಗುಂದದಂತಹ ಸಾಮಾನ್ಯ ಹಳ್ಳಿಯ ಜನರಲ್ಲೂ ಸಂಚಲನ ಮೂಡಿಸಿತು. ನವಲಗುಂದಕ್ಕೆ ಗಾಂಧೀಜಿ ಬರುತ್ತಾರೆಂಬ ಸುದ್ದಿಯು ಸತ್ತ ಮುತ್ತಲಿನ ಹಳ್ಳಿಯ ಜನರೆಲ್ಲರನ್ನೂ ಒಂದುಗೂಡಿಸಿತು. ನವಲಗುಂದದಲ್ಲೂ ಕಾಂಗ್ರೆಸ್ ಸಮಿತಿ ಆರಂಭವಾಗುತ್ತದೆ. ಧಾರವಾಡದಲ್ಲೂ ಕೂಡ ಕಾಂಗ್ರೆಸ್ ಚಟುವಟಿಕೆ ಬಿರುಸಾಗಿಯೇ ನಡೆಯುತ್ತಿತ್ತು. ಭಾರತಾಂಬೆಯ ಬಿಡುಗಡೆಗೆ ಅವರು ಪಣತೊಟ್ಟಂತೆ ಇತ್ತು. ದೇಶ ಸೇವೆಗಾಗಿ ತಮ್ಮ ರಕ್ತವನ್ನೇ ಹರಿಸಲು, ತಮ್ಮನ್ನೇ ದೇಶಕ್ಕೆ ಅರ್ಪಿಸಲು ಅಂದಿನ ಹಳ್ಳಿಯ ಎಲ್ಲಾ ಯುವಕರು ಸಿದ್ಧರಿದ್ದರು. "ಕಿತ್ತೂರಿನ ಕಲಿಗಳೇ...ನರಗುಂದದ ನರಕೇಸರಿಗಳೇ... ಭಾರತಾಂಬೆಯ ಆಕ್ರಂದನವನ್ನು ಕೇಳಿ ಅವಳ ಕೈ ಬೇಡಿಗಳನ್ನು ಕತ್ತರಿಸಿ ಎಸೆಯುವ ಧೀರ ಗಂಡುಗಲಿಗಳಾಗುತ್ತೀರೋ...ಅಥವಾ ಬ್ರಿಟಿಷರು ಎಸೆಯುವ ತುಂಡುರೊಟ್ಟಿಗಾಗಿ ಆಸೆಪಟ್ಟು

ಎಂಜಲು ಸುರಿಸುವ ಷಂಡ ಶಿಖಂಡಿಗಳಾಗುತ್ತಿರೋ ಎಂದು ನಿರ್ಧರಿಸುವ ಕಾಲ ಬಂದದ ಅಂಬೊದನ್ನು ಮರೀಬ್ಯಾಡಿರಿ... ನಿಮ್ಮ ನರನರಗಳೊಳಗೆ ನಿಮ್ಮ ತಂದೆಯ ರಕ್ತ ಹರೀತಿದ್ದರ... ನೀವು ನಿಮ್ಮ ತಾಯಿಯ ಮಲೀ ಹಾಲು ಕುಡಿದಿದ್ದರ ಈವತ್ತು ಆ ಹಾಲಿಗೆ, ಆ ರಕ್ತಕ್ಕೆ ಧಾರಣಿ ಕೊಡೊ ಕಾಲ ಬಂದದ ಅಂಬೋದನ್ನ ಮರೀಬ್ಯಾಡಿರಿ..."[೬] ಹೀಗೆ ಜನರನ್ನು ಹೋರಾಟಕ್ಕೆ ತಯಾರು ಮಾಡುವ ಚಳುವಳಿಯು ಧಾರವಾಡದಲ್ಲಿ ಮೊಳಗುತ್ತಿತ್ತು.

ನವಲಗುಂದದ ಹೊಸಪೀಳಿಗೆಯ ತರುಣರೆಲ್ಲರೂ ದೇಶದ ಸ್ಥಿತಿಗತಿಯ ಬಗ್ಗೆ ಅರಿತುಕೊಂಡಿದ್ದರು. ಕಾಂಗ್ರೆಸ್ ಸಭೆ ಪ್ರಭಾತಪೇರಿಗಳಲ್ಲಿ ಭಾಗವಹಿಸುತ್ತಿದ್ದರು. ರಾಮು ಭಾಷಣ ಮಾಡುತ್ತಿದ್ದನು. ಕರಪತ್ರಗಳನ್ನು ನವಲಗುಂದದಲ್ಲಿ ಹಂಚುತ್ತಿದ್ದನು. ಹೋರಾಟದ ಕಾಲದಲ್ಲಿ ಇಂತಹ ಕ್ರಾಂತಿಕಾರಿ ಸಂದೇಶದ ಕರಪತ್ರವು ಜನರನ್ನು ಚಳುವಳಿಗೆ ಹುರಿದುಂಬಿಸುವಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ. ಈ ಕರಪತ್ರಗಳು ಎಲ್ಲಿ ಮುದ್ರಿತಗೊಳ್ಳುತವೆ? ಹೇಗೆ ಜನರನ್ನು ತಲುಪುತ್ತವೆಂಬುದೇ ಪೊಲೀಸರಿಗೆ ದೊಡ್ಡ ತಲೆನೋವಿನ ವಿಷಯವಾಗಿತ್ತು. ಹಳ್ಳಿಯಲ್ಲಿ ಯಾರನ್ನು ಪೊಲೀಸಿನವರು ಬಹಳ ಅಮುಖ್ಯವೆಂದು ಭಾವಿಸಿದ್ದರೋ, ಯಾರು ಏನೂ ಅರಿಯದ ಅನಕ್ಷರಸ್ಥರಾಗಿ ಸಮಾಜದ ಕೆಳಸ್ತರದಲ್ಲಿ ಬದುಕಿತ್ತಿದ್ದರೋ ಅವರಿಂದಲೇ ಕರಪತ್ರವೂ ಹಳ್ಳಿ ಹಳ್ಳಿಗೂ ತಲುಪುತ್ತದೆ. ಈ ಕರಪತ್ರಗಳ ಭಾಷೆಯು ತೀವ್ರವಾಗಿತ್ತು. ಇದು ಕಟುವಾದ ಮಾತಿನಿಂದ ಸರಕಾರವನ್ನು ಖಂಡಿಸುತಿತ್ತು. ಅಂದು ಹೋರಾಟದಲ್ಲಿ ಒಂದಲ್ಲ ಒಂದು ರೀತಿಯಲ್ಲಿ ಭಾಗವಹಿಸದವರೇ ಮೂರ್ಖರು. ಕಟ್ಟಿಗೆ ಮಾರುವವರು, ಹೂ ಮಾರುವವರು, ಲಂಬಾಣಿ ಸ್ತ್ರೀಯರು ಪ್ರತಿಯೊಬ್ಬರು ಒಂದಿಲ್ಲೊಂದು ವಿಧದಲ್ಲಿ ತಮಗೆ ತಿಳಿದೋ ತಿಳಿಯದೆಯೋ ಹೋರಾಟದ ಒಂದು ಭಾಗವಾಗಿದ್ದರು.

'ಬೇಡಿ ಕಳಚಿತು ದೇಶ ಒಡೆಯಿತು' ಕಾದಂಬರಿಯು ಸ್ವಾತಂತ್ರ್ಯ ಚಳುವಳಿಯ ಸಂಪೂರ್ಣ ಚಿತ್ರಣವನ್ನು ನೀಡುವುದರಲ್ಲಿ ಯಶಸ್ವಿಯಾಗಿದೆ. ಇದರಲ್ಲಿ ಹಲವಾರು ಮಂದಿ ಸಮಾಜದ ಮುಖ್ಯವಾಹಿನಿಯಿಂದ ದೂರವಿದ್ದವರೂ ಕುಡಾ ಹೋರಾಟದಲ್ಲಿ ತಮ್ಮದೇ ಆದ ಸೇವೆಯನ್ನು ಸಲ್ಲಿಸಿದ ಚಿತ್ರಣವನ್ನು ನಾವು ಕಾಣಬಹುದು. ಮುಳುಗಿದೂರಿನ ಕೊಟ್ರಪ್ಪ, ಕೊಟ್ಟೂರಿನ ದೇವೇಂದ್ರಪ್ಪ, ಕೂಡ್ಲಿಗಿ ಬಸವ್ವ, ಮಲಿಯಜ್ಜ ಮುಂತಾದ ಸಾಧಾರಣ ಜನರು ತೋರಿಸುತ್ತಿದ್ದ ಆಸಕ್ತಿ ಬಹುದೊಡ್ಡ ಮಾತಾಗಿತ್ತು. ರಮಣಯ್ಯ ಎಂಬ ವ್ಯಕ್ತಿ ಆಂಧ್ರದಿಂದ ಬಳ್ಳಾರಿಗೆ ಬಂದು ನೆಲೆ ನಿಲ್ಲುತ್ತಾನೆ. ದೇಶದ ಚಟುವಟಿಕೆಯ ಬಗ್ಗೆ ಅವನಿಗೆ ಅಗಾಧವಾದ ಜ್ಞಾನವಿತ್ತು. ಅವನು ರಾಷ್ಟ್ರೀಯ ಸ್ವಯಂಸೇವಾ ದಳಕ್ಕೆ ಸೇರುವಂತೆ ಗಾಂಧೀಜಿಯ ಮನವಿಯನ್ನು ಕರಪತ್ರದಲ್ಲಿ ಮುದ್ರಿಸಿ ಹಂಚುತ್ತಾನೆ. ಈ ರೀತಿಯಾಗಿ ಸದ್ದಿಲ್ಲದೆ ದೇಶಸೇವೆ ಮಾಡುತ್ತಾನೆ. ಕೇವಲ ಚಳುವಳಿ ಮಾಡಿ ಹುತಾತ್ಮರಾದವರದು ಮಾತ್ರ ದೇಶಸೇವೆ ಅಲ್ಲ. ರಮಣಯ್ಯನಂತಹ ನೂರಾರು ಮಂದಿ ಯಾವುದೇ ಸದ್ದು-ಗದ್ದಲವಿಲ್ಲದೆ ತಮ್ಮ ಪಲಿನ ಸೇವೆಯನ್ನು ದೇಶಕ್ಕೆ ಅರ್ಪಿಸಿದ್ದಾರೆ. ಈ ರಮಣಯ್ಯ ಆಂಧ್ರ ಮತ್ತು ಕರ್ನಾಟಕದ ಕೊಂಡಿಯಂತಿದ್ದ. ಆಂಧ್ರದಲ್ಲಾದ ಚಳುವಳಿಯ ಕತೆಯನ್ನು ಹೇಳಿ ಕರ್ನಾಟಕದ ಜನರು

ತಾವೂ ಚಳುವಳಿಯಲ್ಲಿ ಭಾಗವಹಿಸಲು ಪ್ರೇರೇಪಿಸುತ್ತಾನೆ. ಚಳುವಳಿಯ ಕಾಲದಲ್ಲಿ ಲಾವಣಿ, ಕೀರ್ತನೆ, ಗೀಗೀ ಪದಗಳು ಒಂದು ರೀತಿಯಲ್ಲಿ ಪ್ರಚಾರ ಮಾಧ್ಯಮವಾಗಿ ಕೆಲಸ ಮಾಡುತ್ತವೆ. ಗುಂಟೂರಿನಲ್ಲಾದ ಅಸಹಕಾರ ಚಳುವಳಿಯ ಕತೆಯನ್ನು ಗೀಗೀ ಪದ ಕಟ್ಟಿ ಬಸವ್ವ, ರಮಣಯ್ಯ ಮತ್ತು ದೇವೇಂದ್ರಪ್ಪ ಮೊದಲಾದವರು ಹಾಡಿ ಜನರಿಗೆ ಅದನ್ನು ಪ್ರಚಾರ ಮಾಡುತ್ತಿದ್ದರು.

ಮುಳುಗಿದೂರಿನ ಕೊಟ್ರಪ್ಪನಂತಹ ಬಡವ್ಯಕ್ತಿಗಳು ಕೂಡ ಚಳುವಳಿಯಲ್ಲಿ ಭಾಗವಹಿಸಲು ಅಸಕ್ತಿಯನ್ನು ತಾಳುತ್ತಾರೆ. ಗಾಂಧಿ ಒಂದೇ ವರ್ಷದಲ್ಲಿ ಸ್ವರಾಜ್ಯ ಬರುತ್ತದೆಂಬುದನ್ನು ಇವರೆಲ್ಲರೂ ನಂಬಿದ್ದರು. ಸ್ವಾತಂತ್ರ್ಯಕ್ಕಾಗಿ ಸರ್ವತ್ಯಾಗಕ್ಕೂ ಸಿದ್ಧರಿದ್ದೇವೆ ಎಂಬುದಾಗಿ ಹಂಪಿ ಕಾಂಗ್ರೇಸ್ ಸಭೆಯಲ್ಲಿ ಜನರೆಲ್ಲರೂ ಒಪ್ಪಿಕೊಳ್ಳುತ್ತಾರೆ. ಗಾಂಧೀಜಿ ಹೇಳಿದ ವಿಧಾಯಕ ಕಾರ್ಯಕ್ರಮಗಳನ್ನು ಚಳುವಳಿ ನಿಂತ ಸಂದರ್ಭದಲ್ಲಿಯೂ ಹಳ್ಳಿಯ ಜನ ಪಾಲಿಸುತ್ತಾರೆ. ರಮಣಯ್ಯ ಹರಿಜನೋಧ್ಧಾರಕ್ಕಾಗಿ ಹರಿಜನರ ಕೇರಿಯಲ್ಲಿ ಮನೆ ಮಾಡಿಕೊಂಡಿದ್ದನು. ಆದರೆ ಹರಿಜನೋದ್ಧಾರವೆಂಬುದು ಗಾಂಧೀಜಿ ಹೇಳಿದಷ್ಟು ಸುಲಭವಾಗಿರಲಿಲ್ಲ. ಏಕೆಂದರೆ ಸಮಾಜದ ಮುಖ್ಯವಾಹಿನಿಯಿಂದ ಸಂಪೂರ್ಣ ದೂರವಾಗಿದ್ದ ಅವರನ್ನು ಸುಧಾರಿಸುವುದು ಅತೀ ಸವಾಲಿನ ಕೆಲಸವೇ ಆಗಿತ್ತು. ಗಂಡಸರೆಲ್ಲಾ ದುಡಿದ ಹಣ ಸಂಜೆಯಾಗುತ್ತಲೇ ಸೇಂದಿ ಅಂಗಡಿ ಸೇರುತ್ತಿತ್ತು. ಕುಡಿದು ಬಂದು ಹೆಂಡತಿಗೆ ಒಡೆಯುವವರೇ ಹೆಚ್ಚು. ಯಾರಾದ್ರೂ ಬಿಡಿಸಲು ಬಂದರೆ ಅವರನ್ನೂ ಹೆಂಡತಿಯ ಜೊತೆ ಸಂಬಂಧ ಕಲ್ಪಿಸಿ ಬಾಯಿಗೆ ಬಂದಂತೆ ಬೈಯ್ಯುತ್ತಿದ್ದರು. ರಮಣಯ್ಯನು ಅವರನ್ನು ಉದ್ಧಾರ ಮಾಡಲು ಹೋಗಿ ಅವರ ಬಾಯಿಯಿಂದಲೇ ಕೆಟ್ಟ ಮಾತನ್ನು ಕೇಳುಬೇಕಾಯಿತು. ರಮಣಯ್ಯ ಮತ್ತು ಹರಿಹರರಾಯರು ತೆರೆಮರೆಯಲ್ಲಿದ್ದು ದೇಶದ ಸಮಗ್ರ ವಿಷಯವನ್ನು ತಿಳಿದುಕೊಳ್ಳಲು ಪ್ರಯತ್ನಿಸುತ್ತಾರೆ. ಆನಿಬೆಸೆಂಟ್, ಪ್ರಕಾಶ್ ಪಂತುಲು, ಗುಪ್ತ ಕಮ್ಯುನಿಸ್ಟ್ ಸಂಘಟಕರು ಮುಂತಾದವರನ್ನು ಭೇಟಿಯಾಗಿ ದೇಶದ ಸ್ಥಿತಿಗತಿಯ ಬಗ್ಗೆ ಯೋಚಿಸುತ್ತಾರೆ. ಹರಿಹರರಾಯರು ತಮ್ಮ ಸ್ವಂತ ಖರ್ಚಿನಿಂದ ಸುಭಾಶ್‌ಚಂದ್ರಬೋಸರ ಭಾಷಣದ ೫೦೦೦ ಪ್ರತಿಗಳನ್ನು ಅಚ್ಚುಹಾಕಿಸಿ ವಿದ್ಯಾರ್ಥಿಗಳಿಗೆ ಹಾಗೂ ಯುವಕರಿಗೆ ಹಂಚುತ್ತಾರೆ.

ರಮಣಯ್ಯ ಸುದ್ದಿ ಸಂಗ್ರಹಿಸಿ ಜನರಿಗೆ ತಲುಪಿಸುತ್ತಿದ್ದನು. ದೇಶದ ಮೂಲೆ ಮೂಲೆಯಲ್ಲಾಗುತ್ತಿರುವ ಬಂಡಾಯದ ಸುದ್ದಿಯನ್ನು ಕರಪತ್ರದ ಮೂಲಕ ಜನರಿಗೆ ಹಂಚುತ್ತಿದ್ದನು. ಕರಪತ್ರ ಪಡೆದುಕೊಂಡವರು ತಾವು ಕೂಡಾ ನೂರಾರು ಕರಪತ್ರಗಳನ್ನು ಮುದ್ರಿಸಿ ಹಂಚಬೇಕೆಂದು ವಿನಂತಿಸುತ್ತಿದ್ದನು. ಇವನ ಸೇವೆ ಚರಿತ್ರೆಯ ಪುಟದಲ್ಲಿ ದಾಖಲಾಗದೆ ಇರಬಹುದು. ಆದರೆ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಮಾತ್ರ ಅಮೂಲ್ಯವಾದುದು. ಮುಳುಗಿದೂರಿನಲ್ಲಿ ಕೂಡ ಈಚಲುವರಗಳನ್ನು ಕಡಿಯುವುದು, ಸೇಂದಿ ಅಂಗಡಿ ಪಿಕೆಟಿಂಗ್ ಮುಂತಾದ ಕಾರ್ಯಕ್ರಮಗಳನ್ನು ಕೊಟ್ರಪ್ಪ, ಮಲಿಯಜ್ಜ, ದುರುಗಮ್ಮ ಮುಂತಾದ ಹಳ್ಳಿ ಜನರು ನಡೆಸುತ್ತಾರೆ.

ಒಂದು ವರ್ಷದಲ್ಲಿ ಸ್ವರಾಜ್ಯ ಬರುತ್ತದೆಂಬ ಗಾಂಧೀಜಿಯ ಮಾತನ್ನು ನಂಬಿ ಕೊಟ್ರಪ್ಪನಂತಹ ಬಡವರು ಸತ್ಯಾಗ್ರಹದಲ್ಲಿ ಜೈಲುಪಾಲಾಗುತ್ತಾರೆ. ಜೈಲಿನಿಂದ ಬಿಡುಗಡೆಯಾಗಿ ಬಂದಾಗ ತನ್ನ ಮನೆ, ಹೊಲ ಹಾಳು ಬಿದ್ದದ್ದು ಮಾತ್ರವಲ್ಲದೆ ದನಕರುಗಳು ತಿನ್ನುವುದಕ್ಕೆ ಹುಲ್ಲು ಇಲ್ಲದೆ ಹಸಿವಿನಿಂದ ಸತ್ತು ಹೋಗುತ್ತದೆ. ಸ್ವಾತಂತ್ರ್ಯದಂತಹ ಒಮದು ಮಹಾನ್ ಹೋರಾಟದಲ್ಲಿ ಇದೊಂದು ಚಿಕ್ಕ ಘಟನೆಯಾಗಿರಬಹುದು; ಆದರೆ ಕೊಟ್ರಪ್ಪನಂತಹ ಬಡ ರೈತನಿಗೆ ಇದೊಂದು ದೊಡ್ಡ ವಿಚಾರವೇ. ಸ್ವಾತಂತ್ರ್ಯ ಗಳಿಕೆಯಲ್ಲಿ ಗಾಂಧಿ ಹೇಳಿದ ವಿಚಾರವನ್ನು ಚಾಚೂ ತಪ್ಪದೆ ಪಾಲಿಸಿ ಜೈಲು ಸೇರಿದವರು ಹಳ್ಳಿಯ ರೈತರು, ಬಡವರು. ಆದರೆ ಸ್ವತಂತ್ರ ಭಾರತದಲ್ಲಿ ಅವರ ಸ್ಥಿತಿ ಇನ್ನಷ್ಟು ಡೋಲಾಯಮಾನವಾಗಿದೆ. ಅಂದು ಸ್ವಾತಂತ್ರ್ಯಕ್ಕೋಸ್ಕರ ಜೈಲು ಸೇರಿದವರಲ್ಲಿ ಮನೆ ಮಠ ಕಳೆದುಕೊಂಡವರಲ್ಲಿ, ಪತಿ, ಪುತ್ರರನ್ನು ಕಳೆದುಕೊಂಡು ಅನಾಥರಾದವರಲ್ಲಿ ಸಿಂಹಪಾಲು ರೈತರದ್ದು. ಆದರೆ ಇಂದು ಸ್ವತಂತ್ರ ಭಾರತದಲ್ಲಿ ಅತಂತ್ರ ಬದುಕನ್ನು ಬದುಕುತ್ತಿರುವವನು ರೈತನೆಂಬುದು ಅತ್ಯಂತ ವಿಷಾದದ ಸಂಗತಿಯಾಗಿದೆ.

ಆಂಧ್ರದಲ್ಲಿ ಅಲ್ಲೂರಿ ಸೀತರಾಮರಾಜು ಮನೆಮಾತು. ಗುಡ್ಡಗಾಡು ಜನರ ಹಕ್ಕು ರಕ್ಷಣೆಗಾಗಿ ಹೋರಾಡಿದ ಪ್ರಥಮ ಭರತೀಯ ಸೇನಾನಿ. ಅವರ ಬಗ್ಗೆ ಬೀದಿನಾಟಕ, ಬುರ್ರಕಥಾ, ನೂರಾರು ಜನಪದ ಗೀತೆಗಳು ಹುಟ್ಟಿಕೊಂಡಿವೆ. ಗಾಂಧೀಜಿ ಮೊದಲನೆ ಸತ್ಯಾಗ್ರಹ ಹೂಡಿದಾಗ ರಾಜು ಗುಡ್ಡಗಾಡು ಜನರನ್ನೂ ಚಳುವಳಿಯಲ್ಲಿ ತೊಡಗಿಸಿಕೊಂಡರು. ಗಾಂಧೀ ಚಳುವಳಿ ನಿಲ್ಲಿಸಿದರು ರಾಜು ಮಾತ್ರ ಚಳುವಳಿ ಮುಂದುವರಿಸಿದರು. ಸಶಸ್ತ್ರ ಹೋರಾಟವೇ ದಾಸ್ಯ ಮುಕ್ತಿಗೆ 'ಏಕಮೇವ' ಮಾರ್ಗವೆಂದು ನಂಬಿದ್ದ ವೀರಸೇನಾನಿ ಅವರು. ಅವರೊಂದು ಸೈನ್ಯವನ್ನೇ ಕಟ್ಟಿದ್ದರು. ತನ್ನ ಸೈನ್ಯದಿಂದ ವ್ಯವಸ್ಥಿತವಾಗಿ ಪೊಲೀಸ್ ಠಾಣೆಗಳ ಮೇಲೆ ದಾಳಿ ಮಾಡುವುದು, ಅಲ್ಲಿಂದ ಬಂದೂಕುಗಳನ್ನು, ಮದ್ದುಗುಂಡುಗಳನ್ನು ಅಪಹರಿಸುವುದು, ತನ್ನ ಸೈನ್ಯಬಲ ಹೆಚ್ಚಿಸುವುದು ಇವರ ಉದ್ದೇಶವಗಿತ್ತು. ಇವರ ಸೈನ್ಯವನ್ನು ಸದೆಬಡಿಯಲು ಅಸ್ಸಾಂ ರೈಫಲ್ಸ್, ಮತ್ತು ಮಲಬಾರ್ ರೈಫಲ್ಸ್ ಸೈನ್ಯಗಳ ತುಕಡಿಗಳನ್ನು ಕಳಿಸಲಾಯಿತು. ಅವರನ್ನು ಹಿಡಿದು ಕೊಟ್ಟವರಿಗೆ ಇನಾಂ ಕೊಡುವುದಾಗಿ ಘೋಷಿಸಿದರು. ಆದರೂ ಏನು ಮಾಡಿದರೂ ಕೈಗೆ ಸಿಗಲಿಲ್ಲ. ಒಂದು ದಿನ ಇವರು ವಿಹಾರಾರ್ಥವಾಗಿ ಕಾಡಿನಲ್ಲಿ ನಿಶ್ಯಸ್ತ್ರಧಾರಿಯಾಗಿ ತಿರುಗಬೇಕಾದರೆ ಮೆ. ಗುಡ್ಡಾಲ್‌ನ ಗುಂಡೇಟಿಗೆ ಬಲಿಯಾಗುತ್ತಾರೆ. ಹೀಗೆ ಜಗತ್ತಿನ ಕಣ್ಣಿಗೆ ಬೀಳದ ಖ್ಯಾತಿಯಿಲ್ಲದ ಅದೆಷ್ಟೋ ಜನ ಅಲ್ಲೂರಿಸೀತಾರಾಮ ಮೊದಲಾದವರು ಈ ಸಾಮಾಜ್ಯಶಾಹಿಯ ವಿರುದ್ಧ ಹೋರಾಡಿ ಅವರ ಕ್ರೌರ್ಯಕ್ಕೆ ಬಲಿಯಾಗಿದ್ದಾರೆ. ಸ್ವಾತಂತ್ರ್ಯ ಬಂದರೂ ಗುಡ್ಡಗಾಡಿನ ಜನರ ಬದುಕಿನಲ್ಲಿ ಯಾವ ಮಹತ್ವದ ಬದಲಾವಣೆಯೂ ಆಗಿಲ್ಲ. ಆದರೂ ಅವರು ಸೈನ್ಯ ಕಟ್ಟಿ ಬ್ರಿಟಿಷರ ವಿರುದ್ಧ ಹೋರಾಡಿದ್ದರು.

'ಬಿಡುಗಡೆಯ ಬೆಲೆ' ಕಾದಂಬರಿಯು ಸಾಹಿತ್ಯದ ದೃಷ್ಟಿಯಿಂದ ಅಲ್ಲದಿದ್ದರೂ ಚಳುವಳಿಯ ಮಹತ್ವದ ದೃಷ್ಟಿಯಿಂದ ಒಂದು ಅತ್ಯುತ್ತಮ ಕಾದಂಬರಿ. ಯಾಕೆಂದರೆ ಇದನ್ನು ಕಾದಂಬರಿ ಅನ್ನುವುದಕ್ಕಿಂತಲೂ ಲೇಖಕರ ದಿನಚರಿ ಎನ್ನುವುದು ಹೆಚ್ಚು ಸರಿಯಾಗುತ್ತದೆ.

ಇದರ ಮಹತ್ವವೆಂದರೆ ಇದು ೧೯೪೧ರಲ್ಲಿ ಲೇಖಕರು ಇನ್ನೂ ಸೆರೆಯಲ್ಲಿರಬೇಕಾದರೆ ಬಿಡುಡೆಯಾದ ಕಾದಂಬರಿ. ಇದರಲ್ಲಿ ಬರುವ ಚಿತ್ರಣಗಳು ಕೇವಲ ಕವಿಯ ಕಲ್ಪನೆಯಾಗಿರದೆ ತಾವು ಕಂಡ ಅನುಭವಿಸಿದ ನೈಜ ಚಿತ್ರಣವಾಗಿದೆ. ಇದು ೧೯೩೦ರಲ್ಲಿ ನಡೆದ ಉಪ್ಪಿನ ಸತ್ಯಾಗ್ರಹದ ವೈಭವವನ್ನು, ಜನರ ಭಾಗವಹಿಸುವಿಕೆಯನ್ನು ಹೇಳುತ್ತದೆ. ಇತಿಹಾಸದಲ್ಲಿ ಉಲ್ಲೇಖವಾಗದೆ ಹೋದ ನೂರಾರು ಸ್ವಯಂಸೇವಕರ ದಿನಚರಿಯ ಒಂದು ಕೈಪಿಡಿಯಂತಿದೆ.

೧೯೩೦ ಮಾರ್ಚ ೧೨ ಸ್ವದೇಶಿ ಚಳುವಳಿ ಆರಂಭವಾಗುತ್ತದೆ. ಜನರೆಲ್ಲರೂ ಗುಂಪು ಸೇರಿ ವಿದೇಶೀ ವಸ್ತ್ರವನ್ನು ದಹಿಸುತ್ತಾರೆ. ಗುಂಪು ಗುಂಪಾಗಿ ಜನರು ಮೆರವಣಿಗೆಯಲ್ಲಿ ಭಾಗವಹಿಸುತ್ತಾರೆ. ಅಲ್ಲೊಂದು ಶಿಸ್ತಿದೆ. ಏನೂ ಗಲಾಟೆ ಪುಂಡುತನಗಳಿಲ್ಲ. ಹುರುಪಿನ ಹಾಡುಗಳು ಜಯಜಯಕಾರಗಳು ಕೇಳಿ ಬರುತ್ತವೆ.

ಕರಿಯಿಲ್ಲ ಕುಣಿ ಕುಣಿವ ಹಯಕೈದು ತಾನಿಲ್ಲ
ಸೋಜಿಗದ ಕದನವಿದು
ಅರಿಯೆ ಸತ್ಯವೆ ಕವಚ
ಅಹಿಂಸೆಯೆ ಕರವಾಲ
ಬನ್ನಿ ಬೇಗನೆ ಸಾರಿ[೭]

ಇಂತಹ ಗೀತೆಗಳು ಸ್ವಯಂಸೇವಕರ ಹುರುಪನ್ನು ಹೆಚ್ಚಿಸುತ್ತದೆ. ಆ ಸಭೆಯಲ್ಲಿ ವಿದೇಶಿ ವಸ್ತ್ರಗಳು ಅಗ್ನಿ ನಾರಾಯಣನಿಗೆ ಆಹುತಿಯಾಗುತ್ತದೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಇಂತಹ ವಸ್ತ್ರ ಯಜ್ಞದಲ್ಲಿ ತೊಡಗಿದವರು ಬಡವರು. ಅವರಲ್ಲಿ ಇದ್ದುದೇ ಕಷ್ಟಪಟ್ಟು ತೆಗೆದುಕೊಂಡ ಕೆಲವೇ ಕೆಲವು ವಸ್ತ್ರಗಳು. ಆದರೂ ಅವುಗಳ ವ್ಯಾಮೋಹವನ್ನು ಬಿಟ್ಟು ಗಾಂಧೀಜಿಯ ಮಾತಿಗೆ ಬೆಲೆಕೊಟ್ಟು ವಿದೇಶಿ ವಸ್ತ್ರಗಳನ್ನು ದಹಿಸುವುದರ ಮೂಲಕ ತಮ್ಮ ದೇಶಭಕ್ತಿಯನ್ನು ಮೆರೆಯುತ್ತಾರೆ.

ಸ್ವಯಂಸೇವಕರು ಬಹಳಷ್ಟು ಶಿಸ್ತಿನಿಂದ ಅರಣ್ಯ ಶಾಸನವನ್ನು ಮುರಿಯುತ್ತಾರೆ. ಇವರ ಶಿಸ್ತು ಮತ್ತು ಸಂಘಟನಾ ಶಕ್ತಿಯನ್ನು ನೋಡಿ ಸರಕಾರಕ್ಕೆ ಆಶ್ಚರ್ಯವಾಗುತ್ತದೆ. ಕೆಲವು ಮಂದಿ ಸ್ವಯಂಸೇವಕರು ಹಳ್ಳಿಯ ಪಟೇಲರು, ಶಾನುಭೋಗರು ರಾಜೀನಾಮೆ ಕೊಡುವಂತೆ ಮನವೊಲಿಸುತ್ತಾರೆ. ಯಾಕೆಂದರೆ ಅವರೇ ಬ್ರಿಟಿಷ್ ಆಡಳಿತದ ಬುನಾದಿಗಳು. ತಮ್ಮ ದೇಶಬಾಂಧವರನ್ನು ಸುಳಿದು ಬ್ರಿಟಿಷರ ಬೊಕ್ಕಸವನ್ನು ಭರ್ತಿ ಮಾಡುತ್ತಿದ್ದರು. ಹಳ್ಳಿಯ ಪಟೇಲರು, ಗೌಡರು, ಶಾನುಭೋಗರು ರಾಜೀನಾಮೆ ಕೊಟ್ಟರೆ ಬ್ರಿಟಿಷ್ ಆಡಳಿತವನ್ನು ತಳಮಟ್ಟದಿಂದ ಅಲುಗಾಡಿಸಲು ಸಾಧ್ಯವಾಗುತ್ತಿತ್ತು. ಕೆಲವರು ಸ್ವಯಂಸೇವಕರ ಒತ್ತಾಯಕ್ಕೆ ಮಣಿದು ರಾಜೀನಾಮೆಯನ್ನು ಕೊಟ್ಟಿದ್ದರು.

ಕೆಲವೊಬ್ಬರು ಸ್ವಯಂಸೇವಕರು ತಮ್ಮ ಬದುಕನ್ನೇ ದೇಶಸೇವೆಗೆ ಮೀಸಲಿಡುತ್ತಾರೆ. ಜೈಲಿನಲ್ಲಿ ಹಲವಾರು ವರ್ಷಗಳನ್ನು ಕಳೆದ ಕಾರಣದಿಂದ ಅವರ ಆರೋಗ್ಯ ಕೆಟ್ಟು ಹೋಗುತ್ತದೆ.

ಭಾರತ ಸ್ವಾತಂತ್ರ್ಯಗೊಳ್ಳುವ ಕಾಲಕ್ಕೆ ಅದರ ಸುಖವನ್ನು ಅನುಭವಿಸಲಾಗಲಿ, ಕಾಣಲಾಗಲಿ ಅವರು ಇರುವುದಿಲ್ಲ. ಆ ಕಾಲಕ್ಕಾಗಲೇ ಕಾಂಗ್ರೆಸ್ಸಿನಲ್ಲಿ ಸ್ವಾರ್ಥಿಗಳು, ಏನೇನೂ ಕೆಲಸ ಮಾಡದೆ ಯಾವುದೋ ಅನುಕೂಲ ಪರಿಸ್ಥಿತಿಯಲ್ಲಿ ಮುಂದೆ ಬಂದು ತಮ್ಮಿಂದಲೇ ದೇಶಕ್ಕೆ ಸ್ವಾತಂತ್ರ್ಯ ಬಂತು ಎಂಬುದಾಗಿ ವರ್ತಿಸುವವರು ಅಲ್ಲಿದ್ದರು. 'ವಿಜಯ ಯಾತ್ರೆ' ಕಾದಂಬರಿಯ ನಾಯಕ ತನ್ನ ಬದುಕನ್ನೇ ದೇಶಸೇವೆಗೆ ಮೀಸಲಿಟ್ಟನು. ಪ್ರೀತಿಸಿದ ಹುಡುಗಿಯನ್ನು ಮದುವೆಯಾಗಲು ಸ್ವಾತಂತ್ರ್ಯದ ಆಸೆ ಅಡ್ಡಿ ಬಂತು. ಮೂರು ವರ್ಷ ಜೈಲುವಾಸ ಅನುಭವಿಸಿ ಆರೋಗ್ಯ ಕೆಟ್ಟು ಹೋದುದರ ಪರಿಣಾಮವಾಗಿ ಆಸ್ಪತ್ರೆಯ ಖಾಯಂವಾಸಿಯಾಗುತ್ತಾನೆ. ಆಸ್ಪತ್ರೆಯಲ್ಲಿ ಮಲಗಿಕೊಂಡ ವಿಜಯನ ಮನಸ್ಸಿಗೆ ಒಂದಿನಿತೂ ನೆಮ್ಮದಿಯಿಲ್ಲ. ತನ್ನ ತ್ಯಾಗ, ಬಲಿದಾನವೆಲ್ಲಾ ವ್ಯರ್ಥವಾಯಿತೇನೋ ಎಂದು ಕೊರಗುತ್ತಾನೆ. ಸ್ವತಂತ್ರ ಭಾರತದ ಸ್ಥಿತಿಯನ್ನು ಅವನು ೧೯೪೭ರಲ್ಲಿಯೇ ಮನಗಾಣುತ್ತಾನೆ. ಕೊನೆಗೂ ಸ್ವಾತಂತ್ರ್ಯ ಸಂಭ್ರಮವನ್ನು ಅನುಭವಿಸುವ ಯೋಗ ಅವನಿಗಿರುವುದಿಲ್ಲ. ೧೯೪೭ ಆಗಸ್ಟ್ ೧೫ರಂದೇ ಸಾವನ್ನಪ್ಪುತ್ತಾನೆ.

ಸ್ವಾತಂತ್ರ್ಯಕ್ಕೋಸ್ಕರ ಹೋರಾಡಿದ ವಿಜಯನಿಗೆ ಕೊನೆಗೂ ಸ್ವಾತಂತ್ರ್ಯ ಬಂತೆಂಬ ನೆಮ್ಮದಿಯು ಅವನಿಗೆ ಇಲ್ಲದಾಗುತ್ತದೆ. ಯಾಕೆಂದರೆ ಆ ವೇಳೆಗಾಗಲೇ ದೇಶದಲ್ಲಿ ವಂಚಕರು, ಸ್ವಾರ್ಥಿಗಳು ತುಂಬಿಕೊಂಡಿರುವ ಚಿತ್ರಣವನ್ನು ವಿಜಯ ಮನಗಾಣುತ್ತಾನೆ. ವಿಜಯ ದೇಶದ ಸ್ವಾತಂತ್ರ್ಯಕ್ಕಾಗಿ ದುಡಿದ ವ್ಯಕ್ತಿಯಾಗಿದ್ದನು. ಹದಿನೈದು ವರ್ಷಗಳ ಕಾಲ ಸ್ವಾತಂತ್ರ್ಯಕ್ಕಾಗಿ ತನ್ನ ದೇಹವನ್ನು ಸವೆಸಿ ಇಂದು ಬದುಕುವುದಕ್ಕೂ ಅಸಾಧ್ಯವೆನಿಸಿ ಅಸ್ಪತ್ರೆ ಸೇರಿದ್ದನು. ಆದರೆ ಆತನ ಈ ಪರಿಶ್ರಮವು ಯಾರಿಂದಲೂ ಗುರುತಿಸಲ್ಪಟ್ಟಿಲ್ಲ. ಇಂತಹ ಅದೆಷ್ಟೋ ಸಾಮಾನ್ಯ ಜನರು ಯಾರ ಗಮನಕ್ಕೂ ಬಾರದೆ ಯಾರಿಂದಲೂ ಗುರುತಿಸಲ್ಪಡದೆ ದೇಶ ಸೇವೆಯನ್ನು ಮಾಡಿದ್ದಾರೆ.

ವಿಜಯ ಆಸ್ಪತ್ರೆಯಲ್ಲಿ ಮಲಗಿಕೊಂಡು ಚಿಂತಿಸುತ್ತಾನೆ–"ನಿಜವಾಗಿಯೂ ದೇಹ ಸವೆಸಿ ತನುಮನಗಳಿಂದ ದುಡಿದು ಹಣ್ಣಾಗಿ ಹಾಳಾಗಿಯೂ ಹೋದವರಕ್ಕಿಂತ ಹೆಚ್ಚಾಗಿ ಯಾವುದೋ ಅನುಕೂಲ ಪರಿಸ್ಥಿತಿಯ ಮೂಲಕವಾಗಿ ಮುಂದಕ್ಕೆ ಬಂದವರೇ ದೇಶದ ಸೇವಕರಾಗಿ ದುಡಿದವರೆಂದು, ಸ್ವಾತಂತ್ರ್ಯವನ್ನು ಗಳಿಸಿದವರೆಂದು ಆತ್ಮಬಲಿಯನ್ನು ಮಾಡಿದವರೆಂದು ಹೆಗ್ಗಳಿಕೆಯಿಂದ ಎದೆಯುಬ್ಬಿಸಿಕೊಂಡು ಹಾರಾಡುತ್ತಿದ್ದಾರಲ್ಲಾ ಎಂದು ನನಗೆ ಅಸಮಧಾನ. ದೊಡ್ಡವರೆಂಬುವವರ ಗಮನಕ್ಕೆ ಬಾರದೆ ನನ್ನಂತೆ ದುಡಿದ ಸಾವಿರಾರು, ಲಕ್ಷಾವಧಿ ದೇಶದ ಸೇವಕರ ಸೇವೆ, ಸ್ಮರಣೆ, ದುಃಖ, ದಾರಿದ್ರ್ಯ, ಕಷ್ಟಗಳಿಗೆ ಯಾವ ಪ್ರತಿಫಲ ಸರಿಸಮಾನವಾದ ಸಮಧಾನ ತಂದೀತು? ಇಂದಿನ ಇತಿಹಾಸಕ್ಕೆ ಅವರ ಪರಿವೆಯಿಲ್ಲ. ಮರೆವೆ ಅವರಿಗೆ ಮನ್ನಣೆಯೇ? ಎಂದು ನನ್ನ ದುಃಖ."[೮] ವಿಜಯನ ಈ ಮಾತುಗಳಿಂದ ಸ್ವಾತಂತ್ರ್ಯೋತ್ತರ ಭಾರತದಲ್ಲಿ ಅಪಾತ್ರರಿಗೆ ದೊರೆತ ಮನ್ನಣೆ, ನಿಜವಾಗಿಯೂ ಸ್ವಾತಂತ್ರ್ಯಕ್ಕಾಗಿ ಹೋರಾಡಿದವರು ಕಡೆಗಣಿಸಲ್ಪಟ್ಟ ದುಃಖವನ್ನು ಕಾಣಬಹುದು.

ಈ ಕಾದಂಬರಿಯಲ್ಲಿ ವಿಜಯನ ಮನಸ್ಸನ್ನು ದ್ವಂದ್ವ, ನಿರಾಶೆ ತುಂಬಿಕೊಂಡಿದೆ. ಸ್ವಾತಂತ್ರ್ಯ ಬಂದರೂ ದೇಶದ ಸ್ಥಿತಿಗತಿಯನ್ನು ನೆನೆದು ಅವನಿಗೆ ನೆಮ್ಮದಿಯಿಲ್ಲ. ತನ್ನ ಕೆಲಸವನ್ನು ತಾನು ನಿಸ್ವಾರ್ಥದಿಂದ ಮಾಡಿದೆನೆಂಬ ತೃಪ್ತಿಯೊಂದು ಕಡೆಯಾದರೆ ನಿಜವಾದ ಸ್ವಾತಂತ್ರ್ಯಹೋರಾಟಗಾರರಿಗೆ ಸ್ವತಂತ್ರ ಭಾರತದಲ್ಲಿ ಮನ್ನಣೆ ಸಿಗಲಿಲ್ಲವೆಂಬ ದುಃಖ ಇನ್ನೊಂದು ಕಡೆ ಅವನನ್ನು ಕಾಡುತ್ತಿದೆ.

ದೇಶಕ್ಕೆ ಸ್ವಾತಂತ್ರ್ಯದ ವಿಜಯೋತ್ಸವ. ಆದರೆ ೧೫ ವರ್ಷಗಳಲ್ಲಿ ಮೂರು ಬಾರಿ ದೇಶಕ್ಕಾಗಿ ಸೆರೆಮನೆವಾಸವನ್ನು ಅನುಭವಿಸಿದ ವಿಜಯ ೧೯೪೭ ಆಗಸ್ಟ್ ೧೫ರಂದೇ ಪ್ರಾಣತ್ಯಜಿಸುತ್ತಾನೆ. ಪ್ರೇಯಸಿ ಮನೋರಮೆ ಆತನಿಗೋಸ್ಕರ ಒಂಭತ್ತು ತಿಂಗಳು ಮಾಡಿದ ಆರೈಕೆ ವ್ಯರ್ಥವಾಗುತ್ತದೆ. ಈ ವಿಜಯನ 'ವಿಜಯ ಯಾತ್ರೆ' ಮಸಣಕ್ಕೆ ಸಾಗುತ್ತದೆ. ಅವನನ್ನು ಹೊತ್ತ ರಂಗಣ್ಣ ತನ್ನ ಮನಸ್ಸಿನಲ್ಲಿ ಹೀಗೆ ಯೋಚಿಸುತ್ತಾನೆ–"ಇದು ವಿಜಯನೊಬ್ಬನ ದೇಹಭಾರ ಮಾತ್ರವಲ್ಲ. ದೇಶಕ್ಕಾಗಿ ಹೇಳ ಹೆಸರಿಲ್ಲದೆ, ಎಣೆಯಿಲ್ಲದೆ ದುಡಿದವರ, ಎಣಿಕೆಯಿಲ್ಲದೆ ದೇಹ ಇಟ್ಟವರ ಮೃತದೇಹಗಳ ಭಾರ. ತಮ್ಮ ಮಕ್ಕಳು ಮರಿಗಳನ್ನು, ಕೂಸು ಕುನ್ನಿಗಳನ್ನು ತಾಯಿ–ತಂದೆ, ಅಕ್ಕ ತಂಗಿಯರನ್ನು ಎಣೆಯಿಲ್ಲದ ಬಡತನಕ್ಕೆ ಬಲಿಯಾಗಿಸಿ ಇಂದಿನ ಉತ್ಸವದಿಂದ ಮೊದಲಾಗಿ ಉಳಿದವರೆಲ್ಲರೂ ಸುಖಿಗಳಾಗಲಿ ಎಂದು ರಕ್ತ ಸುರಿಸಿದ ಸಾವರಾರು ರಕ್ತಸಾಕ್ಷಿಗಳ ದೇಹಗಳ ಭಾರ! ಇಂದು ಭಾರತ ಸ್ವತಂತ್ರವಾಯಿತು. ಭಾರತ ಬಂಧಮುಕ್ತವಾಯಿತು. ಆದರೆ ಹೀಗೆ ಸೋತವರ, ಸತ್ತವರ ಋಣದಿಂದ ಎಂದಾದರೂ ಮುಕ್ತವಾಗುವುದೇ ದೇಶ? ಎಂದು? ಹೇಗೆ? ಇವರ ಸವಿಗೆ ಇವರ ಗೋಳಿಗೆ ಸ್ವತಂತ್ರ ಭಾರತದ ಉತ್ತರವೇನು?" ರಂಗಣ್ಣನ ಮನಸ್ಸಿನಲ್ಲಿ ಇಂತಹ ಮಾರ್ಮಿಕವಾದ ಪ್ರಶ್ನೆಯೊಂದು ಉದ್ಭವಿಸುತ್ತದೆ.

## ಮಹಿಳೆಯರು

'ಹೆಜ್ಜೆ' ಕಾದಂಬರಿಯಲ್ಲಿ ಸಾವಿತ್ರಿ ಎಂಬ ಹೆಣ್ಣುಮಗಳು ಗಾಂಧಿ ತತ್ವದ ಮೇಲೆ ಪೂರ್ಣ ನಂಬಿಕೆಯಿಟ್ಟವಳು. ಅವಳ ಗಂಡ ವಿದ್ಯಾಧರನಂತೆ ಅವಳು ಗಾಂಧೀಯ ಕಾರ್ಯಕ್ರಮಗಳನ್ನು ವಿಮರ್ಶೆ ಮಾಡುವುದಕ್ಕೆ ಹೋಗುವುದಿಲ್ಲ. ಗಾಂಧಿ ಏನೇ ನಿರ್ಧಾರ ತೆಗೆದುಕೊಂಡರೂ ಅದರಲ್ಲಿ ದೇಶದ ಒಳಿತನ್ನೇ ಗಮನದಲ್ಲಿರಿಸಿಕೊಳ್ಳುತ್ತಾರೆಂಬುದು ಅವಳ ಅಚಲವಾದ ನಂಬಿಕೆ. ಇಂತಹ ಅಚಲವಾದ ಗಾಂಧಿಭಕ್ತಿಯು ಅವಳಲ್ಲಿ ಯಾವುದೇ ಗೊಂದಲಕ್ಕೆ ಎಡೆ ಮಾಡಿಕೊಡದೆ ತನ್ನ ಕೈಲಾದ ಸ್ವಾತಂತ್ರ್ಯ ಸೇವೆಯನ್ನು ಮಾಡಲು ಸಾವಿತ್ರಿಗೆ ಸಾಧ್ಯವಾಗುತ್ತದೆ.

ಈ ಕಾದಂಬರಿಯಲ್ಲಿ ಸಾವಿತ್ರಿ ವಿದ್ಯಾಧರನ ಬದುಕನ್ನೇ ಬದಲಾಯಿಸುತ್ತಾಳೆ. ಕೆಂಚನಿಗೆ ಗಾಂಧಿಟೋಪಿಯನ್ನು ತಂದುಕೊಡುತ್ತಾಳೆ. ತನ್ನ ಗಂಡನ ಅಪೇಕ್ಷೆಯಂತೆ ಕೆಂಚನಿಗೆ ಇಂಗ್ಲೀಷ್ ಕಲಿಸುತ್ತಾಳೆ. ಮುಂಬಯಿಗೆ ಬಂದ ನಂತರ ಕೂಡಾ ಸಾವಿತ್ರಿ ತಕಲಿಯಲ್ಲಿ ನೂಲು ತೆಗೆಯುತ್ತಾಳೆ. ಅವಳಿಗೆ ತಾನು ಯಾವ ಕ್ಷೇತ್ರ ಆಯ್ಕೆ ಮಾಡಿಕೊಳ್ಳಬೇಕೆಂಬ ಗೊಂದಲವಿರಲಿಲ್ಲ.

ಗಾಂಧಿಯ ಮೇಲಿದ್ದ ಅಚಲವಾದ ಭಕ್ತಿ ಅವಳ ಎಲ್ಲಾ ಸಿದ್ಧಾಂತಗಳ ಮೂಲವಾಗಿತ್ತು. ಆಕೆ ಯಾವುದೇ ಇತರ ತತ್ವಗಳ ಗೊಡವೆಗೆ ಹೋಗದೆ ಗಾಂಧೀಜಿಯ ವಿಚಾರಗಳ ವಿಮರ್ಶೆಗೆ ಹೋಗದೆ ಗಾಂಧಿಯನ್ನು ಒಪ್ಪಿಕೊಂಡಿದ್ದಳು. ತನ್ನ ಗಂಡ ವಿದ್ಯಾ ಮುಂಬಯಿಯಲ್ಲಿ 'ಚಲೇಜಾವ್' ಚಳುವಳಿಯಲ್ಲಿ ಹುತಾತ್ಮನಾದ ಎಂಬ ಸುದ್ದಿ ತಿಳಿದಾಗಲೂ ಸಾವಿತ್ರಿ ಅದನ್ನು ಧೈರ್ಯದಿಂದಲೇ ಎದುರಿಸುತ್ತಾಳೆ. ವಿದ್ಯಾ ಬ್ರಿಟಿಷರ ವಿರುದ್ಧ ಕೋವಿ ಹಿಡಿದುದರಿಂದಲೇ ಅವನಿಗೆ ಗುಂಡಿಕ್ಕಲಾಯಿತೆಂದು ಬ್ರಿಟಿಷ್ ದಾಖಲೆ ಹೇಳುತ್ತದೆ. ವಿದ್ಯಾ ಜೀವಕೊಟ್ಟ ಮುಂಬಯಿಯಲ್ಲಿಯೇ ತಾನು ಇರಲು ಬಯಸಿದಳು. ಸಾವಿತ್ರಿ ಮುಂಬಯಿಯ ತನ್ನ ಶಾಲೆ, ಕಾಲೇಜು, ಮನೆ, ಎಲ್ಲಾ ಕಡೆ ಹೋರಾಟದ ಪ್ರತೀಕವೆಂಬಂತೆ ಕಂಡು ಬರುತ್ತಿದ್ದಳು. ಸಾವಿತ್ರಿ ತನ್ನ 'ಮಹಾರಾಜಾ ಟೆರೇಸಿ'ನ ಮನೆಯಲ್ಲಿ ಇಬ್ಬರು ಅಪರಿಚಿತ ಭೂಗತ ಚಳುವಳಿಗಾರರಿಗೆ ತಂಗಲು ಒಂದೆರಡು ರಾತ್ರಿ ಅವಕಾಶವನ್ನು ನೀಡಿದಳು. ಕೊಡದೂರಿನಂತಹ ಒಂದು ಹಳ್ಳಿಯ ಹೆಣ್ಣುಮಗಳು ತೋರಿಸಿದ ಧೈರ್ಯ ಅಪೂರ್ವವಾದುದು. ಈ ರೀತಿ ಅಪ್ರತ್ಯಕ್ಷವಾಗಿ ಚಳುವಳಿಯಲ್ಲಿ ಭಾಗವಹಿಸುತ್ತಾಳೆ.

ನಾವಿಲ್ಲಿ ಸಾಮಾನ್ಯವಾಗಿ ಗಮನಿಸಬೇಕಾದ ಅಂಶವೆಂದರೆ ನಿಜವಾಗಿಯೂ ಗಾಂಧಿಯ ತತ್ವವನ್ನು ಅಕ್ಷರಶಃ ಒಪ್ಪಿದವರು ಹೋರಾಟದಲ್ಲಿ ತೊಡಗಿಸಿಕೊಂಡ ಹೆಣ್ಣುಮಕ್ಕಳು. ಅವರಿಗೆ ಸಮಾಜವಾದವನ್ನು ಸಾರುವ ಕಮ್ಯುನಿಸ್ಟ್ ತತ್ವವಾಗಲಿ, ಅಥವಾ ಗಾಂಧೀಜಿಯ ಅಹಿಂಸೆಯಿಂದ ಸ್ವಾತಂತ್ರ್ಯ ಬರಲಾರದೆಂಬ ಅಧೈರ್ಯವಾಗಲಿ ಇಲ್ಲ. ಗಾಂಧೀಜಿ ಏನೇ ಹೇಳಿದರೂ ದೇಶೋದ್ಧಾರಕ್ಕಾಗಿ ಹೇಳುತ್ತಾರೆಂಬುದು ಅವರ ಅಚಲವಾದ ನಂಬಿಕೆ. ಆದುದರಿಂದ ವಿಚಾರವಾದಿ ವಿದ್ಯಾವಂತ ಹೋರಾಟಗರರಿಗೆ ಕಾಡಿದ ಯಾವುದೇ ಗೊಂದಲವಾಗಲಿ, ಗಾಂಧೀಜಿಯ ಜೊತೆಯಲ್ಲಿ ಸೈದ್ಧಾಂತಿಕ ಭಿನ್ನಾಭಿಪ್ರಾಯವಾಗಲಿ ನಮ್ಮ ಹೆಣ್ಣುಮಕ್ಕಳಿಗೆ ಉಂಟಾಗಲಿಲ್ಲ.

ಕೆಲವೊಂದು ಸಂದರ್ಭದಲ್ಲಿ ಕಾಲೇಜು ಕನ್ನೆಯರು ಕೂಡಾ ಗಾಂಧೀಜಿಯವರ ಕರೆಗೆ ಓಗೊಟ್ಟು ಕಾಲೇಜು ತ್ಯಜಿಸಿ ಚಳುವಳಿ ಸೇರಿದ ಉದಾಹರಣೆಗಳು ಬೇಕಾದಷ್ಟಿವೆ. ತಾವು ಕೂಡಾ ಕಾಡಿನಲ್ಲಿ ತಲೆಮರೆಸಿಕೊಂಡು ಕಷ್ಟ ಕಾರ್ಪಣ್ಯಗಳನ್ನು ಅನುಭವಿಸಿ ಹೋರಾಟಕ್ಕೆ ಸಹಾಯ ಮಾಡಿದ್ದರು. ಇಲ್ಲಿ ಕೆಲವೊಂದು ಸಂದರ್ಭದಲ್ಲಿ ಹಲವಾರು ಪುರುಷರ ಜೊತೆಯಲ್ಲಿ ಒಬ್ಬಳು ಮಹಿಳೆ ಚಳುವಳಿಯಲ್ಲಿ ಭಾಗವಹಿಸುತ್ತಿದ್ದಳು. ಆದರೆ ಎಲ್ಲಾ ಪುರುಷರು ಕೂಡಾ ಆ ಮಹಿಳೆಯನ್ನು ತುಂಬಾ ಗೌರವದಿಂದ, ಅಕ್ಕ, ತಂಗಿ, ಮಗಳು ಎಂಬ ಭಾವನೆಯಿಂದ ಉಪಚರಿಸುತ್ತಿದ್ದರೇ ಹೊರತು ಎಲ್ಲೂ ತಪ್ಪಿ ನಡೆದ ಉದಾಹರಣೆಗಳಿಲ್ಲ. ಕೆಲವೊಂದು ಸಂದರ್ಭದಲ್ಲಿ, ಕರಪತ್ರಗಳನ್ನು ಮುದ್ರಿಸಲು ಅಥವಾ ಪೋಲೀಸರಿಂದ ತಪ್ಪಿಸಿಕೊಳ್ಳುವ ಸಂದರ್ಭದಲ್ಲಿ ಸ್ತ್ರೀ ಪುರುಷರು ಜೊತೆಯಾಗಿ ರಾತ್ರಿಗಳನ್ನು ಕಳೆಯುವ ಸಂದರ್ಭ ಎದುರಾಗುತ್ತಿತ್ತು. ಆದರೆ ಎಲ್ಲೂ ಕೂಡ ಅವರು ಸಂಯಮ ಮೀರಿ ವರ್ತಿಸಿದ್ದಿಲ್ಲ. ಇಂತಹ ಒಂದು ಮನೋಬಲದಿಂದಲೇ ಅವರು ಚಳುವಳಿಯಲ್ಲಿ ಭಾಗವಹಿಸುತ್ತಿದ್ದರು.

'ಮಾಡಿ ಮಡಿದವರು' ಕಾದಂಬರಿಯಲ್ಲಿ ಹೇಮಾ ಎಂಬ ಕಾಲೇಜು ಕನ್ಯೆ ದೇಶದ ಸ್ವಾತಂತ್ರ್ಯಕ್ಕೋಸ್ಕರ ಕಾಲೇಜನ್ನು ತ್ಯಜಿಸಿ ಹೋರಾಟದ ಹಾದಿ ಹಿಡಿಯುತ್ತಾಳೆ. ಬೆಳಗಾಂಗೆ ಹೋಗುವ ರೈಲಿನಲ್ಲಿ ಅವಳಿಗೆ ಕಲ್ಲಾಪುರದ ಶೇಖರಪ್ಪನ ಪರಿಚಯವಾಗುತ್ತದೆ. ಹೇಮಾ ಶೇಖರಪ್ಪನ ಹೋರಾಟದಲ್ಲಿ ಭಾಗಿಯಾಗಲು ನಿರ್ಧರಿಸುತ್ತಾಳೆ. ಆಕೆ ರಾತ್ರಿಯಿಡೀ ನಿದ್ದೆಗೆಟ್ಟು ಕರಪತ್ರಗಳನ್ನು ಸಿದ್ಧಗೊಳಿಸುತ್ತಾಳೆ. ಲಂಬಾಣಿಗಳ ತಾಂಡದಲ್ಲಿ ವಾಸಿಸಿ ಕಟ್ಟಿಗೆ ಹೊರೆ ಹೊತ್ತು ಊರೂರು ತಿರುಗುವ ಲಂಬಾಣಿಗಳ ಜೊತೆಯಲ್ಲಿ ಕರಪತ್ರವನ್ನು ಕಳುಹಿಸುತ್ತಿದ್ದಳು. ಅನಕ್ಷರಸ್ಥರಾದ ಲಂಬಾಣಿ ಹೆಣ್ಣು ಮಕ್ಕಳು ಕೂಡಾ ತಮಗೆ ತಿಳದೋ ತಿಳಿಯದೆಯೋ ಸ್ವಾತಂತ್ರ್ಯ ಹೋರಾಟಕ್ಕೆ ತಮ್ಮದೇ ಆದ ಕಿರು ಕಾಣಿಕೆಯನ್ನು ಅರ್ಪಿಸಿದ್ದರು. ಇವರು ಕರಪತ್ರವನ್ನು ಹಂಚುವಾಗ ಪೊಲೀಸರಿಗೆ ಸಿಕ್ಕಿ ಬಿದ್ದರೂ ಬಾಯಿಬಿಡಲಿಲ್ಲ. ಅನಕ್ಷರಸ್ಥರಾದ ಹೆಣ್ಣುಮಕ್ಕಳ ಅಂತರಂಗದಲ್ಲಿ ಕೂಡಾ ಭಾರತ ಮಾತೆಯ ಮೇಲೆ ಎಲ್ಲೋ ಒಂದು ಕಡೆಯಲ್ಲಿ ಪ್ರೀತಿಯಿರುವುದನ್ನು ನಾವು ಕಾಣುತ್ತೇವೆ. ಬ್ರಿಟಿಷರು ಆಳಿದರೂ ಸ್ವಾತಂತ್ರ್ಯ ಬಂದರೂ, ಅವರ ಬದುಕಿನ ಬವಣೆಯಲ್ಲೇನೂ ಬದಲಾವಣೆಯಾಗುವುದಿಲ್ಲ. ಹೇಮಾಳಂತಹ ದಿಟ್ಟ ಹೆಣ್ಣುಮಕ್ಕಳು ತಾವು ಹೆಣ್ಣು ಗಂಡೆಂಬ ಭೇದ ಮರೆತು ಚಳುವಳಿಯಲ್ಲಿ ಭಾಗವಹಿಸುತ್ತಾರೆ. ಆಕೆ ವಿಶ್ವನಾಥನೊಂದಿಗೆ ಹೇಳುವ ಮಾತು ಅವಳ ವ್ಯಕ್ತಿತ್ವದಲ್ಲಿ ಅಡಗಿದ್ದ ತೇಜಸ್ಸು ಹಾಗೂ ಆತ್ಮ ಬಲದ ಪ್ರತಿಬಿಂಬದಂತಿದೆ. "ನಲವತ್ತೆರಡರ ಚಳುವಳಿ ಅತಿಂಥಾ ಚಳುವಳಿ ಅಲ್ಲ ವಿಶ್ವನಾಥ, ಬ್ರಿಟಿಷ್ ಸರಕಾರವನ್ನು ತೊಲಗಿಸದೆ ನಿಲ್ಲುವ ಹಾಗಿಲ್ಲ ಈ ಚಳುವಳಿ. ಇದರೊಳಗ ನಮ್ಮ ನಾಡಿನೊಳಗ ಹೆಂಗಸರೊಬ್ಬರೂ ಕೆಲಸ ಮಾಡಿಲ್ಲ ಅಂತಾದರ ನಮಗೆಷ್ಟು ಅವಮಾನ ಅದು! ನಾಳೆ ಈ ಚಳುವಳಿಯ ಇತಿಹಾಸ ಬರೆಯುವವರು ನಮ್ಮ ಹೆಣ್ಣು ಜಾತಿಯನ್ನೇ ಕೀಳಾಗಿ ಕಾಣಿಸಬಾರದು! ನನ್ನ ಮಟ್ಟಿಗೆ ಹೇಳಬೇಕಾದರ ಈ ಚಳುವಳಿಯೊಳಗೆ ಇರೂತನಕ ನಾ ಹೆಣ್ಣು ಅನ್ನೋದನ್ನೇ ಮರೆತು ಇರ್ತಿನಿ. ಈಗ ನನ್ನ ಕಣ್ಣಿಗೆ ನೀನು ಬರೀ ಗಂಡಸಲ್ಲ, ನಾನು ಬರೀ ಹೆಂಗಸಲ್ಲ. ಈಗ ನಡೆದಿರೋದು ಯುದ್ಧ. ಈ ಯುದ್ಧದಾಗ ಭಾಗವಹಿಸುವವರು ನಾವಿಬ್ಬರೂ ಸೈನಿಕರು, ಅಷ್ಟೇ..."[೧೦] ಹೇಮಾಳ ಈ ಮಾತಿನಲ್ಲಿ ಅಚಲವಾದ ಧೈರ್ಯ, ಮನೋನಿಯಂತ್ರಣ, ಹೋರಾಡುವ ದಿಟ್ಟ ನಿರ್ಧಾರವನ್ನು ಕಾಣಬಹುದು.

ಸಂಗಣ್ಣ ಎಂಬ ಚಳುವಳಿಗಾರನ ಅಚಾತುರ್ಯದಿಂದ ಶೇಖರಪ್ಪ, ಹೇಮಾ, ಬಸವಣ್ಯಾಪ್ಪ ಇವರೆಲ್ಲರೂ ಪೊಲೀಸರನ್ನು ಎದುರಿಸಬೇಕಾದ ಪ್ರಸಂಗ ಬರುತ್ತದೆ. ಪೊಲೀಸರು ಹಿಂದಿನಿಂದ ಗುಂಡು ಹಾರಿಸಬೇಕಾದರೆ ಹೇಮಾ ಕೂಡಾ ಅವರಿಗೆ ಗುಂಡಿನಿಂದ ಉತ್ತರ ಕೊಡಲು ನಿರ್ಧರಿಸುತ್ತಾಳೆ. ಅಷ್ಟರಲ್ಲಿ ಪೊಲೀಸರ ಗುಂಡು ಬಂದು ಅವಳ ಬಲಗೈಗೆ ತಾಗುತ್ತದೆ. ಅವಳನ್ನು ರಕ್ಷಿಸಲು ಬಂದ ಶೇಖರನಲ್ಲಿ ಅವಳು ಹೇಳುವ ಮಾತು ಇಡೀ ಸ್ತ್ರೀ ಕುಲದ ಗೌರವವನ್ನು ಎತ್ತಿ ಹಿಡಿಯುವಂತಿದೆ. "ನೀವೀಗ ನನ್ನನ್ನು ಬಿಟ್ಟು ಇಲ್ಲಿಂದ ಪಾರಾಗಿ ಹೋಗ್ರಿ. ಹ್ಯಾಗೂ ನನ್ನ ಹತ್ತಿರ ಸಾಕಷ್ಟು ಗುಂಡು ಇದಾವೆ... ಒಂದು ತಾಸಿನ ತನಕ ಇವರನ್ನು

ತಡೀತೇನೆ ನಾನು. ಅಷ್ಟರೊಳಗ ನೀವಿಬ್ಬರೂ ಗುಡ್ಡಾ ಇಳಿದು ರಸ್ತೇಕ ಹೋಗಿ ಮುಟ್ಟುತ್ತೀರಿ. ನಡೀರಿ. ಹೊರಡ್ರಿ ಇಲ್ಲಂದ..." ಎಂದು ನುಡಿದು ಆಕೆ ಮತ್ತೆ ಗುಂಡು ಹಾರಿಸ ತೊಡಗಿದಳು.

ಹೀಗೆ ಸ್ವಾತಂತ್ರ್ಯ ಹೋರಾಟದಲ್ಲಿ ಗಂಡಸರಿಗೆ ಸರಿ ಸಮಾನವಾಗಿ ಹೋರಾಡಿದ ಹೇಮಾ ಪೊಲೀಸರ ಗುಂಡಿಗೆ ಬಲಿಯಾಗುತ್ತಾಳೆ. ಎಲ್ಲಿ ಕೂಡಾ ತಾನು ಅಬಲೆಯೆಂದಾಗಲಿ, ಹೆಣ್ಣೆಂದಾಗಲಿ ಹಿಂಜರಿಯಲಿಲ್ಲ. ಗಂಡಸರಿಗೆ ಸಮಾನವಾಗಿ ಕಾಡು-ಬೆಟ್ಟ ಅಲೆದಾಡಿದಳು. ರಾತ್ರಿಯಲ್ಲಿ ನಿದ್ದೆ ಬಿಟ್ಟು ಕರಪತ್ರ ಹೊರಡಿಸಿದಳು. ಪೊಲೀಸರ ಗುಂಡಿಗೆ ಪ್ರತಿಯಾಗಿ ಗುಂಡು ಹಾರಿಸಿದಳು. ಕೊನೆಗೆ ಭಾರತಮಾತೆಯ ಚರಣಕ್ಕೆ ತನ್ನ ಪ್ರಾಣವನ್ನೆ ಅರ್ಪಿಸಿದಳು. ಈ ಕಾದಂಬರಿಯಲ್ಲಿ ಬರುವ ಇತರ ಕೆಲವು ಹೆಣ್ಣುಮಕ್ಕಳು ಪ್ರತ್ಯಕ್ಷವಾಗಿ ಚಳುವಳಿಯಲ್ಲಿ ಭಾಗವಹಿಸದಿದ್ದರೂ ಪರೋಕ್ಷವಾಗಿ ಬಾರತಮಾತೆಗೋಸ್ಕರ ತ್ಯಾಗ ಮಾಡುವ ಅವರ ಧೈರ್ಯ, ದಿಟ್ಟತನ ಮೆಚ್ಚತಕ್ಕದ್ದು. ನಾವಿಲ್ಲಿ ಪ್ರತ್ಯಕ್ಷವಾಗಿ ಹೋರಾಡಿದವರ ಬಗ್ಗೆ ಮಾತ್ರ ಶ್ಲಾಘಿಸುತ್ತೇವೆ. ಆದರೆ ಗಂಡಸರನ್ನು ಹೋರಾಟಕ್ಕೆ ಕಳುಹಿಸಿ ತಾವು ದಿಟ್ಟತನದಿಂದ ಕಷ್ಟ-ನಷ್ಟಗಳನ್ನು ಅನುಭವಿಸಿದ ಮಹಿಳೆಯರು ಕೂಡಾ ಸ್ವಾತಂತ್ರ್ಯ ಚಳುವಳಿಯ ದೃಷ್ಟಿಯಲ್ಲಿ ಅಷ್ಟೇ ಪ್ರಮುಖರು. ವಿಶ್ವನಾಥನನ್ನು ಚಳುವಳಿಯಿಂದ ಬಿಡಿಸುವುದಕ್ಕೋಸ್ಕರ ಅವನ ತಂದೆ ಬಾಬಾ ಸಾಹೇಬರು ಶೇಖರಪ್ಪನಿಗೆ ಲಾವಣಿಗೆ ಕೊಟ್ಟ ಹೊಲವನ್ನು ಬಿಡಿಸುತ್ತೇನೆಂದು ಅವರನ್ನು ಬೆಸರಿಸುತ್ತಾರೆ. ಆಗ ಶೇಖರಪ್ಪನ ಮುದುಕಿ ತಾಯಿಯು "ನಮಗಾಗಿ ನೀವೇನೂ ಚಳುವಳಿ ಬಡಬೇಕಾಗಿಲ್ಲಪ್ಪ. ನಾ ಮುದುಕಿ ಆಗ್ತಾ ಬಂದೆ. ಆದರೂ ಮೈಯಾಗ ಶಕ್ತಿ ಐತಿ ಇನ್ನೂ. ಈ ತೋಳು ಇರುವತನಕಾ ಯಾರಿಗೂ ಅಂಜಬೇಕಾಗಿಲ್ಲ. ಕೂಲಿ ಮಾಡಿ ದುಡಿದು ಇರ್ತೀವಿ. ಆದರೆ ಯಾರಿಗೂ ಅಂಜಾಕಿಲ್ಲ" ಎಂದು ಆವೇಶದಿಂದ ನುಡಿದಳು ಪಾರ್ವತಮ್ಮ. ಕನ್ನಡ ನಾಡಿನ ಕೆಚ್ಚು ಕಲಿತನಗಳೇ ಮೂರ್ತಿವೆತ್ತಂತ್ತಿದ್ದ ಆ ತಾಯಿಯನ್ನು ಕಂಡು ಗುಂಪಿನಲ್ಲಿದ್ದ ಎಲ್ಲಾ ಚಳುವಳಿಗಾರರಿಗೆ ಮೈಯುಬ್ಬದೆ ಇರಲಿಲ್ಲ. ಇಂತಹ ಹೆಣ್ಣುಮಕ್ಕಳ ಆತ್ಮವಿಶ್ವಾಸ ಪರೋಕ್ಷ ಸಹಕಾರದಿಂದಲೇ ಗಂಡಸರು ಚಳುವಳಿಯಲ್ಲಿ ಭಾಗವಹಿಸಲು ಸಾಧ್ಯವಾಯಿತು. ೧೧

ಇನ್ನೊಂದು ಇಂತಹುದೇ ಪ್ರಸಂಗವನ್ನು ನಾವು ಕಾದಂಬರಿಯಲ್ಲಿ ಕಾಣುತ್ತೇವೆ. ಚಳುವಳಿಗಾರ ಸಂಗಣ್ಣನನ್ನು ಹುಡುಕಿಕೊಂಡು ಪೊಲೀಸರು ಬರುತ್ತಾರೆ. ಅವನ ತಾಯಿ ಸಿದ್ಧವ್ವ ಸಾವಿನಂಚಿನಲ್ಲಿದ್ದ ಮುದುಕಿಗೆ ಪೊಲೀಸರನ್ನು ಕಂಡಾಕ್ಷಣ ಅದೆಲ್ಲಿಂದ ಶಕ್ತಿ ಬಂತೋ ಏನೋ. ಪೊಲೀಸರು ಸಂಗಣ್ಣ ಅವಿತುಕೊಂಡಿದ್ದ ಕೋಣೆಗೆ ಹೋಗುವುದನ್ನು ತಡೆಯುತ್ತಾಳೆ. ನರಳುತ್ತಾ ಬಿದ್ದುಕೊಂಡಿದ್ದ ಮುದುಕಿಗೂ ಇನ್ನು ತಡೆಯಲಾಗಲಿಲ್ಲ. ದಿಗ್ಗನೆ ಹಾಸಿಗೆಯಿಂದೆದ್ದು ಫೌಜುದಾರನಿಗೆ ಅಡ್ಡವಾಗಿ ತನ್ನ ಮೂಳೆಯ ದೇಹವನ್ನು ನಿಲ್ಲಿಸಿ ನಡುಗುವ ದನಿಯಲ್ಲಿ ನುಡಿದಳು "ನನ್ನ ಪ್ರಾಣದಾಗ ತ್ರಾಣ ಇರೂತನಕ ಆ ಕೋಣೆಯೊಳಗ ನಿನಗ ಹೋಗಾಕ ಕೊಡಾಕಿಲ್ಲ. ಸುಮ್ಮನೆ ಹೋಗೋ ಮೂಳಾ."[೧೨] ಎಂದು ಚಂಡಿಯಂತೆ ಅಬ್ಬರಿಸಿದಳು. ತನ್ನ ಮಗನನ್ನು ಉಳಿಸಲು ಪೊಲೀಸರ ಗುಂಡಿಗೆ ತಾನೇ ಎದೆಯೊಡ್ಡಿ ಕಣ್ಮುಚ್ಚಿದಳು. ಇಂತಹ ಧೈರ್ಯವಂತೆಯರಾದ ಹೆಣ್ಣುಮಕ್ಕಳು ನಮ್ಮ ನಾಡಿನಲ್ಲಿದ್ದುದರಿಂದ ಗಂಡಸರು ಗಾಂಧೀಜಿಯ

ಕರೆಗೆ ಓಗೊಟ್ಟರು. ಸೂರಪ್ಪ ಗೌಡನೆಂಬವನು ಮೋಸದಿಂದ ಶೇಖರಪ್ಪ ಹಾಗೂ ಅವನ ತಂಡವನ್ನು ಹಿಡಿಸಲು ಪ್ರಯತ್ನಿಸಿದಾಗ ಅವನ ಮಗಳು ನೀಲವ್ವನೇ ಈ ವಿಚಾರವನ್ನು ಶೇಖರನಿಗೆ ತಿಳಿಸಿ ಅವನನ್ನು ಅಪಾಯದಿಂದ ರಕ್ಷಿಸುತ್ತಾಳೆ. ಈ ರೀತಿಯಾಗಿ ಪರೋಕ್ಷವಾಗಿ ಸಹಾಯ ಮಾಡಿದ ಹೆಣ್ಣುಮಕ್ಕಳು ಹಲವಾರು ಮಂದಿ.

ಸ್ವಾತಂತ್ರ್ಯ ಹೋರಾಟದಲ್ಲಿ ನಮ್ಮ ಹೆಣ್ಣುಮಕ್ಕಳು ಆಬಾಲವೃದ್ಧರಾದಿಯಗಿ ಎಲ್ಲರೂ ಭಾಗವಹಿಸುತ್ತಾರೆ. ಚಿಕ್ಕಪ್ರಾಯದ ಹೆಣ್ಣುಮಕ್ಕಳು ಕೂಡಾ ಮೆರವಣಿಗೆಯಲ್ಲಿ ಭಾಗವಹಿಸುವುದು, ಪ್ರಭಾತಪೇರಿ ಹಾಡುವುದು ಇತ್ಯಾದಿಗಳಲ್ಲಿ ಭಾಗವಹಿಸುತ್ತಿದ್ದರು. ಭಾರತದ ತ್ರಿವರ್ಣಧ್ವಜವನ್ನು ಸರಕಾರಿ ಕಚೇರಿಗಳಲ್ಲಿ ಹಾರಿಸುವುದು, ಮೆರವಣಿಗೆಯಲ್ಲಿ ಧ್ವಜವನ್ನು ಹಿಡಿದುಕೊಂಡು ಸಾಗುವುದು ಕೂಡಾ ಚಳುವಳಿಯ ಒಂದು ಭಾಗವಾಗಿತ್ತು. ಭಾರತದ ತ್ರಿವರ್ಣ ಧ್ವಜವನ್ನು ಕಂಡರೆ ಬ್ರಿಟಿಷರ ಗುಲಾಮರಾಗಿದ್ದ ನಮ್ಮ ಪೊಲೀಸರು ಕೆಂಡ ಕಾರುತ್ತಿದ್ದರು. 'ಸ್ವಾತಂತ್ರ್ಯದೆಡೆಗೆ' ಕಾದಂಬರಿಯಲ್ಲಿ ಧ್ವಜ ಹಿಡಿದಿದ್ದ ಪುಟ್ಟ ಹುಡುಗಿಯೊಬ್ಬಳು ಪೊಲೀಸ್ ತನ್ನ ಕೆನ್ನೆಗೆ ಬಾರಿಸಿದರೂ ಧ್ವಜ ಮಾತ್ರ ಬಿಡುವುದಿಲ್ಲ. ಹತ್ತು ವರ್ಷದ ಒಬ್ಬಳು ಹೆಣ್ಣುಮಗಳಲ್ಲಿ ಕೂಡಾ ಜೀವವನ್ನು ಪಣಕ್ಕಿಟ್ಟು ಹೋರಾಡುವ ಶಕ್ತಿಯಿತ್ತು.

ಅಂದಿನ ಕಾಲದ ಕೆಲವು ಹೆಣ್ಣುಮಕ್ಕಳಿಗೆ ಓದಿಗಿಂತ, ಮದುವೆಗಿಂತ, ಪ್ರೀತಿಸಿದ ಹುಡುಗನಿಗಿಂತ ಹೋರಾಟದಲ್ಲಿ ಧುಮುಕುವುದೇ ಹೆಚ್ಚು ಪ್ರಿಯವಾಗಿತ್ತು. ಈ ಕಾದಂಬರಿಯಲ್ಲಿ ಶಾಂತ ಎಂಬ ಹೆಣ್ಣುಮಗಳು ತನ್ನೆಲ್ಲ ವೈಯಕ್ತಿಕ ಆಸೆಯನ್ನು ತ್ಯಜಿಸಿ ಹೋರಾಟಕ್ಕೆ ತೊಡಗಿಸಿಕೊಳ್ಳುತ್ತಾಳೆ. ಅಂದಿನ ಸಾಮಾನ್ಯ ಹೆಣ್ಣುಮಕ್ಕಳು ಕೂಡಾ ತೋರಿದ ಅಸಾಧಾರಣ ಸಾಹಸವನ್ನು ತ.ರಾ.ಸು ಅವರ 'ರಕ್ತ ತರ್ಪಣ' ಕಾದಂಬರಿ ಈ ರೀತಿಯಾಗಿ ನಿರೂಪಸುತ್ತದೆ– "ಕ್ರಾಂತಿಯ ಸೆಳೆಹೊಳೆಗೆ ಸಿಕ್ಕಿ ತೊಟ್ಟಿಲು ತೂಗುವ ಬಳೆ ತೊಟ್ಟ ಕೈ ಕೂಡಾ ವಿಪ್ಲವದ ಖಡ್ಗ ಧರಿಸಿದೆ. ಅಕ್ಕ ಪಕ್ಕದ ಮನೆಯ ಸಾತೂ, ಶಾರದೆಯರ ಪ್ರಣಯ ವಿವಾದದ ಪೊಳ್ಳು ಮಾತಾಡಿ ಹೊತ್ತು ಕಳೆಯುತ್ತಿದ್ದವರು ರಣಭೈರವಿಯರಾಗಿ ಹೊರಬಂದಿದ್ದಾರೆ. ಅಡುಗೆ ಒಲೆ ಉರಿಸುತ್ತಿದ್ದವರು ತಾವೇ ಅಗ್ನಿಕನ್ಯೆಯರಾಗಿದ್ದಾರೆ."[೧೩] ಈ ಕಾದಂಬರಿಯಲ್ಲಿ ಅಜ್ಜಿಗ ಎನ್ನುವ ಬಡ ರೈತ ಹೋರಾಟಗಾರನ ತಂಗಿ ಚೆನ್ನಿ ಕೂಡಾ ತನ್ನ ಅಣ್ಣನ ಬಗ್ಗೆ ಧೈರ್ಯದಿಂದ ಮಾತನಾಡುತ್ತಾಳೆ. ತಾನು ಕೂಡ ಅಣ್ಣನ ಹಾಗೆ ಹೋರಾಡಲು ಸಿದ್ಧ ಎಂಬಂತಹ ಮಾತನ್ನಾಡುತ್ತಾಳೆ. ದಫೇದಾರ ತನ್ನ ಮನೆಗೆ ಬಂದು ತನ್ನ ಮೇಲೆ ಕೈ ಮಾಡಿದಾಗ ದಫೇಧಾರನ ಕೆನ್ನೆಗೆ ಬಾರಿಸುವ ಧೈರ್ಯವನ್ನು ಹಳ್ಳಿಯ ಒಬ್ಬಳು ಮುಗ್ಧ ಹೆಣ್ಣುಮಗಳು ಪಡೆದುಕೊಳ್ಳುವುದು ಸ್ವಾತಂತ್ರ್ಯ ಹೋರಾಟದ ಫಲದಿಂದಲೇ.

ಹಳ್ಳಿ ಹಳ್ಳಿಗಳಲ್ಲಿ ಹೆಂಗಸರ ಮಾತು ಕತೆಯಲ್ಲಿ ಗಮನಾರ್ಹವಾದ ಬದಲಾವಣೆಗಳನ್ನು ನಾವು ಕಾಣುತ್ತೇವೆ. ಅನೇಕ ಮಂದಿ ಹೆಣ್ಣುಮಕ್ಕಳು ಒಂದು ಕಡೆ ಕಲೆತಾಗ ಒಣ ಹರಟೆಯನ್ನು ದೂರವಿಟ್ಟು ದೇಶದ ರಾಜಕೀಯ ಸ್ಥಿತಿ–ಗತಿಯ ಬಗ್ಗೆ ಚರ್ಚಿಸುತ್ತಾರೆ. ವಿಷಯ ತಿಳಿಯದ

ಹೆಣ್ಣುಮಕ್ಕಳಿಗೆ ತಿಳಿದ ಸ್ವಲ್ಪ ಓದುಬರಹ ಬಲ್ಲಂತಹ ಹೆಣ್ಣುಮಕ್ಕಳು ತಿಳಿಸಿ ಹುರಿದುಂಬಿಸುತ್ತಿದ್ದರು. 'ಈಸೂರಿನ ಚಿರಂಜೀವಿಗಳು' ಕಾದಂಬರಿಯಲ್ಲಿ ಹಾಲಮ್ಮ, ಮಠದ ಚೆನ್ನಬಸಮ್ಮ, ಮತ್ತು ಪಾರ್ವತಮ್ಮ ಈ ಮೂರೂ ಜನ ಹೆಣ್ಣುಮಕ್ಕಳು ಈಸೂರಿನ ಸ್ತ್ರೀ ಸಮಾಜದಲ್ಲಿ ಸ್ವಾತಂತ್ರ್ಯದ ಹಂಬಲವನ್ನು ಬಲಪಡಿಸುತ್ತಿದ್ದರು. ಶಂಕರಮ್ಮ ಎಂಬ ಹೆಣ್ಣುಮಗಳ ನಾಯಕತ್ವದಲ್ಲಿ ಹಿತ್ತಲ ಗ್ರಾಮದ ಸ್ವತಂತ್ರ ಸೇನೆ ಈಸೂರನ್ನು ಸೇರುತ್ತದೆ. ಆಕೆ ಧ್ವಜ ಹಿಡಿದು ಕೇಳುಗರ ಎದೆ ಝಲ್ ಎನ್ನುವ ಹಾಗೆ ಘೋಷಣೆಯನ್ನು ಕೂಗುತ್ತಿದ್ದಳು. ಹಳ್ಳಿಯ ಸ್ತ್ರೀಯೊಬ್ಬಳು ಒಂದು ಸ್ವತಂತ್ರ ಸೇನೆಯ ನಾಯಕತ್ವವನ್ನು ವಹಿಸಿಕೊಳ್ಳುತ್ತಿರುವುದು ಆ ಹೆಣ್ಣುಮಕ್ಕಳಲ್ಲಿದ್ದ ಧೈರ್ಯ, ತ್ಯಾಗ, ದಿಟ್ಟತನವನ್ನು ಸೂಚಿಸುತ್ತದೆ. ಈಸೂರಿನ ಹೋರಾಟದಲ್ಲಿ ಹಾಲಮ್ಮ, ಸಿದ್ಧಮ್ಮ, ಚೆನ್ನಬಸಮ್ಮ, ಪಾರ್ವತಮ್ಮ, ಮುಂತಾದ ಹೆಣ್ಣುಮಕ್ಕಳು ಕೂಡಾ ಜೈಲು ಸೇರುತ್ತಾರೆ. ಈಸೂರಿನಲ್ಲಿ ನಡೆದ ಈ ಘಟನೆಯಲ್ಲಿ ಮರಣ ದಂಡನೆಗೆ ಸೂರ್ಯನಾರಾಯಣಾಚಾರ್ ಎನ್ನುವ ಒಬ್ಬರೂ ಒಳಗಾದರು. ಅವರ ಪತ್ನಿ ಈ ಸುದ್ದಿಯನ್ನು ಕೇಳಿ ಬಹಳ ಕಂಗಾಲಾಗುತ್ತಾಳೆ. ಆಗ ಸೂರ್ಯನಾರಾಯಣಾಚಾರಿಯ ತಾಯಿ ಹೇಳುವ ಮಾತುಗಳು ನಮ್ಮ ಹೆಣ್ಣುಮಕ್ಕಳ ತ್ಯಾಗದ ಪ್ರತೀಕದಂತಿದೆ–"ದೇಶಕ್ಕಾಗಿ ಆತ್ಮಾರ್ಪಣೆ ಮಾಡುವ ಪುರುಷರ ಪತ್ನಿಯರು ಎಂದಿಗೂ ವಿಧವೆಯರಾಗೋದಕ್ಕೆ ಸಾಧ್ಯವಿಲ್ಲ. ಮಗನಿಗೆ ಹಿಂಗಾಯ್ತಲ್ಲ ಅನ್ನೋ ಚಿಂತೆ ನನ್ಗೆ ಇಲ್ಲಾಂತ ತಿಳ್ಕೋಬ್ಯಾಡ ತಾಯಿ, ಮೂವರು ಮಕ್ಕಳಲ್ಲಿ ಒಬ್ಬನಿಗೆ ಮರಣದಂಡನೆ, ಇನ್ನಿಬ್ಬರಿಗೆ ಜೀವಾವಧಿ ಶಿಕ್ಷೆ! ಇದನ್ನೆಲ್ಲಾ ನೆನಸ್ಕೊಂಡ್ರೆ ನಾನೂ ಯಾಕೆ ನೇಣು ಹಾಕ್ಕೋಬಾರ್ದು ಅನ್ಸುತ್ತೆ. ಆದ್ರೆ ನನ್ನ ಮಕ್ಕಳು ಕೊಲೆ ಮಾಡಿಲ್ಲ. ದರೋಡೆ ಮಾಡಿಲ್ಲ. ದೇಶಕ್ಕಾಗಿ ಪ್ರಾಣ ಕೊಡ್ತಾ ಇದಾರೆ. ಅಷ್ಟೇ ನನಗೆ ಸಮಧಾನ".[೧೪] ತನ್ನ ಕರುಳ ಕುಡಿಯನ್ನು ಕಳೆದುಕೊಳ್ಳುವ ಸಂದರ್ಭದಲ್ಲಿ ಕೂಡ ದೇಶಕ್ಕಾಗಿ ಅವರು ಪ್ರಾಣತ್ಯಾಗ ಮಾಡುತ್ತಿದ್ದಾರೆಂಬುದಾಗಿ ಆ ಮಹಾತಾಯಿ ಸಮಧಾನ ಹೊಂದಬೇಕಾದರೆ ಅವಳ ದೇಶಪ್ರೇಮ ಎಷ್ಟೊಂದು ಉನ್ನತ ಮಟ್ಟದ್ದು!

ಗಾಂಧೀಜಿ ಅವರ ಪ್ರಭಾವಕ್ಕೆ ಒಳಗಾದ ಮಹಿಳೆಯರಲ್ಲಿ ಹಳ್ಳಿಯ ಮುಗ್ಧ ಅನಕ್ಷರಸ್ಥ ಹೆಣ್ಣುಮಕ್ಕಳೇ ಹೆಚ್ಚು ಮಂದಿ. ಸ್ವಾತಂತ್ರ್ಯ ಬಂದರೆ ಅವರ ಬದುಕಿನಲ್ಲಿ ಏನೊಂದು ಪ್ರಯೋಜನವಿಲ್ಲದಿದ್ದರೂ ಕೂಡ ಅವರು ತೋರಿಸಿದ ದೇಶಪ್ರೇಮ ಮಾತ್ರ ಅಗಾಧವಾದುದು. 'ಬೇಡಿ ಕಳಚಿತು ದೇಶ ಒಡೆಯಿತು' ಕಾದಂಬರಿಯಲ್ಲಿ ಬಸವ್ವ ಎಂಬ ದೇವದಾಸಿ ಮಹಿಳೆ ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸುತ್ತಾಳೆ. ಗಾಂಧೀಜಿ ಕೊಟ್ಟೂರಿಗೆ ಬಂದಾಗ 'ಬಸವ್ವ' ಅವರಿಗೆ ಆರತಿ ಎತ್ತಿ ಪಾದ ತೊಳೆದು ಸ್ವಾಗತ ನೀಡುತ್ತಾಳೆ. ಸುಶ್ರಾವ್ಯವಾಗಿ 'ವಂದೇ ಮಾತರಂ' ಆಡುತ್ತಾಳೆ. ಗಾಂಧೀಜಿಯು ಅವಳ ಹಾಡನ್ನು ಮೆಚ್ಚಿಕೊಳ್ಳುತ್ತಾರೆ. ಗಾಂಧೀಜಿಯ ದರ್ಶನವು ಅವಳ ಬದುಕನ್ನೇ ಬದಲಾಯಿಸುತ್ತದೆ. ಗಾಂಧೀಜಿ ಅವಳು ಕಾಂಗ್ರೆಸ್ ಸೇರುವಂತೆ ಸಲಹೆ ನೀಡುತ್ತಾರೆ. ಗಾಂಧೀಜಿಯ ಮಾತನ್ನು ಅವಳೊಂದು ತಪಸ್ಸಿನಂತೆ ಕೊನೆಯವರೆಗೂ ಪಾಲಿಸುತ್ತಾಳೆ.

ಗಾಂಧಿ ಚಳುವಳಿಯಲ್ಲಿ ಬಸವ್ವ ತನ್ನನ್ನು ತಾನು ಸಕ್ರಿಯವಾಗಿ ತೊಡಗಿಸಿಕೊಳ್ಳತೊಡಗಿದಳು. ಕೂಡ್ಲಿಗಿ ಎಂಬ ಹಳ್ಳಿಯಲ್ಲಿ ಕೂಡಾ 'ಸಂಪೂರ್ಣ ಸ್ವರಾಜ್ಯ'ದ ನಿರ್ಣಯವನ್ನು ಜನವರಿ ೨೬ರಂದು ಕೈಗೊಳ್ಳಲು ಸಭೆ ಸೇರಿತು. 'ವಂದೇ ಮಾತರಂ' ಬಸಕ್ಕ ಧ್ವಜಾರೋಹಣ ಮಾಡಿ ಪ್ರತಿಜ್ಞಾವಿಧಿಯನ್ನು ಓದುವುದೆಂದು ನಿರ್ಧರಿಸಲಯಿತು. ಆಕೆ ಧ್ವಜಾರೋಹಣ ಓದಿ ಮುಗಿಸುವಷ್ಟರಲ್ಲಿ ಸಬ್‌ಇನ್ಸ್‌ಪೆಕ್ಟರ್ ಧ್ವಜವನ್ನು ಕಿತ್ತು ಅದನ್ನು ಬೂಟುಗಾಲಿನಿಂದ ಒದೆದನು. ಇದನ್ನು ಸಹಿಸದ ಬಸಕ್ಕ "ಏ ಬದ್ಮಾಷ್ ಮುಂಡೇ ಮಗನೇ" ಎಂದು ಅಬ್ಬರಿಸಿದಳು. ಆಳುವವರ ಹೇಲು ತಿಂಬೋ ಬೊಸುಡಿ ಮಗ್ನೇ ಬಾವುಟ ತುಳೀತೀಯಾ! ಎಂದು ಹುಲಿಯಂತೆ ಅಬ್ಬರಿಸಿ ಮೆಟ್ಟಿನಿಂದ ಸಬ್‌ಇನ್ಸ್‌ಪೆಕ್ಟರನ್ನು ರಪರಪ ಬಾರಿಸಿದಳು.[೧೫] ಇವಳ ಈ ವರ್ತನೆ ದೇಶದಲ್ಲಿ ಎದ್ದಿದ್ದ ಚಳುವಳಿಯ ಅಂತರಾರ್ಥದ ಸಂಕೇತವಾಗಿತ್ತು. ಸಾವಿರಾರು ವರ್ಷಗಳಿಂದ ಗಂಡಸು ಹೇಳಿದಂತೆ ತುಟಿಪಿಟಕ್ ಎನ್ನದೆ ಕೇಳಿಕೊಂಡು ಬಿದ್ದಿದ್ದ ಭಾರತೀಯ ಹೆಂಗಸು- ಅದರಲ್ಲೂ ಜೀವನೋಪಾಯಕ್ಕಾಗಿ ಮೈಯನ್ನು ಮಾರುತ್ತಿದ್ದ ವೇಶ್ಯೆಯಾದ ಯಕಃಶ್ಚಿತ್ ಹೆಂಗಸು ರಾಜಲಾಂಛನ, ಸಮವಸ್ತ್ರವನ್ನು ಧರಿಸಿದ್ದ ಅಧಿಕಾರಿಗೆ ತಿರುಗಿಬಿದ್ದು ಮೆಟ್ಟಿನಿಂದ ಹೊಡೆಯುವುದೆಂದರೇನು? ನೂರಾರು ವರ್ಷಗಳಿಂದ ಬ್ರಿಟಿಷರ ಬೂಟಿನ ಏಟು ತಿಂದು ಅವರ ಮೈ ಬಣ್ಣಕ್ಕೆ ಹೆದರಿ ತತ್ತರಿಸುತ್ತಿದ್ದ ಈ ಭಾರತ ದೇಶವೆಂಬ ನಿರ್ಭಾಗ್ಯ ಸ್ತ್ರೀ ಇಂದು ಆ ಮಹಾಸಾಮ್ರಾಜ್ಯ ಬಲವನ್ನು ಎದುರಿಸಲು ಮಲೆತುನಿಂತಿದ್ದಳು, ಬಸಕ್ಕನ ರೂಪದಲ್ಲಿ.[೧೬] ಹಳ್ಳಿಗಾಡಿನ ಸಾಮಾನ್ಯರಲ್ಲಿ ಅತೀ ಸಾಮಾನ್ಯರಾದ ಅದರಲ್ಲೂ ಸಮಾಜದಲ್ಲಿ ಅಷ್ಟೊಂದು ಗೌರವದ ಬಾಳುವೆಯನ್ನು ನಡೆಸದಿದ್ದ ಬಸಕ್ಕನಂತಹ ಒಬ್ಬಳು ದೇವದಾಸಿ ಕೂಡ ಬ್ರಿಟಿಷ್ ಸಾಮ್ರಾಜ್ಯದ ವಿರುದ್ಧ ಮಲೆತು ನಿಲ್ಲುವಂತಹ ಮಟ್ಟಕ್ಕೆ ಬೆಳೆದುದು ಗಾಂಧೀಜಿಯವರ ಪ್ರೇರಣೆಯಿಂದಲೇ. ಈ ಘಟನೆಯಿಂದ ಬಸಕ್ಕ ಜೈಲು ಪಾಲಾಗುತ್ತಾಳೆ.

ಕರನಿರಾಕರಣೆ ಮಾಡಿದ ಮೊದಲ ಹೆಣ್ಣುಮಗಳೆಂದರೆ ಅಲವೇಲು ಮಂಗತಾಯಮ್ಮ ಎಂಬಾಕೆ. ಕರನಿರಾಕರಣೆ ಮಾಡಿದ್ದಕ್ಕೆ ಅವಳನ್ನು ಜೈಲಿಗೆ ಹಾಕಿದರು. ಸರಕಾರದವರು ಬಲಾತ್ಕಾರವಾಗಿ ನಗರಪಾಲಿಕೆ ಕಂದಾಯವನ್ನು ವಸೂಲು ಮಾಡಲು ಆರಂಭಿಸಿದರು. ಆಗ ೧೨ ಚಿಲ್ಲರೆ ಅಂಗಡಿಯವರು ಕರನಿರಾಕರಣೆ ಮಾಡಿದರು. ಅದರಲ್ಲಿ ಮಂಗತಾಯಮ್ಮ ಒಬ್ಬಳು. ಗಾಂಧೀಜಿ ಚೀರಾಲಕ್ಕೆ ಬಂದಾಗ ಉಳಿದ ಹನ್ನೊಂದು ಮಂದಿಯ ಜೊತೆಯಲ್ಲಿ ಆಕೆಗೂ ಮಾಲೆ ಹಾಕಿ ಶಹಬಾಸ್ ಅಂದರು. ಸ್ವಾತಂತ್ರ್ಯ ಹೋರಾಟದಲ್ಲಿ ಚಿತ್ತರಂಜನದಾಸ್ ಅವರ ಪತ್ನಿ ಬಾಸಂತಿದೇವಿ ಕೂಡ ಭಾಗವಹಿಸುತ್ತಾಳೆ. ಲಜಪತರಾಯರ ದುರ್ಮರಣದ ನಂತರ ಆಕೆ "ನಾನು ಲಜ್ಜೆ ಮತ್ತು ಅಪಮಾನದಿಂದ ತಲ್ಲಣಿಸಿಹೋಗಿದ್ದೇನೆ... ದೇಶದಲ್ಲಿ ಇನ್ನೂ ಯೌವನ ಮತ್ತು ಗಂಡಸುತನ ಇದ್ದವರು ಇದ್ದಾರೆಯೇ? ಅವರು ಲಜ್ಜೆ ಮತ್ತು ಉದ್ವಿಗ್ನತೆಯಿಂದ ಉರಿಯುತ್ತಿದ್ದಾರೆಯೇ? ಇದಕ್ಕೆ ಸ್ಪಷ್ಟ ಉತ್ತರವನ್ನು ಈ ನಾಡಿನ ನಾರಿಯೊಬ್ಬಳು ಕೇಳುತ್ತಿದ್ದಾಳೆ! ಬಾಸಂತಿದೇವಿ ಚಿತ್ತರಂಜನದಾಸ".[೧೭] ಎಂಬುದಾಗಿ ಬರೆದು ನಾಡಿನಾದ್ಯಂತ ಕಳುಹಿಸಿದಳು.

ಒಂದು ಪ್ರತಿಯನ್ನು ಓದಿದವರು ಮತ್ತೆ ಹತ್ತು ಪ್ರತಿ ಮಾಡಿ ತಮಗೆ ಗೊತ್ತಿದ್ದವರಿಗೆ ಗೊತ್ತಿಲ್ಲದವರಿಗೆ ಎಲ್ಲರಿಗೂ ಕಳುಹಿಸಿದರು. ಹೀಗೆ ಯಾವುದೇ ಮಾಧ್ಯಮದ ಸಹಾಯವಿಲ್ಲದೆ ಈ ವಿಷಯವು ಕೆಲವೇ ದಿನಗಳಲ್ಲಿ ದೇಶದಾದ್ಯಂತ ಪಸರಿಸತೊಡಗಿತು. ಬಾಸಂತಿದೇವಿಯ ಈ ಕರೆಯಿಂದಾಗಿಯೇ ಭಗತ್‌ಸಿಂಗ್ ಸಂಪೂರ್ಣವಾಗಿ ತನ್ನನ್ನು ತನು ಸ್ವಾತಂತ್ರ್ಯ ಹೋರಾಟದಲ್ಲಿ ತೊಡಗಿಸಿಕೊಳ್ಳಲು ನಿರ್ಧರಿಸುತ್ತಾನೆ. ತಂದೆಯೊಡ್ಡಿದ್ದ ವಿವಾಹದಾಕಾಂಕ್ಷೆಯನ್ನು ತಿರಸ್ಕರಿಸರಿಸಿ ದೇಶಸೇವೆಗೆ ತನ್ನನ್ನು ತಾನು ಸಮರ್ಪಿಸಲು ಮುಂದಾಗುತ್ತಾನೆ. ಹೀಗೆ ಲಜಪತರಾಯರ ಸಾವಿನ ಪ್ರತೀಕಾರವು ದೇಶದಾದ್ಯಂತ ಬ್ರಿಟಿಷರ ವಿರುದ್ಧ ಭುಗಿಲೇಳವುದಕ್ಕೆ ಒಂದು ಹೆಣ್ಣಿನ ಪತ್ರವು ಕಾರಣವಾಗುತ್ತದೆ. ಅವರ ಸಾವಿಗೆ ಕಾರಣನಾದ ಸ್ಕಾಟ್‌ನನ್ನು ಮುಗಿಸಿಯೇ ಬಿಡಬೇಕೆಂದು ಭಗತ್‌ಸಿಂಗ್ ತೀರ್ಮಾನಿಸುತ್ತಾನೆ.

ಕಾಡು ಮೇಡಿನ ಯುವತಿಯವರು, ಗುಡ್ಡಗಾಡಿನಲಿ ವಾಸಿಸುತ್ತಿರುವ ಬುಡಕಟ್ಟು ಜನಾಂಗದ ಯುವತಿಯರು ಕೂಡಾ ಹೋರಾಟಕ್ಕೆ ಪರೋಕ್ಷವಾಗಿ ಸಹಾಯ ಮಾಡಿದ್ದಾರೆ. ಸೂರ್ಯಸೇನನ ನೇತೃತ್ವದಲ್ಲಿ ೧೯೩೦ ಎಪ್ರಿಲ್ ೧೮ರ ರಾತ್ರಿ ಹತ್ತು ಗಂಟೆಗೆ ನೂರುಜನ ಉಗ್ರಗಾಮಿ ಪಡೆಯ ಹೋರಾಟಗಾರರು ಬ್ರಿಟಿಷರ ಚಿಟಗಾಂಗ್ ಶಸ್ತ್ರಾಗಾರಕ್ಕೆ ಮುತ್ತಿಗೆ ಹಾಕುತ್ತಾರೆ. ಪೊಲೀಸರ ಕೈಯಿಂದ ಆಯುಧಗಳನ್ನು ವಶಪಡಿಸಿಕೊಳ್ಳುತ್ತಾರೆ. ನಾಲ್ಕು ದಿನ ಚಿಟಗಾಂಗ್‌ನಲ್ಲಿ ಸರಕಾರವೇ ಇಲ್ಲದಂತಾಯಿತು. ಎಪ್ರಿಲ್ ೨೨ರಂದು ಜಿಲಾಲಬಾದ್ ಎಂಬಲ್ಲಿ ಬ್ರಿಟಿಷ್ ಸೈನಿಕರು ಮತ್ತು ಸಾವಿರಾರು ಜನರ ನಡುವೆ ಭೀಕರ ಕಾಳಗ ನಡೆದು ಎಂಬತ್ತು ಜನ ಬ್ರಿಟಿಷ್ ಸೈನಿಕರು ಸತ್ತರು. ಯುವತಿಯರು ಈ ಮುತ್ತಿಗೆಯಲ್ಲಿ ಪಾಲ್ಗೊಂಡರು. 'ಪ್ರೀತಿಲತಾ ವಡ್ಡೇದರ' ಎಂಬ ಯುವತಿ ಸೂರ್ಯಸೇನನ ಪಡೆಯೊಂದಿಗೆ ಬಂದೂಕು ಹಿಡಿದು ಹೋರಾಡುತ್ತಾ ಪ್ರಾಣಬಿಟ್ಟಳು. 'ಕಲ್ಪನಾದತ್ತಾ' ಎಂಬ ಇನ್ನೊಬ್ಬಳು ಹುಡುಗಿ ಹಾಗೆಯೇ ಹೋರಾಡುತ್ತಾ ತಲೆತಪ್ಪಿಸಿಕೊಂಡಳು. ಶಸ್ತ್ರಾಗಾರವನ್ನು ವಶಪಡಿಸಿಕೊಂಡು ಪರಾರಿಯಾದ ಹೋರಾಟಗಾರರಿಗೆ ಅನ್ನ, ಆಹಾರ, ಒಮ್ಮೊಮ್ಮೆ ಬಂದೂಕುಗಳನ್ನು ಒದಗಿಸಿದವರೂ ಯುವತಿಯರೆ! ಗುಡ್ಡ, ಬೆಟ್ಟ, ಕಾಡುಗಳಲ್ಲಿ ಅವಿತುಕೊಂಡಿರುವ ಹೋರಾಟಗಾರರಿಗೆ ಪೊಲೀಸರು ಬಂದಿರುವ ಸುದ್ದಿ ಮುಟ್ಟಿಸಿದವರೂ ಯುವತಿಯರೇ! ಅವರ ಮೇಲೆ ಸರಕಾರಕ್ಕೂ ಸಂಶಯ ಬಂದಿರಲಾರದು.

ಕರ್ನಾಟಕದ ಉತ್ತರ ಕನ್ನಡ ಜಿಲ್ಲೆಯಲ್ಲಂತೂ ಕರನಿರಾಕರಣೆಯನ್ನು ಯಶಸ್ವಿಗೊಳಿಸದವರು ಹೆಣ್ಣುಮಕ್ಕಳು. ಜನವರಿ ೨೬, ೧೯೩೦ರಿಂದ ಎಪ್ರಿಲ್ ೧೯೩೧ರವರೆಗೆ ಕರ್ನಾಟಕದಲ್ಲಿ ನಡೆದ ಕರನಿರಾಕರಣೆ ಚಳುವಳಿಯಲ್ಲಿ ವನಿತೆಯರ ಪಾತ್ರ ಗಮನಾರ್ಹ. ಕಾರವಾರ ಜಿಲ್ಲೆಯ ಮಾವಿನ ಗುಡಿಯಲ್ಲಿ ಕರನಿರಾಕರಣೆ ಮಾಡಿದಾಗ ಕರ ವಸೂಲಿಗಾಗಿ ಭೂಮಿ ಮಾಲಕರ ದನ ಕರು ಹರಾಜು ಹಾಕಿದರು. ಒಬ್ಬ ಹವಾಲ್ದಾರ ಹರಾಜಿನಲ್ಲಿ ದನ ಕೊಂಡುಕೊಂಡನು. ಅದನ್ನು ಬಿಟ್ಟುಬಿಡಬೇಕು ಎಮಬುದಾಗಿ ಸತತ ೩೧ ದಿನ ಭುವನೇಶ್ವರಮ್ಮ, ೨೨ ದಿನ ಲಕ್ಷ್ಮಮ್ಮ ಠಾಣೆ ಮುಂದೆ ಉಪವಾಸ ಸತ್ಯಾಗ್ರಹ ಮಾಡಿದರು. ಇನ್ನೊಬ್ಬ ಅಬಕಾರಿ

ಕಾರಕೂನ ಇನ್ನೊಬ್ಬರ ಎಮ್ಮೆ ಹಿಡಿದಿದ್ದನು. ಅದನ್ನು ಬಿಡಿಸಿಕೊಳ್ಳುವುದಕ್ಕೆ ಸೀತಮ್ಮ, ದೇವಮ್ಮ, ಭಾಗೀರತಮ್ಮ ಸತ್ಯಾಗ್ರಹ ಮಾಡಿದರು. ಕಾರವಾರ ಜಿಲ್ಲೆಯಲ್ಲಿ ೧೮೬ ಕುಟುಂಬಗಳು ಈ ಸತ್ಯಾಗ್ರಹದಿಂದ ಸಂಕಷ್ಟಕ್ಕೆ ಈಡಗಿದ್ದಾರೆ. ಕೆಲವೊಂದು ಮನೆಗಳಲ್ಲಿ ಇಡೀ ಕುಟುಂಬಕ್ಕೆ ಕುಟುಂಬವೇ ಸೆರೆಮನೆ ಕಂಡಿವೆ. ವಯಸ್ಸಾದ ಮಹಿಳೆಯರಿಗಿಂತ ಕಿರಿ ವಯಸ್ಸಿನ ಮಹಿಳೆಯರೇ ಹೆಚ್ಚಾಗಿ ಸತ್ಯಾಗ್ರಹದಲ್ಲಿ ಭಾಗವಹಿಸುತ್ತಿದ್ದರು. ಈಚಲಮರವನ್ನು ಕಡಿದು ಅನೇಕ ಹೆಣ್ಣುಮಕ್ಕಳು ಜೈಲು ಸೇರಿದರು.

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕಾರ್ನಾಡು ಸದಾಶಿವರಾಯರ ಇಬ್ಬರು ಪುತ್ರಿಯರಾದ ರಾಧಾ ಮತ್ತು ಸುಗುಣ ಬಹು ಚಿಕ್ಕ ವಯಸ್ಸಿನಲ್ಲಿಯೇ ತಮ್ಮ ತಂದೆಯವರೊಡನೆ ಮೆರವಣಿಗೆಯಲ್ಲಿ ಪಾಲ್ಗೊಳ್ಳುತ್ತಿದ್ದರು. ವಿದೇಶಿ ವಸ್ತ್ರಗಳ ಮುಂದೆ ಪಿಕೆಟಿಂಗ್ ಮಾಡುತ್ತಿದ್ದರು. ಶ್ರೀಮತಿ ಮುರ್ಡೇಶ್ವರ ರತ್ನಾಬಾಯಿ ಎಂಬವರು ಉಪ್ಪಿನ ಸತ್ಯಾಗ್ರಹದಲ್ಲಿ ಪಾಲ್ಗೊಂಡರು. ವಿದೇಶೀ ವಸ್ತ್ರಗಳನ್ನು ದಾನ ಮಾಡಿದಾಗ ಅವರು ತನ್ನ ಬಹು ಬೆಲೆಯ ಜರತಾರೀ ಬನಾರಸ್ ಸೀರೆಯನ್ನು ಬೆಂಕಿಗೆ ಹಾಕಿದರು. ಗಾಂಧೀಜಿಯ ಮಾತನ್ನು ಅಕ್ಷರಶಃ ಪಾಲಿಸಿದವರು ನಮ್ಮ ನಾಡಿನ ಹಳ್ಳಿಯ ಹೆಣ್ಣುಮಕ್ಕಳು. ತಮ್ಮ ಸ್ವಂತ ಸುಖವನ್ನು ತ್ಯಾಗ ಮಾಡಿ ನಾಡಿನ ಸ್ವಾತಂತ್ರ್ಯಕ್ಕೋಸ್ಕರ ಜೈಲು ಸೇರಿದವರು.

ಬ್ರಿಟಿಷ್ ಸಾಮ್ರಾಜ್ಯಶಾಹಿಯ ಕ್ರೌರ್ಯವು ಮಹಿಳೆಯರಲ್ಲಿ ಕೂಡ ಅವರ ವಿರುದ್ಧ ದ್ವೇಷವನ್ನು ಹುಟ್ಟು ಹಾಕಿತು. ಬಂಗಾಳದಲ್ಲಿ ಬೀನಾದಾಸ್ ಎಂಬ ಯುವತಿ ಗವರ್ನರ್ ಸ್ಟ್ಯಾನ್ಲೀ ಜಾಕ್ಸನ್‌ನನ್ನು ಗುಂಡಿಕ್ಕಿ ಕೊಲ್ಲಲು ಹವಣಿಸಿದ್ದು ಬ್ರಿಟಿಷ್ ಸರಕಾರದ ಕ್ರೌರ್ಯ ದೌರ್ಜನ್ಯದ ಪರಮಾವಧಿಯನ್ನು ತಲುಪಿದುದನ್ನು ಸೂಚಿಸುತ್ತದೆ. ಬಿ.ಎ ಪಾಸಾದ ಯುವತಿ, ಪದವಿ ಪ್ರಧಾನ ಸಮಾರಂಭದಲ್ಲಿ ಪದವಿ ಪತ್ರ ಪಡೆಯಲು ಘಟಿಕೋತ್ಸವಕ್ಕೆ ಹೋಗಿದ್ದಳು. ಆಕೆಯ ಹೆಸರು ಕರೆದಾಗ ವೇದಿಕೆಯ ಮೇಲಕ್ಕೆ ಹತ್ತಿ ಪದವಿ ಪತ್ರ ಪಡೆದುಕೊಳ್ಳಲು ಬಲಕೈ ಮುಂದಕ್ಕೆ ಚಾಚಿ ಉಟ್ಟ ಸೀರೆಯಲ್ಲಿ ಬಚ್ಚಿಟ್ಟುಕೊಂಡಿದ್ದ ರಿವಾಲ್ವರ್ ತೆಗೆದು ಎಡಕೈಯಿಂದ ಜಾಕ್ಸನ್‌ಗೆ ಗುರಿಯಿಟ್ಟಳು. ಗುರಿ ತಪ್ಪಿತು. ಗವರ್ನರ್ ಉಳಿದುಕೊಂಡ. ಬೀನಾದಾಸಳನ್ನು ಹಿಡಿದು ಶಿಕ್ಷೆ ವಿಧಿಸಿ ಸೆರೆಮನೆಗೆ ದೂಡಿದರು. [೧೮] ಬ್ರಿಟಿಷ್ ಸರಕಾರದ ಕ್ರೌರ್ಯದಿಂದ ಬೇಸತ್ತ ಮಹಿಳೆಯರು ಕೂಡ ಅವರ ವಿರುದ್ಧ ಹಿಂಸಾ ಪ್ರಯೋಗ ಮಾಡಲಾರಂಬಿಸಿದರು.

ನಾಗಾ ಗುಡ್ಡಗಾಡು ಪ್ರದೇಶದಲ್ಲಿ 'ರಾಣಿ ಗೈದಿನ್‌ಲ್ಯು' ಎಂಬ ಹದಿನೇಳು ವರ್ಷದ ಬಾಲಕಿಯ ನೇತೃತ್ವದಲ್ಲಿ ಚಳುವಳಿ ಉಗ್ರರೂಪ ತಾಳಿತು. ಈ ಹುಡುಗಿಯ ಸುಳಿವು ಕೊಟ್ಟವರಿಗೆ ೫೦೦ ರೂಪಾಯಿ ಬಹುಮಾನವೆಂದು ಸರಕಾರ ಘೋಷಿಸಿತು. ಆಕೆಯ ಅಡಗುದಾಣವನ್ನು ತಿಳಿಸಿದವರಿಗೆ ೧೦ ವರ್ಷ ಭೂಕಂದಾಯ ಮಾಫಿ ಮಾಡುವುದಾಗಿಯೂ ಘೋಷಿಸಿದ್ದರು. "ಆಕೆಗೆ ನೆರವು ನೀಡುವವರು ಭೀಕರ ಶಿಕ್ಷೆಗೆ ಒಳಗಾಗುವರು! ಎಚ್ಚರಿಕೆ! ಎಚ್ಚರಿಕೆ!" ಎಂಬುದಾಗಿ ಸರಕಾರ ಘೋಷಿಸಿತು.[೧೯] ಈ ಎಲ್ಲಾ ವಿದ್ಯಮಾನಗಳನ್ನು ಗಮನಿಸಿದರೆ ಆಕೆಯ ಚಳುವಳಿಯ

ತೀವ್ರತೆ, ಹದಿನೇಳು ವರ್ಷದ ಕನಸು ಕಂಗಳ ಹುಡುಗಿಯ ಧೈರ್ಯ, ಸಾಹಸ ಹಾಗೂ ಬ್ರಿಟಿಷ್ ಸರಕಾರಕ್ಕೆ ಅವಳ ಕುರಿತಾದ ಭಯವು ತಿಳಿಯುತ್ತದೆ.

೧೯೩೨ರಲ್ಲಿ ಬಹು ತೀವ್ರ ಸ್ವರೂಪ ತಾಳಿದ್ದ ಕರನಿರಾಕರಣೆ ಚಳುವಳಿಯನ್ನು ಬಗ್ಗು ಬಡಿಯಲು ಬ್ರಿಟಿಷ್ ಸರಕಾರ ಅತ್ಯಂತ ಭೀಕರ ಮತ್ತು ಕ್ರೂರ ಕ್ರಮಗಳನ್ನು ಕೈಗೊಂಡಿತು. ನಾಲ್ಕು ಹಳ್ಳಿಗಳನ್ನು ಸುಟ್ಟು ಭಸ್ಮಮಾಡಿತ್ತು ಸರಕಾರ. ಸಹಸ್ರಾರು ರೂಪಾಯಿಗಳ ಪುಂಡುಗಂದಾಯವನ್ನು ಹಾಕಿತು ಸರಕಾರ. ನಾಲ್ಕು ಕಡೆ ಅಸ್ಸಾಂ ರೈಫಲ್ಸ್ ಸೈನ್ಯ ದಳವನ್ನು ಬಂಡುಗೋರರನ್ನು ಸದೆ ಬಡಿಯಲು ಬಿಡಲಾಗಿತ್ತು, ಆದರೂ 'ಗೈದಿನ್‌ಲ್ಯು' ನಾಯಕತ್ವದಲ್ಲಿ ನಡೆಯುತ್ತಿದ್ದ ದಂಗೆಯನ್ನು ಹತ್ತಿಕ್ಕಲು ಬ್ರಿಟಿಷ್ ಸರಕಾಕ್ಕೆ ಸಾಧ್ಯವಾಗಲಿಲ್ಲ.

ಫೆಬ್ರವರಿ ೧೬, ೧೯೩೨ರಂದು ಬಂಡುಕೋರ ನಾಗಾ ಹೋರಾಟಗಾರರಿಗೂ ಅಸ್ಸಾಂ ರೈಫಲ್ಸ್ ಸೈನಿಕರಿಗೂ ಭೀಕರ ಹೋರಾಟ ನಡೆಯಿತು. ಅದರಲ್ಲಿ ಸೈನಿಕರು ಸೆಣಸಾಡಿ ನಾಗಾ ಬಂಡುಕೋರರರನ್ನು ಕೊಂದರು. ಸೈನಿಕರೂ ಸತ್ತರು. ಆದರೆ ಆ ಹುಡುಗಿ 'ಗೈದಿನ್‌ಲ್ಯು' ಕೈಗೆ ಸಿಕ್ಕಿರಲಿಲ್ಲ. ಆಕೆಯ ಮುಂದಾಳುತನದಲ್ಲಿ ಮಾರ್ಚ್ ತಿಂಗಳಲ್ಲಿ ನಾಗಾ ಬಂಡುಕೋರರು ಅಸ್ಸಾಂ ರೈಫಲ್ಸ್ ದಳದ ಮೇಲೆ ದಾಳಿ ನಡೆಸಿ ಅಪಾರ ಪ್ರಮಾಣದ ಶಸ್ತ್ರಾಸ್ತ್ರಗಳನ್ನು ಲೂಟಿ ಮಾಡಿಕೊಂಡು ಹೋಗಿದ್ದರು. ಅಪಾರ ಪ್ರಮಾಣದ ಶಸ್ತ್ರಾಸ್ತ್ರಗಳ ಸಹಿತ ದಂಡು ಪೂರ್ವ ಅಂಗಾಮಿ ನಾಗಾ ಪ್ರದೇಶದಲ್ಲಿ ಅಂಡಲೆಯುತ್ತಿತ್ತು.[೨೦] ಈ ಗೈದಿನ್‌ಲ್ಯು' ಎಂಬ ಹದಿನೇಳು ವರ್ಷದ ಹೆಣ್ಣುಮಗಳು ಬ್ರಿಟಿಷರ ಪಾಲಿಗೆ ಸಿಂಹಸ್ವಪ್ನವಾಗಿದ್ದಳು. ಯಾವ ಗಂಡಸರೂ ಮಾಡದ ಸಾಧನೆಯನ್ನು ಮಾಡಿ ಬ್ರಿಟಿಷರ ಎದೆಗುಂಡಿಗೆಯನ್ನು ನಡುಗಿಸಿದಳು. ಆಕೆ ಬ್ರಿಟಿಷ್ ಸರಕಾರವನ್ನು ನಾಗಲ್ಯಾಂಡಿನಿಂದ ಓಡಿಸುವ ಪ್ರತಿಜ್ಞೆ ಮಾಡಿದ್ದಳು. ಅಕೆಯ ಸಂಬಂಧಿ ಜಡೋನಾಂಗವನ್ನು ಬ್ರಿಟಿಷ್ ಸರಕಾರ ಗಲ್ಲಿಗೇರಿಸಿದುದರಿಂದ ಅವಳು ಈ ಚಳುವಳಿಯ ನಾಯಕತ್ವವನ್ನು ತಾನು ವಹಿಸಿಕೊಂಡಳು. ೧೬-೧೭ ವರ್ಷದ ಪುಟ್ಟ ಹುಡುಗಿ ಬ್ರಿಟಿಷ್ ಸರಕಾರಕ್ಕೆ ಮಲೆತು ನಿಂತಳು. ಕೆಲವೊಂದು ಸಂದರ್ಭದಲ್ಲಿ ದೇಶಪ್ರೇಮಿಯದ ಪುರುಷರಿಗೆ ಸುಶ್ರೂಷೆ ಮಾಡುವುದು ಕೂಡಾ ತಮ್ಮ ಕರ್ತವ್ಯವೆಂದು ಭಾವಿಸಿದ ಹೆಣ್ಣುಮಕ್ಕಳಿದ್ದರು. 'ಶತದ್ರುದಂಡೆಗೆ' ಕಾದಂಬರಿಯಲ್ಲಿ ಸ್ವರೂಪರಾಣಿ ಎಂಬ ಹೆಣ್ಣುಮಗಳು ಹೋರಾಟಗಾರನಾದ ಅಮರನಿಗೆ ಸುಶ್ರೂಷೆ ಮಾಡುತ್ತಾಳೆ. ಅವನಿಗೋಸ್ಕರ ಒಂದು ವರ್ಷ ಜೈಲು ಸೇರುತ್ತಾಳೆ. ಅವನಿಂದ ತಾನು ಕಷ್ಟ ಕಾರ್ಪಣ್ಯಗಳನ್ನು ಎದುರಿಸಬೇಕಾಗಬಹುದೆಂಬುದನ್ನು ತಿಳಿದೂ ಕೂಡ ಅವನ ಕೈ ಹಿಡಿಯುತ್ತಾಳೆ.

ಸಾತಾರೆಯಲ್ಲಿ ಬ್ರಿಟಿಷರ ವಿರುದ್ಧ ಪ್ರತಿಸರಕಾರ ರಚನೆಯಾಗುತ್ತದೆ. ಸುಮಾರು ಮೂರು ವರ್ಷಗಳವರೆಗೆ ಬ್ರಿಟಿಷರಿಗೆ ಸಿಂಹಸ್ವಪ್ನವಾಗಿ ಈ ಪ್ರತಿಸರಕಾರ ಕಾಡುತ್ತದೆ. ಇಂತಹ ಪ್ರತಿಸರಕಾರದ ಜೊತೆಯಲ್ಲಿ ಹೆಣ್ಣು ಮಕ್ಕಳು ಕೂಡ ಕೆಲಸ ಮಾಡಿದ ಉದಾಹರಣೆ 'ಪ್ರತಿಸರಕಾರ' ಕಾದಂಬರಿಯಲ್ಲಿ ನಮಗೆ ಸಿಗುತ್ತದೆ. ಸುಮಾ ಎಂಬ ಹೆಣ್ಣುಮಗಳು

ಪ್ರತಿಸರಕಾರದ ಪ್ರತಿನಿಧಿಯನ್ನು ಉಪಾಯದಿಂದ ಜೈಲಿನಿಂದ ಬಿಡಿಸಲು ಹೋಗಿ ಪೊಲೀಸರ ಗುಂಡೇಟಿಗೆ ಬಲಿಯಾಗುತ್ತಾಳೆ.

ಪೊಲೀಸ್ ಅಧಿಕಾರಿಗಳ ಹೆಣ್ಣುಮಕ್ಕಳು ಕುಡಾ ಬ್ರಿಟಿಷ್ ಸರಕಾರದಿಂದ ತಮಗೆ ದೊರೆತ ಆಸ್ತಿ, ಐಶ್ವರ್ಯ ಎಲ್ಲವನ್ನೂ ತೃಣವಾಗಿ ಪರಿಗಣಿಸಿ ಸ್ವಾತಂತ್ರ್ಯ ಹೋರಾಟಕ್ಕೆ ಧುಮುಕಿದ್ದಾರೆ. 'ಶ್ರದ್ಧಾಂಜಲಿ' ಕಾದಂಬರಿಯಲ್ಲಿ ರೋಹಿಣಿ ಎಂಬ ಹೆಣ್ಣುಮಗಳು ತನ್ನ ಸರ್ವಸುಖವನ್ನು ತ್ಯಾಗ ಮಾಡಿ ಹೋರಾಟದಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುತ್ತಾಳೆ. ತನ್ನ ಅಧಿಕಾರದ ಸ್ಥಾನ ಭದ್ರತೆಗಾಗಿ ಎಂತಹ ನೀಚ ಕೆಲಸವನ್ನು ಮಾಡಲು ಹೇಸದವರು ಅವಳ ತಂದೆ. ಅಂತಹ ತಂದೆಯ ಮಗಳಾದ ರೋಹಿಣಿ ದೇಶಕ್ಕಾಗಿ ಕಾಲೇಜು ತ್ಯಜಿಸುವ ಯೋಚನೆ ಮಾಡುತ್ತಾಳೆ. ಇದಕ್ಕಾಗಿ ತನ್ನ ಡಿ.ಎಸ್.ಪಿ. ತಂದೆಯ ವಿರೋಧ ಕಟ್ಟಿಕೊಳ್ಳುತ್ತಾಳೆ. ಕೊನೆಗೆ ಮನೆಯನ್ನು ತ್ಯಜಿಸುವ ಯೋಚನೆಯನ್ನು ಮಾಡುತ್ತಾಳೆ. ರೋಹಿಣಿಯ ತಾಯಿ ಗೋದಮ್ಮ ಕೂಡಾ ಗಂಡನ ಭಯವಿದ್ದರೂ ರೋಹಿಣಿ ಹಾಗೂ ಅವಳ ಸಹಪಾಠಿ ಚಳುವಳಿಗಾರ ರಮೇಶನಿಗೆ ಅಲ್ಪ ಸ್ವಲ್ಪ ಸಹಾಯ ಮಾಡುತ್ತಾಳೆ. ಮನದುಂಬಿ ಅವರನ್ನು ಹರಸುತ್ತಾಳೆ. ಭಾರತದ ಸ್ತ್ರೀಯರನ್ನೆಲ್ಲಾ ಸ್ತ್ರೀತ್ವದ ಸಂಕೋಲೆಯಿಂದ ಬಂಧಿಸದಿದ್ದರೆ ದೇಶಕ್ಕೆ ಸ್ವಾತಂತ್ರ್ಯ ಯಾವತ್ತೋ ಸಿಗುತ್ತಿತ್ತು. ಯಾಕೆಂದರೆ ಪ್ರತಿಯೊಬ್ಬಳು ಭಾರತದ ಸ್ತ್ರೀಯಲ್ಲೂ ಅಪಾರವಾದ ದೇಶಭಕ್ತಿ ಹುದುಗಿತ್ತು. ರೋಹಿಣಿ ಹೋರಾಟಗಾರ ರಮೇಶನ ಜೊತೆಯಲ್ಲಿ 'ಹೂನಳಿ' ಎಂಬ ಹಳ್ಳಿಯನ್ನು ಸೇರಿಕೊಳ್ಳತ್ತಾಳೆ. ಹಳ್ಳಿಗಳಲ್ಲಿ ಸುತ್ತಾಡಿ ಅಲ್ಲಿಯ ಜನರಲ್ಲಿ ಜಾಗೃತಿಯನ್ನು ಮೂಡಿಸುತ್ತಾಳೆ. ಸಂದರ್ಭ ಒದಗಿ ಬಂದಾಗ ಹಳ್ಳಿ ಹಳ್ಳಿಗಳನ್ನು ಹೋರಾಟದ ಕಣವನ್ನಾಗಿ ಮಾರ್ಪಾಡಿಸಲು ಇವರು ಪ್ರಯತ್ನಿಸುತ್ತಾರೆ. ಇವರ ಪ್ರಯತ್ನ ಸಫಲವಾಗುತ್ತದೆ. ೧೯೪೨ರ ಚಳವಳಿಯಲ್ಲಿ ಬ್ರಿಟಿಷ್ ಸರಕಾರದ ಪರವಾಗಿರುವ ಶಾನುಭೋಗ, ಕುಲಕರ್ಣಿಯವರನ್ನು ಬಿಟ್ಟರೆ ಇಡೀ ಹಳ್ಳಿಯ ಜನರೆಲ್ಲರೂ ತಮ್ಮ ಸರ್ವಸ್ವವನ್ನು ತ್ಯಾಗ ಮಾಡುತ್ತಾರೆ. ಕೊನೆಗೆ ಇಡೀ ಹಳ್ಳಿಯೇ ಬ್ರಿಟಿಷರ ಅಟ್ಟಹಾಸಕ್ಕೆ ಸರ್ವನಾಶವಾದರೂ ಕೂಡ ಇವರು ಎದೆಗುಂದುವುದಿಲ್ಲ. ರೊಹಿಣಿಯ ಜೊತೆ ರುದ್ರಮ್ಮ ಎಂಬ ಹೆಣ್ಣುಮಗಳು ಕೂಡಾ ಚಳುವಳಿ ಸೇರಿಕೊಳ್ಳುತ್ತಾಳೆ. ಕೊನೆಗೆ ಪೊಲೀಸರ ಕೈಗೆ ಸಿಕ್ಕಿಬಿದ್ದು ತನ್ನ ಮಾನವನ್ನು ಉಳಿಸಿಕೊಳ್ಳುವ ಸಲುವಾಗಿ ಪೊಲೀಸ್ ಬಂದೂಕಿನಿಂದ ತನಗೆ ತಾನೇ ಗುಂಡೊಡೆದು ಕೊಂಡು ಪ್ರಾಣತ್ಯಾಗ ಮಾಡುತ್ತಾಳೆ.

ರಮೇಶನನ್ನು ಚಳುವಳಿಗೆ ಬೀಳ್ಕೊಡುವಾಗ ಅವನ ತಾಯಿಯಿ ಆಶೀರ್ವಾದದಲ್ಲಿ ಅಂದಿನ ಸ್ತ್ರೀಯರಿಗೆ ಭಾರತ ಮಾತೆಯ ಬಗೆಗಿದ್ದ ಗೌರವು ಅಭಿವ್ಯಕ್ತಗೊಂಡಿದೆ–"ನೀನು ಸಂತೋಷವಾಗಿ ಭಾಗವಹಿಸು. ನನ್ನ ಹೃತ್ಪೂರ್ವಕ ಆಶೀವಾದವಿದೆ. ಯಾವ ತಾಯಿ ತನ್ನ ಮಗನ ತ್ಯಾಗದಿಂದ ಹೆಮ್ಮೆ ಪಡಲಾರಳು! ನೀನು ನನ್ನ ಮಗನಾದಂತೆ ಭಾರತಮಾತೆಯ ಮಗನೂ ಹೌದು! ನನಗಾಗಿ ನಿನ್ನ ಕರ್ತವ್ಯವಿದ್ದಂತೆ ಅವಳಿಗಾಗಿಯೂ ನಿನ್ನ ಕರ್ತವ್ಯವಿದೆ ಮಗೂ. ನೀನು ಸಂತೋಷವಾಗಿ ಸೇರು. ಉಕ್ಕಿಬರುವ ಕರುಳಿನ ದುಃಖವನ್ನು ಹತ್ತಿಕ್ಕಲು ಪ್ರಯತ್ತಿಸುತ್ತೇನೆ."[೨೧] ಇಂತಹ ಉದಾತ್ತ ತಾಯಂದಿರು ನಮ್ಮ ದೇಶದಲ್ಲಿ ಇದ್ದ ಕಾರಣದಿಂದಲೇ

ಅಷ್ಟೊಂದು ಸಹಸ್ರ ಸಹಸ್ರ ಸಂಖ್ಯೆಯಲ್ಲಿ ನಮ್ಮ ಪುರುಷರು ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಲು ಸಾಧ್ಯವಾಯಿತು.

ಸ್ವಾತಂತ್ರ್ಯ ಹೋರಾಟದಲ್ಲಿ ಪ್ರಮುಖ ಪಾತ್ರ ವಹಿಸಿದವರು ಶ್ರೀಮಂತರಿಗಿಂತ ಹೆಚ್ಚಾಗಿ ಸಾಮಾನ್ಯ ಜನರು. ಕೇವಲ ಕೆಲವೇ ಕೆಲವು ಮಂದಿ ಬೆರಳೆಣಿಕೆಯಷ್ಟು ಶ್ರೀಮಂತರು ಈ ಹೋರಾಟದಲ್ಲಿ ಭಾಗಿಯಾಗಿ ಹುತಾತ್ಮರಾಗಿರಬಹುದು. ಆದರೆ ಈ ಹೋರಾಟದಲ್ಲಿ ಜೈಲುಸೇರಿದ, ಪ್ರಾಣತೆತ್ತ ಸಾಮಾನ್ಯಜನರ ಸಂಖ್ಯೆಯಂತೂ ಯಾರೂ ಲೆಕ್ಕವಿಟ್ಟವರಲಿಲ್ಲ. ನಿಜವಾದ ಅರ್ಥದಲ್ಲಿ ಇದೊಂದು ಜನಸಾಮಾನ್ಯರ ಹೋರಾಟವೇ ಆಗಿತ್ತು. ಬ್ರಿಟಿಷರ ಕಿರುಕುಳ, ವಿವಿಧ ರೀತಿಯ ತೆರಿಗೆಗಳು ಜನಸಾಮಾನ್ಯರಿಗೆ ಜಾಸ್ತಿಯಾಗಿತ್ತು. ಬಿಟಿಷರಿಂದ ನಿಜವಾಗಿ ಕಷ್ಟವನ್ನು ಅನುಭವಿಸಿದವರೆಂದರೆ ಜನಸಾಮಾನ್ಯರು. ಅದಕ್ಕಾಗಿ ಅವರು ಗಾಂಧೀಜಿಯ ಮಾತಿಗೆ ಬಹಳ ಬೇಗನೇ ಸ್ಪಂದಿಸಿದರು.

ಹಳ್ಳಿಯ ಜನರಲ್ಲಿ ಸಾಧಿಸುವ ಛಲವಿತ್ತು. ಗಾಂಧೀಜಿಯ ಮಾತಿನ ಮೇಲೆ ಅಚಲವಾದ ವಿಶ್ವಾಸವಿತ್ತು. ಅವರಲ್ಲಿ ಒಂದು ಸ್ವಲ್ಪ ಜಾಗೃತಿಯನ್ನು ಉಂಟು ಮಾಡಿದರೆ ಅವರು ನಿಸ್ವಾರ್ಥದಿಂದ ಯಾವ ತ್ಯಾಗಕ್ಕೂ ಸಿದ್ಧರು. ನಮ್ಮ ಕರ್ನಾಟಕದ ಜನತೆ ಕೂಡಾ ಈ ಮಾತನ್ನು ನಿಜಮಾಡಿದರು. ಹಳ್ಳಿಗಳ ಜನರು ಯಾರೂ ಕೂಡಾ ಬ್ರಿಟಿಷ್ ಸರಕಾರದ ನೌಕರಿಯಲ್ಲಿ ಇರಲಿಲ್ಲ. ಅದುದರಿಂದ ಅವರೆಲ್ಲರಿಗೂ ಚಳುವಳಿಯಲ್ಲಿ ಭಾಗವಹಿಸುವುದು ಸಾಧ್ಯವಾಯಿತು. ಸ್ವಾತಂತ್ರ್ಯ ಚಳುವಳಿಯಲ್ಲಿ ಮಹಿಳೆಯರ ಸಾಧನೆಯಂತೂ ಬೆರಗುಮೂಡಿಸುವಂಥದ್ದು. ಸಂಪ್ರದಾಯದ ಕಟ್ಟುಪಾಡಿನಲ್ಲಿ ಬಂಧಿತರಾಗಿ ಕೇವಲ ತನ್ನ ಮನೆ ಮಕ್ಕಳ ಚಿಂತೆಯಲ್ಲೇ ಕಾಲ ಕಳೆಯುತ್ತಿದ್ದ ಮಹಿಳೆಯರಲ್ಲಿ ಆ ಬಗೆಯ ರಾಷ್ಟ್ರೀಯತೆ ಬೆಳೆದುದು ನಿಜವಾಗಿಯೂ ಆಶ್ಚರ್ಯವನ್ನುಂಟುಮಾಡುತ್ತದೆ. ಗಾಂಧೀಜಿಯವರ ಪ್ರಭಾವಕ್ಕೆ ಅವರು ಎಷ್ಟೊಂದು ಒಳಗಾಗಿದ್ದರೆಂದರೆ ತಮ್ಮ ಹಸುಗೂಸುಗಳನ್ನು ಬೇರೆಯವರ ಕೈಗೆ ಒಪ್ಪಿಸಿ ಹೋರಾಟಕ್ಕೆ ಧುಮುಕಿದರು. ಪುರುಷರಿಗೆ ಸರಿಸಮಾನವಾಗಿ ಎಲ್ಲ ಬಗೆಯ ಕಷ್ಟ-ನಷ್ಟಗಳನ್ನು ಅನುಭವಿಸಿದರು. ಕಾಡು- ಮೇಡುಗಳಲ್ಲಿ ಅಲೆದರು. ಕೆಲವೊಂದು ಸಂದರ್ಭದಲ್ಲಿ ಕೈಯಲ್ಲಿ ಶಸ್ತ್ರಾಸ್ತ್ರಗಳನ್ನು ಹಿಡಿದರು. ಜೈಲು ಸೇರಿದರು. ಸ್ವತಂತ್ರ ಭಾರತದಲ್ಲಿ ಇನ್ನೂ ಕೂಡ ತಮ್ಮ ಹಕ್ಕಿಗೋಸ್ಕರ, ತಮ್ಮ ಭದ್ರತೆಗೋಸ್ಕರ ಮಹಿಳೆ ಪ್ರತಿ ಹಂತ ಹಂತದಲ್ಲೂ ಹೋರಾಟವನ್ನು ನಡೆಸುತ್ತಲೇ ಇದ್ದಾಳೆ. ಜನತೆ ಸ್ವಾತಂತ್ರ್ಯದ ಸಂದರ್ಭದಲ್ಲಿ ನಮ್ಮ ಮಹಿಳಾಮಣಿಗಳ ಗಣನೀಯವಾದ ಸೇವೆಯನ್ನು ಮರೆತಿದೆ. ದೇಶ ಸ್ವಾತಂತ್ರ್ಯವಾದರೂ ಕೌಟುಂಬಿಕ ವಲಯದಲ್ಲಿ, ಸಾಮಾಜಿಕ ವಲಯದಲ್ಲಿ ಅವಳಿಗಿನ್ನೂ ಪೂರ್ಣ ಸ್ವಾತಂತ್ರ್ಯ ದೊರಕಲಿಲ್ಲ.

## ಸ್ವಾತಂತ್ರ್ಯ ಚಳುವಳಿಯಲ್ಲಿ ಮುಸ್ಲಿಮರ ಪಾತ್ರ

ಸ್ವಾತಂತ್ರ್ಯ ಹೋರಾಟದ ಸಮಯದಲ್ಲಿ ಮುಸ್ಲಿಮರು ಕೂಡಾ ಹೋರಾಟದಿಂದ ಹಿಂದೆ ಉಳಿಯಲಿಲ್ಲ. ಅಂದು ಹಿಂದು ಮುಸ್ಲಿಮರಲ್ಲಿ ಐಕ್ಯಮತವಿತ್ತು. ಅವರ ಧ್ಯೇಯ ದೇಶಕ್ಕೋಸ್ಕರ

ಹೋರಾಡಿ ಬ್ರಿಟಿಷರನ್ನು ಭಾರತದಿಂದ ಓಡಿಸುವುದು. ಪಾಕಿಸ್ತಾನವೆಂಬ ಸ್ವತಂತ್ರ ರಾಷ್ಟ್ರದ ಕಲ್ಪನೆಯು ಸ್ವತಃ ಜಿನ್ನಾರಲ್ಲೂ ಇರಲಿಲ್ಲ. ಒಂದು ಕಾಲದಲ್ಲಿ ಮುಂದೆ 'ಪಾಕಿಸ್ತಾನ'ಕ್ಕಾಗಿ ಪಟ್ಟುಹಿಡಿದ ಮಹಮ್ಮದ್ ಆಲಿ ಜಿನ್ನಾರೆ ಪಕ್ಕಾ ರಾಷ್ಟ್ರೀಯವಾದಿಯಾಗಿದ್ದರು. ಅವರು "ತಾನು ಪ್ರಥಮತಃ ರಾಷ್ಟ್ರೀಯವಾದಿ. ಎರಡನೆಯದಾಗಿಯೂ ರಾಷ್ಟ್ರೀಯವಾದಿ, ಮೂರನೆಯದಾಗಿಯೂ ರಾಷ್ಟ್ರೀಯವಾದಿ" ಎಂದು ಹೇಳುತ್ತಿದ್ದ ಜಾತೀಯತೆಯ ಕಡು ವಿರೋಧಿ. ೧೮೫೭ರ ಪ್ರಥಮ ಸ್ವಾತಂತ್ರ್ಯ ಸಂಗಾಮದಲ್ಲಿ ಕೂಡಾ ಹಿಂದು-ಮುಸ್ಲಿಮರಿಬ್ಬರೂ ಬ್ರಿಟಿಷರ ವಿರುದ್ಧ ಮಲೆತು ನಿಂತಿದ್ದರು. ಈ ಕಾರಣದಿಂದಲೇ ಬ್ರಿಟಿಷರು ಮುಂದೆ ಸಂದರ್ಭ ಸಿಕ್ಕದಲ್ಲೆಲ್ಲಾ ಹಿಂದು-ಮುಸ್ಲಿಮರ ನಡುವೆ ಅನೈಕ್ಯಮತ ಬೆಳೆಯುವುದನ್ನು ಪರೋಕ್ಷವಾಗಿ ಬೆಣ್ಣೆಯಲ್ಲಿ ಕೂದಲು ತೆಗೆದಂತೆ ಯಾರ ಗಮನಕ್ಕೂ ಬಾರದ ರೀತಿಯಲ್ಲಿ ಪ್ರೋತ್ಸಾಹಿಸಿದರು. ಸ್ವಾತಂತ್ರ್ಯ ಚಳುವಳಿಯಲ್ಲಿ ಕೂಡಾ ಇವರು ಗಣನೀಯವಾದ ಪಾತ್ರವನ್ನು ವಹಿಸಿದ್ದಾರೆ. ಅನೇಕ ಕನ್ನಡ ಕಾದಂಬರಿಗಳು ಕೂಡಾ ಹಿಂದು ಮುಸ್ಲಿಮರ ನಡುವಿನ ಬಾಂಧವ್ಯ ಹಾಗೂ ಮುಸ್ಲಿಂರು ಚಳುವಳಿಯಲ್ಲಿ ವಹಿಸಿದ ಪಾತ್ರದ ಕುರಿತು ಬೆಳಕು ಚೆಲ್ಲಿವೆ.

ರಾಯ್ ಬರೇಲಿಯಲ್ಲಿ ಒಬ್ಬ ಮುಸ್ಲಿಂ ಫಕೀರ ಸೈಯದ್ ಅಯಮದನ ನಾಯಕತ್ವದಲ್ಲಿ ಗುಡ್ಡಗಾಡಿನಿಂದ ಬಯಲು ಸೀಮೆಯವರೆಗೆ, ಹಳ್ಳಿಗಾಡಿನಿಂದ ಪಟ್ಟಣ ಪ್ರದೇಶದವರೆಗೆ ಜನತೆಯ ಹೋರಾಟವು ಸುಮಾರು ೫೦ ವರ್ಷಗಳವರೆಗೆ ನಡೆದಿತ್ತು. ೧೮೭೨ರಲ್ಲಿ ಲಾರ್ಡ್ ಮೇಯೋವನ್ನು ಮುಗಿಸಿದ ಶೇರ್‌ಆಲಿಯು ನಗುನಗುತ್ತ ಗಲ್ಲುಗಂಬವನ್ನೇರಿದನು. ೧೮೭೧ರಲ್ಲಿ ನ್ಯಾಯಾಧೀಶ ನಾರ್ಮನ್‌ನ ಕೊಲೆಯ ಕಾರಣಕ್ಕಾಗಿ ಅಬ್ದುಲ್ಲಾನನ್ನು ಗಲ್ಲಿಗೇರಿಸಲಾಯಿತು. ಪಶ್ಚಿಮ ಬಂಗಾಲದ ಬಾರಾಸಾತ್‌ಗೆ ಸಮೀಪದಲ್ಲಿ ತೀತುಮಿಯಾ ಉರೂಫ್ ತೀತುವೀರನು ೧೮೩೧ರಲ್ಲಿ ಜಮೀನುದಾರರ ಅತ್ಯಾಚಾರಗಳ ವಿರುದ್ಧ ರೈತರನ್ನು ಸಂಘಟಿಸಿ ಹೋರಾಡುವಲ್ಲಿ ಸಫಲನಾದನು. ವಂಗಭಂಗದ ಹೆಸರಿನಲ್ಲಿ ನಡೆದ ಈ ಪ್ರಥಮ ಸ್ವದೇಶೀ ಆಂದೋಲನದಲ್ಲಿ ಪೂರ್ವ ಬಂಗಾಳದ ಹಿಂದುಗಳೊಡನೆ ಸಮಭುಜರಾಗಿ ಮುಸ್ಲಿಂ ಬುದ್ಧಿಜೀವಿಗಳು ಸೇರಿಕೊಂಡಿದ್ದಾರೆಂಬುದು ಆಗಿನ ಸರಕಾರದ ದಾಖಲೆಗಳಿಂದ ತಿಳಿಯುತ್ತದೆ.[೨೨] ಮೌಲಾನ ಅಬುಲ್ ಕಲಾಮ್ ಆಜಾದರು 'ಹಬಿಬುಲ್ಲಾ' ಎಂಬ ಹೆಸರಿನ ಕ್ರಾಂತಿಕಾರಿ ಸಂಸ್ಥೆಯನ್ನು ಸ್ಥಾಪಿಸಿದರು. ಇದರ ಮೂಲಕವಾಗಿ ಬಂಗಾಳ ಮತ್ತಿತರ ಪ್ರಾಂತ್ಯಗಳ ಬುದ್ಧಿಜೀವಿಗಳನ್ನು ಅವರು ಸಂಘಟಿಸಿದರು. ಬ್ರಿಟಿಷರು ಇವರನ್ನು 'ಗಂಡಾಂತರಕಾರಿ' ಎಂದು ಪರಿಗಣಿಸಿದ್ದರು.[೨೩] ಇನ್ನೊಬ್ಬ ಪ್ರಮುಖ ಹೋರಾಟಗಾರ ಡಾ.ಕಿಚ್ಲು ಇವರು ಕಾಂಗ್ರೆಸ್ ಮುಖಂಡರಲ್ಲಿ ಒಬ್ಬರಾಗಿದ್ದು ಗಾಂಧೀಜಿಯವರ ಅನುಯಾಯಿ ಹಾಗೂ ಆಪ್ತರಾಗಿದ್ದರು. ಇನ್ನೊಬ್ಬ ಮುಸ್ಲಿಂ ಕ್ರಾಂತಿಕಾರಿ ಎಂದು ಸೈಯ್ಯದ್ ಅಬಿದಿಲ್ಲಾರ ಹೆಸರು ಸರಕಾರಿ ದಾಖಲೆಗಳಲ್ಲಿ ದೊರೆಯುತ್ತದೆ. ಅಬಿದುಲ್ಲಾರು ದಿಲ್ಲಿ, ಪಂಜಾಬ್, ಸಿಮ್ಲಾಗಳಲ್ಲಿ ಕ್ರಾಂತಿಕಾರಿ ಸಂಘಟನೆಯನ್ನು ಸ್ಥಾಪಿಸಿದರು. ಮಾಸ್ಟರ್ ಆಲಿಮುದ್ದೂನರ ಹೆಸರು ೧೯೨೦ರ ಸುಮಾರಿಗೆ ಇವರ ಹೆಸರು ಕೇಳಿಬರುತ್ತದೆ. ಇವರೇ

ವಿರೋಧಿಯಾಗಿದೆ. ಇವರೆಲ್ಲಾ ಭಾರತದ ಬಿಡುಗಡೆಯನ್ನು ಬಯಸುತ್ತಿದ್ದಾರೆ."[೨೫] ಈ ಮಾತಿನಲ್ಲಿ ಬೋಸರ ಜಾತ್ಯಾತೀತ ವ್ಯಕ್ತಿತ್ವ ಮಾತ್ರವಲ್ಲದೆ ಮುಸ್ಲಿಮರ ದೇಶಭಕ್ತಿಯು ಪ್ರಕಟವಾಗಿದೆ. ಬೋಸರ ಒಂದು ರೆಜಿಮೆಂಟ್‌ನ ದಂಡನಾಯಕ ಷಹನವಾಜ್ ಖಾನ್. ಎರಡನೇ ಮಹಾಯುದ್ಧದಲ್ಲಿ ಬ್ರಿಟನ್ ಗೆದ್ದ ನಂತರ ಕೆಂಪು ಕೋಟೆಯಲ್ಲಿ ಇವರನ್ನು ವಿಚಾರಣೆಗೊಳಪಡಿಸಲಾಯಿತು. ಆಗ ಇಡೀ ಭಾರತವೇ ಇವರ ಪರ ವಹಿಸಿತು.

೧೯೪೬ರಲ್ಲಿ ನೌಕಾಪಡೆಯ ನಾಯಕ ಕರ್ನಲ್ ಖಾನ್ ಭಾರತೀಯರಿಗೆಲ್ಲಾ "ಜಾತಿಧರ್ಮಗಳ ಭೇದ ಭಾವ ಬಿಟ್ಟು, ಜಾತ್ಯಾತೀತ ಭಾವನೆಯಿಂದ ಈ ಹೋರಾಟದಲ್ಲಿ ಸೇರಿಕೊಳ್ಳಬೇಕು."[೨೬] ಎಂದು ವಿನಂತಿಸಿದ್ದರು. ಕಾದಂಬರಿಗಳು ಚಿತ್ರಿಸುವ ಕೆಲವೊಂದು ಪಾತ್ರಗಳು ಕಾಲ್ಪನಿಕವಾಗಿದ್ದರೂ ಕೂಡಾ ಅವುಗಳು ಯಾವುದೊ ಲೇಖಕರು ತಮ್ಮ ನಿಜ ಜೀವನದಲ್ಲಿ ಕಂಡ ಪಡಿಯಚ್ಚುಗಳು. ಇಂತಹ ಹಲವಾರು ಮುಸ್ಲಿಂ ದೇಶಭಕ್ತರ ಪಾತ್ರವನ್ನು ನಾವು ಕಾದಂಬರಿಗಳಲ್ಲಿ ಕಾಣಬಹುದು. 'ಹೆಜ್ಜೆ' ಕಾದಂಬರಿಯಲ್ಲಿ ವಿದ್ಯಾನ ಸ್ನೇಹಿತ ರಫಿ ಶುದ್ಧ ಗಾಂಧಿವಾದಿಯಾಗಿದ್ದನು. ಅವನ ತಂದೆ ಹಿದಾಯುತುಲ್ಲಾ ಕೂಡಾ ಶುದ್ಧ ಖಾದಿ ಬಟ್ಟೆಯನ್ನೇ ಹಾಕುತ್ತಿದ್ದರು. ವಿದ್ಯನು ೧೯೪೨ರ ಗಲಭೆಯಲ್ಲಿ ಸತ್ತಾಗ ಕೂಡಾ ಅವನ ಹೆಂಡತಿ ಸಾವಿತ್ರಿಗೆ ಧೈರ್ಯ ತುಂಬಿ ಅಂತ್ಯಸಂಸ್ಕಾರವನ್ನು ನೆರವೇರಿಸಿದ್ದು ಈ ರಫಿ.

'ಮಾಡಿ ಮಡಿದವರು' ಕಾದಂಬರಿಯಲ್ಲಿ ಶೇಖರಪ್ಪ ಹಾಗೂ ಹೇಮಾ ಪೊಲೀಸರ ಗುಂಡಿನಿಂದ ತಪ್ಪಿಸಿಕೊಂಡು ಓಡುತ್ತಿರಬೇಕಾದರೆ ಅವರಿಗೆ ಹಸನ್‌ಸಾಬಿಯ ಮೋಟಾರು ಲಾರಿ ಸಿಗುತ್ತದೆ. ಶೇಖರಪ್ಪ ನಿಶ್ಚೇಷ್ಟಿತನಾಗಿ ಬಿದ್ದುಕೊಂಡಿದ್ದ ಸಂದರ್ಭದಲ್ಲಿ ಶೇಖರನ ತಲೆಯನ್ನು ತೊಡೆಯ ಮೇಲಿರಿಸಿಕೊಂಡದ್ದ ಹಾಗೆ ಹಸನ್ ಸಾಬಿ ಮೊಣಕಾಲೂರಿ ಕುಳಿತು ಹೃದಯವನ್ನೇ ಇರಿದು ಈಚೆಗೆ ತಂದಂತಹ ಧ್ವನಿಯಲ್ಲಿ ಪ್ರಾರ್ಥನೆ ಮಾಡುತ್ತಾನೆ – "ಅಲ್ಲಾ ದೇವರೆ, ಇವನ ಪ್ರಾಣ ಉಳಿಸು, ನನ್ನ ತಂದೆ! ನನ್ನ ಜೀವವನ್ನಾದರೂ ತಕ್ಕೊಂಡು ಇವನ ಪ್ರಾಣ ಉಳಿಸು ತಂದೆ"[೨೭] ಎಂದು ಪ್ರಾರ್ಥಿಸುತ್ತಾನೆ. ಸ್ವಾತಂತ್ರ್ಯದಲ್ಲಿ ನೇರವಾಗಿ ಭಾಗಿಯಾಗದಿದ್ದರೂ ಚಳುವಳಿಗಾರರಿಗೆ ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಸಹಾಯ ಮಾಡಿದವರು ಕೂಡಾ ದೇಶಪ್ರೇಮಿಗಳೇ. ಇಲ್ಲಿ ಹಸನ್‌ಸಾಬಿಗೆ ತನ್ನ ಜೀವಕ್ಕಿಂತ ಒಬ್ಬ ಹೋರಾಟಗಾರನ ಜೀವ ಮುಖ್ಯವೆನಿಸುತ್ತದೆ.

'ರಕ್ತ ತರ್ಪಣ' ಕಾದಂಬರಿಯಲ್ಲಿ ಕೂಡ ಹುಸೇನ್‌ಸಾಬಿ ಎಂಬ ಯುವಕ ಕಾಂಗ್ರೆಸ್ ಚಳುವಳಿಗಾರರಾದ ಚಂದ್ರಶೇಖರ, ಸೀತಾರಾಮಯ್ಯನವರಿಗೆ ಸಹಾಯ ಮಾಡುತ್ತಾನೆ. ಚಂದ್ರಶೇಖರನನ್ನು ಊರ ಹೊರಗಿರುವ ಗುಡಿಯಲ್ಲಿ ಪೊಲೀಸರಿಂದ ತಪ್ಪಿಸಿಕೊಳ್ಳಲು ಬಚ್ಚಿಟ್ಟಾಗ ತಾನೂ ಅವನ ಜೊತೆಯಲ್ಲಿ ತಂಗುತ್ತಾನೆ. ದಫೇದಾರನು ಹುಸೇನ್‌ಸಾಬಿಯ ಬಾಯಿಯಿಂದ ಚಂದ್ರಶೇಖರನು ಎಲ್ಲಿದ್ದಾನೆಂಬ ಸತ್ಯವನ್ನು ತಿಳಿದುಕೊಳ್ಳಲು ಏನೇನೋ ಉಪಾಯ ಮಾಡುತ್ತಾನೆ, ಮುಸ್ಲಿಮರು ಮತ್ತು ಕಾಂಗ್ರೆಸ್ಸಿಗರ ನಡುವೆ ಎತ್ತಿಕಟ್ಟುತ್ತಾನೆ. ಆದರೆ ಒಬ್ಬ ಸಾಮಾನ್ಯ

ಮುಸ್ಲಿಮನೂ ಜಾತಿ-ಮತಭೇದಗಳನ್ನು ಖಂಡಿಸುತ್ತಿದ್ದನು. ಬ್ರಿಟಿಷ್ ಸರಕಾರ ಹಿಂದು ಮುಸ್ಲಿಮರನ್ನು ಒಡೆಯಲು ಪ್ರಯತ್ನಿಸುತಿತ್ತೆಂದು ಹುಸೇನ್ ಸಾಬಿಯಂತಹ ಒಬ್ಬ ಸಾಮಾನ್ಯ ವ್ಯಕ್ತಿ ಕೂಡಾ ತಿಳಿದ ಸತ್ಯವಾಗಿತ್ತು. ಅವನು "ಬ್ರಾಂಬ್ರಂತೆ... ಸಾಬ್ರಂತೆ, ಇನ್ನೊಂದ್ಸಲ ಜಾತಿ ಎಸರೆತಿದ್ರೆ ಆಮ್ಯಾಕೆ... ನಾನು... ಸಾಬ್ರಿಗೆ ಬ್ರಾಂಬ್ರೂ ಏನೂ ಮಾಡೋಕಿಲ್ಲ, ಬ್ರಾಂಬ್ರಿಗೆ ಸಾಬ್ರೂ ಏನೂ ಮಾಡೋಕಿಲ್ಲ, ಅಣ್ಣ-ತಮ್ಮ ಆಗಿಲ್ವ ಇಲ್ಲಿ? ನಿಮ್ಮಂಥ ಹಲ್ಕಗಳೇ ಈ ವಿಷ ಅರದಿಕ್ಕೋದು. ಷರಂ ಆಗಾಕಿಲ್ವ ಶಾನುಭೋಗ್ ಮಹಾರಾಜರ ಮೇಲೆ ಇಂಥ ಮಾತಾಡೋಕೆ? ಬ್ರಾಂಬ್ರಂತೆ, ಸಾಬ್ರಂತೆ, ಎಲ್ಲೈತೆ ಅದು! ನಮ್ದು ಮಸಿದ್ಯಾಗ, ಅವರ್ದು ಅನುಮಪ್ಪನ ಗುಡ್ಯಾಗೆ. ಹೊರಗ್ಬಂದ್ರೆ ಇಬ್ರೂ ಒಂದೆ. ನೀವೀದಿರಲ್ಲಾ ಹರಾಮ್ ಕೋರ್ರು, ನೀವೇ ಅಡ್ಡದಾರಿ ಹಿಡಿಸೋದು. ನಿಮ್ಮಂಥೋರ್ ಸೊಂಟ ಮುರ್ದು, ಸಿಗ್ದು ಹನುಮಪ್ಪನ ಗರ್ಡಿ ಬಾಗಿಲ್ಗೆ ತ್ವಾರ್ಣ ಕಟ್ಬೇಕು".[೨೮] ಹುಸೇನ್ ಸಾಬಿಯ ಈ ಮಾತುಗಳಿಂದ ಹಳ್ಳಿಗಳಲ್ಲಿ ಹಿಂದು ಮುಸ್ಲಿಮರ ನಡುವೆ ಎಂತಹ ಅನ್ಯೋನ್ಯತೆಯಿತೆಂಬುದು ಗೊತ್ತಾಗುತ್ತದೆ.

ಸ್ವಾತಂತ್ರ್ಯ ಚಳುವಳಿ ಎಂಬುದು ಯಾವುದೇ ಒಂದು ನಿರ್ಧಿಷ್ಟ ಜಾತಿ ಧರ್ಮದ ಗುತ್ತಿಗೆಯೇನೂ ಅಲ್ಲ. ರಾಷ್ಟ್ರೀಯ ಮನೋಬಾವವಿದ್ದ ಪ್ರತಿಯೊಬ್ಬ ಭಾರತೀಯ ಕೂಡಾ ಜಾತಿ ಮತ ಧರ್ಮ ಭೇದವನ್ನು ಮರೆತು ತಮ್ಮ ತಾಯ್ನಾಡಿನ ಬಿಡುಗಡೆಗಾಗಿ ಹೋರಾಡಿದ್ದಾನೆ, ಹುತತ್ಮನಾಗಿದ್ದಾನೆ. ಸ್ವಾತಂತ್ರ್ಯ ಹೋರಾಟವೆಂಬುದೊಂದು ಸಾಮೂಹಿಕ ಚಳುವಳಿ. ದೇಶವೆಂಬುದು ಕೇವಲ ಕೆಲವೇ ಕೆಲವರ ಸ್ವತ್ತಲ್ಲ. ದೇಶಪ್ರೇಮವೆಂಬುದು ಕೇವಲ ಕೆಲವರ 'ಏಕಸಾಮ್ಯತೆ'ಯೂ ಅಲ್ಲ. ಆಗಾಗ ಹಿಂದು ಮುಸಲ್ಮಾನರ ನಡುವೆ ಕೆಲವು ಧಾರ್ಮಿಕ ಮೂಲಭೂತವಾದಿಗಳಿಂದ ಮತ್ತು ಬ್ರಿಟಿಷರ 'ಒಡೆದು ಆಳುವ ನೀತಿ'ಯ ಪರಿಣಾಮವಾಗಿ ಎಲ್ಲೋ ಕೆಲವೊಂದು ಮೂಲೆಗಳಲ್ಲಿ ಗಲಭೆಗಳು ಸಂಭವಿಸಿರಬಹುದು. ಆದರೆ ೨೦ನೇ ಶತಮಾನದ ಆರಂಭದ ದಶಕಗಳಲ್ಲಿ ಹಿಂದು ಮುಸ್ಲಿಮರಲ್ಲಿ ಅದರಲ್ಲೂ ಹಳ್ಳಿಗಳಲ್ಲಿ ಸೌಹಾರ್ದತೆಯಿತ್ತು. ಇವರಿಬ್ಬರೂ ಹೆಗಲಿಗೆ ಹೆಗಲು ಕೊಟ್ಟು ದೇಶದ ಸ್ವಾತಂತ್ರ್ಯಕ್ಕಾಗಿ ಶ್ರಮಿಸಿದ್ದಾರೆ.

*****

# ಟಿಪ್ಪಣಿಗಳು

[೧] ಬಸವರಾಜ ಕಟ್ಟೀಮನಿ, ಮಾಡಿ ಮಡಿದವರು, ಪು.೪೮-೫೦
[೨] ಅದೇ, ಪು. ೧೧೯
[೩] ಅದೇ, ಪು. ೨೧೬
[೪] ತ.ರಾ.ಸು, ರಕ್ತತರ್ಪಣ ಪು. ೩೩
[೫] ಆರ್.ಬಸವರಾಜ್, ಈಸೂರಿನ ಚಿರಂಜೀವಿಗಳು, ಪು. ೩೦
[೬] ಶ್ರೀನಿವಾಸ ವೈದ್ಯ, ಹಳ್ಳ ಬಂತು ಹಳ್ಳ, ಪು. ೧೯೪
[೭] ವಡೇಗನಹಳ್ಳಿ ಅಶ್ವಥನಾರಯಣ, ಬಿಡುಗಡೆಯ ಬೆಲೆ, ಪು.೧೦
[೮] ವಿ.ಎಂ ಇನಾಂದರ್, ವಿಜಯಯಾತ್ರೆ ಪು. ೧೪
[೯] ಅದೇ, ಪು. ೧೩೩
[೧೦] ಬಸವರಾಜ ಕಟ್ಟೀಮನಿ, ಮಾಡಿ ಮಡಿದವರು,ಪು. ೧೩೮.
[೧೧] ಅದೇ, ಪು. ೧೦೭
[೧೨] ಅದೇ, ಪು. ೧೨೯
[೧೩] ತ.ರಾ.ಸು, ರಕ್ತ ತರ್ಪಣ, ಪು. ೬೦
[೧೪] ಆರ್. ಬಸವರಾಜ್, ಈಸೂರಿನ ಚಿರಂಜೀವಿಗಳು, ಪು.೧೬೪
[೧೫] ಕೊ ಚೆನ್ನಬಸಪ್ಪ, ಬೇಡಿ ಕಳಚಿತು ದೇಶ ಒಡೆಯಿತು, ಪು.ಸಂ ೩೨೫
[೧೬] ಅದೇ, ಪು. ೩೨೯.
[೧೭] ಅದೇ, ಪು. ೨೦೫
[೧೮] ಅದೇ, ಪು. ೫೫೪
[೧೯] ಅದೇ, ಪು. ೬೦೬
[೨೦] ಅದೇ, ಪು. ೬೦೬
[೨೧] ರಾಜಾರಮ ಮಜಲೀಕರ, ಶ್ರದ್ಧಾಂಜಲಿ, ಪು. ೧೭
[೨೨] ವಿ.ಎಸ್.ನಾರಾಯಣ ರಾವ್, ಸ್ವಾತಂತ್ರ್ಯ ಹೋರಾಟದಲ್ಲಿ ಶ್ರೀ ಸಾಮಾನ್ಯ, ಪು.೧೩
[೨೩] ಅದೇ, ಪು. ೧೪-೧೫
[೨೪] ಕೋ ಚೆನ್ನಬಸಪ್ಪ, ಬೇಡಿಕಳಚಿತು, ದೇಶೊಡೆಯಿತು ಪು. ೨೭೭
[೨೫] ವಿ.ಎಸ್.ನಾರಾಯಣ ರಾವ್, ಸ್ವಾತಂತ್ರ್ಯ ಹೋರಾಟದಲ್ಲಿ ಶ್ರೀ ಸಾಮಾನ್ಯ, ೪೦-೪೧
[೨೬] ಅದೇ, ಪು. ೪೮.
[೨೭] ಬಸವರಾಜ ಕಟ್ಟೀಮನಿ, ಮಾಡಿ ಮಡಿದವರು, ಪು. ೨೨೦
[೨೮] ತ.ರಾ.ಸು, ರಕ್ತತರ್ಪಣ, ಪು.೭೩

# ಅಧ್ಯಾಯ - ೬

# ದೇಶ ವಿಭಜನೆ ಹಾಗೂ ೧೯೪೭ರ ಸ್ವಾತಂತ್ರ್ಯ

ಸಶಸ್ತ್ರವಾದ ಹೋರಾಟ, ಗಾಂಧೀಜಿಯ ಅಹಿಂಸಾ ತತ್ವವನ್ನೊಳಗೊಂಡ ಹೋರಾಟ, ವಿದೇಶಗಳಲ್ಲೂ ಭಾರತಕ್ಕೆ ಸ್ವಾತಂತ್ರ್ಯವನ್ನು ನೀಡಬೇಕೆಂಬ ಒತ್ತಾಯ, ಭಾರತದ ಸೈನಿಕ ಭಾವಣೆಯಲ್ಲಿ ಮತ್ತೆ ಭುಗಿಲೆದ್ದ ರಾಷ್ಟ್ರೀಯತೆ, ಆಜಾದ್ ಹಿಂದ್ ಸೈನ್ಯದ ಭೀತಿ- ಹೀಗೆ ನೂರಾರು ಘಟನೆಗಳು ಬ್ರಿಟಿಷರಿಗೆ ತಾವು ಇನ್ನು ಇಲ್ಲಿರುವುದು ಸಾಧ್ಯವೇ ಇಲ್ಲವೆಂಬ ಭಾವವನ್ನು ಗಟ್ಟಿಗೊಳಿಸಿತು. ಭಾರತಕ್ಕೆ ಸ್ವಾತಂತ್ರ್ಯ ಬರುವ ಗಳಿಗೆ ಸನ್ನಿಹಿತವಾಗಿತ್ತು. ಆದರೆ ಆ ಸ್ವಾತಂತ್ರ್ಯವು ಮಡಿಲಿನಲ್ಲಿ ಸಾವು-ನೋವುಗಳನ್ನು ಇಟ್ಟುಕೊಂಡೇ ಬಂತು. ಸಾವಿರಾರು ವರ್ಷಗಳಿಂದ ಒಂದಾಗಿ ಬಾಳಿದ್ದ ಹಿಂದು ಮುಸ್ಲಿಮರ ನಡುವೆ ದ್ವೇಷದ ದಳ್ಳುರಿಯನ್ನು ಉರಿಸುವುದರಲ್ಲಿ ಬ್ರಿಟಿಷರು ಯಶಸ್ವಿಯಾದರು. ತಮ್ಮ ಸ್ವಾರ್ಥಕ್ಕಾಗಿ ಬ್ರಿಟಿಷರು ಆರಂಭಿಸಿದ 'ಒಡೆದು ಆಳುವ' ನೀತಿಯು ಒಂದಾಗಿದ್ದ ಹಿಂದು ಮುಸ್ಲಿಮರ ಮನಸ್ಸನ್ನು ಒಡೆಯುವುದರೊಂದಿಗೆ ಇಡೀ ಭಾರತವನ್ನೇ ಒಡೆಯುವಲ್ಲಿ ಯಶಸ್ವಿಯಾಯಿತು. ಭಾರತೀಯ ಹಿಂದು-ಮುಸ್ಲೀಂರ ನರಮೇಧ ಹಾಗೂ ರಕ್ತದ ಹೊಳೆಯನ್ನು ಕಣ್ಣಾರೆ ಕಂಡೇ ಬ್ರಿಟಿಷ್ ಸರಕಾರ ಇಲ್ಲಿಂದ ಕಾಲ್ಕಿತ್ತಿತು.

೧೬.೮.೧೯೪೬ ರಂದು ನಡೆದ ಕೊಲೆ, ಅತ್ಯಚಾರ, ಸಾಮೂಹಿಕ ನರಮೇಧವು ನಾಗರಿಕ ಜನತೆ ತಲೆತಗ್ಗಿಸುವಂತಹುದು. ಇದಕ್ಕೆ ಅಂದಿನ ಬಂಗಾಳದ ಮುಖ್ಯಮಂತ್ರಿ ಸುಹ್ರಾವರ್ದಿಯವರು ವೇದಿಕೆಯನ್ನು ನಿರ್ಮಿಸಿದರು. ಇಂತಹ ಭೀಕರ ದುರಂತದ ಚಿತ್ರಣವನ್ನು ನಾವು ಕೆಲವು ಕನ್ನಡದ ಕಾದಂಬರಿಗಳಲ್ಲಿ ಕಾಣಬಹುದು. ಅಂದಿನ ಮುಸ್ಲಿಂಲೀಗ್ ಸದಸ್ಯರು

ಕೇವಲ ಹಿಂದುಗಳ ವಿರೋಧಿಗಳಾಗಿರಲಿಲ್ಲ. ಕಾಂಗ್ರೆಸನ್ನು ಬೆಂಬಲಿಸುತ್ತಿದ್ದ ದೇಶಭಕ್ತ ಮುಸ್ಲಿಮರನ್ನು ಕೊಲೆಮಾಡಿದ್ದರೆಂಬ ಸೂಕ್ಷ್ಮಾತಿಸೂಕ್ಷ್ಮ ವಿಚಾರಗಳನ್ನು ಕಾದಂಬರಿ ನಿರೂಪಿಸುತ್ತದೆ. ಅಂತಹ ದ್ವೇಷದ ದಳ್ಳುರಿಯ ನಡುವೆಯು ಕಂಡುಬರುತ್ತಿದ್ದ ಸಾಮರಸ್ಯ, ಹಳ್ಳಿ ಹಳ್ಳಿಗಳ ಹಿಂದು ಮುಸಲ್ಮಾನರ ನಡುವೆ ಇದ್ದ ಸಹೋದರತ್ವವನ್ನು ನಾವು ಕನ್ನಡ ಕಾದಂಬರಿಗಳಲ್ಲಿ ಕಾಣಬಹುದು. ದೇಶವಿಭಜನೆಯ ಸಂದರ್ಭದಲ್ಲಿ ನಡೆದ ಸಾಮೂಹಿಕ ಮಾರಣಹೋಮಕ್ಕೆ ಮಸೀದಿಯ ಮುಲ್ಲಾಗಳು ಕೂಡ ತಮ್ಮ ಕೊಡುಗೆಯನ್ನು ನೀಡಿದ್ದಾರೆ. ಈ ವಿಭಜನೆಯ ಕಾವು ಹಾಗೂ ಮತಾಂಧತೆಯ ದಳ್ಳುರಿ ಹಳ್ಳಿಹಳ್ಳಿಗಳಿಗೂ ಹಬ್ಬುತ್ತದೆ. ಅಂತಹ ದಳ್ಳುರಿಯ ನಡುವೆಯೂ ಪರಸ್ಪರ ಸಹೋದರರಂತೆ ಇದ್ದ ಹಿಂದು–ಮುಸಲ್ಮಾನರೂ ಇದ್ದರು. ತಾವು ಹುಟ್ಟಿದ ಮಣ್ಣನ್ನು, ತಾವು ಕಷ್ಟ–ಸುಖವನ್ನು ಅನುಭವಿಸಿದ ತಮ್ಮ ಮನೆಯನ್ನು ಬಿಟ್ಟುಹೋಗುವ ಸಂದರ್ಭದಲ್ಲಿ ಅವರು ಅನುಭವಿಸಿದ ವೇದನೆಯು ಅಪರಿಮಿತವಾದುದು. ಭಾವನಾತ್ಮಕ ಕೊಂಡಿಯಿದ್ದ ತಮ್ಮ ಊರನ್ನು ಬಿಟ್ಟುಹೋಗುವವರ ನೋವು, ಅವರನ್ನು ಕಳುಹಿಸಿಕೊಡುವ ಸಂದರ್ಭದಲ್ಲಿ ಪಕ್ಕದ ಮನೆಯ ಹಿಂದು ಅಥವಾ ಮುಸ್ಲಿಂ ಸಹೋದರರು ಹಾಕಿದ ಕಣ್ಣೀರಿನ ಚಿತ್ರಣಗಳನ್ನು ಕನ್ನಡ ಕಾದಂಬರಿಗಳು ಅನಾವರಣಗೊಳಿಸಿವೆ.

ಬೊಳುವಾರು ಮಹಮ್ಮದ್ ಕುಂಞ್ಞಿ ರಚಿಸಿದ 'ಸ್ವಾತಂತ್ರ್ಯದ ಓಟ' ಕಾದಂಬರಿಯಲ್ಲಿ ದೇಶವಿಭಜನೆಯ ಭೀಕರತೆಯ ನೋವು ಅಡಗಿದೆ. ದೇಶವಿಭಜನೆಯು ಸಾಮಾನ್ಯ ಜನರ ಮೇಲೆ ಬೀರಿದ ಭಾವನಾತ್ಮಕ ಪರಿಣಾಮವನ್ನು ಈ ಕಾದಂಬರಿ ಅನಾವರಣಗೊಳಿಸುತ್ತದೆ. 'ದೇಶ ವಿಭಜನೆ'ಯೆನ್ನುವುದು ರಾಷ್ಟ್ರನಾಯಕರಿಗೆ ಕತ್ತರಿಯಲ್ಲಿ ಭೂಪಟವನು ಕತ್ತರಿಸಿದಷ್ಟೇ ಸುಲಭದ್ದು. ಆದರೆ ಅನುಭವಿಸುವ ಜನರಿಗೆ ಅದೊಂದು ಮಹಾ ನರಕ. ದೇಶ ಒಂದಾಗಿದ್ದಾಗ ಜನಸಾಮಾನ್ಯರು ಬಂಧು ಬಳಗದ ಪ್ರಜ್ಞೆಯಲ್ಲಿ ಬಾಳು ಕಟ್ಟಿಕೊಂಡಿದ್ದವರು. ದೇಶ ವಿಭಜನೆಯಾದಾಗ ಮಾನವೀಯತೆಯೆನ್ನುವುದು ಮರೆತುಹೋಗಿ ದ್ವೇಷದ ಕಿಚ್ಚಿನಲ್ಲಿ ಎರಡೂ ದೇಶಗಳು ಹೊತ್ತಿ ಉರಿಯುತ್ತವೆ.[೧]

ಚಾಂದ್‌ಆಲಿ ಎಂಬ ಯುವಕ ದೇಶ ವಿಭಜನೆಯಾದಾಗ ಇಬ್ಬರು ಸಿಖ್ ತರುಣಿಯರನ್ನು ರಕ್ಷಿಸುವ ಸಲುವಾಗಿ ಹಿಂದುಸ್ಥಾನಕ್ಕೆ ಬರುತ್ತಾನೆ. ಆಗ ಅವನ ಮನಸ್ಸಿನಲ್ಲಿ ಹೊಳೆಯುವ ಯೋಚನೆಗಳಿವು "ಒಂದಾಗಿದ್ದ ದೇಶ ಈಗ ಎರಡಾಗಿದೆ. ದೇಶವನ್ನು ಬ್ರಿಟಿಷರು ಎರಡು ತುಂಡು ಮಾಡಿ ಸಣ್ಣ ತುಂಡನ್ನು ಜಿನ್ನಾರಿಗೂ, ದೊಡ್ಡ ತುಂಡನ್ನು ನೆಹರು ಅವರಿಗೂ ಹಂಚಿಕೊಟ್ಟಿದ್ದಾರೆ. ಯಾವ ದೇಶದಲ್ಲಿ ಯಾರು ಇರಬೇಕು ಎಂಬುದನ್ನು ಅವರು ತೀರ್ಮಾನಿಸಿದ್ದಾರೆ. ಜನರನ್ನು ಅದಲು ಬದಲು ಮಾಡಲು ಆರಂಬಿಸಿದ್ದಾರೆ."[೨] ದೇಶ ವಿಭಜನೆಯಲ್ಲಿ ಮುತುವರ್ಜಿ ವಹಿಸಿದವರು ತಮ್ಮ ಸ್ವಾರ್ಥಕ್ಕಾಗಿ ವಿಭಜನೆಗೋಸ್ಕರ ಪಟ್ಟು ಹಿಡಿದವರು, ಕೋಮು ದಳ್ಳುರಿಗಳ ಜ್ವಾಲೆಯನ್ನು ಹಬ್ಬಿಸಿದವರು ದೂರ ನಿಂತು ಘೋರ ದುರಂತದ ಮಜಾ ನೊಡುತ್ತಿದ್ದರು. ಆದರೆ ಆ ದಳ್ಳುರಿಯಲ್ಲಿ ಬೆಂದವರು ಮಾತ್ರ ದೇಶದ ಸಾಮಾನ್ಯ ಜನತೆ.

ದೇಶ ವಿಭಜನೆಯಿಂದಾಗಿ ಉಂಟಾದ ಘೋರ ದುರಂತ, ದುಃಖ ಹಾಗೂ ಕ್ರೌರ್ಯತೆಯನ್ನು ನಿರಾಶ್ರಿತರ ಶಿಬಿರದ ಈ ಚಿತ್ರಣವು ನಮಗೆ ಕಟ್ಟಿಕೊಡುತ್ತದೆ. "ಅಲ್ಲಿ ಗಂಡನ ದೇಹ ಹಸಿಯಾಗಿಯೇ ಬೆಂದುದನ್ನು ಕಂಡ ವಿಧವೆಯಿದ್ದಳು, ತನ್ನ ಅರುವತ್ತು ವರ್ಷಗಳ ಸಂಗಾತಿಯಾಗಿದ್ದ ಹೆಂಡತಿ ಮಹಡಿಯಿಂದ ಹಾರಿ ತಲೆಯೊಡೆದು ಸತ್ತು ಹೋದುದನ್ನು ಕಂಡಿದ್ದ ಗಂಡ ಇದ್ದನು. ಹೆರಿಗೆಗೆಂದು ತವರಿಗೆ ಬಂದಿದ್ದ ಮಗಳ ಮೇಲೆ ಆಗುತ್ತಿರುವ ಅತ್ಯಾಚಾರವನ್ನು ಕಂಡ ತಾಯಿಯಿದ್ದಳು. ಮದುವೆಗೆ ಬೆಳೆದು ನಿಂತಿದ್ದ ಮಗಳನ್ನು ಹೊತ್ತುಕೊಂಡು ಹೋಗುತ್ತಿರುವುದನ್ನು ನೋಡಿದ್ದ ತಂದೆ ಇದ್ದನು, ತನ್ನ ನಾಲ್ಕು ವರ್ಷದ ತಂಗಿಯನ್ನು ಬಾವಿಗೆಸೆಯುತ್ತಿರುವುದನ್ನು ಕಂಡಿರುವ ಅಣ್ಣ ಇದ್ದನು"[೨] ದೇಶ ವಿಭಜನೆಯಾದಾಗ ನಡೆದದ್ದು ಕೇವಲ ಮಾರಣಹೋಮ ಮಾತ್ರವಲ್ಲ, ವಿವಿಧ ರೀತಿಯ ವಿಕೃತ ಹಿಂಸೆ, ಮಾನವನಲ್ಲಿ ಸುಪ್ತವಾಗಿ ಮನೆ ಮಾಡಿಕೊಂಡಿದ್ದ ಪಾಶವೀ ಶಕ್ತಿಯ ಅಟ್ಟಹಾಸ, ಇನ್ನೊಬ್ಬರ ರಕ್ತವನ್ನು ಕಂಡು ತಾವು ಸಂತೋಷಿಸುವ ವಿಕೃತ ಆನಂದ. ಇಂತಹ ದುಷ್ಕೃತ್ಯದ ನಡುವೆಯೂ ಪರಸ್ಪರ ಮಾನವೀಯತೆಯನ್ನು ಮೆರೆಯುವ ಹಿಂದು-ಮುಸಲ್ಮಾನರೂ ಇದ್ದರು. ಇಂತಹ ದ್ವೇಷದ ನಡುವೆಯೂ ಚಾಂದ್ಅಲಿ ಇಬ್ಬರು ಸಿಖ್ ಯುವತಿಯರಿಗೆ ಸಹಾಯ ಮಾಡುವ ಸಲುವಾಗಿ ಪಾಕಿಸ್ತಾನವನ್ನು ಬಿಟ್ಟು ನಿರಾಶ್ರಿತರ ಶಿಬಿರವನ್ನು ತನ್ನ ಹೆಸರು ಜಾತಿ ಮರೆಸಿಕೊಂಡು ಸೇರಿಕೊಳ್ಳುತ್ತಾನೆ. ಮುಂದೆ ಇವನ ಪಯಣ ಕೇರಳದ ಮುತ್ತುಪ್ಪಾಡಿಗೆ ಬಂದು ನಿಲ್ಲುತ್ತದೆ.

ಭಾರತೀಸುತ ಅವರು ರಚಿಸಿದ 'ಶತದ್ರು ದಂಡೆಗೆ' ಕಾದಂಬರಿ ಕೂಡ ದೇಶವಿಭಜನೆಯ ಭೀಕರತೆ, ಹಿಂದು ಮತ್ತು ಮುಸಲ್ಮಾನರಲ್ಲಿದ್ದಂತಹ ಮಾನವೀಯ ನೆಲೆಗಳು, ಹಿಂದುಗಳನ್ನು ಕೊಲೆ ಮಾಡಲು ಮಸೀದಿಯಿಂದಲೇ ಸಿಗುವ ಕುಮ್ಮಕ್ಕು, ಇಂತಹ ದ್ವೇಷಾಗ್ನಿ ಹೊತ್ತಿ ಉರಿಯುವ ಸಂದರ್ಭದಲ್ಲೂ ಕೆಲವು ಮುಸ್ಲಿಮರು ಹಿಂದುಗಳಿಗೆ, ಹಿಂದುಗಳು ಮುಸಲ್ಮಾನರಿಗೆ ಸಹಾಯ ಮಾಡುವ ಚಿತ್ರಣ, ಸಾಧಾರಣ ಸಮಯದಲ್ಲಿ ತೀರಾ ಸಾಮಾನ್ಯ ಸಂಗತಿಯಾಗಬಹುದಾಗಿದ್ದ ಕೆಲವು ಪ್ರೇಮ ಪ್ರಕರಣಗಳು ರಾಜಕೀಯ ಬಣ್ಣ ಬಳಿದುಕೊಂಡು ಘೋರ ದುರಂತಕ್ಕೆ ಕಾರಣವಾಗುವ ವಿವಿಧ ಸಂಗತಿಗಳನ್ನು ನಿರೂಪಿಸುತ್ತದೆ.

ಇಲ್ಲಿ ಕಟ್ಟಾ ಮುಸ್ಲಿಂವಾದಿಗಳ ಜಾತಿದ್ವೇಷಕ್ಕೆ ಹಿಂದುಗಳು ಮಾತ್ರ ಬಲಿಯಾಗುವುದಲ್ಲದೆ ಸಮಾಜದಲ್ಲಿ ಶಾಂತಿ ಸಾಮರಸ್ಯವನ್ನು ಕಾಪಾಡಲು ಬಯಸುವ ಮುಸಲ್ಮಾನರು ಕೂಡ ಬಲಿಯಾಗುತ್ತಾರೆ. ಕೋಮುವಾದಿಗಳಿಗೆ ಅನ್ಯ ಕೋಮಿನವರಲ್ಲದೆ ತಮ್ಮ ತತ್ವ ಸಿದ್ಧಾಂತವನ್ನು ಒಪ್ಪದ ಉದಾರವಾದಿಗಳಾದ ತಮ್ಮ ಕೋಮಿನವರೂ ಶತ್ರುಗಳೇ. ತಮ್ಮ ಮೂಗಿನ ನೇರಕ್ಕೆ ನಡೆಯುವ ಜನರಿಗೆ ಮಾತ್ರ ಅದು ಮಣೆಯಾಕುತ್ತದೆ. ಇಂತಹ ವಿಚಾರವನ್ನು ನಾವು ಎಲ್ಲಾ ದೇಶಗಳಲ್ಲೂ, ಎಲ್ಲಾಧರ್ಮದ ಮತಾಂಧರಲ್ಲೂ ಕಾಣುತ್ತೇವೆ. ಯಾವುದೇ ಧರ್ಮದಿಂದ ಆರಂಭವಾದ ಕೋಮುವಾದವಾದರೂ ಅದರ ಮೂಲಭೂತ ತತ್ವವೊಂದೇ. ಅದು ಸರ್ವಾಧಿಕಾರಿ ಧೋರಣೆ. ಅದಕ್ಕಾಗಿಯೇ ನಮ್ಮ ಇತಿಹಾಸವನ್ನು ಗಮನಿಸಿದರೆ ನಡೆದ ನರಮೇಧಗಳ ಚಿತ್ರಣವು ನಮ್ಮನ್ನು ಬೆಚ್ಚಿಬೀಳಿಸುತ್ತದೆ. ಭಾರತ ವಿಭಜನೆಯಲ್ಲೂ

ಕಾಂಗ್ರೆಸ್ಸಿನೊಂದಿಗೆ ಗುರುತಿಸಿಕೊಂಡಿದ್ದ ಕೋಮುವಾದವನ್ನು ವಿರೋಧಿಸಿದ ಮುಸ್ಲಿಮರ ಕೊಲೆ ಕೂಡ ನಡೆಯುತ್ತದೆ.

ಮಿಯಾನ್ ಸಾಹೇಬರಂತಹ ಮುಸ್ಲಿಮರು ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದವರು. ಹಿಂದು ಮುಸಲ್ಮಾನ್ ಮತ್ತು ಸಿಖ್ಖರ ಗೌರವಾದರಗಳಿಗೆ ಪಾತ್ರರಾಗಿದ್ದರು. ಆದರೆ ಕಟ್ಟಾ ಮುಸ್ಲಿಮ್‌ವಾದಿಗಳ ಜಾತಿಯ ದ್ವೇಷಕ್ಕೆ ಇವರು ಬಲಿಯಾಗುತ್ತಾರೆ. "ಮಿಯಾನ್ ಸಾಹೇಬರಂತಹ ಹತ್ತು ಮಂದಿ ರಾಷ್ಟ್ರಭಕ್ತ ಮುಸ್ಲಿಮರು ಕಾಂಗ್ರೆಸ್ ಬಾವುಟದಡಿಯಲ್ಲಿ ನಿಂತು ನಾಡು ಹೋಳಾಗಕೂಡದೆಂದು ಹೇಳುವುದು ಲೀಗಿನ ಪಾಲಿಗೆ ನುಂಗಲಾರದ ತುತ್ತಾಗಿ ತೋರಿತು".೪ ತಮ್ಮ ತತ್ವಕ್ಕೆ ಬದ್ಧರಾಗದವರನ್ನು ಮುಗಿಸಿಬಿಡುವಂತಹ ಹೇಡಿ ಧೋರಣೆಯನ್ನು ನಾವು ಕಾಣುತ್ತೇವೆ. ಅಮಾನವೀಯತೆ ನರ್ತನಗೈಯುತ್ತಿದ್ದರೂ ಎಲ್ಲೋ ಒಂದೊಂದು ಕಡೆಯಲ್ಲಿ ಮಾನವೀಯ ಸೋಂಕನ್ನು ನಾವು ಕಾಣಬಹುದಿತ್ತು. ಪಂಜಾಬಿನಲ್ಲಿ ಮುಸ್ಲಿಂ ಲೀಗಿನಿಂದ ಮಾರಣ ಹೋಮ ನಡೆಯುತ್ತಿದ್ದಂತಹ ಸಂದರ್ಭದಲ್ಲಿ ಕೂಡಾ ಮುಸಲ್ಮಾನನಾದ ಟ್ಯಾಕ್ಸಿ ಚಾಲಕನೊಬ್ಬ ಸ್ವರೂಪರಾಣಿ ಮತ್ತು ಅವಳ ಸಹೋದ್ಯೋಗಿಗಳನ್ನು ರಕ್ಷಿಸುತ್ತಾನೆ. ಅವರು ತಮ್ಮ ದುಪ್ಪಟವನ್ನು ಮುಚ್ಚಿಕೊಳ್ಳಲು ಹೇಳುತ್ತಾನೆ. ಇಂತಹ ಗಲಭೆಯ ಸಂದರ್ಭದಲ್ಲಿಯೂ ಕೆಲವೊಂದು ಮಂದಿ ಮುಸ್ಲಿಮರು ಹಿಂದುಗಳಿಗೆ ಹಾಗೂ ಹಿಂದುಗಳು ಮುಸಲ್ಮಾನರಿಗೆ ಸಹಾಯ ಮಾಡುತ್ತಾರೆ.

ಆದರೂ ಮುಗ್ಧರ ಕಗ್ಗೊಲೆ ನಡೆಯುತ್ತಾ ಹೋಗುತ್ತದೆ. ಮತೀಯ ಭೂತ ಹಿಡಿದವರಿಗೆ ಅದೊಂದು ಕಾಮಾಲೆ ರೋಗವಿದ್ದಂತೆ. ಪ್ರಪಂಚವೆಲ್ಲ ಹಳದಿಯಾಗಿ ಕಾಣಿಸುತ್ತದೆ. ಜನರನ್ನು ಕಗ್ಗೊಲೆಗೈಯ್ಯಲು ಅವರಿಗಿರುವ ಏಕೈಕ ಕಾರಣವೆಂದರೆ ಅವರು ಅನ್ಯ ಕೋಮಿನವರೆಂಬುದು ಮಾತ್ರ. ಹಸಿದ ಜನರ ಮುಂದೆ ರೊಕ್ಕವನ್ನು ಚೆಲ್ಲಿ ಅವರನ್ನು ನರಹತ್ಯೆ ಮಾಡಲು ಪ್ರಚೋದಿಸುವ ಹೇಯ ಕೆಲಸವನ್ನು ಮತಾಂಧ ಹಿಂದು– ಮಸಲ್ಮಾನರು ಅಂದು ಪಂಜಾಬಿನಲ್ಲಿ ಮಾಡುತ್ತಿದ್ದರು. ಬಡವರ ಮನೆಯ ಗಂಡಸರಿಗೆ ಹಣ ಕೊಟ್ಟು ರಾತ್ರಿ, ಕೊಲೆ ದರೋಡೆ ಮಾಡಲು ಕರೆದೊಯ್ಯುತ್ತಿದ್ದರು.

ನಾಡಿನ ಉದ್ದಗಲಕ್ಕೂ ಕಲಹದ ಕಿಚ್ಚನ್ನೆಬ್ಬಿಸಿ ಅರಾಜಕತೆಯನ್ನು ಪಸರಿಸುವುದು. ಕಾಂಗ್ರೆಸ್ಸಿಗರು ಈ ಹಿಂಸೆ ದೌರ್ಜನ್ಯಗಳಿಗೆ ಮಣಿದು ದೇಶವನ್ನು ಒಡೆಯಲು ಒಪ್ಪುವರು ಎಂಬುದು ಅವರ ಅಭಿಮತ. ಈ ಹಂಚಿಕೆಗೆ ಪರೋಕ್ಷವಾಗಿ ಬ್ರಿಟಿಷರ ಪ್ರೋತ್ಸಾಹ ಬೇರೆ. ಲೀಗ್ ಮತ್ತು ಅಂಗ್ರೇಜಿ ಸರಕಾರ ತೋಡಿದ ಕಪ್ಪದೊಳಗೆ ಕಾಂಗ್ರೆಸ್ ಆನೆ ಬೀಳುವುದು ಖಾತ್ರಿಯಾಗಿತ್ತು. ಹೀಗೆ ಲೀಗಿನ ಜೊತೆಯಲ್ಲಿ ಬ್ರಿಟಿಷ್ ಸರಕಾರ ಕೂಡ ದೇಶ ಒಡೆಯಲು ಪ್ರೋತ್ಸಾಹಿಸಿದೆ. ಯಾವುದೇ ಒಂದು ಗಲಭೆ ಆಗುವ ಸಂದರ್ಭದಲ್ಲಿ ಪೋಲೀಸರು ಬರುತ್ತಿರಲಿಲ್ಲ. ಗಲಭೆ ಎಲ್ಲಾ ಮುಗಿದ ಬಳಿಕ ಪೋಲೀಸರು ಅಲ್ಲಿಗೆ ಬರುತ್ತಿದ್ದರು. ಬ್ರಿಟಿಷರ ವಿರುದ್ಧ ಎಲ್ಲೆಲ್ಲಿ ಹೋರಾಟ ನಡೆದಾಗಲೂ ಅಲ್ಲಿ ವಾನರ ಪಡೆಗಳಂತೆ ಪ್ರತ್ಯಕ್ಷರಾಗಿ

ಗೋಳೀಬಾರ್, ಗುಂಡೇಟಿನ ಮೂಲಕ ಚಳುವಳಿಯನ್ನು ಹತ್ತಿಕ್ಕುತ್ತಿದ್ದ ಪೋಲೀಸರು ಲಾಹೋರಿನಲ್ಲಿ ಆ ಪ್ರಮಾಣದ ನರಮೇಧ ನಡೆಯುತ್ತಿರುವಾಗ ಏನು ಮಾಡುತ್ತಿದ್ದರು? ಎಂಬ ಪ್ರಶ್ನೆ ಕಾಡುತ್ತದೆ.

ಲಾಹೋರ್ ನಗರದಲ್ಲೆದ್ದ ದೊಂಬಿಯ ಕಿಚ್ಚು ನಂದಬೇಕಾದರೆ ನಾಲ್ಕಾರು ದಿನಗಳೇ ಹಿಡಿದವು. ಗಲ್ಲಿ ಗಲ್ಲಿಗಳಲ್ಲಿ ಹೆಣಗಳು ಉರುಳಿದವು. ಭೂಮಾತೆಗೆ ಯಥೇಚ್ಛವಾಗಿ ರಕ್ತಾಭಿಷೇಕವಾಯಿತು. ಪ್ರಾಣ ಕಳೆದುಕೊಂಡವರೆಷ್ಟು ಮಂದಿಯೋ? ಅದರ ನಾಲ್ಕು ಪಟ್ಟು ಜನ ಗಾಯಗೊಂಡರು. ಕೊಲೆಗಡುಕರ ಕತ್ತಿಗೆ ಹೆಂಗಸರು ಮಕ್ಕಳು ಎಂಬ ತಾರತಮ್ಯವಿಲ್ಲ. ಅವು ಎಲ್ಲರ ಮೈಯ ನೆತ್ತರ ಸವಿ ನೋಡಿದವು. ಅಲ್ಲಿ ಮನೆ ಮಳಿಗೆಗಳೆಷ್ಟೋ ಅಗ್ನಿದೇವನಿಗೆ ಆಹುತಿಯಾದುವು.[೫] ಅಮರನೆಂಬ ತರುಣ ಪಂಜಾಬಿನ ಮುನ್ಷಿರಾಮ್ ಗಲ್ಲಿಯಲ್ಲಿ ವಾಸ ಮಾಡಿ ಆ ಕೊಳಚೆಯಲ್ಲಿದ್ದ ಜನರನ್ನು ಉದ್ಧಾರ ಮಾಡಲು ಪ್ರಯತ್ನಿಸಿದನು. ದಂಗೆಯಲ್ಲಿ ನಿರತರಾದ ಬಡಜನರ ಮನಸ್ಸನ್ನು ಪರಿವರ್ತಿಸಲು ಪ್ರಯತ್ನಿಸಿದನು. ದೊಡ್ಡ ದೊಡ್ಡ ರಾಜಕೀಯ ಪಟುಗಳು ಹಿಂದೆ ನಿಂತು ಬಡಜನರನ್ನು ಅಸ್ತ್ರವನ್ನಾಗಿ ಉಪಯೋಗಿಸಿಕೊಳ್ಳುತ್ತಿದ್ದರು. ಲಾಹೋರಿನ ನವಾಬ್ ಮನ್ಸೂರ್ ಆಲಿಖಾನ್ ಎಂಬ ಶ್ರೀಮಂತರು ಲೀಗಿಗೆ ಹಣವನ್ನು ಚೆಲ್ಲಿ ಪುಂಡರನ್ನು ಹಿಂದುಗಳ ಮೇಲೆ ಹರಿಯಬಿಟ್ಟಿದರು. ಹೀಗೆ ಶ್ರೀಮಂತ ರಾಜಕಾರಣಿಗಳು ತಾವು ಹಿಂದೆ ಸಂಭಾವಿತರಂತೆ ನಿಂತು ಇಂತಹ ನರಮೇಧಕ್ಕೆ ಪ್ರೇರಣೆ ನೀಡಿದರು.

ಅಮರನು ಶಾಂತಿದಳ ಎನ್ನುವ ಸಂಘವನ್ನು ಸ್ಥಾಪಿಸಿ ನಿರಾಶ್ರಿತರಿಗೆ ಊಟ ವಸತಿಗಳನ್ನೇರ್ಪಡಿಸುವುದರಲ್ಲಿ ಗಾಯಗೊಂಡವರಿಗೆ ಚಿಕಿತ್ಸೆ ಸುಶ್ರೂಷೆ ನೀಡುವುದರಲ್ಲಿ ಯಂತ್ರದಂತೆ ದುಡಿಯುತ್ತಾನೆ. ಆದರೆ ಕೊನೆಗೆ ಇವನು ಕೂಡ ಆ ದಂಗೆಕೋರರ ಕತ್ತಿಗೆ ಬಲಿಯಾಗುತ್ತಾನೆ. ಇವನ ಶಾಂತಿದಳದಲ್ಲಿ ಅಷರಫ ಹುಸೇನನೆಂಬ ಮುಸ್ಲಿಂ ಯುವಕ ಕೂಡ ಇದ್ದನು. ಅವನು ಲಾಹೋರಿನಲ್ಲಿ ಶ್ರೀಮಂತರ ಉಗ್ರಾಣದಲ್ಲಿ ಬಂಧಿಸಲ್ಪಟ್ಟ ಹೆಣ್ಣು ಮಕ್ಕಳನ್ನು ಬಿಡುಗಡೆಗೊಳಿಸಲು ಸಹಾಯ ಮಾಡಿದನು. ಇಂತಹ ಮಾರಣ ಹೋಮದ ನಡುವೆ ಕೂಡಾ ಕೆಲವು ಮಂದಿ ಮುಸ್ಲಿಂ ಯುವಕರು ವಿವೇಕದಿಂದ ಹಾಗೂ ಮಾನವೀಯತೆಯಿಂದ ವರ್ತಿಸಿದ್ದಾರೆ. ಈ ಹೆಣ್ಣು ಮಕ್ಕಳೆಲ್ಲರೂ ನವಾಬ್ ಮನ್ಸೂರ್ ಆಲಿಖಾನ್ ಅವರ ಉಗ್ರಾಣದಲ್ಲಿ ಬಂಧಿಸಲ್ಪಟ್ಟಿದ್ದರು. ಆದರೆ ಹೊರಪ್ರಪಂಚಕ್ಕೆ ಇದರ ಸುಳಿವು ಸಿಗದಂತೆ ಜಾಗ್ರತೆ ವಹಿಸಿದ್ದರು. ಗುಲಾಬ್ ಚಂದ್‌ಖಾನ್ ಎಂಬ ಸಬ್‌ಇನ್ಸ್‌ಪೆಕ್ಟರ್ ನವಾಬ್ ಮನ್ಸೂರು ಆಲಿಖಾನರ ಉಗ್ರಾಣದಲ್ಲಿ ಬಚ್ಚಿಟ್ಟ ೧೬ ಮಂಮದಿಯನ್ನು ಉಪಾಯದಿಂದ ಬಿಡಿಸಿದರು. ನವಾಬ್ ಮನ್ಸೂರ್ ಆಲಿಖಾನರು ಸಂಸತ್ತಿನ ಸದಸ್ಯರು. ಅವರೇ ಇಂತಹ ನೀಚ ಕೆಲಸವನ್ನು ಮಾಡಿದರೆ ಉಳಿದ ಸಾಮಾನ್ಯ ಜನರ ಪಾಡೇನು? ಶ್ರೀಮಂತರ ಹಾಗೂ ರಾಜಕಾರಣಿಗಳ ಬೆಂಬಲವಿಲ್ಲದಿದ್ದರೆ ಈ ರೀತಿಯ ಭೀಕರ ನರಮೇಧಕ್ಕೆ ಪುಂಡರಿಗೆ ಧೈರ್ಯವಾದರೂ ಎಲ್ಲಿಂದ ಬರಬೇಕು? ಅಂಜುಮಾನ್ ಇಸ್ಲಾಂನವರು ನಡೆಸುತ್ತಿದ್ದ ಅನಾಥಾಲಯದಲ್ಲಿದ್ದ ಮುಸ್ಲಿಮ್ ತರುಣಿಯರನ್ನು ಕೆಲವು ಮತಾಂಧ ಹಿಂದುಗಳು ಅಪಹರಿಸಿದ್ದರು. ಅದೇ ರೀತಿಯಾಗಿ

ಆರ್ಯಸಮಾಜದವರು ನಡೆಸುತ್ತಿದ್ದ ವಸತಿನಿಲಯದಲ್ಲಿದ್ದ ಕೆಲವು ಹಿಂದು ಸ್ತ್ರೀಯರನ್ನು ಮುಸಲ್ಮಾನರು ಅಪಹರಿಸಿದ್ದರು. ಈ ರೀತಿಯಾಗಿ ಮುಯ್ಯಿಗೆ ಮುಯ್ಯಿ, ಸೇಡಿಗೆ ಪ್ರತಿಸೇಡು ನಿರಂತರವಾಗಿ ನಡೆಯುತ್ತಿದ್ದು ಸಾಮಾನ್ಯ ಸಾತ್ವಿಕ ಜನರು ಬದುಕುವುದೇ ಕಷ್ಟವಾಗಿತ್ತು.

ಈ ಕಾದಂಬರಿಯು ೧೯೪೭ರಲ್ಲಿ ದೇಶ ವಿಭಜನೆಯಾದ ಸಂದರ್ಭದಲ್ಲಿ ಹಳ್ಳಿಗೂ ವ್ಯಾಪಿಸಿದ ಕೋಮು ಜ್ವಾಲೆ, ಹಳ್ಳಿಯಲ್ಲಿ ಒಂದಾಗಿದ್ದ ಹಿಂದು-ಮುಸಲ್ಮಾನರ ಬಾಂಧವ್ಯವನ್ನು ನಿರೂಪಿಸುತ್ತದೆ. ೧೯೪೬ರಲ್ಲಿ ಲಾಹೋರಿನಲ್ಲಿ ಮುಸ್ಲಿಂಲೀಗಿನರು ಮಾರಣಹೋಮ ನಡೆಸಿದರೂ ಕೂಡ ಅದರ ಬಿಸಿ ಹಳ್ಳಿಯ ಜನರಿಗೆ ಅಷ್ಟಾಗಿ ತಟ್ಟಿರಲಿಲ್ಲ. ಹಳ್ಳಿಗಲ್ಲಿ ಹಿಂದು-ಮುಸಲ್ಮಾನರು ಒಂದಾಗಿಯೇ ಬಾಳುತ್ತಿದ್ದರು. ಸಿಖ್ಖರು ಮತ್ತು ಮಸಲ್ಮಾನರ ನಡುವೆ ಹಳ್ಳಿಗಳಲ್ಲಿ ವಿವಾಹ ಕೂಡಾ ಏರ್ಪಡುತ್ತಿತ್ತೆಂದರೆ ಅವರ ನಡುವಿನ ಬಾಂಧವ್ಯದ ಬೆಸುಗೆಯನ್ನು ನಾವು ಅರ್ಥ ಮಾಡಿಕೊಳ್ಳಬಹುದು. ಉಳಿದ ದಿನಗಳಲ್ಲಿ ಸಾಮಾನ್ಯ ವಿಷಯವಾಗಬಹುದಾಗಿದ್ದ ಜೀನತ್‌ಬಿ ಮತ್ತು ಮೀರಾಸಿಂಗ್‌ನ ಪ್ರೇಮವು ದೇಶ ಹೋಳಾದ ಸಮಯದಲ್ಲಿ ಧಾರ್ಮಿಕ ಬಣ್ಣವನ್ನು ಪಡೆದುಕೊಂಡು ಗಲಭೆಗೆ ಕಾರಣವಾಗುತ್ತದೆ.[೬] ಮಜೀಥಿಯಾ ಎಂಬ ಹಳ್ಳಿಯ ಮುಲ್ಲಾನೇ ಆ ಹಳ್ಳಿಯಲ್ಲಿ ಗಲಭೆಯನ್ನು ಹರಡಲು ಹಾತೊರೆಯುತ್ತಾನೆ. ಈ ಹಳ್ಳಿಯಲ್ಲಿ ಕೋಮುಗಲಭೆಯನ್ನು ಹರಡುವ ಎಲ್ಲಾ ಪ್ರಯತ್ನಗಳು ಮಸೀದಿಯಲ್ಲಿ ನಡೆಯುತ್ತವೆ. ಒಬ್ಬ ಮುಸಲ್ಮಾನ ತರುಣನು – "ಹಿಂದುಸ್ಥಾನದಲ್ಲಿ ಬಲಿಯಾದ ಒಬ್ಬ ಮುಸಲ್ಮಾನನಿಗೆ ಪ್ರತಿಯಾಗಿ ಹತ್ತು ಕಾಫರರ ಪ್ರಾಣ ತೆಗೆಯಬೇಕು. ಒಬ್ಬ ಮುಸ್ಲಿಂ ತರುಣಿಯ ಮಾನಹರಣಕ್ಕೆ ಪ್ರತಿಯಾಗಿ ಹತ್ತು ಕಾಫರ ತರುಣಿಯರ ಮಾನಹರಣ ಮಾಡಬೇಕು. ನಮ್ಮನ್ನು ಆಳುವುದು ಅಂಗ್ರೇಜಿ ಸರಕಾರವಲ್ಲ; ಮುಸ್ಲಿಂರಾದ ನಮ್ಮ ಸರಕಾರ. ಕಾಫರರನ್ನೆಲ್ಲ ನಮ್ಮ ದೇಶದಿಂದ ಓಡಿಸಬೇಕೆಂಬುದು ಜಿನ್ನಾ ಸಾಹೇಬರ ಬಯಕೆ. ನಮ್ಮ ಕೆಲಸಕ್ಕೆ ಸೈನ್ಯದ ಬೆಂಬಲವಿದೆ. ಅವರೇ ನಮಗೆಲ್ಲ ಪಿಸ್ತೂಲುಗಳನ್ನು ಕೊಡಿಸಿದ್ದಾರೆ. ಇನ್ನೇನೂ ನೀವು ಅಂಜುವುದು ಬೇಡ."[೭] ಈ ಮಾತುಗಳನ್ನು ಗಮನಿಸಿದರೆ ದೇಶ ವಿಭಜನೆಯಾದ ನಂತರ ಸಹ ಕೋಮು ಗಲಭೆಗೆ ಜಿನ್ನಾ ಸರಕಾರದ ಬೆಂಬಲವಿದ್ದುದು ಸ್ಪಷ್ಟವಾಗುತ್ತದೆ. ಮಹಮ್ಮದಾಲಿ ಜಿನ್ನಾರಂತಹ ಮಹಾನ್ ವ್ಯಕ್ತಿಯೇ ಮುಗ್ಧರ ನರಮೇಧಕ್ಕೆ ಬೆಂಬಲ ನೀಡಿರುವುದು ವಿಷಾದವೇ ಸರಿ. ಹೀಗೆ ಮುಸ್ಲಿಮೇತರರನ್ನು ಪಂಜಾಬ್ ಹಾಗೂ ಮಜೀಥಿಯಾ ಎಂಬ ಹಳ್ಳಿಯಿಂದ ಓಡಿಸುವ ಪ್ರಯತ್ನಕ್ಕೆ ಮಸೀದಿಯಿಂದಲೇ ಕುಮ್ಮಕ್ಕು ಸಿಕ್ಕಿತು. ಸ್ವರಾಜ್ಯಕ್ಕೋಸ್ಕರ ಭಗತ್‌ಸಿಂಗನಂತಹ ಸಹಸ್ರಾರು ವೀರಪುತ್ರರು ತಮ್ಮ ಪ್ರಾಣವನ್ನೇ ಅರ್ಪಿಸಿದ್ದರು. ಅದರೆ ಸ್ವರಾಜ್ಯ ಸಿಕ್ಕಿದಾಗ ತಮ್ಮ ನೆಲದ ಕರುಳ ಸಂಬಂಧವನ್ನು ಕಳಚಿ ನಿರಾಶ್ರಿತರಾಗಿ ಹೋಗುವ ದೌರ್ಭಾಗ್ಯ ತಮ್ಮದಾಗುತ್ತದೆಂದು ಅವರು ಅಂದು ಕನಸು ಮನಸ್ಸಿನಲ್ಲೂ ಎಣಿಸಿರಲಿಕ್ಕಿಲ್ಲ.

ಜಿನ್ನಾರ ಸರಕಾರ ಮತ್ತು ಮಸೀದಿಯ ಮುಲ್ಲಾನೆ ಕುಮ್ಮಕು ಕೊಡುವಾಗ ಕೆಲವು ಮುಸ್ಲಿಮರಿಗೆ ಈ ಸಲಹೆ ಸರಿ ಬರದಿದ್ದರೂ ಅದನ್ನು ವಿರೋಧಿಸುವ ಧೈರ್ಯ ಇರಲಿಲ್ಲ. ಯಾಕೆಂದರೆ ವಿರೋಧಿಸಿದರೆ ಹಿಂದುಗಳ ಗತಿಯೇ ಅವರಿಗೂ ಲಭಿಸುತ್ತಿತ್ತು. ಸಿಖ್ಖರು ಕೂಡ

ಗುರುದ್ವಾರದಲ್ಲಿ ಸೇರಿ ಮುಸ್ಲಿಮರ ವಿರುದ್ಧ ಸೇಡು ತೀರಿಸಿಕೊಳ್ಳಲು ಸಮಾಲೋಚನೆ ನಡೆಸುತ್ತಿದ್ದರು. ಸಿಖ್ಖರ ಗುರು ಮಹಾರಾಜ್‌ಸಿಂಗ್‌ನನ್ನು ಮುಸ್ಲಿಮರು ಇರಿದು ಕೊಂದಿದ್ದರು.

ಲಾಹೋರ್ ಹಾಗೂ ಮಜೀಥಿಯಾದಲ್ಲಿ ದ್ವೇಷ ತಾಂಡವಾಡುತ್ತಿದ್ದ ಸಂದರ್ಭದಲ್ಲಿಯೂ ನಿಯಾಮ್ ಸಾಹೇಬರ ಬೇಗಮ್ ಲಾಲಚಂದರ ಸೊಸೆ ಸ್ವರೂಪಳನ್ನು ಹೆರಿಗೆ ಮಾಡಿಸಲು ಬರುವುದು ಒಂದು ಕಾಲದಲ್ಲಿ ಹಿಂದು–ಮುಸ್ಲಿಮರ ಐಕ್ಯತೆಗೆ ಕನ್ನಡಿ ಹಿಡಿದಂತಿದೆ.[೮] ಹಿಂದುಗಳು ಕಷ್ಟದಲ್ಲಿದ್ದಾಗ ಸಹಾಯ ಮಾಡುವುದು ನಮ್ಮ ಧರ್ಮ ಎಂಬುದಾಗಿ ನಂಬಿದ್ದ ಮುಸಲ್ಮಾನರು ಆ ಹಳ್ಳಿಯಲ್ಲಿದ್ದರು. ಆ ಹಳ್ಳಿಯ ಇನ್ನೊಬ್ಬ ನಾಗರಿಕ ಉತ್ತಮಚಂದರು ಊರುಬಿಟ್ಟು ಹೋಗುವ ಸಂದರ್ಭದಲ್ಲಿ ಪುಂಡರ ಗುಂಪೊಂದು ಅವರ ಗಾಡಿಯ ಮೇಲೆ ಎರಗಿ ಅವರ ಕಿರಿ ಸೊಸೆಯನ್ನು ಹೊತ್ತೊಯ್ದು ಅತ್ಯಾಚಾರ ಮಾಡಲು ಪ್ರಯತ್ತಿಸುತ್ತದೆ. ಆಗ ಅಲ್ಲಿಯೇ ಇದ್ದ ನಿಯಾಮ್ ಸಾಹೇಬರು ಆ ಪುಂಡರ ಜೊತೆಯಲ್ಲಿ ಹೊಡೆದಾಟ ನಡೆಸಿ ಆಕೆಯ ಮಾನವನ್ನು ಕಾಪಾಡುತ್ತಾರೆ. ಈ ಮಾರಣ ಹೋಮವು ಮಾನವೀಯತೆಯುಳ್ಳ, ಹಿಂದುಗಳ ಜೊತೆಯಲ್ಲಿ ಒಂದಾಗಿ ಬಾಳಿದ್ದ ಹಿರಿಯ ಮುಸಲ್ಮಾನರಿಗೆ ಬಹಳ ದುಃಖವನ್ನುಂಟುಮಾಡುತ್ತದೆ.

ದೇಶ ವಿಭಜನೆಯಾದಾಗ ಪಂಜಾಬಿನಲ್ಲಿ ವಾಸ ಮಾಡುತ್ತಿದ್ದ ಹಿಂದುಗಳ ಸ್ಥಿತಿಯಂತೂ ಅಸಹನೀಯವಾಯಿತು. ಮುಸ್ಲಿಮೇತರರ ಮನೆ ಮನೆಗಳನ್ನು ದೋಚಿ, ಹಿರಿಯರನ್ನು ಇರಿದು ಹೆಣ್ಣು ಮಕ್ಕಳ ಅತ್ಯಾಚಾರ ನಡೆಸುವುದು ಸಾಮಾನ್ಯ ಸಂಗತಿಯಾಗಿತ್ತು. ಅಲ್ಲಿದ್ದ ಹಿಂದುಗಳು ಮತ್ತು ಸಿಖ್ಖರು ತಾವು ಇದ್ದ ಊರನ್ನು ಬಿಟ್ಟು ಹೊರಡಲು ಸಿದ್ಧರಾದರು.[೯] ಸ್ವಾತಂತ್ರ್ಯ ಎನ್ನುವುದು ಅಂದು ಪಾಕಿಸ್ತಾನದಲ್ಲಿ ವಾಸವಾಗಿದ್ದ ಹಿಂದುಗಳಿಗೆ ಮತ್ತು ಸಿಖ್ಖರಿಗೆ ದುಸ್ವಪ್ನವಾಯಿತು. ಅವರು ಕಂಡ ಸ್ವರಾಜ್ಯದ ಕನಸು ನುಚ್ಚುನಾರಾಯಿತು. ಉತ್ತಮಚಂದನೆಂಬ ರೈತ ತಾನು ಮಜೀಥಿಯಾ ಎಂಬ ತನ್ನ ಹಳ್ಳಿಯನ್ನು ತೊರೆಯುವಾಗ ಹೀಗೆ ಹೇಳುತ್ತಾನೆ– "ಅಂಗ್ರೇಜಿ ಸರಕಾರ ಬೇಡ, ಸ್ವರಾಜ್ಯ ಬೇಕೆಂದು ನೀವು ಚಳುವಳಿ ಹೂಡಿದಿರಿ. ಸೆರೆಮನೆಗೂ ಹೋಗಿ ಬಂದಿರಿ. ನಾವೂ ನಿಮಗೆ ಬೆಂಬಲ ನೀಡಿದೆವು. ಅಂಗ್ರೇಜಿ ಸರಕಾರ ಹೋಯಿತು. ಸ್ವರಾಜ್ಯ ಸರಕಾರ ಬಂತು. ಅದು ನಮ್ಮಂತಹವರನ್ನು ಊರು ಬಿಟ್ಟು ಪರದೇಶಕ್ಕೆ ಓಡಿಹೋಗುವಂತೆ ಮಾಡಿತು."[೧೦] ಎಂಬ ಮಾತಿನಲ್ಲಿ ತನ್ನ ಊರನ್ನು ಬಿಟ್ಟು ಹೋಗುವ ಸಂದರ್ಭದ ಮನದಾಳದ ನೋವನ್ನು ನಾವು ಕಾಣಬಹುದು. ಯಾರಿಂದಲೋ ಆರಂಭವಾದ ಈ ದಳ್ಳುರಿಯಿಂದಾಗಿ ತಲೆ ತಲಾಂತರದಿಂದ ಪ್ರೀತಿ ವಿಶ್ವಾಸದಿಂದ ನಡೆದುಕೊಂಡಿದ್ದ ಪಕ್ಕದ ಮನೆಯ ಮುಸಲ್ಮಾನ ಬಂಧುವನ್ನು ಒಂದೇ ದಿನದಲ್ಲಿ ಹಿಂದುಗಳು ನಂಬದ ಸ್ಥಿತಿಯನ್ನು ತಲುಪಿದರು. ಮುಸಲ್ಮನರೆಲ್ಲರೂ ಹಿಂದುಗಳಿಗೆ, ಹಿಂದುಗಳೆಲ್ಲರೂ ಮುಸಲ್ಮಾನರಿಗೆ ಶತ್ರುಗಳಂತೆ ಕಾಣಲಾರಂಬಿಸಿದರು. ದ್ವೇಷದ ದಳ್ಳುರಿಯಲ್ಲಿ ಹಲವಾರು ತಲೆಮಾರುಗಳಿಂದ ಬೆಳೆದು ಬಂದಿದ್ದ ಸ್ನೇಹದ ಸೌಧ ಭಸ್ಮವಾಯಿತು.

ಮಸೀದಿಯ ಮುಲ್ಲಾ ಸಾಹೇಬನೇ ಹೊರಗಿನಿಂದ ಜನರನ್ನು ಕರೆಯಿಸಿ ಮಜೀಥೀಯಾದಲ್ಲಿ ಹಿಂದೂ ಜನರನ್ನು ಲೂಟಿ ಮಾಡಲು ಪ್ರಚೋದಿಸಿದನು. "ಈಗ ಇಸ್ಲಾಮಿ ರಾಜ್ಯ ಸ್ಥಾಪನೆಯಾಗಿದೆ. ಕಾಫರರನ್ನು ಕೊಂದರೆ ಮನೆ ಮಠಗಳನ್ನು ಸುಲಿಗೆ ಮಾಡಿದರೆ ಇಸ್ಲಾಮಿ ಸರಕಾರ ಅದೊಂದು ಪುಣ್ಯ ಕೆಲಸವೆಂದು ಭಾವಿಸುತ್ತದೆ. ಸರಕಾರ ಅಂಥವರನ್ನು ಅಪರಾಧಿಗಳೆಂದು ಶಿಕ್ಷಿಸುವ ಗೋಜಿಗೆ ಹೋಗುವುದಿಲ್ಲ ಎಂಬ ಸುದ್ದಿಯನ್ನು ಬೇರೆ ಹರಡಿದ್ದರು. ಇದರಿಂದ ಧೈರ್ಯಗೊಂಡ ಪುಂಡು ಪೋಕರಿಗಳೆಲ್ಲ ಒಂದೇ ರಾತ್ರಿಯಲ್ಲಿ ಧರ್ಮಾಭಿಮಾನಿಗಳಾಗಿ ಇಸ್ಲಾಮಿನ ಸಂರಕ್ಷಣೆಗೆ ಹೊರಟಿದ್ದರು." ಶತದ್ರುನದಿಯಾಚೆ ಹಿಂದುಸ್ಥಾನದಲ್ಲಿ ಹಿಂದುಗಳು ಮುಸ್ಲಿಮರನ್ನು ಕೊಂದಿದ್ದಾರೆ, ಮಾನಭಂಗ ಮಾಡಿದ್ದಾರೆ. ನಾವು ಯಾಕೆ ಅವರನ್ನು ರಕ್ಷಿಸಬೇಕೆಂಬ ಭಾವ ಮುಸ್ಲಿಮರಲ್ಲಿ ಮೊಳೆಯುವಂತೆ ಹೊರಗಿನಿಂದ ಬಂದ ಮುಸ್ಲಿಮರು ಪ್ರಚೋದಿಸಿದರು.

ಆ ಊರಿನಲ್ಲಿದ್ದ ನಿಯಾಸುದ್ದೀನ ಮತ್ತು ಹಿರಿಯ ಮುಸ್ಲಿಮರಿಗೆ ಯಾರಿಗೆ ಕೂಡ ತಮ್ಮ ನೆರೆಮನೆಯ ಹಿಂದುಗಳು ತಾಯಿನೆಲವನ್ನು ಬಿಟ್ಟು ಭಾರತಕ್ಕೆ ಮರಳುವುದು ಎಳ್ಳಷ್ಟೂ ಇಷ್ಟವಿರಲಿಲ್ಲ. ಆದರೆ ಅವರು ಅಸಹಾಯಕರಾಗಿದ್ದರು. ಪಾಕಿಸ್ತಾನ ಸರಕಾರ ಮತ್ತು ಮುಲ್ಲಾ ಸಾಹೇಬ ಕೂಡ ಪುಂಡು ಪೋಕರಿಗಳ ಕೃತ್ಯಕ್ಕೆ ಬೆಂಬಲವಾಗಿ ನಿಂತಿದ್ದರು. ಪಾಕಿಸ್ತಾನದ ವಿವಿಧ ಹಳ್ಳಿಗಳಿಂದ ಜನರು ಮೋಟಾರು ಕತ್ತೆ, ಕುದುರೆ ಹೀಗೆ ಬಗೆ ಬಗೆಯ ವಾಹನಗಳ ಮೇಲೆ ಭಾರತಕ್ಕೆ ವಲಸೆ ಬರುವ ಚಿತ್ರಣ ಸಾಮಾನ್ಯವಾಗಿತ್ತು. ಊರು ಬಿಟ್ಟು ಹೋಗುವ ಹಿಂದುಗಳನ್ನು ದಾರಿ ಮಧ್ಯದಲ್ಲಿ ತಡೆದು ನಿಲ್ಲಿಸಿ ತರುಣಿಯರ ಮಾನಭಂಗ ಮಾಡುತ್ತಿದ್ದರು. ಊರಿನಿಂದ ಅಮಾನುಷವಾಗಿ ಕಳುಹಿಸುವಾಗ ಕೂಡ ಅವರು ನೆಮ್ಮದಿಯಿಂದ ಭಾರತ ತಲುಪುತ್ತೇವೆಂಬ ಭರವಸೆ ಇರಲಿಲ್ಲ.

ಹಿರಿಯ ಪತ್ರಕರ್ತ ಕುಲದೀಪ ನಯ್ಯರ್ ಅವರು ತಮ್ಮ ಆತ್ಮಕತೆ **ಒಂದು ಜೀವನ ಸಾಲದು** ಇದರಲ್ಲಿ ೧೯೪೭ರ ದೇಶ ವಿಭಜನೆ ಹಾಗೂ ತಾನು ಲಾಹೋರಿನಿಂದ ಭಾರತಕ್ಕೆ ವಲಸೆ ಬರುವ ಚಿತ್ರಣವನ್ನು ನೀಡುತ್ತಾರೆ. ಇದು ಇವರ ನೈಜ ಅನುಭವವಾಗಿದೆ. ಕಾದಂಬರಿಯಲ್ಲಿ ಉಲ್ಲೇಖವಾದ ಘಟನೆಗಳು ಹಾಗೂ ನಯ್ಯರ್ ಅವರ ಅನುಭವವನ್ನು ತಾಳೆ ಮಾಡಿ ನೋಡಿದರೆ ಕಾದಂಬರಿ ಹೇಳಿರುವುದರಲ್ಲೇನೂ ಉತ್ಪ್ರೇಕ್ಷೆಯಿಲ್ಲವೆನ್ನುವುದನ್ನು ತಿಳಿದುಬರುತ್ತದೆ. "ಸಿಯಾಲ್ ಕೋಟೆಯಲ್ಲಿ ಅಲ್ಪ ಸ್ವಲ್ಪ ಉದ್ವಿಗ್ನ ಪರಿಸ್ಥಿತಿಯಿದ್ದರೂ ನಮ್ಮ ಜೀವನ ನೆಮ್ಮದಿಯಿಂದ ಸಾಗುತ್ತಿತ್ತು. ಆದರೆ ೧೯೪೭ರ ಆಗಸ್ಟ್ ೧೨ರಂದು ವಿಭಜನೆಯ ಘೋಷಣೆ ಆದೊಡನೆ ಎಲ್ಲವೂ ಬದಲಾಗಿಬಿಟ್ಟಿತು. ಆಗ ನನಗೆ ಇಪ್ಪತ್ನಾಲ್ಕು ವರ್ಷ. ಅಪನಂಬಿಕೆಯ ಹುಲ್ಲಿನ ಬಣವೆಗೆ ಬೆಂಕಿಯ ಕಿಡಿ ಎಸೆದಂತಾಯಿತು. ಇಡೀ ಉಪಖಂಡದಲ್ಲಿ ಕೋಮು ದಳ್ಳುರಿ ಹೊತ್ತಿ ಉರಿಯಿತು. ಅದರಲ್ಲಿ ಉತ್ತರ ಭಾರತದ ಭಾಗ ಹೆಚ್ಚು ಬೆಂದರೆ ಬಂಗಾಳವು ಕಷ್ಟ ಅನುಭವಿಸಿತು. ಹಿಂದುಗಳು ಮತ್ತು ಮುಸ್ಲಿಮರು ಇಬ್ಬರಲ್ಲೂ ಹೆಪ್ಪುಗಟ್ಟಿದ್ದ ಭಾವನೆಯು ಹಲವು ವರ್ಷಗಳಿಂದ ನಡೆಯುತ್ತಿದ್ದ ಕೋಮು ಅಪಪ್ರಚಾರದಿಂದ ಪುಷ್ಟಿಗೊಂಡು

ಎಲ್ಲೆಡೆ ಆಕ್ರೋಶಕ್ಕೆ ದಾರಿಯಾಯಿತು. ಆಡಳಿತಗಾರರು ಧರ್ಮದ ಆಧಾರದ ಮೇಲೆ ಒಡೆದುಹೋಗಿದ್ದರಿಂದ ಪರಿಸ್ಥಿತಿ ಇನ್ನಷ್ಟು ಬಿಗಡಾಯಿಸಿತು.

ಆಗಸ್ಟ್ ೧೩ರಂದು ಗಡಿಯ ಎರಡು ಬದಿಯಲ್ಲಿ ಹೆಚ್ಚು ಕಡಿಮೆ ಏಕಕಾಲಕ್ಕೆ ಹಿಂಸಾಕಾಂಡ ಶುರುವಾಯಿತು. ರಾವಲ್ಪಿಂಡಿಯಲ್ಲಿ ಸಿಖ್ಖರ ಹತ್ಯೆ ಮತ್ತು ಸಿಖ್ ಆಡಳಿತವಿದ್ದ ಪೂರ್ವ ಪಂಜಾಬಿನಲ್ಲಿ ಮುಸ್ಲಿಮರ ಹತ್ಯೆ ನಡೆದ ನಂತರ ಲಾಹೋರ್ ಮತ್ತು ಅಮೃತಸರ ಕೋಮುಜ್ವಾಲೆಯಲ್ಲಿ ಹೊತ್ತಿ ಉರಿಯತೊಡಗಿತು. ಮಾರಕಾಸ್ತ್ರಗಳನ್ನು ಹಿಡಿದ ಉದ್ರಿಕ್ತ ಪೇಟೆ ಜನರು ನಗರದ ಪೇಟೆಗಳಲ್ಲಿ ಓಡಾಡತೊಡಗಿದೊಡನೆ ರಕ್ತಪಾತವೂ ಆರಂಭವಾಯಿತು. ಉದ್ರಿಕ್ತ ಜನರಿಂದ ಕೊಲೆ, ಲೂಟಿ, ಹೆಂಗಸರು ಮಕ್ಕಳ ಅಪಹರಣ ಮತ್ತು ಮನೆಗಳಿಗೆ ಬೆಂಕಿ ಹಚ್ಚುವುದು ಎಲ್ಲವೂ ನಡೆಯಿತು. ಬೇರೆ ಕಡೆಗೆ ಹೋಲಿಸಿದರೆ ತಣ್ಣಗಿದ್ದ ಸಿಯಾಲ್‌ಕೋಟೆಯು ಹೊತ್ತಿ ಉರಿಯಿತು. ನಾವು ದೂರದಿಂದಲೇ ಅಸಹಾಯಕರಾಗಿ ನೋಡುತ್ತಿದ್ದೆವು.

ಕೋಮು ಗಲಭೆ ಕಡಿಮೆ ಆಗುವವರೆಗೆ ಕೆಲವು ಕಾಲ ಭಾರತಕ್ಕೆ ಹೋಗಬೇಕೆಂದು ನಮ್ಮ ಕುಟುಂಬ ತೀರ್ಮಾನಿಸಿತು... ನಮ್ಮ ಊಟದ ಮೇಜಿನ ಬಳಿ ನಾನು ಮತ್ತು ನನ್ನ ತಾಯಿ ಸ್ವಲ್ಪ ಹೊತ್ತು ಕುಳಿತೆವು. ಮನಸ್ಸಿನಲ್ಲಿ ದುಃಖ ತುಂಬಿತ್ತು. ಈ ಮನೆಗೆ ನಾವು ಮತ್ತೆ ವಾಪಾಸಾಗುವುದೇ ಇಲ್ಲವೇನೋ ಎಂಬ ಆಲೋಚನೆ ಮಾಡದಿರಲು ಕಷ್ಟ ಪಡುತ್ತಿದ್ದೆವು. ಜೊತೆಗೆ ಭಾರತದಲ್ಲಿ ನಾವಿನ್ನು ಹೊಸದಾಗಿ ಜೀವನ ಆರಂಭಿಸಬೇಕಾಗಬಹುದೆಂಬ ಚಿಂತೆಯ ಬಗ್ಗೆ ಹೇಳುವುದೇ ಬೇಡ. ನಮ್ಮ ಮನೆಗೆ ಇದೇ ಕೊನೆಯ ಭೇಟಿ ಎಂದು ನಮ್ಮಿಬ್ಬರಲ್ಲಿ ಯಾರಿಗೂ ಗೊತ್ತಾಗಲಿಲ್ಲ. ಆ ಹೃದಯ ವಿದ್ರಾವಕ ಘಟನೆಗಳನ್ನು ವರ್ಣಿಸಲು ನನ್ನಲ್ಲಿ ಪದಗಳಿದ್ದರೆ ಚೆನ್ನಾಗಿರುತ್ತಿತ್ತು. ಎಲ್ಲವನ್ನೂ ಬಿಟ್ಟು ಹೊರಡುವ ಆ ಸಂಗತಿಗೆ ಅಭಿವ್ಯಕ್ತಿ ಕೊಡುವುದು ಹೇಗೆ? ಅದು ನೆನಪುಗಳ ಕೆಂಡದುರಿಯಲ್ಲಿ ಸುಡುವುದಕ್ಕೆ ಸಮ. ಎಲ್ಲವೂ ಸುಟ್ಟು ಬೂದಿಯಾದಂತೆ ಅನ್ನಿಸುತ್ತಿತ್ತು. ಮನೆಯ ಹೊರಬಾಗಿಲಿಗೆ ಬೀಗ ಹಾಕುವಾಗ ಬಹುಶಃ ಇನ್ನೆಂದೂ ಇಲ್ಲಿಗೆ ಬರುವುದಿಲ್ಲವೇನೋ ಎಂಬ ವಿಚಿತ್ರ ಭಾವನೆ ಮೂಡುತ್ತಿದೆ ಎಂದು ನನ್ನ ತಾಯಿ ಭಾವಾತಿರೇಕದಿಂದ ಹೇಳಿಬಿಟ್ಟರು.

ಏನು ಚಿಂತೆ, ಏನು ಭಯವಿಲ್ಲದ ದಿನಗಳಿಗೆ ಹಿಂತಿರುಗಲು ನಾನು ಹಂಬಲಿಸುತ್ತಿದ್ದೆ... ಪಾಕಿಸ್ತಾನ ಮತ್ತು ಭಾರತ ಎರಡೂ ಕಡೆಯ ವಲಸೆಗಾರರನ್ನು ನಡುದಾರಿಯಲ್ಲಿ ಕೊಂದು ಹಾಕಿದ ಅಸಂಖ್ಯಾತ ಕತೆಗಳನ್ನು ನಾವು ಪ್ರಯಾಣ ಆರಂಭಿಸುವ ಮೊದಲೇ ಕೇಳಿದ್ದೆವು. ಪಾಕಿಸ್ತಾನದ ಅನೇಕ ರೈಲುಗಳಲ್ಲಿ ಮುಸ್ಲಿಮರಲ್ಲದವರನ್ನು ಕೊಂದು ಹಾಕಿದರು. ಹಾಗೆಯೇ ಭಾರತದ ರೈಲುಗಳಲ್ಲಿ ಮುಸ್ಲಿಮರನ್ನು ಕೊಚ್ಚಿ ಹಾಕಿದ್ದನ್ನು ಕೇಳಿದ್ದೆವು. ಅತ್ಯಂತ ಘೋರ ದುರಂತಗಳನ್ನು ಕಲ್ಪಿಸಿಕೊಳ್ಳುತ್ತಾ ನಿದ್ದೆಗೆ ಜಾರಿದೆವು. ಅದೊಂದು ವಲಸೆಯ ಮಹಾ ಪ್ರವಾಹವೇ ಆಗಿತ್ತು. ಎರಡೂ ಕಡೆಗಳಲ್ಲಿ ಮಾನವ ಕುಲವೇ ಹರಿದಾಡುತ್ತಿದೆ ಎಂಬಂತೆ ತೋರುತ್ತಿತ್ತು. ಅದನ್ನು ಯಾರೂ ನಿರೀಕ್ಷಿಸಿರಲಿಲ್ಲ, ಅದು ಯಾರಿಗೂ ಬೇಕಾಗಿರಲಿಲ್ಲ. ಅದನ್ನು ತಡೆಯಲು ಯಾರಿಗೂ ಶಕ್ತಿಯಿರಲಿಲ್ಲ. ಈ ಅನಿರೀಕ್ಷಿತ ದುರಂತ ಧುತ್ತನೆ ಎದುರಾದಾಗ, ವಿಭಜನೆಯ

ಪರಿಣಾಮವಾಗಿ ಬಂದ ಭೀಕರ ಸಮಸ್ಯೆಗಳು ಕಣ್ಣಿಗೆ ರಾಚಿದಾಗ ಮತ್ತು ಸ್ವಾತಂತ್ರ್ಯವು ತಂದ ದುರ್ಭರ ದಿನಗಳನ್ನು ಅನುಭವಿಸುವುದು ಅನಿವಾರ್ಯವಾದಾಗ ಎರಡೂ ದೇಶಗಳೂ ಪರಸ್ಪರ ದೂಷಿಸಲು ಆರಂಭಿಸಿದವು. ವಲಸೆ ಹೋಗುತ್ತಿದ್ದ ನಿರಾಶ್ರಿತರು ತಾವು ಹೋಗುತ್ತಿದ್ದ ದೇಶಗಳಿಗೆ ಕಹಿ ಭಾವನೆ ಮತ್ತು ಸೇಡಿನ ಭಾವನೆಗಳನ್ನು ತಮ್ಮೊಡನೆ ಕೊಂಡೊಯ್ಯುತ್ತಿದ್ದರು. ಅಷ್ಟೇ ಅಲ್ಲ, ಶತಮಾನಗಳ ಕಾಲ ಇತರ ಜಾತಿ ಧರ್ಮಗಳ ಜನರೊಂದಿಗೆ ಶಾಂತಿಯಿಂದ ಬದುಕಿದ ಹಳ್ಳಿ ಪಟ್ಟಣಗಳಲ್ಲಿ ನಡೆದ ದೌರ್ಜನ್ಯ, ಹತ್ಯೆಯ ಕಥೆಗಳನ್ನೂ ಅವರು ಕೊಂಡೊಯ್ಯತ್ತಿದ್ದರು. ದೇಶವಿಭಜನೆ ಧರ್ಮದ ಹೆಸರಿನಲ್ಲಿ ಆಗಿತ್ತು. ಆದರೆ ಈ ಹತ್ಯೆಗಳು ಜನರ ಮನಸ್ಸಿನಲ್ಲಿ ಆಳವಾದ ಗಾಯಗಳನ್ನು ಮಾಡಿದ್ದವು. ಯಾರನ್ನು ದೂಷಿಸಬೇಕೋ ಅಥವಾ ಯಾರನ್ನು ಹೆಚ್ಚು ದೂಷಸಬೇಕೋ ಒಟ್ಟಿನಲ್ಲಿ ಗಡಿಯ ಎರಡು ಕಡೆ ಕೆಲವು ವಾರಗಳ ಕಾಲದ ಉರಿದ ಉದ್ವಿಗ್ನತೆ, ಉನ್ಮತ್ತತೆ, ಭವಿಷ್ಯದಲ್ಲಿ ಎಷ್ಟೋ ದಶಕಗಳ ಕಾಲ ಎರಡೂ ದೇಶಗಳ ನಡುವಣ ಬಾಂಧವ್ಯ ಮತ್ತಷ್ಟು ಕಹಿಯಾಗಲು ಕಾರಣವಾಯಿತು. ದೇಶ ವಿಭಜನೆಯ ದುರಂತದಿಂದ ಈಗಾಗಲೇ ಮೂರು ತಲೆಮಾರುಗಳು ನರಳಿವೆ. ಈ ಕತ್ತಲ ಹಾದಿ ಇನ್ನೆಷ್ಟು ದೂರವೋ ಗೊತ್ತಿಲ್ಲ. ಎರಡೂ ದೇಶಗಳು ಎಲ್ಲಾ ವಿಷಯಗಳಲ್ಲಿ ಭಿನ್ನಮತ ವ್ಯಕ್ತಪಡಿಸುತ್ತಾ ಬಂದಿವೆ. ಭಯ ಮತ್ತು ಪರಸ್ಪರ ವಿಶ್ವಾಸದ ಕೊರತೆ ಇರುವುದರಿಂದ ಕ್ಷುಲ್ಲಕ ವಿಷಯಗಳು ದೊಡ್ಡದಾಗಿ ಕಡ್ಡಿ ಗುಡ್ಡವಾಗಿದೆ.

ಹಿಂದು ಧರ್ಮದ ಔದಾರ್ಯ, ಇಸ್ಲಾಂ ಧರ್ಮದ ಶಾಂತಿ ಭಾವನೆಗಳೇನಾದರೂ ಉಳಿದಿದ್ದರೆ ಅವು ಯಾವುವೂ ಕೆಲಸಕ್ಕೆ ಬರುತ್ತಿರಲಿಲ್ಲ. ಒಂದಾದ ಮೇಲೊಂದರಂತೆ ಹಳ್ಳಿಗಳನ್ನು ನಿರ್ನಾಮ ಮಾಡಲಾಗಿತ್ತು. ಮುಸ್ಲಿಮರ ನೆಲೆಗಳಲ್ಲಿದ್ದ ಜನ ಹಿಂದು ಮತ್ತು ಸಿಖ್ ನೆಲೆಗಳನ್ನು ಕೊಂದು ಸುಟ್ಟಿದ್ದರು. ಇದಕ್ಕೆ ಪ್ರತಿಯಾಗಿ ಹಿಂದು ಮತ್ತು ಸಿಖ್ಖರು ಸೇರಿ ಮುಸ್ಲಿಮರನ್ನು ನಾಮಾವಶೇಷಗೊಳಿಸಿದರು. ರಾವಲ್ಪಿಂಡಿ ಮತ್ತು ಝೀಲಮ್‌ನಲ್ಲಿ ನಡೆದ ಗಲಭೆಗಳು ಅತ್ಯಂತ ಭೀಕರವಾಗಿದ್ದವು. ಅಪಹರಣ ಮತ್ತು ಅತ್ಯಾಚಾರದಿಂದ ಪಾರಾಗಲು ಅನೇಕ ಹಿಂದು ಮತ್ತು ಸಿಖ್ಖ ಮಹಿಳೆಯರು ಬಾವಿಗಳಿಗೆ ಧುಮುಕಿದ ಪ್ರಕರಣಗಳು ನಡೆದವು. ನಡೆದಿರಬಹುದಾದ ಭೀಕರ ದುರಂತಕ್ಕೆ ಸಾಕ್ಷಿಯೆನ್ನುವಂತೆ ನಾವು ಪ್ರಯಾಣ ಮಾಡಿದ ರಸ್ತೆಯ ಬದಿಗಳಲ್ಲಿ ನೂರಾರು ಶವಗಳು, ಲೂಟಿ ಮಾಡಿದ ನಂತರ ಎಸೆದ ಖಾಲಿ ಪೆಟ್ಟಿಗೆಗಳು ಮತ್ತು ಚೀಲಗಳನ್ನು ನಾನು ನೋಡಿದೆ..."[೨] ಹೀಗೆ ಕುಲದೀಪ್ ನಯ್ಯರ್ ಅವರ ಆತ್ಮಕತೆಯು ನಡೆದ ಘೋರ ದುರಂತದ ನೈಜ ಚಿತ್ರನವನ್ನು ನಿಡುತ್ತವೆ. ಧರ್ಮದ ಆಧಾರದ ಮೇಲೆ ವಿಭಜಿಸಲಾದ ದೇಶದಲ್ಲಿ ಅನ್ಯಕೋಮಿನವರು ಭಯದ ನೆರಳಿನಲ್ಲಿ ಬದುಕುವಂತಹ ಒಂದು ಸ್ಥಿತಿ ನಿರ್ಮಾಣ ಅಗುತ್ತದೆ.

'ಬೇಡಿ ಕಳಚಿತು ದೇಶ ಒಡೆಯಿತು' ಕಾದಂಬರಿಯು ಪಾಕಿಸ್ತಾನವನ್ನು ಪಡೆದುಕೊಳ್ಳಲು ಮುಸ್ಲಿಂಲೀಗ್ ನಡೆಸಿದ ಅಮಾನವೀಯ ಅಟ್ಟಹಾಸ, ರಾಜಕಾರಣಿಗಳ ಕುಮ್ಮತ್ತಿನ ವರ್ಣನೆಯನ್ನು ನೀಡುತ್ತದೆ. ಭಾರತದಲ್ಲಿ ನಡೆಯುತ್ತಿರುವ ಹಿಂದು ಮುಸ್ಲಿಮರ ನಡುವಿನ ಕಚ್ಚಾಟವು ಬ್ರಿಟಿಷರು ಇಲ್ಲಿಂದ ಹೊರಡುವುದಕ್ಕೆ ಮೀನಮೇಷ ಎಣಿಸುವುದಕ್ಕೆ ಕಾರಣವಾಗುತ್ತದೆ. ಬ್ರಿಟಿಷರು ಕೊನೆಗೆ ಇಲ್ಲಿಂದ ಹೊರಡಲು ಅಡ್ಡಿಯಿಲ್ಲ. ಆದರೆ ಯಾರಿಗೆ ಅಧಿಕಾರ ಹಸ್ತಾಂತರ

ಮಾಡಬೇಕು? ಎಂಬುದಾಗಿ ತಲೆಕೆಡಿಸಿಕೊಳ್ಳುತ್ತಾರೆ. ಆದರೆ ಫ್ರೆಂಚ್ ಕ್ರಾಂತಿ ಆದಾಗ, ಅಮೇರಿಕ ಕ್ರಾಂತಿ ಆದಾಗ ಅಧಿಕಾರ ಹಸ್ತಾಂತರದ ಬಗ್ಗೆ ಯಾರೂ ತಲೆಕೆಡಿಸಿಕೊಂಡಿಲ್ಲ. ಅದೇ ರೀತಿ 'ನಮ್ಮ ದೇಶವನ್ನು ಯಾರು ಆಳಬೇಕೆಂಬುದರ ಗೊಡವೆ ನಿಮಗೇಕೆ?' ಎಂದು ಪ್ರಶ್ನಿಸಿದರು ಭಾರತೀಯರು. ಚುನಾವಣೆಯಲ್ಲಿ ಗೆದ್ದು ಬಂದ ಮುಸ್ಲಿಂ ಲೀಗಿನ ಶಾಸಕರು ಪಾಕಿಸ್ತಾನವನ್ನು ನಿರ್ಮಿಸಲು ಹಾತೊರೆಯುತ್ತಿದ್ದರು. ಅವರು ಪ್ರತಿಜ್ಞೆ ಸ್ವೀಕರಿಸುವಾಗ ದಯಾಮಯ, ಕರುಣಾಸಿಂಧು, ಅಲ್ಲಾಹನ ಹೆಸರಿನಲ್ಲಿ ಪ್ರತಿಜ್ಞೆ ಸ್ವೀಕರಿಸಿದ್ದಾರೆ. ಭಾರತದ ಉಪಖಂಡದಲ್ಲಿ ವಾಸಿಸುವ ಮುಸ್ಲಿಂ ಜನಾಂಗದ ಕ್ಷೇಮ, ಭದ್ರತೆ ಮುಕ್ತಿ ಮತ್ತು ಸುದೈವ ಪಾಕಿಸ್ತಾನವನ್ನು ಸ್ಥಾಪಿಸುವುದರಲ್ಲಿ ಮಾತ್ರವೇ ಇದೆ. ಈ ನಮ್ಮ ಧ್ಯೇಯೋದ್ದೇಶ ಸತ್ಯ ಮತ್ತು ನ್ಯಾಯವೆಂದು ನಂಬಿ, ಆ ಧ್ಯೇಯೋದ್ದೇಶವನ್ನು ಈಡೇರಿಸಿಕೊಳ್ಳುವುದರಲ್ಲಿ ಬರಬಹುದಾದ ಅಪಾಯ, ತ್ಯಾಗ, ಬಲಿದಾನ ಮಾಡಲು ಪ್ರತಿಜ್ಞೆ ಮಾಡುತ್ತೇನೆ"[೧೩] ಎಂದು ಪ್ರತಿಜ್ಞೆ ಸ್ವಿಕರಿಸಿದರು. ಬಂಗಾಳದ ಮುಸ್ಲಿಂ ಮುಖಂಡ ಹೆಚ್. ಎಸ್. ಸುಹ್ರಾವರ್ದಿ ಆವೇಶದಿಂದ "....ಶಾಂತಿಯಿಂದ ಬದುಕಲು ನಮಗೊಂದು ಭೂಭಾಗ ಬೇಕು..ಮುಸ್ಲಿಮರು ಅದಕ್ಕಾಗಿ ಹೋರಾಡಲು ಸಿದ್ಧರಿದ್ದಾರೆಯೇ ಎಂದು ದೀರ್ಘಕಾಲ ಯೋಚಿಸಿದ್ದೇನೆ. ಬಂಗಾಳದ ಪ್ರತಿಯೊಬ್ಬ ಮುಸ್ಲಿಮನು ಹೋರಾಡಿ ಪ್ರಾಣಾರ್ಪಣೆ ಮಾಡಲು ಸಿದ್ಧನಿದ್ದಾನೆಂದು ನಾನು ಸತ್ಯವಾಗಿ ಸಾರುತ್ತೇನೆ[೧೪] ಎಂದು ಘೋಷಿಸಿದರು. ಸಂಯುಕ್ತ ಪ್ರಾಂತ್ಯದ ಮುಸ್ಲಿಂ ಮುಖಂಡ ಖಲಿಕ್ವಾಜ್ಜಾಮನು ಎದ್ದು ನಿಂತು ಪಾಕಿಸ್ತಾನಕ್ಕಾಗಿ ನಮ್ಮ ಪ್ರಾಣಾರ್ಪಣೆ ಮಾಡುತ್ತೇನೆ ಎಂದು ಅಬ್ಬರಿಸಿದರು.

ಇಷ್ಟೆಲ್ಲ ಮುಸ್ಲಿಂ ಮುಖಂಡರಿಂದ ಭರವಸೆ ದೊರಕಿದುದರಿಂದ ತಾವು ಪಾಕಿಸ್ತಾನವನ್ನು ಯಾವುದೇ ಬೆಲೆ ತೆತ್ತಾದರೂ ಪಡೆದೇ ಪಡೆಯುತ್ತೇವೆಂಬ ಭರವಸೆಯು ಮಹಮ್ಮದ್ ಆಲಿ ಜಿನ್ನಾರಿಗೆ ದೊರಕಿತು. ಮುಸ್ಲಿಂ ಲೀಗ್ 'ಡೈರೆಕ್ಟ್ ಆಕ್ಷನ್ ಡೇ'ಗೆ ಕರೆಕೊಟ್ಟಿತು. ಆ ಕಾಲದಲ್ಲಿ ಒಂದು ಕರಪತ್ರವನ್ನು ಲಕ್ಷಾಂತರ ಸಂಖ್ಯೆಯಲ್ಲಿ ಹಂಚಲಾಗಿತ್ತು. ಆ ಕರಪತ್ರದಲ್ಲಿ ಜಿನ್ನಾರ ಕೈಯಲ್ಲೊಂದು ಖಡ್ಗವನ್ನು ಕೊಟ್ಟು "ಮುಸ್ಲಿಮರಾದ ನಮಗೆ ಕಿರೀಟವಿತ್ತು. ನಾವು ಆಳಿದೆವು. ನಿಮ್ಮ ಖಡ್ಗವನ್ನು ಕೈಗೆತಿಕೊಳ್ಳಲು ಸಿದ್ಧರಾಗಿ. ಓ ಕಾಫಿರರೇ! ನಿಮ್ಮ ಅವಸಾನ ದೂರವಿಲ್ಲ ನಿಮ್ಮ ಸಾಮೂಹಿಕ ಹತ್ಯೆ ಸನ್ನಿಹಿತವಾಗಿದೆ!"[೧೫] ಎಂಬ ಒಕ್ಕಣೆಯಿತ್ತು. ಹೀಗೆ ಮುಂದೆ ನಡೆಯುವ ಘೋರ ಹಿಂಸೆಯ ಮುನ್ಸೂಚನೆ ಹಾಗೂ ಆ ಹಿಂಸೆಗೆ ತನ್ನ ಕೋಮಿನವರನ್ನು ಮಾನಸಿಕವಾಗಿ ಸಿದ್ಧಗೊಳಿಸುವ ಕೆಲಸವು ಸದ್ದಿಲ್ಲದೆ ನಡೆಯುತ್ತದೆ.

'ಡೈರೆಕ್ಟ್ ಆಕ್ಷನ್ ಡೇ'ಯ ವರದಿಗಳ ಸಂಗ್ರಹದಲ್ಲಿ ಇರುವ ವಿವರಗಳಿವು. ಆಗಸ್ಟ್ ೧೬ರಂದು ಪಶ್ಚಿಮ ಬಂಗಾಳ ಸರಕಾರ ರಜಾ ಘೋಷಿಸಿತು. ಹೌರಾ ಕ್ಷೇತ್ರದ ಶಾಸಕ ಷರೀಫ್ ಖಾನ್ ಹಾಗೂ ಕಲ್ಕತ್ತಾ ಮೆಯರ್ ಮಹಮ್ಮದ್ ಉಸ್ಮಾನ್ ಹಿಂದಿನ ರಾತ್ರಿ ಕತ್ತಿ, ಕುಡುಗೋಲು, ಚೂರಿ, ಚಾಕು, ಬಂದೂಕು ಇತ್ಯಾದಿ ಮಾರಕಾಸ್ತ್ರಗಳನ್ನು ಲಾರಿಯಲ್ಲಿ ತುಂಬಿಕೊಂಡು ಮುಸ್ಲಿಮರಿಗೆ ಹಂಚಿದರು. ಪೆಟ್ರೋಲ್ ಪಡಿತರವಿದ್ದರೂ ಸಾವಿರಾರು ಗ್ಯಾಲನ್ ಪೆಟ್ರೋಲ್ ಮತ್ತು ಸೀಮೆ ಎಣ್ಣೆ ಡಬ್ಬಗಳನ್ನು ಗೂಂಡಾ ಜನರಿಗೆ ಹಂಚಿದರು...ಆಗಸ್ಟ್ ೧೬ರಂದು

ಇನ್ಸ್‌ಪೆಕ್ಟರ್ ಮಿ.ವೇಡ್ ಲೂಟಿ ಮಾಡಿದ ಸಾಮಾಗ್ರಿಗಳೊಡನೆ ಎಂಟು ಜನ ಮುಸ್ಲಿಮರನ್ನು ಲಾರಿ ಸಮೇತ ಹಿಡಿದರು. ಆದರೆ ಪೊಲೀಸ್ ಕಂಟ್ರೋಲ್ ರೂಮಿನಲ್ಲಿ ಠಾಣೆ ಹೂಡಿದ್ದ ಮುಖ್ಯಮಂತ್ರಿ ಸುಹ್ರಾವರ್ದಿ "ನನ್ನ ವೈಯಕ್ತಿಕ ಜವಾಬ್ದಾರಿಯಿಂದ ಅವರನ್ನು ಬಿಟ್ಟುಬಿಡಿ" ಎಂದು ಆಜ್ಞೆ ಮಾಡಿದರು.

ಆಗಸ್ಟ್ ೧೬ರಿಂದ ೪೦ ಗಂಟೆಗಳ ಕಾಲ ಲೂಟಿ, ಅಗ್ನಿಸ್ಪರ್ಶ, ಸಜೀವ ದಹನ, ಸಿಕ್ಕಸಿಕ್ಕಲ್ಲಿ ಹಿಂದೂಗಳನ್ನು ಇರಿದು ಕೊಲ್ಲುವುದು ಯಾವ ಅಂಕೆಯೂ ಇಲ್ಲದೆ ನಡೆಯಿತು. ಬೀದಿಗಳಲ್ಲಿ, ಓಣಿಗಳಲ್ಲಿ ಹೆಣಗಳು ರಾಶಿ ರಾಶಿಯಾಗಿ ಬಿದ್ದವು. ಅವುಗಳನ್ನು ಸಂಸ್ಕರಿಸಲಾಗದೆ ಕಲ್ಕತ್ತಾ ಬೀದಿಗಳಲ್ಲಿ ನಾಯಿನರಿಗಳು, ಹದ್ದುಗಳು, ಮಾಂಸವನ್ನು ಹರಿದು ತಿಂದವು. ನೂರಾರು ಹೆಣಗಳು ನದಿಯಲ್ಲಿ ತೇಲಿಹೋದವು! ಚಿಕ್ಕ ಮಕ್ಕಳನ್ನು ಮಾಳಿಗೆ ಮೇಲಿನಿಂದ ಕೆಳಗೆಸೆದು ಕೊಂದರು. ಹೆಂಗಸರನ್ನು ಕೂದಲೆಳೆದು ಕೆಡಹಿ ಸಂಭೋಗ ಮಾಡಿದರು..."[೧೬] ಇತಿಹಾಸ ಕಂಡ ಭೀಕರ ನರಮೇಧಗಳಲ್ಲಿ ಇದೂ ಒಂದು. ೨೦ ಗಂಟೆಗಳಲ್ಲಿ ೫೦೦೦ ಹೆಣಗಳು ಉರುಳಿದವು. ಹದಿನೈದು ಸಾವಿರ ಜನರಿಗೆ ಘೋರ ಗಾಯಗಳಾದುವು. ಕೋಟಿ ಕೋಟಿ ರೂಪಾಯಿಗಳ ಆಸ್ತಿ ಹಾಳಾಯಿತು! ಸಹಸ್ರಾರು ಹೆಂಗಸರ ಮಾನಹರಣ ಮಾಡಲಾಯಿತು. ಮುಸ್ಲಿಂ ಲೀಗಿಗೆ ಸೇರಲು ಒಪ್ಪದಿದ್ದ ಮುಸ್ಲಿಮರ ಹತ್ಯೆಯೂ ನಡೆಯಿತು. ಸಂಯುಕ್ತ ಪ್ರಾಂತ್ಯದಲ್ಲಿ ಕಾಂಗ್ರೆಸ್ ಮಂತ್ರಿಮಮಡಲದ ಸದಸ್ಯ ಷಫಿಅಹಮ್ಮದ್ ಕಿದ್ವಾಯಿ ಮುಸ್ಲಿಂ ಗೂಂಡಾಗಳಿಂದ ಹತ್ಯೆಯಾದರು. ರಚಿಸಲಿರುವ ಕೇಂದ್ರ ಮಂತ್ರಿಮಮಡಲದಲ್ಲಿ ಸೇರಲು ಒಪ್ಪದಿದ್ದ ಮುಸ್ಲಿಂ ಲೀಗಿಗೆ ಸೇರದ ಸರ್ ಷಫಿ ಅಹಮದ್ ಖಾನರ ಹತ್ಯೆಗೆ ಪ್ರಯತ್ನ ನಡೆಯಿತು. ಹಿಂಸೆಯಲ್ಲಿ ಸಹಕಾರ ನೀಡದಿದ್ದ ಮುಸ್ಲಿಮರು ಕೂಡ ಹಿಂಸಾನಿರತರ ಪಾಲಿಗೆ ಕಾಫರರು ಅಥವಾ ಧರ್ಮದ್ರೋಹಿಗಳೇ ಆದುದರಿಂದ ಅವರನ್ನು ಹತ್ಯೆ ಮಾಡಲು ಯಾವ ನಿರ್ಬಂಧವು ಇರಲಿಲ್ಲ. ಸೆಪ್ಟೆಂಬರ್ ೧೨ರಂದು ಸ್ಟೇಟ್ಸ್‌ಮನ್ ಪತ್ರಿಕೆಯಲ್ಲಿ ಒಬ್ಬ ಪ್ರತಿಷ್ಠಿತ ಮುಸ್ಲಿಂ ಅಧಿಕಾರಿ ಬರೆದ ಪತ್ರ ಪ್ರಕಟವಾಗಿತ್ತು–"ಆಗಸ್ಟ್ ೧೪ರಿಂದ ನಾನು ಪ್ರಯಾಣ ಮಾಡುತ್ತಿದ್ದಾಗ ದೊಡ್ಡ ದೊಡ್ಡ ಚೂರಿಗಳನ್ನು ರೈಲಿನಲ್ಲಿ ಮುಸ್ಲಿಮರಿಗೆ ಅನಿರ್ಬಂಧಿತವಾಗಿ ಹಂಚುತ್ತಿದ್ದುದನ್ನು ಕಂಡೆ...ಕಲ್ಕತ್ತಾ ನಿಲ್ದಾಣದಲ್ಲೂ ಲೀಗಿಗೆ ಸೇರದ ಮುಸ್ಲಿಮರನ್ನು ಕೊಚ್ಚಿ ಹಾಕುವುದಾಗಿ ಗೂಂಡಾ ಜನರು ಹೆದರಿಸುತ್ತಿದ್ದರು"[೧೭]

ಬಂಗಾಳದ ನೌಖಾಲಿಯಲ್ಲಿ ಹಿಟ್ಲರನ ಹತ್ಯೆಗಿಂತಲೂ ಕ್ರೂರವಾದ ಮಾರಣಹೋಮ ನಡೆಯಿತು. ಇದನ್ನು ನಿಲ್ಲಿಸಲು ಗಾಂಧೀಜಿ ಪಾದಯಾತ್ರೆ ಕೈಗೊಂಡರು. "ಬಂಗಾಳದ ಮದರಸದಲ್ಲಿರುವ ಮೌಲ್ವಿಗಳು ಮತಾಂಧರಾಗಿದ್ದರು. ಬಂಗಾಳದಲ್ಲಿ ನಡೆಯುವ ಎಲ್ಲಾ ಹಿಂದು ಮುಸ್ಲಿಂ ದೊಂಬಿಗಳಿಗೂ ಅವರೇ ಮುಖ್ಯ ಕಾರಣ. ಈಗ ನೌಖಾಲಿಯಲ್ಲಿ ಆಗಿರುವ ದೊಂಬಿಗೂ ಅವರೇ ಕಾರಣ! ನಿಸ್ಸಂದೇಹ![೧೮] ಎಂಬುದಾಗಿ ಕಿಶೋರಿಲಾಲ್ ಗಾಂಧೀಜಿಗೆ ತಿಳಿಸಿದರು. ಮಸೀದಿಯಲ್ಲಿರುವ ಮುಲ್ಲಾಗಳು ಸಕಲ ಜೀವಿಗಳಲ್ಲೂ ದಯೆಯನ್ನು ತೋರುವ

ಕರುಣಾಮಯಿಯಾದ ಅಲ್ಲಾನ ತತ್ವಗಳನ್ನು ಗಾಳಿಗೆ ತೂರಿ ಜನರಲ್ಲಿ ತನ್ನಂತಹುದೇ ಅನ್ಯಕೋಮಿನ ಮಾನವ ರಕ್ತದ ರುಚಿ ನೋಡಲು ಪ್ರೇರೇಪಿಸಿದರು.

ಅಕ್ಟೋಬರ ೧೪ರಂದು ಬಂಗಾಳದ ಪತ್ರಿಕಾ ಸಮಿತಿ ಪ್ರಕಟಿಸಿದ ಒಂದು ಪತ್ರಿಕಾ ಪ್ರಕಟಣೆಯನ್ನು ಗಾಂಧೀಜಿ ಓದುತ್ತಾರೆ."ದೊಂಬಿಗಾರರು ಗುಂಪು ಗುಂಪಾಗಿ ಮಾರಕಾಸ್ತ್ರಗಳಿಂದ ಹಳ್ಳಿಗಳ ಮೇಲೆ ಧಾಳಿ ನಡೆಸಿ ಲೂಟಿ ಮಾಡುತ್ತಿದ್ದಾರೆ. ಬಹುದೊಡ್ಡ ಪ್ರಮಾಣದಲ್ಲಿ ಅಕ್ಟೋಬರ ೧೦ರಿಂದ ಕೊಲೆ, ಸುಲಿಗೆ, ಕೊಳ್ಳಿ ಭೀಕರವಾಗಿ ಮುಂದುವರಿದಿದೆ! ಬಲಾತ್ಕಾರವಾಗಿ ಮತಾಂತರ, ಹೆಂಗಸರ ಅಪಹರಣ, ದೇವಾಲಯ, ಪೂಜಾ ಮಂದಿರಗಳನ್ನು ಅಪವಿತ್ರಗೊಳಿಸುವ ದುಷ್ಕೃತ್ಯ ಅವ್ಯಾಹತವಾಗಿ ನಡೆದಿದೆ..."[೧೯] ಸ್ಟೇಟ್ಸ್‌ಮನ್ ಪತಿಕೆಯಲ್ಲಿ ಬಂದ ಸುದ್ದಿಯ ಪ್ರಕಾರ– "ನೌಖಲಿ ಜಿಲ್ಲೆಯಲ್ಲಿ ೧೨೦ ಹಳ್ಳಿಗಳಲ್ಲಿರುವ ೬೦,೦೦೦ ಜನ ಹಿಂದೂಗಳು ತಿಪ್ಪೇರಾ ಜಿಲ್ಲೆಯ ೪೦,೦೦೦ ಹಿಂದೂಗಳು ಪುಂಡರ ಸೆರೆಯಲ್ಲಿದ್ದಾರೆ. ಮಿಸ್ ಮ್ಯೂರಿಯಲ್ ಲೆಸ್ಟರ್ ಎಂಬ ಆಂಗ್ಲ ಮಹಿಳೆ ಮಾಡಿದ ವರದಿಯ ಪ್ರಕಾರ "ಅತ್ಯಂತ ಕಠಿಣ ಪರಿಸ್ಥಿತಿ ಹೆಂಗಸರದ್ದು. ಅವರಲ್ಲಿ ಬಹು ಮಹಿಳೆಯರು ತಮ್ಮ ಗಂಡಂದಿರನ್ನು ಕೊಲ್ಲುವುದನ್ನು ಕಣ್ಣಾರೆ ನೋಡಬೇಕಾಯಿತು. ಗಂಡಂದಿರನ್ನು ಕೊಲೆ ಮಾಡಿದವರೊಡನೆ ಬಲಾತ್ಕಾರವಾಗಿ ಮದುವೆ ಮಾಡಿಕೊಳ್ಳಬೇಕಾಯಿತು. ಅವರು ಸಜೀವಚ್ಛವವಾಗಿದ್ದಾರೆ. ಗೋಮಾಂಸವನ್ನು ಬಲಾತ್ಕಾರವಾಗಿ ತಿನ್ನಿಸುವುದು, ಇಸ್ಲಾಂ ಧರ್ಮಕ್ಕೆ ಶರಣಾಗತರಾಗುವುದು ಅವರು ತಮ್ಮ ಪ್ರಾಣ ಉಳಿಸಿಕೊಳ್ಳಲು ತೆರಬೇಕಾದ ಬೆಲೆಯಾಯಿತು!"[೨೦]

ನೌಖಾಲಿಯಿಂದಲೇ ಬಂದಿದ್ದ ವಕೀಲರೊಬ್ಬರು ತಾವು ಕಂಡಿದ್ದ ತಮ್ಮ ಸೀನಿಯರ್ ವಕೀಲರನ್ನು ಹತ್ಯೆ ಮಾಡಿದ್ದ ಭೀಭತ್ಸ ದೃಶ್ಯವನ್ನು ಗಾಂಧೀಜಿಗೆ ಹೀಗೆ ವಿವರಿಸುತ್ತಾರೆ–'ಘಲಾಂ ಸರ್ವರ್ ಎಂಬ ಮುಸ್ಲಿಂ ಗೂಂಡಾ ರಾಜನ ಆಜ್ಞೆಯಂತೆ ನೌಖಾಲಿ ವಕೀಲರ ಸಂಘದ ಅಧ್ಯಕ್ಷರಾದ ರಾಯ್ ಸಾಹೇಬ ರಾಜೇಂದ್ರ ಲಾಲ್ ಚೌದರಿ ಅವರನ್ನು ಒಂದು ಕೊರಡಿಗೆ ಕಟ್ಟಿ ಕೊಡಲಿಯಿಂದ ಕತ್ತು ಕತ್ತರಿಸಿದರು. ರುಂಡವನ್ನು ಭರ್ಜಿಗೆ ಚುಚ್ಚಿಕೊಂಡು ಕೇಕೆ ಹಾಕುತ್ತಾ ಘಲಾಂ ಸರ್ದಾರನಿಗೆ ಆ ರುಂಡವನ್ನು ಒಪ್ಪಿಸಿದರು. ದಾರಿಯುದ್ದಕ್ಕೂ 'ಅಲ್ಲಾ ಹೋ ಅಕ್ಬರ್' 'ಪಾಕಿಸ್ತಾನ್ ಜಿಂದಾಬಾದ್' 'ಲಡಕೆ ಲೇಂಗೆ ಪಾಕಿಸ್ತಾನ್' 'ಮುಸ್ಲಿಂಲೀಗ್ ಜಿಂದಾಬಾದ್' ಎಂದು ಕೂಗುತ್ತಿದ್ದರು.[೨೧] ಚೌಧಿರಿಯವರ ಮುಸ್ಲಿಂ ಸೇವಕ ಅವರ ಮಡದಿ ಮಕ್ಕಳನ್ನು ಆ ಪುಂಡರಿಂದ ರಕ್ಷಿಸಿದನು. ತರುವಾಯ ನಾಗರಿಕ ಸರಬರಾಜು ಮಂತ್ರಿ ಅಬ್ದಲ್ ಗೋಫ್ರಾನ್ ಆ ವಕೀಲರ ಮಡದಿಗೆ ರಕ್ಷಣೆ ಕೊಟ್ಟರು. ಘೋರ ದುರಂತದ ನಡುವೆಯೂ ಮಾನವೀಯತೆಯುಳ್ಳ ಮುಸಲ್ಮಾನರಿದ್ದರೆಂಬುದೇ ಸ್ವಲ್ಪವಾದರೂ ಅಂದು ಗಾಂಧೀಜಿಗೆ ಸಮಧಾನ ನೀಡಿದ ವಿಚಾರವಾಗಿತ್ತು.

ಈ ಎಲ್ಲಾ ಅನಾಚಾರ, ಮಾರಣಹೋಮದ ಸುದ್ದಿ ಕೇಳಿ ತತ್ತರಿಸಿದ ಗಾಂಧೀಜಿ ನವೆಂಬರ್ ೨೦ರಂದು ನೌಖಾಲಿಯಲ್ಲಿ ತಮ್ಮ ಪ್ರಯಾಣವನ್ನು ಕೈಗೊಂಡರು. ಅಂಧಕಾರದಲ್ಲಿ

ಏಕಾಂಗಿಯಾಗಿ ನಡೆದರು. ಹಳ್ಳಿಯಿಂದ ಹಳ್ಳಿಗೆ ನಡೆದರು! ೧೬ ಮೈಲಿ ನಡೆದೇ ನಡೆದರು ಶ್ರೀರಾಮಗಂಜ ವಿಭಾಗದ ೪೭ ಹಳ್ಳಿಗೂ ಪಾದಯಾತ್ರೆ ಮಾಡಿದರು. ಬ್ರಿಟಿಷರು ಕೂಡ ಇಲ್ಲಿಂದ ನಿರ್ಗಮಿಸಲು ಕಾತರರಾಗಿದ್ದರು. ಅವರು ಇನ್ನು ಇಲ್ಲಿ ಆಡಳಿತವನ್ನು ಮುಂದುವರಿಸುವುದು ಅಸಾಧ್ಯದ ಮಾತೆಂಬುದನ್ನು ಮನಗಂಡಿದ್ದರು. ಭಾರತದ ಸೈನ್ಯಬಲವನ್ನು ನೆಚ್ಚಿ ಅವರು ಆಡಳಿತ ನಡೆಸುತ್ತಿದ್ದರು. ಆದರೆ ಮುಂಬಯಿಯಲ್ಲಿ ನೌಕಾದಂಗೆ, ಐ.ಎನ್.ಎ ಸೈನಿಕರು, ಇವರನ್ನೆಲ್ಲ ನೋಡಿದಾಗ ರಾಜನಿಷ್ಠೆ ಕುಂದುತ್ತಿರುವುದು ಅವರ ಗಮನಕ್ಕೆ ಬಂತು. ಅಲ್ಲಿಂದ ಆಂಗ್ಲ, ಅಮೆರಿಕನ್, ಆಸ್ಟ್ರೇಲಿಯನ್ ಸೈನಿಕರನ್ನು ತಂದು ದೇಶವನ್ನು ದಾಸ್ಯದಲ್ಲಿಟ್ಟುಕೊಳ್ಳುವುದು ಅಸಾಧ್ಯ. ಆದುದರಿಂದ ಆದಷ್ಟು ಬೇಗನೇ ಭಾರತದಿಂದ ನಿರ್ಗಮಿಸಲು ಬ್ರಿಟಿಷರು ಹಾತೊರೆಯುತ್ತಿದ್ದರು. ಅಷ್ಟರಲ್ಲಿಯೇ ಮತಾಂಧತೆಯ ದ್ವೇಷಕ್ಕೆ ದೇಶ ಹೊತ್ತಿ ಉರಿಯಲು ಆರಂಭಿಸಿತು. ಆಗಸ್ಟ್-ಸೆಪ್ಟೆಂಬರ್ ೪೬ರಲ್ಲಿ ಮುಂಬಯಿಯಲ್ಲಿ ಹಿಂದೂ-ಮುಸ್ಲಿಂ ದೊಂಬಿ ಆದಾಗ ೫೦೦ ಮಂದಿ ಬಹುತೇಕ ಮುಸ್ಲಿಮರು ಬಲಿಯಾಗಿದ್ದರು. ಸಂಯುಕ್ತ ಪ್ರಾಂತ್ಯಗಳಲ್ಲಿ ಅದೇ ಹಿಂದೂ-ಮುಸ್ಲಿಂ ದೊಂಬಿ ಗರ್‌ಮುಕ್ತೇಶ್ವರ ಜಾತ್ರೆಗೆಂದು ಸೇರಿದ್ದ ಜನ ಸಾವಿರದ ಒಂದು ನೂರು ಮುಸ್ಲಿಮರನ್ನು ಕೊಚ್ಚಿ ಹಾಕಿದ್ದರು. ಭಾರತದ ಪಶ್ಚಿಮ ಪ್ರಾಂತ್ಯಗಳಲ್ಲಿ ನಡೆದಿದ್ದ ನರಮೇಧಕ್ಕೆ ಪ್ರತಿಯಾಗಿ ನೌಖಾಲಿಯಲ್ಲಿ ನರಮೇಧ ನಡೆಯಿತು.

ದೇಶದಲ್ಲಾಗುತ್ತಿದ್ದ ನರಮೇಧವನ್ನು ನಿಲ್ಲಿಸಲು ದೇಶದ ವಿಭಜನೆಯೊಂದೇ ದಾರಿಯಾಗಿ ತೋರಿತು. ಭಾರತದ ವಿಭಜನೆ ಮತ್ತು ಸ್ವಾತಂತ್ರ್ಯ ಎನ್ನುವುದು ಗಾಂಧೀಜಿಗೆ ಪ್ರಿಯವಾಗಲಿಲ್ಲ. ಅನೇಕ ಮುಸ್ಲಿಮರಿಗೂ ಅದು ತೃಪ್ತಿಯಾಗಲಿಲ್ಲ. ಪಂಜಾಬಿನಲ್ಲಿ ದೊಂಬಿ ಎದ್ದಿತು. ಆರ್‌ಎಸ್‌ಎಸ್ ಇದನ್ನು ವಿರೋಧಿಸಿತು. ಏನೇ ಆದರೂ ಈ ರಕ್ತಪಾತವನ್ನು ಕೊನೆಗೊಳಿಸಲು ದೇಶ ವಿಭಜನೆ ಬಿಟ್ಟು ಬೇರೆ ದಾರಿಯಿರಲಿಲ್ಲ.

## ದೇಶವಿಭಜನೆ

ಕೊನೆಗೆ ಮೌಂಟ್ ಬ್ಯಾಟನ್ ಕೊನೆಯ ಗವರ್ನರ್ ಜನರಲ್ ಆಗಸ್ಟ್ ೧೫ರಂದು ಭಾರತೀಯರಿಗೆ ಸ್ವಾತಂತ್ರ್ಯವನ್ನು ನೀಡುವುದಾಗಿ ಘೋಷಿಸಿದರು. 'ಸೇವಾ ಸಿಬ್ಬಂದಿಯ ವಿಂಗಡಣೆ, ಸೈನ್ಯದ ವಿಭಜನೆ, ಭಾರತ ಸರಕಾರದ ಆಸ್ತಿ ಮತು ಹೊಣೆ, ಸಂಸ್ಥೆಗಳು ಯಾವುವು ಯಾರಿಗೆ ಸೇರಬೇಕು... ಇತ್ಯಾದಿ ವಿವರಗಳನ್ನು ನಿರ್ಧರಿಸಿದರು. ಹಲವಾರು ಮಂದಿಗೆ ದೇಶ ವಿಭಜನೆಯಂತೂ ದುಃಖದಾಯಕ ಸಂಗತಿಯಾಗಿತ್ತು. ಬಹುಸಂಖ್ಯಾತ ಕಾಂಗ್ರೆಸ್ಸಿಗರಿಗೆ ಬೇಡವಾದ ಭಾಗೀದಾರರೊಡನೆ ಕೂಡಿ ಬಾಳುವುದು ವ್ಯವಹರಿಸುವುದು ಬೇಡವಾಗಿತ್ತು. ಅಬುಲ್‌ಕಲಾಂ ಆಜಾದರು "ಇದೊಂದು ಅತ್ಯಂತ ದುಃಖದಾಯಕ ದಿನ ಎಂದು ವ್ಯಥೆಪಟ್ಟರು. ಹಿಂದೂ ಮಹಾಸಭೆಯವರು ಇದು ಸರ್ವಥಾ ಅಂಗೀಕಾರಾರ್ಹವಲ್ಲವೆಂದು ಅಬ್ಬರಿಸಿದರು. ಈ ಯೋಜನೆಯನ್ನು ಪ್ರಬಲವಾಗಿ ಖಂಡಿಸಿದವರು ಕಲ್ಕತ್ತ ಮತ್ತು ಪಂಜಾಬಿನ ಅಗ್ನಿಭಕ್ಷಕ ಮುಸ್ಲಿಮರು. ಹಿಂದೂ ಮಹಾಸಭೆಯವರು ಭಾರತದಲ್ಲಿರುವ ಮುಸಲ್ಮಾನರನ್ನು ಹಾಗೂ

ಪಂಜಾಬ್ ಮತ್ತು ಕಲ್ಕತ್ತದ ಬಹುತೇಕ ಶ್ರೀಮಂತ ಮುಸಲ್ಮಾನರು ಅಲ್ಲಿರುವ ಹಿಂದೂಗಳನ್ನು ನೆಮ್ಮದಿಯಾಗಿ ಬಾಳಲು ಅವಕಾಶ ಕೊಡುತ್ತಿರಲಿಲ್ಲ. ಆದರೂ ಅವರು ಭಾರತ ವಿಭಜನೆಯನ್ನು ಪ್ರಬಲವಾಗಿ ವಿರೋಧಿಸುತ್ತಾರೆ.

ಯಾರು ಎಷ್ಟೇ ವಿರೋಧಿಸಿದರೂ 'ಭಾರತ ಸ್ವಾತಂತ್ರ್ಯ ಮಸೂದೆ'ಯನ್ನು ಪ್ರಧಾನಿ ಅಟ್ಲಿ ಜುಲೈ ೪ರಂದು ಮಂಡಿಸಿದರು. ಈ ಮಸೂದೆಯನ್ನು ಕಾಮನ್ಸ್ ಸಭೆಯಲ್ಲಿ ಚರ್ಚಿಲ್ ವಿರೋಧಿಸದಿದ್ದರೂ 'ಈ ಸಂದರ್ಭದಲ್ಲಿ ಭಾರತದ ಲಕ್ಷಾವಧಿ ಹಸಿದ ಜನರ ಭವಿಷ್ಯವನ್ನು ಸರಕಾರವು ಕಾಂಗ್ರೆಸ್ಸಿಗರ ಕೈಗೆ ಕೊಡುವುದೆಂದರೆ ಭಾರತವನ್ನು ಸುಲಿಗೆ ಮತ್ತು ದರೋಡೆಕೋರರಾದ ಪುಂಡರು, ಪೋಕರಿಗಳು, ದುಷ್ಟರು, ನೀಚರ ವಶಕ್ಕೆ ಕೊಟ್ಟಂತೆಯೇ ರಾಜಕಾರಣದ ಪ್ರಾಥಮಿಕ ಪಾಠವನ್ನು ಕಲಿಯಲಿಕ್ಕೂ ಇವರಿಗೆ ಇನ್ನೂ ನೂರು ವರ್ಷಗಳು ಬೇಕಾಗುತ್ತದೆ' ೨೨ ಎಂದರು. ಭಾರತ ಸ್ವಾತಂತ್ರ್ಯವನ್ನು ತೀವ್ರವಾಗಿ ವಿರೋಧಿಸುತ್ತಿದ್ದವರಲ್ಲಿ ಚರ್ಚಿಲ್ ಒಬ್ಬರು. ಭಾರತೀಯರ ಬಗ್ಗೆ ಒಂದು ಒಳ್ಳೆಯ ಅಭಿಪ್ರಾಯ ಅವರ ಮನಸ್ಸಿನಲ್ಲಿ ಎಂದೂ ಮೂಡಿರಲಿಲ್ಲ. ಅವರು ಪ್ರಧಾನಿಯಾಗಿದ್ದ ಸಮಯದಲ್ಲಿ ಅಮೇರಿಕಾದಂತಹ ಬೇರೆ ದೇಶಗಳು ಭಾರತಕ್ಕೆ ಸ್ವಾತಂತ್ರ್ಯ ನೀಡುವಂತೆ ಒತ್ತಡ ಹೇರಿದ್ದರೂ ಅವರು ಮಣಿಯಲಿಲ್ಲ.

ಇಂಗ್ಲೆಂಡಿನಲ್ಲಿ ಭಾರತೀಯ ಸ್ವಾತಂತ್ರ್ಯ ಮಸೂದೆ ಅಂಗೀಕಾರವಾದುದೇ ತಡ ಇಲ್ಲಿ ಹೈದರಾಬಾದ್ ನಿಜಾಮರು ಇದುವರೆಗೆ ಬ್ರಿಟಿಷ್ ಚಕ್ರವರ್ತಿಗಳಲ್ಲಿದ್ದ ಪರಮಾಧಿಕಾರ ಕೊನೆಗೊಂಡದ್ದರಿಂದ ತಾವು ಸರ್ವತಂತ್ರ ಸ್ವತಂತ್ರ ಸಾರ್ವಭೌಮ ರಾಜ್ಯವಾಯಿತೆಂದು ಸಾರಿಕೊಂಡರು. ನಿಜಾಮ ರಾಜ್ಯದಲ್ಲಿದ್ದ ಪ್ರತಿಯೊಬ್ಬ ಮುಸಲ್ಮಾನನು ತನಗೆ ಪರಮಾಧಿಕಾರ ಪ್ರಾಪ್ತವಾಯಿತೆಂಬಂತೆ ಮೆರೆಯತೊಡಗಿದರು. ರಜಾಕಾರರು ಎಂಬ ಮತಾಂಧರು ನಿಜಾಮನ ರಾಜ್ಯದಲ್ಲೆಲ್ಲ ಹಿಂದೂಗಳ ಮೇಲೆ ಧಾಳಿ ಮಾಡತೊಡಗಿದರು. ಅವರ ಉಪಟಳ ತಾಳದೆ ನಿಜಾಮ ರಾಜ್ಯದಿಂದ ಹಿಂದುಗಳು ಓಟಕಿತ್ತರು.

## ೧೯೪೭ರ ಸ್ವಾತಂತ್ರ್ಯ

ಆಗಸ್ಟ್ ೧೫ ಬರಲಿರುವುದನ್ನೇ ಭಾರತದ ಜನತೆ ಆಸಕ್ತಿಯಿಂದ ಹೆಬ್ಬಯಕೆಯಿಂದ ಕಾಯತೊಡಗಿದರು. ಆಗಸ್ಟ್ ೧೫ರ ನಂತರ ಸ್ವತಂತ್ರವಾಗುವ ಭಾರತ ಹೇಗಿರಬಹುದೆಂಬುದಾಗಿ ಒಬ್ಬೊಬ್ಬರು ಒಂದೊಂದು ಬಗೆಯ ಕನಸು ಕಾಣುತ್ತಿದ್ದರು. ಗಾಂಧೀಜಿಯ ರಾಮರಾಜ್ಯದ ಕನಸು ನನಸಾಗಬಹುದೇ ಎಂಬುದನ್ನು ಹಲವರು ಎದುರು ನೋಡುತ್ತಿದ್ದವರು. ಸ್ವತಂತ್ರ ಭಾರತದ ಸಿದ್ಧತೆಯನ್ನು ದಿಲ್ಲಿಯಿಂದ ಹಳ್ಳಿಯವರೆಗೆ ಸಾರ್ವಜನಿಕರು, ಸಮಾಜಸೇವಕರು, ರಾಜಕೀಯ ಮುಖಂಡರು ರಭಸವಾಗಿ ಮಾಡತೊಡಗಿದರು. ಅಗಸ್ಟ್ ೧೫ರ ಬೆಳಗ್ಗೆ ಬ್ರಿಟಿಷ್ ಸಾಮ್ರಾಜ್ಯದ ಸಂಕೇತ ಯಾವುದೊಂದು ಉಳಿದಿರಬಾರದೆಂದು ಕಣ್ಣಿಗೆ ಕಾಣುವ ಸಂಗತಿಗಳನ್ನು ಅಳಿಸಿ ಹಾಕುವ ಕೆಲಸ ತ್ವರಿತಗತಿಯಿಂದ ಸಾಗಿತ್ತು. ದೆಹಲಿಯಲ್ಲಿ ವೈಸ್ರಾಯಿ ಅರಮನೆಯಲ್ಲಿ ವೈಸ್ರಾಯಿ ಗವರ್ನರ್ ಜನರಲ್ ಕುಳಿತುಕೊಳ್ಳುವ ಆಸನಗಳ ಬೆನ್ನಿನಲ್ಲಿರುವ ಬ್ರಿಟಿಷ್ ಅರಸರ

ಕಿರೀಟದ ಚಿಹ್ನೆಯನ್ನು ತೆಗೆದು ಭಾರತದ ಅಶೋಕ ಸ್ತಂಭದ ಮೇಲಿನ ಸಿಂಹಾಸನಗಳ ಚಿಹ್ನೆಯನ್ನು ಅಳವಡಿಸುವುದರಿಂದ ಹಿಡಿದು, ಹಳ್ಳಿಯವರೆಗೆ ಎಲ್ಲೆಲ್ಲಿ ಅರಸೊತ್ತಿಗೆಯ ಚಿಹ್ನೆ, ಮುದ್ರೆ ಇದೆಯೋ ಅಲ್ಲಲ್ಲಿ ಎಲ್ಲವನ್ನೂ ಬದಲಾಯಿಸುವ ಕಾರ್ಯ ಭರದಿಂದ ಸಾಗಿತು. ಸರಕಾರಿ ಕಛೇರಿಯಲ್ಲಿ ಬಳಸುತ್ತಿದ್ದ ಅರಸೊತ್ತಿಗೆ ಗುರುತಿನ ರಬ್ಬರ್ ಸ್ಟ್ಯಾಂಪುಗಳಿಗೆ ಬದಲಾಗಿ ಸ್ವತಂತ್ರ ಭಾರತದ ಚಿಹ್ನೆಗಳನ್ನೊಳಗೊಂಡ ಲಕ್ಷಲಕ್ಷ ಹೊಸ ರಬ್ಬರ್ ಸ್ಟ್ಯಾಂಪುಗಳು ತಯಾರಿಸಲ್ಪಟ್ಟವು.

ಎಲ್ಲರೂ ಆಗಸ್ಟ್ ೧೪ ಕಳೆದು ೧೫ರ ಮಧ್ಯರಾತ್ರಿ ಸ್ವಾತಂತ್ರ್ಯದ ಗಳಿಗೆಯನ್ನು ಎಣಿಸುತ್ತಿದ್ದರೆ ಲಾಹೋರಿನಲ್ಲಿ ಹಿಂದೂ ಮತ್ತು ಸಿಖ್ಖರ ಮಾರಣಹೋಮ ನಡೆಯುತ್ತಿತ್ತು. ಹಿಂದೂ ಮತ್ತು ಸಿಖ್ ಜನರಿರುವ ಹಳೆ ಲಾಹೋರ್ ಶಹರಕ್ಕೆ ನೀರು ಬರದಂತೆ ನೀರಿನ ಕೊಳವೆಗಳನ್ನು ಕತ್ತರಿಸಿ ಬಿಟ್ಟಿದ್ದಾರಂತೆ! ನೀರಿಲ್ಲದೆ ಜನ ಕಂಗಾಲಾಗಿ ಹೋಗಿದ್ದಾರೆ. ಹೆಂಗಸರು ಮಕ್ಕಳು, ಮುದುಕರು ರೋದಿಸುತ್ತಿದ್ದಾರೆ! ನೀರನ್ನು ತರಲು ಹೊರಬಂದವರನ್ನು ಮುಸ್ಲಿಮರ ಪುಂಡು ಗುಂಪು ಸುಮ್ಮನೆ ಕೊಚ್ಚಿ ಹಾಕುತ್ತಿದ್ದೆಯಂತೆ! ಲಾಹೋರ್ ಶಹರ ಅರ್ಧಕ್ಕರ್ಧ ಬೆಂಕಿ ಹತ್ತಿ ಉರಿಯುತ್ತಿದೆಯಂತೆ! ಮನೆಯೊಳಗಿದ್ದ ಸಾವಿರಾರು ಜನ ಸಜೀವ ದಹನವಾಗಿದ್ದಾರೆಂಬ ವಾರ್ತೆಯೊಂದು ನೆಹರು ಅವರಿಗೆ ತಲುಪುತ್ತದೆ.[೨೩] ನೆಹರು ಭಾವಾತಿರೇಕಕ್ಕೊಳಗಾಗಿ ಕಣ್ಣೀರು ಸುರಿಸುತ್ತಿದ್ದರು. ಅವರು ಮಗಳ ಮುಖ ನೋಡಿ–"ಈ ರಾತ್ರಿ ನಾನು ಹೇಗೆ ಮಾತನಾಡಲಿ? ಲಾಹೋರ್, ನಮ್ಮ ಸುಂದರ ಲಾಹೋರ್ ಸುಡುತ್ತಿರುವಾಗ ಭಾರತಕ್ಕೆ ಸ್ವಾತಂತ್ರ್ಯ ಬಂತೆಂದು ನನ್ನ ಹೃದಯದಲ್ಲಿ ಸಂತೋಷ ತುಂಬಿದೆಯೆಂದು ಹೇಗೆ ಹೇಳಲಿ? ಯಾವ ಬಾಯಿಂದ ಹೇಳಲಿ? ಎಂಬುದಾಗಿ ರೋದಿಸಿದರು.

ರಾಬರ್ಟ್ ಆಟಾಕಿನ್ ಲಾಹೋರಿನ ಮತಾಂಧತೆಯ ದುರಂತವನ್ನು ಕಣ್ಣಾರೆ ಕಂಡನು–"ಹಿಂದೂಗಳು ಹೆಚ್ಚಿದ್ದ ಹಳ್ಳಿಗಳಲ್ಲಿ ಮುಸ್ಲಿಮರಾರೂ ಉಳಿಯದಂತೆ ಕೊಚ್ಚಿ ಹಾಕಿದರು. ಮುಸ್ಲಿಮರು ಹೆಚ್ಚಿದ್ದ ಹಳ್ಳಿಗಳಲ್ಲಿ ಹಿಂದುಗಳು ಯಾರೂ ಜೀವಂತ ಉಳಿದಿರಲಿಲ್ಲ. ಎಲ್ಲೆಲ್ಲೂ.... ಎಲ್ಲೆಲ್ಲೂ ಹೊಲಗದ್ದೆಯ ದಾರಿಬದಿ... ಎಲ್ಲೆಡೆಯಲ್ಲೂ ಹೆಣಗಳು! ಬೆಂಕಿಯ ಉಗ್ರ ನಾಟ್ಯ....[೨೪] ಅಖಂಡ ಭಾರತದಲ್ಲಿ ಸ್ವಾತಂತ್ರ್ಯದ ಬಗ್ಗೆ ಅಖಂಡವಾದ ಸಂತೋಷಕ್ಕೆ ಎಡೆಯಿರಲಿಲ್ಲ. ಬಹಳಷ್ಟು ಮಂದಿ ಕೋಮುದಾಹದ ಈ ಉಗ್ರ ನರ್ತನದಿಂದಾಗಿ ಸ್ವತಂತ್ರ ಭಾರತವನ್ನು ನೋಡಲು ಸಾಧ್ಯವೇ ಆಗಲಿಲ್ಲ. ಸ್ವರಾಜ್ಯಕ್ಕೋಸ್ಕರ ತಮ್ಮ ಸರ್ವ ಸುಖವನ್ನು ತ್ಯಾಗ ಮಾಡಿದ ಆ ಜನತೆಗೆ ಸ್ವರಾಜ್ಯ ಎನ್ನುವುದು ಬೆಚ್ಚಿಬೀಳಿಸುವ ದುಸ್ವಪ್ನವಾಗುತ್ತದೆಂದು ಗೊತ್ತಿದ್ದರೆ ಅವರು ಅಂದು ಬ್ರಿಟಿಷರನ್ನು ಓಡಿಸಲು ಸರ್ವತ್ಯಾಗವನ್ನು ಮಾಡುತ್ತಿರಲಿಲ್ಲವೇನೋ! ದೇಶಕ್ಕೋಸ್ಕರ ಹೋರಾಡಿ ಅಂದು ಹುತಾತ್ಮರಾದವರೇ ಭಾಗ್ಯವಂತರು, ಇಲ್ಲದಿದ್ದರೆ ತಮ್ಮ ದೇಶದ ಒಂದು ಮೂಲೆಯಲ್ಲಿ ನಡೆಯುವ ಸಾವು ನೋವಿನ ಉಗ್ರ ನರ್ತನವನ್ನು ನೋಡಿ ಸ್ವಾತಂತ್ರ್ಯದಿನದಂದು ಎದೆಯೊಡೆದು ಸಾಯುತ್ತಿದ್ದರು.

ಅಂದು ರಾತ್ರಿ ೧೧.೪೮ಕ್ಕೆ ವೈಸ್ರಾಯಿ ಭವನದ ಮೇಲೆ ಹಾರುತ್ತಿದ್ದ 'ಯೂನಿಯನ್ ಜಾಕ್' ಕೆಳಗಿಳಿಯಿತು. ಇನ್ನು ಮೇಲೆ ರಾಷ್ಟ್ರಪತಿ ಭವನ ಎನಿಸಿಕೊಳ್ಳುವ ಆ ಅರಮನೆಯ ಮೇಲೆ ಸರಿಯಾಗಿ ೧೨ ಗಂಟೆಗೆ ಅಶೋಕ ಚಕ್ರ ಮುದ್ರಾಂಕಿತ ತ್ರಿವರ್ಣ ಬಾವುಟ ಹಾರಿತು! ಬಾಬು ರಾಜೇಂದ್ರಪ್ರಸಾದರು ಕಾರ್ಯಕ್ರಮವನ್ನು ಆರಂಭಿಸಿದರು. "ಇಂದು ದೊರೆತ ಈ ಪವಿತ್ರ ಸ್ವಾತಂತ್ರ್ಯಕ್ಕಾಗಿ ನಗುನಗುತ್ತಾ ನೇಣುಗಂಬವನ್ನು ಹತ್ತಿದ, ಬಂದೂಕಿನ ಗುಂಡಿಗೆ ಎದೆಯೊಡ್ಡಿದ ಗೊತ್ತಿರುವ ಮತ್ತು ಗೊತ್ತಿಲ್ಲದ ಅಸಂಖ್ಯಾತ ದೇಶಭಕ್ತರ ಸೇವೆ, ತ್ಯಾಗ, ಬಲಿದಾನ ಮಾಡಿದವರನ್ನು ಕೃತಜ್ಞತೆಯಿಂದ ಸ್ಮರಿಸುವುದು ನಮ್ಮ ಆದ್ಯ ಕರ್ತವ್ಯ...ಕಳೆದ ಮೂವತ್ತು ವರ್ಷಗಳಿಂದ ನಮಗೆ ದಾರಿ ದೀಪವಾದ ಮಹಾತ್ಮ ಗಾಂಧಿಗೆ ನಮ್ಮ ಅನಂತ ಕೃತಜ್ಞತೆಗಳನ್ನು ಅರ್ಪಿಸೋಣ."[೨೫] ಎಂದರು.

ರಮಣಯ್ಯ ಮತ್ತು ಹರಿಹರರಾಯರು ವಿಶಿಷ್ಟ ರೀತಿಯಿಂದ ಸ್ವಾತಂತ್ರ್ಯವನ್ನು ಆಚರಿಸಿದರು. ಹರಿಜನ ಕೇರಿಯನ್ನು ಗುಡಿಸಿ ಸ್ವಚ್ಛ ಮಾಡಿದರು. ಹರಿಜನ ಮಕ್ಕಳಿಗೆ ಹೊಸ ಉಡಿಗೆ ತೊಡಿಸದರು. ಸಿಹಿ ಹಂಚಿದರು. ಶಾಲಾಮಕ್ಕಳಿಗೆ ಗಾಂಧಿ ಟೋಪಿ ಹಾಕಿ ಪೆರೇಡ್ ಮೈದಾನಕ್ಕೆ ಮೆರವಣಿಗೆಯಲ್ಲಿ ಕರೆದೊಯ್ದರು. ಮೊದಲೇ ನಿರ್ಧರಿಸಿದಂತೆ ಆ ಸಂಜೆ ಹಂಪಿಯಲ್ಲಿ ವಿರೂಪಾಕ್ಷೇಶ್ವರ ದೇವಾಲಯದಲ್ಲಿ ವಿಶೇಷ ಪೂಜೆ, ಪ್ರಾರ್ಥನೆಗಳನ್ನು ಏರ್ಪಡಿಸಲಾಯಿತು. ಹೀಗೆ ಪ್ರತಿಯೊಂದು ಮನೆ ಮನೆಗಳಲ್ಲೂ ಹೆಣ್ಣು ಮಕ್ಕಳು ರಂಗೋಲಿ ಹಾಕಿದರು, ಹಬ್ಬದಡುಗೆ ಮಾಡಿ ಸಂಭ್ರಮಿಸಿದರು. ತಮ್ಮ ತಮ್ಮ ಮನೆಗಳನ್ನು ಶೃಂಗರಿಸಿದರು. ಪ್ರತಿಯೊಂದು ಕಚೇರಿ ಕಚೇರಿಗಳಲ್ಲೂ, ಶಾಲೆ ಶಾಲೆಗಳಲ್ಲೂ ಭಾರತದ ತ್ರಿವರ್ಣಧ್ವಜ ಹಾರಾಡಿತು. ಆದರೆ ಉತ್ತರ ಭಾರತದ ಕಲ್ಕತ್ತಾ, ಲಾಹೋರ್, ಪಂಜಾಬಿನ ಜನತೆ ದೇಶವಿಭಜನೆಯಾಗಿ ಸಾವು, ನೋವು ಆಸ್ತಿ-ಪಾಸ್ತಿಗಳ ನಷ್ಟದೊಂದಿಗೆ ಸ್ವಾತಂತ್ರ್ಯವನ್ನು ಬರಮಾಡಿಕೊಂಡರು. ಅನಾಥವಾದ ಬದುಕಿನಲ್ಲಿ ಆಶಾವಾದವೊಂದೇ ಅವರಿಗೆ ಭರವಸೆಯಾಗಿತ್ತು.

*****

# ಟಿಪ್ಪಣಿಗಳು

೧ ಬೊಳುವಾರ್ ಮಹಮ್ಮದ್ ಕುಂಞ್ಞಿ, ಸ್ವಾತಂತ್ರ್ಯದ ಓಟ ಪು. ೧೪
೨ ಅದೇ, ಪು.೧೫
೩ ಅದೇ, ಪು.೧೫
೪ ಭಾರತೀಸುತ, ಶತದ್ರು ದಂಡೆಗೆ, ಪು. ೧೧೯
೫ ಅದೇ, ಪು. ೧೫೩
೬ ಅದೇ, ಪು. ೨೧೪-೨೧೫
೭ ಅದೇ, ಪು. ೨೧೯
೮ ಅದೇ, ಪು.೨೧೯
೯ ಅದೇ, ಪು. ೨೬೧.
೧೦ ಅದೇ, ಪು .೨೬೩
೧೧ ಅದೇ, ಪು. ೨೬೬
೧೨ ಪೂರ್ಣಿಮ, (ಅನು), ಒಂದು ಜೀವನ ಸಾಲದು ಪು.ಸಂ ೭-೧೧
೧೩ ಕೋ. ಚೆನ್ನಬಸಪ್ಪ ,ಬೇಡಿ ಕಳಚಿತು ದೇಶ ಒಡೆಯಿತು ಪು. ೯೨೦-೯೨೧
೧೪ ಅದೇ, ಪು.೯೩೦-೯೩೧
೧೫ ಅದೇ, ಪು.೯೩೭
೧೬ ಅದೇ, ಪು.೯೩೮
೧೭ ಅದೇ, ಪು. ೯೪೦
೧೮ ಅದೇ, ಪು. ೯೪೦
೧೯ ಅದೇ, ಪು. ೯೪೦
೨೦ ಅದೇ, ಪು .೯೪೦
೨೧ ಅದೇ, ಪು. ೯೪೧
೨೨ ಅದೇ, ಪು.೯೫೫
೨೩ ಅದೇ, ಪು.೯೬೨
೨೪ ಅದೇ, ಪು.೯೬೩
೨೫ ಅದೇ, ಪು.೯೬೪

# ಅಧ್ಯಾಯ - ೭

## ಕನ್ನಡ ಸಾಹಿತಿಗಳು ಮತ್ತು ಸ್ವಾತಂತ್ರ್ಯ ಚಳುವಳಿ

ಚಳುವಳಿಯು ಸಾಹಿತ್ಯ ಪ್ರಕಾರವನ್ನೂ ಸಾಹಿತ್ಯ ಪ್ರಕಾರವು ಚಳುವಳಿಯನ್ನೂ ಪರಸ್ಪರ ಪ್ರಭಾವಿಸುತ್ತದೆ. ಸಾಹಿತಿಯು ತತ್ಕಾಲದ ವಿದ್ಯಾಮಾನದಿಂದ ವಿಮುಖವಾಗಿ ಬದುಕುವುದು ಕಷ್ಟಸಾಧ್ಯ. ಒಂದು ಕಾಲಘಟ್ಟದ ಸಾಮಾಜಿಕ ವ್ಯವಸ್ಥೆಯ ಪ್ರಮುಖ ಘಟನೆಗಳು ಸಾಹಿತ್ಯವನ್ನು ಪ್ರಭಾವಿಸಬಹುದು. ಕನ್ನಡ ಸಾಹಿತ್ಯದಲ್ಲಿ ಕಾಲಾನುಕಾಲಕ್ಕೆ ಸಮಾಜದಲ್ಲಿ ಆದ ಬದಲಾವಣೆಗಳು ಪ್ರಭಾವಿಸಿರುವುದುಂಟು. ಆಯಾ ಕಾಲಘಟ್ಟದ ಗುಣಧರ್ಮಗಳು, ನಂಬಿಕೆಗಳು ಸಾಹಿತ್ಯದಲ್ಲಿ ಪ್ರತಿಫಲಿಸಿವೆ. ಇತಿಹಾಸವು ದಾಖಲಾತ್ಮಕವಾಗಿದ್ದರೆ ಸಾಹಿತ್ಯವು ಕಲಾತ್ಮಕವಾಗಿರುತ್ತದೆ.

ಆದರೆ ಕನ್ನಡದ ನವೋದಯ ಕಾಲಘಟ್ಟವು ಇದಕ್ಕೆ ವ್ಯತಿರಿಕ್ತವಾಗಿದೆ. ೨೦ನೇ ಶತಮಾನದ ಪೂರ್ವಾರ್ಧದಲ್ಲಿ ಭಾರತ ದೇಶದ ಸಾಮಾನ್ಯ ಪ್ರಜೆಯೊಬ್ಬನ ನಿದ್ದೆಗೆಡಿಸಿದ ಸ್ವಾತಂತ್ರ್ಯ ಹೋರಾಟವನ್ನು ಕುರಿತು ಪ್ರಸಿದ್ಧರಾದ, ಹಲವಾರು ಪ್ರಶಸ್ತಿ ಪುರಸ್ಕಾರಗಳನ್ನು ಪಡೆದುಕೊಂಡಂತಹ ಸಾಹಿತಿಗಳು ಯಾವುದೇ ಕೃತಿರಚನೆ ಮಾಡಿರುವುದು ಕಂಡುಬರುವುದಿಲ್ಲ. ಕರ್ನಾಟಕ ರಾಜ್ಯದಲ್ಲಿ, ಅದರಲ್ಲೂ ಉತ್ತರ ಕನ್ನಡದಲ್ಲಿ ಕರನಿರಕರಣೆ, ಸತ್ಯಾಗ್ರಹ, ಕ್ವಿಟ್ ಇಂಡಿಯಾ ಚಳುವಳಿ ತೀವ್ರಗತಿಯಲ್ಲಿ ನಡೆಯುತ್ತಿರಬೇಕಾದರೆ ಕುವೆಂಪು, ದ.ರಾ ಬೇಂದ್ರೆಯಂತಹ ಮಹಾಕವಿಗಳ ಸಾಹಿತ್ಯದಲ್ಲಿ ಅದು ಪಡಿಮೂಡದ್ದು ಆಶ್ಚರ್ಯವಾಗುತ್ತದೆ. ತಮ್ಮದೇ ಪಕ್ಕದ ಹಳ್ಳಿಗಳಲ್ಲಿ ನಡೆದ ಘನಘೋರ ಚಳುವಳಿ ನಡೆಯುತ್ತಿರಬೇಕಾದರೆ ದೇಶ ಹೊತ್ತಿ ಉರಿಯುತ್ತಿರಬೇಕಾದರೆ ಈ ಮಹಾಕವಿಗಳು ರಮ್ಯ ಕವನಗಳನ್ನು ರಚಿಸುತ್ತಾ, ಪ್ರಕೃತಿಯ ಸೌಂದರ್ಯವನ್ನು ಆರಾಧಿಸುತ್ತಾ ಇದ್ದರೆಂಬುದು ನಿಜವಾಗಿಯೂ ಆಶ್ಚಯರ್ಯವನ್ನು ಉಂಟುಮಾಡುತ್ತದೆ. ಅವರ ಈ ವರ್ತನೆಗೆ ಕಾರಣವೇನೆಂದು ವಿವೇಚಿಸಿದರೆ ಅವರೆಲ್ಲರೂ

ವ್ಯವಸ್ಥೆಯ ಪರವಾಗಿದ್ದರೆಂಬುದು ಸ್ಪಷ್ಟವಾಗುತ್ತದೆ. ಕೆಲವರು ಬ್ರಿಟಿಷ್ ಸರಕಾರದ ನೌಕರಿಯಲ್ಲಿದ್ದರು. ವ್ಯವಸ್ಥೆಯ ಜೊತೆಯಲ್ಲಿ ನಿಷ್ಠುರ ಕಟ್ಟಿಕೊಳ್ಳುವುದು ಅವರಿಗೆ ಬೇಕಾಗಿರಲಿಲ್ಲ. ಇವರ ಮೇಲೆ ಕೇವಲ ಇಂಗ್ಲಿಷ್‌ನ ರೊಮ್ಯಾಂಟಿಕ್ ಸಾಹಿತ್ಯ ಪ್ರಭಾವ ಬೀರಿತ್ತೇ ಹೊರತು ನಮ್ಮ ದೇಶದಲ್ಲಿ ಹೊತ್ತಿ ಉರಿಯುತ್ತಿದ್ದ ಸ್ವಾತಂತ್ರ್ಯದ ಜ್ವಾಲೆ ಯಾವ ಪ್ರಭಾವವನ್ನೂ ಬೀರಲಿಲ್ಲ. ಇವರೆಲ್ಲರೂ ಕೂಡ ಈ ಸಮಯದಲ್ಲಿ ಸ್ವಪ್ನ ಲೋಕದಲ್ಲಿ ತೇಲಾಡುತ್ತಿದ್ದರು. ಕುವೆಂಪು ಅವರ 'ಸರ್ವರಿಗೆ ಸಮಬಾಳು. ಸರ್ವರಿಗೆ ಸಮಪಾಲು ಪದ್ಯವಾಗಲಿ, ಅಥವಾ 'ನೂರು ದೇವರನ್ನೆಲ್ಲಾ ನೂಕಾಚೆ ದೂರ, ಭಾರತಾಂಬೆಯೇ ದೇವಿ ನಮಗೆ ಪೂಜಿಸೋಣ ಬಾರ' ಮುಂತಾದ ಕವನಗಳು ನಮ್ಮ ದೇಶದ ಜಾತೀಯತೆ, ಮೂಢನಂಬಿಕೆ, ಶ್ರೀಮಂತರ ವಿರುದ್ಧದ ಆಕ್ರೋಶ ಇವುಗಳನ್ನು ಪ್ರತಿನಿಧಿಸುತ್ತದೆಯೇ ಹೊರತು ಅದು ಯಾವುದು ಕೂಡಾ ಬ್ರಿಟಿಷರ ವಿರುದ್ಧ ಬರೆದುದಲ್ಲ.

ಅದರೆ ನವೋದಯ ಕಾಲಘಟ್ಟದ ಸಾಹಿತಿಗಳಲ್ಲಿ ಶಿವರಾಮ ಕಾರಂತರು ಮಾತ್ರ ಸಲ್ಪ ಮಟ್ಟಿಗೆ ಸ್ವಾತಂತ್ರ್ಯ ಚಳುವಳಿಯಿಂದ ಪ್ರೇರಣೆ ಪಡೆದಿರುವುದು ಕಂಡುಬರುತ್ತದೆ. ಉತ್ತರ ಕನ್ನಡದಲ್ಲಿ ನಡೆದ ಕರನಿರಾಕರಣೆ ಚಳುವಳಿಯನ್ನು ಕಣ್ಣಾರೆ ಕಂಡವರು ಮತ್ತು ಅದರಲ್ಲಿ ತನ್ನ ಸೇವೆಯನ್ನು ನೀಡಿದವರು. ಇವರ 'ಔದಾರ್ಯದ ಉರುಳಲ್ಲಿ' ಕಾದಂಬರಿ ಸಂಪೂರ್ಣವಾಗಿ ಉತ್ತರ ಕನ್ನಡ, ಕುಂದಾಪುರ, ಶಿರಸಿ, ಸಿದ್ಧಾಪುರ, ಮಂಗಳೂರು ಮುಂತಾದ ಕಡೆ ನಡೆದ ಚಳುವಳಿ, ಹಾಗೂ ಸ್ವಾತಂತ್ರ್ಯ ಹೋರಾಟವನ್ನು ಕೂಡ ಕೆಲವು ಮಂದಿ ತಮ್ಮ ಸ್ವಾರ್ಥಕ್ಕೆ ಬಳಸಿಕೊಂಡಿರುವ ಚಿತ್ರಣವನ್ನು ನೀಡುತ್ತದೆ. ಎಂ.ಎಂ. ಕಲಬುರ್ಗಿಯವರು ತಮ್ಮ 'ಮಾರ್ಗ' ಸಂಪುಟ ಮೂರರಲ್ಲಿ ನವೋದಯ ಕಾಲಘಟ್ಟದಲ್ಲಿ ಒಂದೇ ಒಂದು ಸ್ವಾತಂತ್ರ್ಯ ಚಳುವಳಿಗೆ ಸಂಬಂಧಿಸಿದ ಕೃತಿ ರಚನೆಯಾಗಿಲ್ಲ. ಯಾಕೆಂದರೆ ಅಂದಿನ ಕವಿಗಳೆಲ್ಲರೂ ಕೂಡಾ ವ್ಯವಸ್ಥೆಯ ಒಂದು ಭಾಗವಾಗಿದ್ದರು[೧] ಎಂದು ಉಲ್ಲೇಖಿಸುತ್ತಾರೆ. ಅದರೆ ಕಾರಂತರು ಇದಕ್ಕೆ ಅಪವಾದ. ಅವರು ವ್ಯವಸ್ಥೆಯ ಒಂದು ಭಾಗವಾಗಿದ್ದರೆ 'ಔದಾರ್ಯದ ಉರುಳಲ್ಲಿ' ಕಾದಂಬರಿಯನ್ನು ಬರೆಯುತ್ತಿರಲಿಲ್ಲ. ಮತ್ತು ಇದು ಕೇವಲ ಒಂದು ಕಾಲ್ಪನಿಕ ಕಾದಂಬರಿಯಾಗದೆ ಅವರ ಅನುಭವ ಕಥನವು ಆಗಿದೆ. ಇದು ೧೯೪೭ರಲ್ಲಿ ಬಿಡುಗಡೆಯಾಗಿದೆ. ಆಗ ಸರಕಾರದ ಭಯವಿರಲಿಲ್ಲವೆಂದು ಭಾವಿಸಿದರೂ ಅವರು ಸರಕಾರಕ್ಕೆ ವಿರುದ್ಧವಾಗಿ ಹೋರಾಟದಲ್ಲಿ ಭಾಗಿಯಾಗಿದ್ದಂತೂ ಸುಳ್ಳಲ್ಲ. ಕಾರಂತರು ತಮ್ಮ ಆತ್ಮ ಚರಿತ್ರೆ 'ಸ್ಮೃತಿ ಪಟಲದಿಂದ' ಅದರಲ್ಲಿ ಹೀಗೆ ಹೇಳಿಕೊಂಡಿದ್ದಾರೆ. 'ಆ ಕಾಲಕ್ಕೆ ಉಡುಪಿಯಲ್ಲಿ ಪ್ರಕಟಗೊಳ್ಳುತ್ತಿದ್ದ 'ಸತ್ಯಾಗ್ರಹಿ' ಪತ್ರಿಕೆಯ ಸಂಪಾದಕರಾದ ಹಿರಿಯಡ್ಕ ನಾರಾಯಣರಾವ್ ಮತ್ತು ರಾಮರಾಯ ಮಲ್ಯ ಎಂಬುವವರನ್ನು ಸೆರೆಮನೆಗೆ ಒಯ್ದರು. ಆ ಸತ್ಯಾಗ್ರಹಿ ಪತ್ರಿಕೆಯಲ್ಲಿ ನಾನು ಉಪ್ಪಿನ ಸುಂಕವನ್ನು ಕುರಿತು ಬರೆದ ಒಂದು ಲೇಖನ ಸರಕಾರದ ಕಣ್ಣಿಗೆ ಬಿದ್ದಿದೆ. ಎಂದು ನನಗೆ ಕಾರ್ನಾಡು ಸದಾಶಿವರಾಯರು ತಿಳಿಸಿದಾಗ, ಯಾವಾಗ ಸರಕಾರದ ಆತಿಥ್ಯ ನನಗೂ ದೊರೆಯುತ್ತದೋ ಎಂದು ನಿರೀಕ್ಷಿಸಿದುಂಟು'.[೨] ಕಾರಂತರು ನೇರವಾಗಿ ಚಳುವಳಿಗೆ ಧುಮುಕದೆ ಇದ್ದರೂ ಆ ಸಮಯದಲ್ಲಿ ದೇಶದ ಸ್ವಾತಂತ್ರ್ಯದ ಅನಿವಾರ್ಯತೆಯನ್ನು ಕುರಿತು ಉಪನ್ಯಾಸ ನೀಡಲು

ಊರೂರು ತಿರುಗುತ್ತಿದ್ದರು. ಹೀಗಾಗಿ ಅವರು ಹೋದಲ್ಲೆಲ್ಲ ಪೊಲೀಸರು ಅವರನ್ನು ಹಿಂಬಾಲಿಸುತ್ತಿದ್ದರು.

ಆದರೂ ನವೋದಯ ಸಾಹಿತ್ಯದ ನಂತರದ ಕಾಲಘಟ್ಟದಲ್ಲಿ ಪ್ರಗತಿಶೀಲ ಸಾಹಿತಿಗಳಾದ ಬಸವರಾಜ ಕಟ್ಟೀಮನಿ, ತ.ರಾ.ಸು. ನಿರಂಜನ, ವಿ.ಎಂ ಇನಾಂದರ್, ವಡೇಗನ ಹಳ್ಳಿ ಆಶ್ವಥ ನಾರಾಯಣ, ಗೊರೂರು ರಾಮಸ್ವಾಮಿ ಅಯ್ಯಂಗಾರ್, ಕೋ.ಚೆ. ಮುಂತಾದವರು ಸ್ವಾತಂತ್ರ್ಯ ಚಳುವಳಿಯನ್ನೇ ವಸ್ತುವನ್ನಾಗಿಸಿಕೊಂಡ ಕಾದಂಬರಿಗಳನ್ನು ರಚಿಸಿದರು. ಇವರಲ್ಲಿ ಕೆಲವರು ಚಳುವಳಿಯಲ್ಲಿ ನೇರವಾಗಿ ಭಾಗವಹಿಸಿ ಜೈಲು ಸೇರಿದವರೂ ಇದ್ದಾರೆ. ಗೊರೂರು ರಾಮಸ್ವಾಮಿ ಅಯ್ಯಂಗಾರ್ 'ಕ್ವಿಟ್ ಇಂಡಿಯಾ' ಚಳುವಳಿಯ ಸಂದರ್ಭದಲ್ಲಿ ಬಂಧಿಯಾಗುತ್ತಾರೆ. ಅವರಿಗೆ ಬೆಂಗಳೂರು ಜೈಲಿನಲ್ಲಿ ಅನೇಕ ಮಂದಿ ಪ್ರಸಿದ್ಧ ಹೋರಾಟಗಾರರ ಪರಿಚಯವಾಗುತ್ತದೆ. ಸೆರೆಮನೆಯಲ್ಲಿರುವಾಗಲೇ ಅವರು 'ಸ್ವಾತಂತ್ರ್ಯವೇ ಧರ್ಮ' ಎಂಬ ಪುಸ್ತಕದ ಬಹುಭಾಗವನ್ನು ಬರೆಯುತ್ತಾರೆ.

ಅದೇ ರೀತಿಯಾಗಿ ಬಸವರಾಜ ಕಟ್ಟೀಮನಿಯವರು ಕೂಡಾ 'ಚಲೇಜಾವ್' ಚಳುವಳಿಯ ಸಂದರ್ಭದಲ್ಲಿ ಬಂಧನಕ್ಕೊಳಗಾಗುತ್ತಾರೆ. ದೇಶದ ಹಲವಾರು ಕಡೆಗಳಲ್ಲಿ ದಬ್ಬಾಳಿಕೆ, ಗೋಲೀಬಾರು, ಅತ್ಯಾಚಾರ ನಡೆಯುತ್ತಿತ್ತು. ಆಗಸ್ಟ್ ೯ರಿಂದ ನಡೆದ ವಿದ್ಯಾರ್ಥಿಗಳ ಸಭೆಯಲ್ಲಿ ಸರಕಾರದ ದಮನ ನೀತಿಯನ್ನು ಖಂಡಿಸಿ ಭಾಷಣ ಮಾಡಿದುದಕ್ಕಾಗಿ ಅವರ ಬಂಧನವಾಗುತ್ತದೆ. ಅವರ 'ಸ್ವಾತಂತ್ರ್ಯದೆಡೆಗೆ' ಕಾದಂಬರಿಯು ೧೯೪೬ರಲ್ಲಿಯೇ ಬಿಡುಗಡೆಯಾಗುತ್ತದೆ. ಕಟ್ಟೀಮನಿಯವರು ತಮ್ಮ 'ಮಾಡಿ ಮಡಿದವರು' ಕಾದಂಬರಿಯಲ್ಲಿ ಹೇಳುವ ಮಾತುಗಳು ಸ್ವಾತಂತ್ರ್ಯ ಸಂಗ್ರಾಮದಂತಹ ಕಾದಂಬರಿ ಬರೆಯಲು ಬೇಕಾದ ಅನುಭವದ ಮಹತ್ವವನ್ನು ತಿಳಿಸುತ್ತದೆ.

**ಇಂತಹ ಕತೆಗಳನ್ನು ಸರಿಯಾಗಿ ಬರೆಯಬೇಕಾದರೆ ಅನುಭವ ಬೇಕು. ಯುದ್ಧ ಅಂದರೇನು. ಎಂಬುದು ಬರೆಯುವವರಿಗೂ ಅನುಭವವಾಗಿರಬೇಕು. ಅವರು ಅದರೊಳಗೆ ಸ್ಫೂರ್ತಿಯಿಂದ ಭಾಗವಹಿಸಬೇಕು. ಚಳುವಳಿಗಾರರೆಂದರೆ ಹ್ಯಾಗಿರುತ್ತಾರೆ, ಅವರ ಹೃದಯ ಹ್ಯಾಗಿರುತ್ತದೆ, ಅವರ ವಿಚಾರ ಹ್ಯಾಗಿರುತ್ತದೆ, ಅವರು ಹ್ಯಾಗೆ ಕೆಲಸ ಮಾಡುತ್ತಾರೆ ಎಲ್ಲಾ ನೋಡಿ ತಿಳಿದಿರಬೇಕು. ಬೆಂಗಳೂರು ಮುಂಬಯಿಯಂಥ ಪಟ್ಟಣದೊಳಗೆ ಕೂತುಕೊಂಡು ಪ್ರಣಯ ಕಾದಂಬರಿ ಬರೆಯುವವರಿಗೆ ಸಮರ ಭೂಮಿಯ ಕತೆ ಬರೆಯೋದು ಹ್ಯಾಗೆ ಸಾಧ್ಯವಾದೀತು? ಇದೇನು ಕಲ್ಪನೆಯ ಬದನೆ ಕಾಯಿಯಲ್ಲವಲ್ಲ ಕಾದಂಬರಿಕಾರರ ತಲೆಯಿಂದ ಹೊರಬರಲಿಕ್ಕೆ**[೩]

ಈ ಮಾತುಗಳು ಸ್ವಾತಂತ್ರ್ಯ ಚಳುವಳಿಗೆ ಸಂಬಂಧಿಸಿ ನೇರ ಅನುಭವ ಇದ್ದವರಿಂದ ಮಾತ್ರ ಇಂತಹ ಒಂದು ಮಹಾನ್ ಘಟನೆಗೆ ಸಂಬಂಧಿಸಿದ ಕಾದಂಬರಿಯನ್ನು ರಚಿಸಲು ಸಾಧ್ಯ ಎಂಬುದನ್ನು ತಿಳಿಸುತ್ತದೆ. ಆದುದರಿಂದಲೇ ಆ ಕಾಲಘಟ್ಟದಲ್ಲಿ ರಚಿತವಾದ ಕಾದಂಬರಿಗಳಿಗೆ ಹಾಗೂ ಸ್ವತಃ ಕಾದಂಬರಿಕಾರರೇ ಚಳುವಳಿಯ ಒಂದು ಭಾಗವಾಗಿದ್ದರೆ ಅಂತಹ ಕಾದಂಬರಿಗಳು ಇಲ್ಲಿ ಹೆಚ್ಚು ಮಹತ್ವಪೂರ್ಣ ಎನಿಸುತ್ತವೆ. ಆನಂತರ ಬಂದ ಕಾದಂಬರಿಗಳು

ಕೇವಲ ಚರಿತ್ರೆಯ ಜ್ಞಾನದಿಂದ ರಚಿನಗೊಂಡವು. ಒಂದು ಕ್ರಾಂತಿಯ ಕಾಲಘಟ್ಟದಲ್ಲಿ ತಾನು ಬದುಕಿದ್ದು, ಅದರ ಒಂದು ಭಾಗವಾಗಿ ಪಡೆದುಕೊಂಡ ಸ್ವಾನುಭವವು ಎಲ್ಲಾ ಚರಿತ್ರೆಯ ಜ್ಞಾನಕ್ಕಿಂತಲೂ ಮಿಗಿಲಾದುದು. ಅಂತಹ ಕಾದಂಬರಿಗಳಲ್ಲಿ ವಡೇಗನ ಹಳ್ಳಿ ಅಶ್ವಥನಾರಾಯಣ ಅವರ 'ಬಿಡುಗಡೆಯ ಬೆಲೆ' ಕೂಡಾ ಪ್ರಮುಖವಾಗುತ್ತದೆ. ಯಾಕೆಂದರೆ ಇವರು ಸ್ವಯಂಸೇವಕರಾಗಿ ಹೋರಾಟದಲ್ಲಿ ಭಾಗವಹಿಸಿ ಸೆರೆಮನೆಯಲ್ಲಿರುವಾಗಲೇ ಅಂದರೆ ೧೯೪೪ರಲ್ಲಿ ಈ ಕೃತಿ ಬಿಡುಗಡೆಯಾಗಿದೆ. ಅವರು ಆ ಕಾದಂಬರಿಯಲ್ಲಿ ನೀಡಿದ ಹೋರಾಟದ ಚಿತ್ರಣವು ಅವರ ನೈಜ ಅನುಭವವಾಗಿದೆ. ಬಹುಮಾನ, ಪ್ರಶಸ್ತಿಗಳಿಗೆ ಹಾತೊರೆಯದೆ ತಮ್ಮ ನೈಜ ಅನಭವ ಕಥನವೇ ಅವರ 'ಬಿಡುಗಡೆಯ ಬೆಲೆ'. ಸ್ವಾತಂತ್ರ್ಯ ಚಳುವಳಿಯ ಕುರಿತು ರಚಿಸಲ್ಪಟ್ಟ ಬಹಳಷ್ಟು ಕಾದಂಬರಿಗಳ ಲೇಖಕರು ಚಳುವಳಿಯನ್ನು ಹತ್ತಿರದಿಂದ ನೋಡಿದವರು. ಆದರೆ ಆ ಚಳುವಳಿಯ ಭಾಗವಾಗಿದವರು ಕೆಲವೇ ಕೆಲವು ಮಂದಿ.

ಇಲ್ಲಿ, ಆ ಕಾಲದಲ್ಲಿ ಕನ್ನಡ ಸಾಹಿತಿಗಳು ರಚಿಸಿದ ಒಂದೇ ಒಂದು ಕೃತಿಯನ್ನು ಕೂಡಾ ಬ್ರಿಟಿಷ್ ಸರಕಾರ ಮುಟ್ಟುಗೋಲು ಹಾಕಿಲ್ಲ; ಯಾವ ಕೃತಿಯ ಮೇಲೂ ನಿಷೇಧ ಹೇರಿಲ್ಲ ಎನ್ನುವುದನ್ನು ಗಮನಿಸಬೇಕು. ಅಂದರೆ ಅವರು ರಚಿಸಿದ ಕೃತಿಗಳು ಕೇವಲ ಮನರಂಜನೆಯ ಸಾಹಿತ್ಯವಾಗಿತ್ತೇ ಹೊರತು ಬ್ರಿಟಿಷ್ ಸರಕಾರಕ್ಕೆ ಕುತ್ತು ತಂದು ಜನರನ್ನು ಉದ್ರೇಕಗೊಳಿಸಿ ಚಳುವಳಿಗೆ ಕಾರಣವಾಗುವಂತಹ, ಸ್ವಾತಂತ್ರ್ಯ ಹೋರಾಟದ ದೃಷ್ಟಿಯಿಂದ ಮಹತ್ವವೆನಿಸುವ ಕೃತಿಗಳು ರಚನೆಯಾಗಿರಲಿಲ್ಲ.

ಈ ಗಣ್ಯರಿಗಿಂತ ಅಗಣ್ಯ ಸಾಹಿತಿಗಳು ಮೇಲು ಎನ್ನುವುದು ಆಶ್ಚರ್ಯವಾದರೂ ಸತ್ಯ ಸಂಗತಿಯಾಗಿದೆ. ಏಕೆಂದರೆ, ಅವರ ಕೆಲವು ಕೃತಿಗಳಾದರೂ ನಿಷೇಧಿಸಲ್ಪಪಟ್ಟಿವೆ ಎಂಬ ಮಾಹಿತಿಯನ್ನು ಡಾ. ಎಂ. ಎಂ. ಕಲಬುರ್ಗಿಯವರು ತಮ್ಮ 'ಮಾರ್ಗ' ಸಾಹಿತ್ಯ ಸಂಪುಟದಲ್ಲಿ ಹೇಳುತ್ತಾರೆ.[೪] 'ಈ ಅಗಣ್ಯಾ ಸಾಹಿತಿಗಳು ನೇರವಾಗಿ ಚಳುವಳಿಯನ್ನು ವಸ್ತುವನ್ನಾಗಿಸಿಕೊಂಡು ಬರೆದರು. ಅಂಥ ಒಂದು ಸಂಕಲನವನ್ನು ಡಾ. ಸೂರ್ಯನಾಥ ಕಾಮತ್ ಇತ್ತೀಚೆಗೆ ಪ್ರಕಟಿಸಿದ್ದಾರೆ. ಲಂಡನ್ನಿನ ಬ್ರಿಟಿಷ್ ಮ್ಯೂಜಿಯಂ ಲೈಬ್ರೆರಿಯಲ್ಲಿ ಸ್ವಾತಂತ್ರ್ಯ ಚಳುವಳಿ ಸಂದರ್ಭದಲ್ಲಿ ಬಹಿಷ್ಕರಿಸಲ್ಪಟ್ಟ ಕನ್ನಡ ಪುಸ್ತಕ ಮತ್ತು ಕರಪತ್ರಗಳ ಒಂದು ಸಣ್ಣ ಕಟ್ಟು ನನಗೆ ಸಿಕ್ಕಿತು. ಅದರಲ್ಲಿ ಆ ಕಾಲದ ಗಣ್ಯ ಸಾಹಿತಿಗಳ ಒಂದೂ ಪುಸ್ತಕವಿರಲಿಲ್ಲ. ಮಹಾರಾಣಿ ಕಿತ್ತೂರು ಚೆನ್ನಮ್ಮ [ನಾಟಕ–ನಲವಡಿ ಶ್ರೀಕಂಠ ಶಾಸ್ತ್ರಿ–೧೯೩೧] ನಾಡಗುಡಿ [ಕತೆ–ಕೃಷ್ಣಹರಿಕುಲಕರ್ಣಿ ಧಾರವಾಡ ೧೯೩೧] ಮೈಸೂರು ಕಾಂಗ್ರೆಸ್ ಇತಿಹಾಸ ಲಾವಣಿ ಪ್ರಬಂಧ [ಲಾವಣಿ, ಬಿ. ನೀಲಕಂಠಯ್ಯನವರ ಶಿಷ್ಯ ವಿಷಕಂಠಯ್ಯ, ಮೈಸೂರು] ಇತ್ಯಾದಿ ಅಗಣ್ಯರ ಕೃತಿಗಳು ಆ ಕಟ್ಟಿನಲ್ಲವೆ. ಇವರ ರಚನೆಗಳಲ್ಲಿ ಸಾಹಿತ್ಯಿಕ ಅಂಶವಿರಲಿಕ್ಕಿಲ್ಲ. ಚಳುವಳಿಯ ಧ್ವನಿ ವ್ಯಕ್ತವಾಗಿಯೇ ಕೇಳಿಸುತ್ತದೆ. ಶ್ರೀ ನಲವಡಿ ಶ್ರೀಕಂಠಶಾಸ್ತ್ರಿಗಳು ರಚಿಸಿದ 'ಮಹಾರಾಣಿ ಕಿತ್ತೂರು ಚೆನ್ನಮ್ಮ' ನಾಟಕವನ್ನು ನೋಡುತ್ತಿದ್ದ ಪ್ರೇಕ್ಷಕರು ಖಡ್ಗ ಹಿಡಿದ ರಾಣಿ ಚೆನ್ನಮ್ಮ ರಂಗಭೂಮಿಗೆ ಧಾವಿಸುತ್ತಿದ್ದಂತೆ 'ಬೋಲೋ ಭಾರತ ಮಾತಾಕೀ ಜೈ' ಎಂದು ಘೋಷಣೆ ಕೂಗುತ್ತಾ ಎದ್ದು ನಿಲ್ಲುತ್ತಿದ್ದರೆಂಬುದನ್ನು ಜನರು ಹೇಳುವುದನ್ನು ಇಲ್ಲಿ ಗಮನಸಿಬಹುದು'.[೫] ಇವರಿಗಿಂತ ಜನಪದ

ಸಾಹಿತಿಗಳು ಎಷ್ಟೋ ಲೇಸು. ಇವರು ಕೀರ್ತನೆಯ ರೂಪದಲ್ಲಿ ಲಾವಣಿಗಳ ರೂಪದಲ್ಲಿ, ಹರಿಕತೆಗಳ ರೂಪದಲ್ಲಿ ಚಳುವಳಿಗೆ ಸಂಬಂಧಿಸಿದ ಸಾಹಿತ್ಯವನ್ನು ತಮ್ಮದೇ ಆಡುಭಾಷೆಯಲ್ಲಿ ಕಟ್ಟಿ ಹಳ್ಳಿಗಳಲ್ಲಿ ಜಾಗೃತಿಯನ್ನು ಮೂಡಿಸಿದರು. ಲಾವಣಿಕಾರರು ಆಂಗ್ಲರು ಆಳುತ್ತಿದ್ದ ಕಾಲದಲ್ಲಿಯೇ ರಚನೆಯಾಗಿ ಹಳ್ಳಿಗಳ ಜನರಿಗೆ 'ವಂದೇ ಮಾತರಂ' ಗೀತೆಯಂತೆ ಕೆಲಸ ಮಾಡಿತು.

ಎ.ಸೀ.ಯವರು ಹೇಳುವಂತೆ "ಸೋಜಿಗದ ಸಂಗತಿಗಳೆಂದೆ ಸ್ವಾತಂತ್ರ್ಯ ಪೂರ್ವದ ಹೋರಾಟದ ಚಿತ್ರಣವೆಲ್ಲವೂ ಸ್ವಾತಂತ್ರ್ಯ ಬಂದ ಮೇಲೆಯೇ ನಡೆದಿದೆ"[೬] ಸ್ವಾತಂತ್ರ್ಯ ದೊರಕಿದ ಮೇಲೆ ಬಿಡುಗಡೆಯಾದ ಕೃತಿಗಿಂತಲೂ ಸ್ವಾತಂತ್ರ್ಯ ಪೂರ್ವದಲ್ಲಿ ಬ್ರಿಟಿಷರ ಆಳ್ವಿಕೆಯಿರುವಾಗ ಬಿಡುಗಡೆಯಾದ ಕೃತಿಯು ಹೆಚ್ಚು ಮಹತ್ವದ್ದೆನಿಸುತ್ತದೆ. ಯಾಕೆಂದರೆ ಅಂತಹ ಬಿಗು ಹಾಗೂ ಭಯದ ವಾತಾವರಣದಲ್ಲಿ ಸರಕಾರಕ್ಕೆ ವಿರೋಧವಾಗಿರುವ ಅಂಶಗಳನ್ನು ಒಳಗೊಂಡಿರುವ ಪುಸ್ತಕವನ್ನು ಬಿಡುಗಡೆ ಮಾಡಲು ಕೂಡ ಧೈರ್ಯ ಬೇಕು. ಅಂತಹ ಧೈರ್ಯ ಬರಬೇಕಾದರೆ ತಾವು ಸ್ವತಃ ಹೋರಾಟದಲ್ಲಿ ಭಾಗವಹಿಸಿರಬೇಕು. ಸ್ವಾತಂತ್ರ್ಯ ಬಂದ ಬಳಿಕ ಬಿಡುಗಡೆಯಾದ ಕೃತಿಗಳು ಅಧ್ಯಯನದ ದೃಷ್ಟಿಯಿಂದ ಹಾಗೂ ಸಾಹಿತ್ಯದ ದೃಷ್ಟಿಯಿಂದ ಎಷ್ಟೇ ಮಹತ್ವಪೂರ್ಣವೆನಿಸಿದರೂ ಸ್ವತಂತ್ರ ಭಾರತದಲ್ಲಿ ನಮ್ಮ ಶತ್ರುಗಳು ಇಲ್ಲದೇ ಇರುವಾಗ ಹಾಗೂ ಬ್ರಿಟಿಷರ ಕುರಿತಾಗಿ ರಾಜಾರೋಷವಾಗಿ ಮಾತಾನಾಡುವ ಸಂಪೂರ್ಣ ಸ್ವಾತಂತ್ರ್ಯವು ತಮಗೆ ದೊರಕಿದ ಬಳಿಕ ಕೃತಿ ರಚಿಸಿ ಬಿಡುಗಡೆ ಮಾಡಿ ಹೆಸರು ಗಳಿಸಿಕೊಳ್ಳುವುದೇನೂ ಅಂತಹ ಕಷ್ಟದ ಕೆಲಸವಲ್ಲ.

*****

## ಟಿಪ್ಪಣಿಗಳು

---

[೧] ಡಾ. ಎಂ. ಎಂ. ಕಲಬುರ್ಗಿ, ಮಾರ್ಗ ಸಂಪುಟ ೩ ಪು. ೯೨

[೨] ಡಾ. ಶಿವರಮ ಕರಂತ, ಸ್ಮೃತಿ ಪಟಲದಿಂದ ಪು. ೧೦೨

[೩] ಬಸವರಾಜ ಕಟ್ಟೀಮನಿ, ಮಾಡಿ ಮಡಿದವರು, ಪು. ೧೫೨

[೪] ಡಾ. ಎಂ. ಎಂ. ಕಲಬುರ್ಗಿ, ಮಾರ್ಗ ಸಂಪುಟ ೩ ಪು. ೯೨

[೫] ಡಾ. ಎಂ. ಎಂ. ಕಲಬುರ್ಗಿ, ಮಾರ್ಗ ಸಂಪುಟ ೩ ಪು. ೯೩

[೬] ಅದೇ, ಪು. ೯೪

# ಅಧ್ಯಾಯ – ೮

# ಪರ್ಯಾಯ ಚರಿತ್ರೆಯ ರೂಪವಾಗಿ ಕನ್ನಡ ಕಾದಂಬರಿಗಳು

ಸಾಮಾನ್ಯವಾಗಿ ಭಾರತದ ಸ್ವಾತಂತ್ರ್ಯ ಚಳುವಳಿಯೆಂದರೆ ನಮ್ಮ ಮನಸ್ಸಿನಲ್ಲಿ ಕೆಲವೇ ಕೆಲವು ಪ್ರಮುಖ ವ್ಯಕ್ತಿಗಳ ಪಾತ್ರ ಮತ್ತು ಕೆಲವೇ ಕೆಲವು ಪ್ರಮುಖ ಘಟನೆಗಳು ಕುಣಿದಾಡುತ್ತವೆ. ಅವುಗಳೆಂದರೆ 'ಗಾಂಧೀಜಿಯವರು ತಮ್ಮ ಅಹಿಂಸಾ ಸತ್ಯಾಗ್ರಹದ ಮೂಲಕ ಭಾರತಕ್ಕೆ ಸ್ವಾತಂತ್ರ್ಯವನ್ನು ತಂದುಕೊಟ್ಟರು. ಅವರ ಜೊತೆಯಲ್ಲಿ ನೆಹರು, ವಲ್ಲಭಬಾಯಿ ಪಟೇಲ್ ಮುಂತಾದ ಪ್ರಮುಖರು ಬೆಂಗಾವಲಾಗಿ ನಿಂತಿದ್ದರು. ಸ್ವಾತಂತ್ರ್ಯ ಹೋರಾಟವು ಎರಡು ರೀತಿಯಲ್ಲಿ ನಡೆಯಿತು. ಅವುಗಳೆಂದರೆ ಒಂದು ಸಶಸ್ತ್ರ ಹೋರಾಟ ಅಥವಾ ತೀವ್ರಗಾಮಿ ಹೋರಾಟ, ಇನ್ನೊಂದು ಮಂದಗಾಮಿ ಅಥವಾ ಅಹಿಂಸಾ ಹೋರಾಟ. ತೀವ್ರಗಾಮಿ ಹೋರಾಟಗಾರರಾದ ಭಗತ್‌ಸಿಂಗ್, ಶುಕದೇವ್, ರಾಜ್‌ಗುರು ಇವರನ್ನು ಬ್ರಿಟಿಷರು ಗಲ್ಲಿಗೇರಿಸುತ್ತಾರೆ. ಗಾಂಧೀಜಿಯವರು ಉಪ್ಪಿನ ಸತ್ಯಾಗ್ರಹ ನಡೆಸಿದರು, 'ಮಾಡು ಇಲ್ಲವೇ ಮಡಿ' ಅಥವಾ 'ಕ್ವಿಟ್ ಇಂಡಿಯಾ' ಎಂಬ ಘೋಷಣೆಯನ್ನು ಕೂಗಿದರು. ೧೯೪೭ರಲ್ಲಿ ಈ ಎಲ್ಲಾ ಹೋರಾಟದ ಪರಿಣಾಮವಾಗಿ ಬ್ರಿಟಿಷರು ಭಾರತಕ್ಕೆ ಸ್ವಾತಂತ್ರ್ಯವನ್ನು ನೀಡಿದರು'. ಇಂದಿಗೂ ಇತಿಹಾಸ ಪಠ್ಯಪುಸ್ತಕದಲ್ಲಿ ವಿದ್ಯಾರ್ಥಿಗಳು ಇಂತಹ ಸಿದ್ಧಮಾದರಿಯನ್ನೇ ಓದುತ್ತಿದ್ದಾರೆ. ಇಂತಹ ಪ್ರಮುಖ ಕೆಲವೇ ಕೆಲವು ಘಟನೆಗಳು ಮತ್ತು ವ್ಯಕ್ತಿಗಳ ಹೆಸರು ಮಾತ್ರ ಇತಿಹಾಸವನ್ನು ಒಂದು ವಿಷಯವನ್ನಾಗಿ ಕಲಿಯುತ್ತಿರುವ ವಿದ್ಯಾರ್ಥಿಗಳಿಗೆ ತಿಳಿದಿದೆ, ಅದರಿಂದಾಚೆಗೆ ನಡೆದ ಅಸಂಖ್ಯಾತ ಹೋರಾಟಗಳ ಕತೆಯನ್ನು ಇತಿಹಾಸ ಹೇಳುವುದಿಲ್ಲ.

ಯಾವುದೇ ಒಂದು ಪ್ರಮುಖ ಐತಿಹಾಸಿಕ ವಿಷಯದ ಕುರಿತು ಆಳವಾದ ಅಧ್ಯಯನ, ನಿಖರವಾದ ಜ್ಞಾನವನ್ನು ಬಯಸುವ ವ್ಯಕ್ತಿಗಳು ಆ ನಿರ್ದಿಷ್ಟ ಘಟನೆಗೆ ಸಂಬಂಧಿಸಿದಂತೆ ರಚಿತವಾದ ಇತಿಹಾಸದ ಪುಸ್ತಕಗಳು ಮತ್ತು ಸಾಹಿತ್ಯದ ಕೃತಿಗಳು ಇವೆರಡನ್ನೂ ಅಧ್ಯಯನ ಮಾಡಬೇಕಾಗುತ್ತದೆ. ಈ ಎರಡೂ ಮೂಲಗಳಿಂದ ಪಡೆದುಕೊಂಡ ಜ್ಞಾನ ಮಾತ್ರ ಪರಿಪೂರ್ಣ ಜ್ಞಾನವೆನಿಸಿಕೊಳ್ಳುತ್ತದೆ. ಯಾವುದಾದರೂ ಒಂದೇ ಮೂಲದಿಂದ ಪಡೆದುಕೊಂಡ ಜ್ಞಾನವು ಕೇವಲ ಅಪೂರ್ಣ ಜ್ಞಾನವಾಗುತ್ತದೆ.

ಕನ್ನಡದಲ್ಲಿ ಸ್ವಾತಂತ್ರ್ಯ ಚಳುವಳಿಗೆ ಸಂಬಂಧಿಸಿದಂತೆ ರಚನೆಯಾದ ಕಾದಂಬರಿಯು ಇತಹಾಸದಲ್ಲಿ ಕೇವಲ ಮಿಂಚಿ ಮಾಯವಾದ ಹಲವಾರು ಘಟನೆಗಳ ಕುರಿತು ನಾವು ಯೋಚಿಸುವಂತೆ ಮಾಡುತ್ತದೆ. ಅಂತಹ ಕಾದಂಬರಿಗಳಲ್ಲಿ ಮತ್ತೂರು ಕೃಷ್ಣಮೂರ್ತಿಯವರು ರಚಿಸಿದ **'ವೀರಪಾಂಡ್ಯ ಕಟ್ಟಬೊಮ್ಮು'** ಮತ್ತು ನಿರಂಜನರು ರಚಿಸಿದ **'ಸ್ವಾಮಿ ಅಪರಾಂಪರ' 'ಕಲ್ಯಾಣ ಸ್ವಾಮಿ'** ಕಾದಂಬರಿಗಳು ಪ್ರಮುಖವಾದುವು. ಅವು ಮಾತ್ರವಲ್ಲದೆ ಸ್ವಾತಂತ್ರ್ಯ ಚಳುವಳಿಯನ್ನು ವಸ್ತುವನ್ನಾಗಿಸಿಕೊಂಡು ರಚಿತವಾದಂತಹ ಬಹಳಷ್ಟು ಕಾದಂಬರಿಗಳು ಕೂಡಾ ಹೋರಾಟದ ವಿವಿಧ ಮಜಲುಗಳನ್ನು ನಮಗೆ ಪರಿಚಯಿಸುತ್ತಾ ನಾವೇನು ಸತ್ಯವೆಂದು ನಂಬಿಕೊಂಡು ಬಂದಿದ್ದೇವೆಯೋ ಅದಕ್ಕಿಂತ ಭಿನ್ನವಾದ ಸತ್ಯವೊಂದಿದೆ ಎಂಬ ಜ್ಞಾನವನ್ನು ನೀಡುತ್ತದೆ.

೧೮೫೭ರಲ್ಲಿ ನಡೆದ ಸಿಪಾಯಿ ದಂಗೆಯನ್ನು ಪ್ರಥಮ ಸ್ವಾತಂತ್ರ್ಯ ಸಂಗ್ರಾಮವೆಂದು ಸಾಮಾನ್ಯವಾಗಿ ಕರೆಯುತ್ತೇವೆ. ಸಿಪಾಯಿ ದಂಗೆಯಲ್ಲಿ ಉತ್ತರ ಭಾರತವೇ ಪ್ರಮುಖ ಪಾತ್ರವನ್ನು ವಹಿಸಿದೆ ಎಂಬುದು ನಮಗೆ ಇತಿಹಾಸದಿಂದ ದೊರಕಿದ ತಿಳವಳಿಕೆ. ಆದರೆ ಅದಕ್ಕಿಂತ ಮೊದಲೇ ನಮ್ಮ ದಕ್ಷಿಣ ಭಾರತದಲ್ಲಿ 'ಈಸ್ಟ್ ಇಂಡಿಯಾ ಕಂಪೆನಿ'ಗೆ ಸಿಂಹ ಸ್ವಪ್ನವಾಗಿ ಕಾಡಿದ ದೊರೆಗಳು ಜನಸಾಮಾನ್ಯರು ಇದ್ದರು. ೧೮೫೭ಕ್ಕೆ ಮೊದಲೇ ಬ್ರಿಟಿಷರ ಕುರಿತಾಗಿ ಹೊಗೆಯಾಡುತ್ತಿದ್ದ ದ್ವೇಷದ ಜ್ವಾಲಾಮುಖಿಯು ೧೮೫೭ರಲ್ಲಿ ಹೊತ್ತಿ ಉರಿಯುತ್ತದೆ.

೧೭೯೮ರಲ್ಲಿಯೇ ಹೆಸರಾಂತ ಪಾಂಡ್ಯ ಮನೆತನದ ಪಾಂಚಾಲ ಕುರುಚಿಯ ದೊರೆ ಕಟ್ಟಬೊಮ್ಮು ಬ್ರಿಟಿಷರ ಆಡಳಿತವನ್ನು ನಿರಾಕರಿಸಿ ಕೊನೆಗೂ ದೇಶದ್ರೋಹಿಗಳ ಕುತಂತ್ರಕ್ಕೆ ಬಲಿಯಾಗುತ್ತಾನೆ. ವೀರಪಾಂಡ್ಯ ಕಟ್ಟಬೊಮ್ಮು ೧೭೯೦ರಲ್ಲಿ ಅಂದರೆ ತನ್ನ ಮೂವತ್ತನೇ ವಯಸ್ಸಿನಲ್ಲಿ ಪಟ್ಟಕ್ಕೆ ಬರುತ್ತಾನೆ. ಆಗ ಇಡೀ ದಕ್ಷಿಣ ಭಾರತ ಆರ್ಕಾಟ್ ನವಾಬನ ಆಳ್ವಿಕೆಯಲ್ಲಿತ್ತು. ಆದರೆ ಇವನು ಹೆಸರಿಗೆ ಮಾತ್ರ ನವಾಬನಾಗಿದ್ದನು. ತನ್ನ ಕೈಕಳಗಿನ ರಾಜರಲ್ಲಿ ಕೆಲವರು ಕಪ್ಪ ಕೊಡದಿದ್ದರೂ ಅದನ್ನು ಬಲಾತ್ಕಾರವಾಗಿ ವಸೂಲು ಮಾಡುವಷ್ಟು ಸಾಮರ್ಥ್ಯ ಅವನಿಗಿರಲಿಲ್ಲ. ಇಂತಹ ಸಂದರ್ಭದಲ್ಲಿ ನವಾಬನು 'ಈಸ್ಟ್ ಇಂಡಿಯಾ' ಕಂಪೆನಿ ಜೊತೆ ಒಂದು ರಹಸ್ಯ ಒಪ್ಪಂದವನ್ನು ಮಾಡಿಕೊಂಡನು. ಈ ಒಪ್ಪಂದದ ಹಲವಾರು ನಿಯಮಗಳಲ್ಲಿ ತನಗೆ ಸೇರಬೇಕಾದ ಕಪ್ಪವನ್ನು ವಸೂಲು ಮಾಡುವ ಅಧಿಕಾರ ಕಂಪೆನಿಗೆ ಕೊಟ್ಟನು. ಹೀಗೆ ಕಪ್ಪವನ್ನು ವಸೂಲು ಮಾಡಲು ಕಂಪೆನಿಗೆ ಅಧಿಕಾರ ಕೊಟ್ಟವನು, ಭಾರತದ ರಾಜಕೀಯದಲ್ಲಿ ಕಂಪೆನಿ ಮೂಗು ತೂರಿಸುವುದಕ್ಕೆ ಅವಕಾಶ ಕೊಟ್ಟ ಮೊದಲ ವ್ಯಕ್ತಿ ಈ ಆರ್ಕಾಟಿನ ನವಾಬ.

ಕಾಲಕ್ರಮೇಣ ಈ ನವಾಬ ತನ್ನ ರಾಜ್ಯದ ಎಲ್ಲಾ ಅಧಿಕಾರವನ್ನು ಕಂಪನಿಗೆ ವಹಿಸಿಕೊಟ್ಟು ತಾನು ಹಾಯಾಗಿ ಕಾಲ ಕಳೆಯಲು ಆರಂಭಿಸಿದನು. ಭಾರತೀಯ ರಾಜರ ಒಳಜಗಳ ಮಾತ್ರವಲ್ಲದೆ ಅವರ ಅಸಮರ್ಥತೆ, ಸೋಮಾರಿತನ, ದುರಾಭ್ಯಾಸದ ದಾಸರಾಗಿದ್ದುದು, ಜವಾಬ್ದಾರಿಯಿಂದ ನುಣುಚಿಕೊಳ್ಳುವ ಸ್ವಭಾವ ಕೂಡಾ ಬ್ರಿಟಿಷರು ತಮ್ಮ ಕಬಂಧ ಹಸ್ತವನ್ನು ಭಾರತದಾದ್ಯಂತ ಚಾಚುವುದಕ್ಕೆ ಕಾರಣವಾಯಿತು.

ನವಾಬನು ಬ್ರಿಟಿಷರಿಗೆ ಎಲ್ಲಾ ಅಧಿಕಾರವನ್ನು ಕೊಟ್ಟದ್ದರಿಂದ ಬ್ರಿಟಿಷರಿಗೆ ಅನುಕೂಲವಾಯಿತು. ಅವರಿಗೆ ಆಗ ಬೇಕಾದ್ದು ಹಣ. ಹೇಗಾದರೂ ಮಾಡಿ ನಮ್ಮ ನಾಡಿನ ಐಶ್ವರ್ಯವನ್ನು ಸೂರೆಮಾಬೇಕಾಗಿತ್ತು. ನವಾಬ ಅಧಿಕಾರ ಕೊಟ್ಟ ತಕ್ಷಣ ಬಲಾತ್ಕಾರದಿಂದ ಕಪ್ಪಕಾಣಿಕೆ ವಸೂಲು ಮಾಡಲಾರಂಭಿಸಿದರು. ಕಪ್ಪ ಕಾಣಿಕೆ ಕೊಡದ ರಾಜರನ್ನು ಪೀಡಿಸಲಾರಂಭಸಿದರು. ಆದರೆ ಅವರ ದರ್ಪ, ಅಧಿಕಾರಕ್ಕೆ ಕಟ್ಟಬೊಮ್ಮು ಮಣಿಯಲಿಲ್ಲ. "ರಾಜಾಧಿರಾಜರುಗಳಿಂದೆಲ್ಲ ಕಪ್ಪ ಕಾಣಿಕೆ ಸ್ವೀಕರಿಸಿರುವ ಬೊಮ್ಮು ವಂಶದ ರಾಜ, ವ್ಯಾಪಾರಿಗಳಾಗಿ ನಮ್ಮ ನಾಡಿಗೆ ಬಂದ ಈ ಪರದೇಶಿಗಳಿಗೆ ಕಪ್ಪ ಸಲ್ಲಿಸುವುದೇ? ಎಂದಿಗೂ ಸಾದ್ಯವಿಲ್ಲ"[೧] ಎಂದುಬಿಟ್ಟನು. ಸ್ವಾಭಿಮಾನಿಯಾದ ಯಾರೇ ಭಾರತೀಯರು ಕೂಡ ಇದೇ ಮಾತನ್ನು ಆಡುತ್ತಿದ್ದರು. ಆಗ ಕಂಪೆನಿಯ ಅಧಿಕಾರಿಯಾಗಿದ್ದ ಮ್ಯಾಕ್ಸೆಲ್ ಎಂಬಾತ ಬೊಮ್ಮುವಿಗೆ ಹಲವಾರು ಬೆದರಿಕೆ ಪತ್ರಗಳನ್ನು ಬರೆದನು. ಪಾಂಚಾಲ ಕುರುಚಿ ಗಡಿಪ್ರದೇಶದ ಜಮೀನನ್ನು ಮಾರಿಸುವುದಾಗಿ ಹೇಳುತ್ತಾನೆ. ಇದನ್ನು ಸಹಿಸದ ಬೊಮ್ಮು ತನ್ನ ರಾಜ್ಯದ ಗಡಿಪ್ರದೇಶಕ್ಕೆ ಅನ್ಯರು ಕಾಲಿಡಬಾರದೆಂದು ಆಜ್ಞೆಯಿತ್ತನು. ತಮ್ಮ ಸಣ್ಣ ಪುಟ್ಟ ಸಂಸ್ಥಾನಗಳನ್ನು ಕಂಪೆನಿಗೆ ಒಪ್ಪಿಸಿದ ಹಲವರು ಪಾಳೇಯಗಾರರು ಬೊಮ್ಮುವಿನ ಆಜ್ಞೆಗೆ ಒಳಗಾದರು.

ಕಂಪೆನಿ ಸರಕಾರ ಬೊಮ್ಮುವನ್ನು ತನ್ನ ಬಲೆಗೆ ಸೆಳೆದುಕೊಳ್ಳಲು ಮಾಡಿದ ಪ್ರಯತ್ನವೆಲ್ಲಾ ವಿಫಲವಾಗುತ್ತದೆ. "ಇವರಿಗೆ ಕಪ್ಪ ತೆತ್ತು ಇವರ ಅಧೀನರಾಗಿ ಬಾಳುವುದಕ್ಕಿಂತ, ಇವರೊಂದಿಗೆ ಕಾದಾಡಿ ಪ್ರಾಣಬಿಡುವುದೇ ಲೇಸು" ಎಂದು ಬೊಮ್ಮು ನಿರ್ಧರಿಸುತ್ತಾನೆ."[೨] ಬ್ರಿಟಿಷರಿಗೆ ಒಂದು ಬಿಡಿಕಾಸು ಕಪ್ಪವನ್ನು ತೆರಲಾಗದು ಎಂಬುದಾಗಿ ನಿಶ್ಚಯವಾಗಿ ಹೇಳಿಬಿಡುತ್ತಾನೆ. "ಈ ಆರು ವರ್ಷಗಳಿಗೆ ಆರು ಸಾವಿರ ಹೊನ್ನು ಕೊಟ್ಟರೆ ಸಾಕು, ಇನ್ನು ನೀವಿರುವ ಕಡೆ ತಲೆಯಾಕುವುದಿಲ್ಲ" ಎಂದು ಬೇಡಿದರು ಕಂಪೆನಿಯವರು. "ನಲವತ್ತೇಳು ತಲೆಮಾರುಗಳಿಂದ ನಮ್ಮ ತಾಯ್ನಾಡಿಗಾಗಿ ದುಡಿದಿರುವ ಈ ಪಾಂಡು ವಂಶ ಇಂದು ಈ ನಾಡಾಡಿಗಳಿಗೆ ಕಪ್ಪ ಕೊಡುವುದೆ? ಛೀ! ಎಂದಿಗೂ ಆಗದು! ಪುನಃ ಈ ವಿಷಯವಾಗಿ ಪ್ರಸ್ತಾಪಿಸಲೂ ಕೂಡದು" ಎಂದು ಕಂಪೆನಿಯವರಿಗೆ ಆಜ್ಞೆ ಮಾಡಿದದನು ವೀರಪಾಂಡ್ಯ ಕಟ್ಟಬೊಮ್ಮನ್. ಬಿಳಿಯರ ಎಲ್ಲಾ ಉಪಾಯಗಳು ಬೊಮ್ಮುವನ್ನು ಮಣಿಸುವಲ್ಲಿ ವಿಫಲವಾದುವು. ಇಂತಹ ಸ್ವಾಭಿಮಾನದ ದೊರೆ ಪಾಂಚಾಲ ಕುರುಚಿಯಲ್ಲಿದ್ದನು ಮತ್ತು ಅವನು ೧೮ನೇ ಶತಮಾನದಲ್ಲಿಯೇ ಬ್ರಿಟಿಷರ ವಿರುದ್ಧ ಹೋರಾಡಿದನೆಂಬುದು ಇನ್ನೂ ಇತಿಹಾಸದಲ್ಲಿ ಎಲ್ಲೋ ಒಂದು ಕಡೆ ತೀರಾ ಸಣ್ಣ ವಿಷಯದಂತೆ ಬಂದು ಹೋಗುತ್ತದೆ.

ಹಲವಾರು ಮಂದಿ ಅವನ ಮಿತ್ರರು ಬಿಳಿಯರ ಜೊತೆಯಲ್ಲಿ ವೈರ ಕಟ್ಟಿಕೊಂಡರೆ ಬಾಳುವುದು ಕಷ್ಟ. ಆದುದರಿಂದ ಅಷ್ಟಿಷ್ಟು ಕಪ್ಪ ಕೊಟ್ಟು ಸುಖವಾಗಿ ಇರುವುದು ಮೇಲೆಂದು 'ಹಿತಚಿಂತಕ'ರಂತೆ ಸೋಗು ಹಾಕಿ ಪರಂಗಿಯರ ಪರವಾಗಿ ವಾದಿಸಿದರು ಅವರ ಬಾಲಬುಡಕರು. ಆದರೆ ಎಲ್ಲಾ ಕಡೆಗಳಿಂದ ಇಂತಹ ಒತ್ತಡ ಬಂದರೂ "ವ್ಯಾಪಾರದ ಸೋಗಿನಲ್ಲಿ ಬಂದು ನಮ್ಮನ್ನು ಹೀರುತ್ತಿರುವ ಈ ಪರದೇಶಿಗಳಿಗೆ ಕಪ್ಪಕೊಟ್ಟು ನಮ್ಮನ್ನು ಮಾರಿಕೊಂಡು ನೂರುಕಾಲ ಬಾಳುವುದಕ್ಕಿಂತ ಸ್ವತಂತ್ರರಾಗಿ ಎರಡೇ ದಿನ ಇದ್ದು ಮಡಿಯುವುದು ಎಷ್ಟೋ ಮೇಲು!" ಎಂದು ಉತ್ತರ ಕೊಡುವ ಅವನ ಸ್ವಾಭಿಮಾನದ ನುಡಿಯನ್ನು ಕೇಳಿ ಅಂದು ಭಾರತ ಮಾತೆ ಅದೆಷ್ಟು ಹೆಮ್ಮೆ ಪಟ್ಟಿರಬಹುದು. ಇಂತಹ ಬೊಮ್ಮುವಿನ ಸ್ವಾಭಿಮಾನವು ಕಂಪೆನಿಗೆ ಉದ್ಧಟತನವಾಗಿ ತೋರಿತು. ಹೇಗಾದರೂ ಮಾಡಿ ಅವನ ಹುಟ್ಟಡಗಿಸಲು ಅವರು ಹೊಂಚು ಹಾಕಿದ್ದರು. ಅವರ ಈ ಸಂಚಿಗೆ ನಮ್ಮ ದೇಶದ ಸ್ವಾಭಿಮಾನ ಶೂನ್ಯ ಪಾಳೇಯಗಾರರ ಬೆಂಬಲವೂ ಇತ್ತು. ನಮ್ಮೊಳಗೆ ಅವಿತುಕೊಂಡಿದ್ದ ಇಂತಹ ದೇಶ ದ್ರೋಹಿಗಳಿಂದಲೇ ನಮ್ಮ ದೇಶ ಪರಾಧೀನವಾಗಲು ಕಾರಣವಾಗುತ್ತದೆ.

ಬೊಮ್ಮುವಿನ ಸೇನಾಧಿಪತಿ ತಾನಾತಿಪಿಳ್ಳೆ ಕೂಡ ಬೊಮ್ಮುವಿನಷ್ಟೇ ಸಮರ್ಥನು ಮತ್ತು ಅವನಷ್ಟೇ ಸ್ವಾಭಿಮಾನಿ. ಅವನು ಬೊಮ್ಮುವಿನಲ್ಲಿ "ಪಾಂಚಾಲ ಕುರುಚಿ ಹೆದರಿ ಪರಂಗಿಯವರಿಗೆ ತಲೆಬಾಗಿತು ಎಂಬ ಲೋಕಾಪವಾದಕ್ಕೆ ನನ್ನ ತಾಯ್ನಾಡನ್ನು ಗುರಿಮಾಡಲು ನನ್ನ ದೇಹದಲ್ಲಿ ತೊಟ್ಟು ರಕ್ತವಿರುವ ತನಕ ನಾನು ಬಿಡಲಾರೆ. ಪಾಳೆಗಾರರೆಲ್ಲ ಹೇಡಿಗಳಾದರೆಂಬುದು ಅಪವಾದಕ್ಕೆ ಲೋಕನಿಂದನೆಗೆ ನಾವು ಗುರಿಯಾಗುವುದೆ? ಮಾನವಂತರು ಯಾರೂ ಇದಕ್ಕೆ ಸಮ್ಮತಿಸಲಾರರು. ತೆರಿಗೆ ಕೊಟ್ಟು ಅಧೀನದಲ್ಲಿರಬೇಕೆಂಬ ಮಾತನ್ನೇ ನನ್ನ ಕಿವಿಗಳು ಒಪ್ಪುತ್ತಿಲ್ಲ" ಎಂದು ತಾನಾಪತಿ ಪಿಳ್ಳೆ ಗುಡುಗಿದನು. ಗಾಂಧೀಜಿ ೨೦ನೇ ಶತಮಾನದಲ್ಲಿ ಆರಂಭಿಸಿದ 'ಕರನಿರಾಕರಣೆ' ಮತ್ತು 'ಅಸಹಕಾರ ಚಳುವಳಿ'ಯನ್ನು ಪಾಂಚಲ ಕುರುಚಿಯ ದೊರೆ ಕಟ್ಟಬೊಮ್ಮು ೧೮ನೇ ಶತಮಾನದಲ್ಲಿ ಆರಂಭಿಸಿದ್ದನು. ಆದರೆ ನಮ್ಮ ಇತಿಹಾಸ ರಚನೆಕಾರರ ಕಣ್ಣಿಗೆ ಅದು ತೀರಾ ಸಣ್ಣ ವಿಚಾರವಾಗಿ ತೋರಿತು. ಏಕೆಂದರೆ ಹೆಚ್ಚಿನ ಇತಿಹಾಸ ಗ್ರಂಥಗಳು ಆಂಗ್ಲ ಇತಿಹಾಸಕಾರರ ಬರವಣಿಗೆಯನ್ನು ಆಧರಿಸಿ ರಚಿತವಾದುವುಗಳು. ಆಂಗ್ಲ ಇತಿಹಾಸಕಾರರು ತಮ್ಮ ಸ್ವಾಭಿಮಾನಕ್ಕೆ ಧಕ್ಕೆಯನ್ನು ತಂದ ಹೋರಾಟವನ್ನು ತೀರಾ ಕ್ಷುಲ್ಲಕ ವಿಚಾರವೆಂಬಂತೆ ತೇಲಿಸಿ ಬಿಡುತ್ತಿದ್ದರು. ಆದುದರಿಂದಲೇ ಸ್ವಾತಂತ್ರ್ಯ ಹೋರಾಟದಲ್ಲಿ ಪ್ರಮುಖ ಎನಿಸಿಕೊಳ್ಳಬಹುದಾದ ಹಲವಾರು ಘಟನೆಗಳು ಇನ್ನೂ ಅನೇಕರ ಗಮನಕ್ಕೆ ಬಾರದ ವಿಚರಗಳಾಗಿವೆ.

ಬಿಳಿಯರಿಗೆ ಕಪ್ಪಕೊಡದ ಪಾಂಚಾಲ ಕುರುಚಿಯ ಏಕಮಾತ್ರ ವೀರನ ಕುರಿತು ಕಂಪನಿಯ ಅಧಿಕಾರ ಸ್ಥಾನದಲ್ಲಿದ್ದ ಆಂಗ್ಲರಿಗೂ ಭಯವಿತ್ತು. ಸ್ವಪ್ನದಲ್ಲಿ ಅವನನ್ನು ಕಂಡರೂ ಅವರು ಹೆದರುತ್ತಿದ್ದರು. ಕಟ್ಟಬೊಮ್ಮು ಕಂಪೆನಿಯ ಅಧಿಕಾರಿ ಜಾಕ್ಸನ್‌ನ್ನು ಭೇಟಿಯಾಗಿ 'ತೆರಿಗೆ ಸಲ್ಲಿಸುವುದಾದರೆ ಸೃಷ್ಟಿಕರ್ತನಾದ ಪರಮಾತ್ಮನಿಗೆ ಸಲ್ಲಿಸಬೇಕು, ನಿನ್ನಂಥ ಪರದೇಶಿಗಲ್ಲ' ಎನ್ನುತ್ತಾನೆ. ಕಟ್ಟಬೊಮ್ಮುವನ್ನು ಬಂಧಿಸಲು ಬಂದ ಜಾಕ್ಸನ್‌ನ ಸೇವಕ ಕ್ಲಾರ್ಕ ಕಟ್ಟಬೊಮ್ಮುವಿನ

ಖಡ್ಗಕ್ಕೆ ಬಲಿಯಾಗುತ್ತಾನೆ. ಅವನ ಸೇನಾಧಿಪತಿ 'ತಾನಾಪತಿ'ಗೆ ಜಾಕ್ಸನ್ ಬೇಡಿ ತೊಡಿಸಿ ಬಂಧಿಸುತ್ತಾನೆ. ದಕ್ಷಿಣ ಭಾರತದಲ್ಲಿ ಬ್ರಿಟಿಷರಿಂದ ಬೇಡಿ ತೊಡಿಸಿಕೊಂಡ ಮೊದಲ ವ್ಯಕ್ತಿ ಈತ ಯಾವುದೇ ಚತುರೋಪಾಯದಿಂದ ಕಟ್ಟಬೊಮ್ಮುವನ್ನು ಬಗ್ಗಿಸಲು ಬಿಳಿಯರಿಗೆ ಸಾಧ್ಯವಾಗಲಿಲ್ಲ. ಕೊನೆಗೆ ಅವರ ಸೈನ್ಯ ಪಾಂಚಾಲ ಕುರುಚಿಗೆ ಮುತ್ತಿಗೆ ಹಾಕುತ್ತದೆ. ಕಟ್ಟಬೊಮ್ಮು ಕಪ್ಪ ಕಾಣಿಕೆ ಕೊಡಲಿಲ್ಲವೆನ್ನುವುದಕ್ಕಿಂತ ಇವನನ್ನು ನೋಡಿ ಇತರ ಪಾಳೇಯಗಾರರು ಕೂಡ ತಮ್ಮನ್ನು ತಿರಸ್ಕರಿಸಿ ಕಡೆಗಣಿಸಿದರೆ ಅಖಂಡ ಭಾರತವನ್ನು ಹಂತ ಹಂತವಾಗಿ ಕೈಸೆರೆ ಮಾಡಿಕೊಳ್ಳುವ ತಮ್ಮ ಸಂಚು ವಿಫಲವಾಗುತ್ತದೆಂಬ ಭಯ ಅವರನ್ನು ಕಾಡತೊಡಗಿತು. ಅದಕ್ಕಾಗಿ ಅವರು ಕಟ್ಟಬೊಮ್ಮುವನ್ನು ಬಗ್ಗು ಬಡಿಯಲು ಸೈನ್ಯ ಸಮೇತರಾಗಿ ಬಂದು ಪಾಂಚಾಲ ಕುರುಚಿಯ ಕೋಟೆಗೆ ಮುತ್ತಿಗೆ ಹಾಕುತ್ತಾರೆ. ಅಂತಹ ಸಂದರ್ಭದಲ್ಲಿ ತಾನಾತಿಪಿಳ್ಳೆಯ ಸಲಹೆಯಂತೆ ಬೊಮ್ಮು ತಪ್ಪಿಸಿಕೊಳ್ಳತ್ತಾನೆ. ತಾನಾತಿಪಿಳ್ಳೆಯು ಬ್ರಿಟಿಷರ ಕೈಗೆ ಸಿಕ್ಕಿಬೀಬೀಳುತ್ತಾನೆ. ಬ್ಯಾನರ್‌ಮ್ಯಾನ್ ಎಂಬ ಬ್ರಿಟಿಷ್ ಸೇನಾಧಿಪತಿ ಅವನಿಗೆ ಗಲ್ಲುಶಿಕ್ಷೆ ವಿಧಿಸುತ್ತಾನೆ. ಹೀಗೆ ತನ್ನ ತಾಯ್ನಾಡನ್ನು ರಕ್ಷಿಸಲು ಹೋರಾಡಿದ ವೀರ ತಾನಾತಿಪಿಳ್ಳೆ ಪರದೇಶಿಗಳ ಗಲ್ಲಿಗೆ ತಲೆಯೊಡ್ಡಬೇಕಾಗುತ್ತದೆ.

ಬೊಮ್ಮು ತಪ್ಪಿಸಿಕೊಂಡಿದ್ದನು. ಪಾಂಚಾಲ ಕುರುಚಿಯು ಕಂಪೆನಿ ಸರಕಾರದ ವಶವಾಗುತ್ತದೆ. ತಾಯ್ನಾಡಿಗೋಸ್ಕರ ಹೋರಾಡಿದ ಬೊಮ್ಮುವಿಗೆ ಕಂಪೆನಿ ಸರಕಾರವು 'ರಾಜದ್ರೋಹಿ' ಎಂಬ ಹಣೆಪಟ್ಟಿಯನ್ನು ಕಟ್ಟುತ್ತದೆ. ಅವನು ಪುದುಕೋಟೆ ಸಂಸ್ಥಾನದಲ್ಲಿ ಸಂಚರಿಸುತ್ತಿರುವನು ಎಂಬ ಸುದ್ದಿ ಬ್ಯಾನರ್‌ಮ್ಯಾನಿಗೆ ಸಿಗುತ್ತದೆ. ಅಲ್ಲಿಯ ಕಾಡುಜನರಿಗೆ ಯದ್ಧಕ್ಕೆ ತರಬೇತಿ ಕೊಡುತ್ತಿದ್ದನೆಂದೂ ತಿಳಿಯಿತು. ಕೂಡಲೇ ಬೊಮ್ಮುವನ್ನು ಬಂಧಿಸಲು ಉಪಾಯವನ್ನು ಹುಡುಕುತ್ತಾನೆ, ಬ್ಯಾನರ್ ಮ್ಯಾನ್. ಈ ಘಟನೆಯ ನಂತರ ದಳಪತಿ ಬ್ಯಾನರ್‌ಮ್ಯಾನ್ ಮತ್ತೊಂದು ಆಜ್ಞೆ ಹೊರಡಿಸಿದನು. ಅದೆಂದರೆ "ದಕ್ಷಿಣದೇಶದವರಾರೂ ಆಯುಧಗಳನ್ನು ಪಡೆದಿರಕೂಡದು" ಎಂದೂ, ಅವರೆಲ್ಲರ ಯೋಗಕ್ಷೇಮವನ್ನು ಕಂಪೆನಿಯೆ ನೋಡಿಕೊಳ್ಳುತ್ತದೆಂದು ಇದನ್ನು ಮೀರಿ ಯಾರಾದರೂ ಆಯುಧ ಹೊಂದಿರುವುದು ಕಂಡುಬಂದರೆ ಶಿರಚ್ಛೇದ ಅವರಿಗೆ ಶಿಕ್ಷೆ ಎಂದೂ ಆಜ್ಞೆ ಹೊರಡಿಸುತ್ತಾನೆ. ಅಲ್ಲಿಯವರೆಗೆ ನಮ್ಮ ನಾಡಿನಲ್ಲಿ ಹೆಣ್ಣುಮಕ್ಕಳೂ ಆಯುಧಗಳನ್ನು ಹೊಂದಿರುತ್ತಿದ್ದರು. ಅಂದಿಗೆ ಆ ಸ್ವಾತಂತ್ರ್ಯವೂ ಹೊರಟು ಹೋಯಿತು. ನಮ್ಮ ನಾಡಿನ ಬಲವನ್ನು ಕಸಿದುಕೊಳ್ಳಲಾರಂಭಿಸುವ ಘಟನೆಗಳಲ್ಲಿ ಇದು ಮೊದಲನೆಯದು. ಭಾರತೀಯರನ್ನು ಆಳಬೇಕಾದರೆ ಅವರ ಬಲವನ್ನು ಕಸಿದುಕೊಳ್ಳಬೇಕೆಂಬುದು ಬ್ಯಾನರ್‌ಮ್ಯಾನ್‌ನ ಉಪಾಯವಾಗಿತ್ತು. ಹೀಗೆ ಹಂತ ಹಂತವಾಗಿ ಶೋಷಣೆಯು ಆರಂಭವಾಗುತ್ತದೆ.

ಪುದುಕೋಟೆ ಸಂಸ್ಥಾನದ ದೊರೆ ತೊಂಡುಮಾನನು ಉಪಾಯದಿಂದ ಕಟ್ಟಬೊಮ್ಮುವನ್ನು ಬ್ರಿಟಿಷರ ಕೈಗೆ ಒಪ್ಪಿಸುತ್ತಾನೆ, ತನ್ನವರಿಂದಲೆ ಮೋಸಹೋಗುತ್ತಾನೆ ಕಟ್ಟಬೊಮ್ಮು. ಅಂದು ಅವನ ಬಾಯಿಯಿಂದ ಬಂದ ಮಾತುಗಳು ೧೯೪೭ರವರೆಗೂ ಮಾರ್ದನಿಸಿದುವು "ಪರಂಗಿಯ ವೀರರೇ! ನೀವು ಎಲ್ಲಿಯವರೆಗೆ ಈ ನಮ್ಮ ರಾಜ್ಯದ

ಆಳರಸರಾಗಿರುವಿರೋ ಏನೋ! ಏಕಾಧಿಪತ್ಯ ನಡೆಸುವಿರೋ ಏನೋ! ಸ್ವಂತ ಜನರನ್ನೇ ಶತ್ರುವಿಗೆ ತೋರಿಸಿಕೊಡುವ ದ್ರೋಹಿಗಳು ನಮ್ಮ ನಾಡಿನಲ್ಲಿರುವ ತನಕ ನಿಮಗೆ ಅಪಜಯ ಎಂಬುದೇ ಇಲ್ಲ. ಆದರೆ ಒಂದನ್ನು ಮಾತ್ರ ನೆನಪಿಟ್ಟುಕೊಳ್ಳಿ. ರಾಜಾರೋಷವಾಗಿ ಬಂದು ವೀರರಂತೆ ನೀವಾಗಲಿ, ತೊಂಡಮಾನನಾಗಲಿ ನನ್ನನ್ನು ಹಿಡಿಯಲಿಲ್ಲ. ಪುರುಷವರ್ಗವೇ ನಾಚಿ ತಲೆ ತಗ್ಗಿಸುವಂತೆ ನಡೆದು ಕೊಂಡುಬಿಟ್ಟಿರಿ! ಹೇಡಿಗಳು! ಮಲಗಿ ನಿದ್ರಿಸುವಾಗ ಬಂದು ಹಿಡಿದಿರಿ! ಬೆಳಗಲಿ ಈ ನಿಮ್ಮ ಹೇಡಿತನ ತೊಂಡುಮಾನನ ಘಾತುಕ ಪ್ರವೃತಿ ಲೋಕಕ್ಕೆ ತಿಳಿಯಲಿ."[೨] ಕೊನೆಯದಾಗಿ ಅವನು ಹೇಳಿದ ಮಾತು ಎಂತಹ ಮಾರ್ಮಿಕವಾದುದು. ಯಾಕೆಂದರೆ ಭಾರತೀಯ ದೇಶ ದ್ರೋಹಿಗಳಿಂದಲೇ ಬ್ರಿಟಿಷರು ಇಲ್ಲಿ ಬಂದು ತಳವೂರಿ ನಮ್ಮನ್ನು ದಬ್ಬಾಳಿಕೆ ಮಾಡಲು ಸಾಧ್ಯವಾಯಿತು.

ಕಟ್ಟಬೊಮ್ಮು ಸೆರೆಯಾದ ನಂತರ ಬ್ಯಾನರ್‌ಮ್ಯಾನ್ ಎಲ್ಲಾ ಪಾಳೆಯಗಾರರನ್ನು ಕರೆದು ತಮ್ಮಲ್ಲಿರುವ ಆಯುಧಗಳನ್ನು ಕಂಪೆನಿ ಸರಕಾರಕ್ಕೆ ಒಪ್ಪಿಸುವಂತೆಯೂ, ತಮ್ಮ ಕೋಟೆಗಳನ್ನು ಕೆಡವುವಂತೆಯೂ, ತಮ್ಮಲ್ಲಿರುವ ಆಸ್ತಿಪಾಸ್ತಿಯ ಲೆಕ್ಕವನ್ನು ಕಂಪೆನಿ ಸರಕಾರಕ್ಕೆ ನೀಡುವಂತೆಯೂ ಆಜ್ಞೆ ಮಾಡುತ್ತಾನೆ. ಅಂದು ಕಟ್ಟಬೊಮ್ಮುವಿನ ಜೊತೆಯಲ್ಲಿ ಕೈ ಜೋಡಿಸಿದ್ದರೆ ಈ ಪಾಳೆಯಗಾರರಿಗೆ ಇಂತಹ ಗತಿ ಬರುತ್ತಿರಲಿಲ್ಲ. ಅಷ್ಟೆಲ್ಲಾ ಪಾಳೆಯಗಾರರು ಒಂದಾಗಿದ್ದರೆ ಕಂಪೆನಿ ಸರಕಾರ ಹೆದರಿ ದಕ್ಷಿಣದಿಂದ ಕಾಲ್ಕೀಳುತಿತ್ತೇನೊ! ಆದರೆ ಪರಕೀಯರನ್ನು ನಂಬಿ ನಮ್ಮವರನ್ನೇ ಹಿಡಿದುಕೊಟ್ಟಂತಹ ಇಂತಹ ದೇಶದ್ರೋಹಿಗಳು ಆ ಬಳಿಕ ಪಶ್ಚಾತ್ತಾಪದಿಂದ ಕೊರಗಿರಬಹುದು.

ಕಯತ್ತಾರು ಎಂಬ ಪ್ರದೇಶದ ಹುಣಿಸೆ ಮರವೊಂದರ ಎದುರು ಎಲ್ಲಾ ಪಾಳೆಯಗಾರರ ಸಮ್ಮುಖದಲ್ಲೇ ಕಟ್ಟಬೊಮ್ಮುವನ್ನು ನೇಣಿಗೇರಿಸುತ್ತಾನೆ ಬ್ಯಾನರ್‌ಮ್ಯಾನ್. ಇನ್ನು ಯಾವ ಪಾಳೇಗಾರನು ಕೂಡ ತಮ್ಮ ವಿರುದ್ಧ ಕತ್ತಿ ಮಸೆಯದಿರಲೆಂದು ಅವನು ಈ ಏರ್ಪಾಡನ್ನು ಮಾಡುತ್ತಾನೆ. ಹೀಗೆ ಪರಕೀಯರ ವಿರುದ್ಧ ಹೋರಾಡಿ ಅಮರನಾಗುತ್ತಾನೆ ಕಟ್ಟಬೊಮ್ಮು. ಈಗಲೂ ಕಯತ್ತಾರಿನ ಕಡೆ ಹೊದರೆ ಆ ವೀರಾಧಿವೀರ ಪ್ರಾಣಬಿಟ್ಟ ಸ್ಥಳದಲ್ಲಿ ಒಂದು ಕಲ್ಲಿನ ರಾಶಿಯನ್ನು ಕಾಣಬಹುದು. ಹೋಗುವವರು, ಬರುವವರೆಲ್ಲ ಒಂದು ಸಣ್ಣ ಕಲ್ಲನ್ನು ಆ ರಾಶಿಗೆ ಹಾಕಿ ನಮಿಸಿ ಅವನಿಗೆ ಗೌರವ ಸಲ್ಲಿಸುತ್ತಾರೆ. ಅವನ ತಮ್ಮ ಮೂಕದೊರೆ ಕೂಡಾ ಬ್ರಿಟಿಷರ ವಿರುದ್ದ ಸಾಧ್ಯವಾದಷ್ಟು ಹೋರಾಡುತ್ತಾನೆ. ಕೊನೆಗೆ ಒಂದು ದಿನ ತಲೆ ಮರೆಸಿಕೊಳ್ಳುತ್ತಾನೆ. ಆನಂತರ ಅವನು ಏನಾದ? ಎಲ್ಲಿಗೆ ಹೋದನೆಂಬುದು ಇನ್ನೂ ನಿಗೂಢವಾಗಿಯೇ ಉಳಿದಿದೆ. ಕಟ್ಟಬೊಮ್ಮುವಿನ ಪರಾಕ್ರಮಕ್ಕೆ ಸಿಗಬೇಕಾದಷ್ಟು ಮನ್ನಣೆ ನಮ್ಮ ಚರಿತ್ರೆಯಲ್ಲಿ ಸಿಗಲಿಲ್ಲ. ಆದರೆ ಕಾದಂಬರಿಯೊಂದು ಕಟ್ಟಬೊಮ್ಮುವಿನ ಪರಾಕ್ರಮದ ಸಂಪೂರ್ಣ ಚಿತ್ರಣವನ್ನು ನಮಗೆ ಕಟ್ಟಿಕೊಡುವುದರಲ್ಲಿ ಯಶಸ್ವಿಯಾಗಿದೆ.

ಇಂತಹುದೇ ಇನ್ನೊಂದು ಘಟನೆ ಅಮರ ಸುಳ್ಯದ ಸ್ವಾತಂತ್ರ್ಯ ಹೋರಾಟ. ಈ ಘಟನೆಯ ಕುರಿತಾಗಿ ನಿರಂಜನರ 'ಸ್ವಾಮಿ ಅಪರಾಂಪರ' ಮತ್ತು 'ಕಲ್ಯಾಣಸ್ವಾಮಿ' ಕಾದಂಬರಿಯು ಬೆಳಕು ಚೆಲ್ಲುತ್ತದೆ. ೧೮೩೭ರಲ್ಲಿ ಬ್ರಿಟಿಷರ ವಿರುದ್ಧ ನಡೆದ ಈ ಹೋರಾಟದ

ಕತೆಯು ಕೂಡಾ ಇತಿಹಾಸದಲ್ಲಿ ಪ್ರಸಿದ್ಧಿಯನ್ನು ಪಡೆದ ಘಟನೆಯಲ್ಲ. ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಬಹಳ ಜನರಿಗೆ ತಮ್ಮ ನಾಡಿನಲ್ಲಿ ೧೮೩೭ರಷ್ಟು ಹಿಂದೆಯೇ ಇಂತಹುದೊಂದು ಹೋರಾಟ ನಡೆದಿದೆಯೆಂಬ ಕಲ್ಪನೆ ಕೂಡಾ ಈವತ್ತಿಗೂ ಇರಲಾರದು. ನಿರಂಜನರು ಈ ಎರಡು ಕಾಬಂಂಬರಿಗಳನ್ನು ರಚಿಸಿದ ನಂತರ ಸಾಹಿತ್ಯಾಭಿರುಚಿಯುಳ್ಳ ಕೆಲವರು ಈ ಎರಡು ಘಟನೆಯ ಕುರಿತು ಯೋಚಿಸಿರಲು ಸಾಧ್ಯ.

ಮೊದಲು ಬ್ರಿಟಿಷರು ಬಹಳಷ್ಟು ಉಪಾಯದಿಂದ ಕೊಡಗಿನ ಅರಸರ ಸ್ನೇಹವನ್ನು ಗಳಿಸುತ್ತಾರೆ, ಅನಂತರ ಹೋರಾಟದ ಸಂಚು ನಡೆಸುತಾರೆ. ದೇಶ ದ್ರೋಹಿಗಳಾಗಿದ್ದ ಬೋಪು ದಿವಾನನಿಂದಾಗಿ ಕೊಡಗಿನ ಅರಸ ಚಿಕವೀರ ರಾಜನನ್ನು ಪದಚ್ಯುತಗೊಳಿಸುತ್ತಾರೆ. ಆದರೆ ಸ್ವಾಮಿ ಅಪರಾಂಪರ ಎಂಬ ಒಬ್ಬ ಜಂಗಮ ರಹಸ್ಯವಾಗಿ ಜನರನ್ನು ಸಂಘಟಿಸಿ ಬ್ರಿಟಿಷರ ವಿರುದ್ಧ ಹೋರಾಡಲು ಪ್ರಯತ್ನಿಸುತ್ತಿರುವುದು ಬ್ರಿಟಿಷರಿಗೆ ತಿಳಿಯುತ್ತದೆ. ಅವನನ್ನು ಉಪಾಯದಿಂದ ಸೆರೆ ಹಿಡಿಯುತ್ತಾರೆ. ಅನಂತರ ಕಲ್ಯಾಣಪ್ಪನನ್ನು ಜನರು ರಾಜವಂಶಸ್ಥ ಎಂದು ಬಿಂಬಿಸಿ ಜನಸಂಘಟನೆಯಲ್ಲಿ ತೊಡಗುತ್ತಾರೆ. ಏಕೆಂದರೆ ಅಂದು ಜನರಲ್ಲಿ ರಾಜಭಕ್ತಿ ಹೇರಳವಾಗಿದ್ದ ಕಾಲವದು. ಅವರು ಸಿಂಹಾಸನದ ಮೇಲೆ ರಾಜವಂಶಸ್ಥನೇ ಇರಬೇಕೆಂದು ಬಯಸಿದ್ದರು. ಆದುದರಿಂದ ಕಲ್ಯಾಣಪ್ಪ ಚಿಕವೀರರಾಜನ ಸೋದರ ಸಂಬಂಧಿಯೆಂದು ಬಿಂಬಿಸಿ ಬ್ರಿಟಿಷರ ವಿರುದ್ಧ ಬಂಡಾಯ ಏಳುವುದಕ್ಕೆ ಜನಸಂಘಟನೆಗೆ ತೊಡಗುತ್ತಾರೆ. ಆದರೆ ೧೮೩೭ರಲ್ಲಿ ಕಲ್ಯಾಣಪ್ಪ ಬೈತೂರಿನಲ್ಲಿ ಬ್ರಿಟಿಷರಿಗೆ ಸೆರೆಯಾಗುತ್ತಾನೆ. ಆಗ ಕಲ್ಯಾಣಪ್ಪನ ಹೆಸರಿನಲ್ಲಿ ಪುಟ್ಟಬಸಪ್ಪ ಎಂಬಾತನನ್ನು ಹುಲಿ ಕಡಿದ ಮಂಜಪ್ಪ ಆರಿಸಿ ಆ ಭಾಗದ ನಾನಾ ಜನರಿಗೆ ಇವನನ್ನು ಕಲ್ಯಾಣ ಸ್ವಾಮಿ ಎಂಬ ಹೆಸರಿನಿಂದ ಪರಿಚಯಿಸುತ್ತಾರೆ. ಹೀಗೆ ಪುಟ್ಟ ಬಸಯ್ಯ ಕಲ್ಯಾಣ ಸ್ವಾಮಿಯಾಗಿ ಬದಲಾಗುತ್ತಾನೆ.

ಇಲ್ಲಿ ಜನರ ರಾಜಭಕ್ತಿ, ಹೇಗಾದರೂ ಮಾಡಿ ಕೊಡಗನ್ನು ಮರಳಿ ಪಡೆಯಬೇಕೆಂಬ ಹಂಬಲ ಹಾಗೂ ಬ್ರಿಟಿಷರನ್ನು ಅಲ್ಲಿಂದ ಓಡಿಸಿ ಆ ಸಿಂಹಾಸನದ ಮೇಲೆ ಮರಳಿ ಚಿಕವೀರರಾಜನನ್ನು ಕೂರಿಸಬೇಕೆಂಬ ಹೆಬಯ್ಕೆಯು ಅವರಲ್ಲಿರುವುದನ್ನು ಕಾಣಬಹುದು. ಅಂತಹ ರಾಜಭಕ್ತಿ ಅಂದಿನ ಜನರಲ್ಲಿತ್ತು. ಅದೇ ರೀತಿಯಾಗಿ ಬೋಪು ದಿವಾನನಂತಹ ದ್ರೋಹಿಗಳು ಕೂಡಾ ಅಲ್ಲಿದ್ದರು. ಅವನ ದ್ರೋಹದಿಂದಲೇ ಬ್ರಿಟಿಷರು ಸುಲಭವಾಗಿ ಕೊಡಗನ್ನು ಅಕ್ರಮಿಸಿ ವೀರರಾಜನನ್ನು ಗೃಹಬಂಧನದಲ್ಲಿಡಲು ಸಾಧ್ಯವಾಯಿತು. ಹುಲಿಕಡಿದ ನಂಜಯ್ಯ, ಸೋಮಯ್ಯ, ಚೆಟ್ಟಿ ಕುಡಿಯ, ಕರ್ತು ಕುಡಿಯರೆಂಬ ಕುಡಿಯ ಸಹೋದರರು, ರಾಮ ಗೌಡ ಮುಂತಾದವರು ಒಂದಾಗಿ ಬ್ರಿಟಿಷರ ವಿರುದ್ಧ ದಂಗೆಯೇಳುವ ಒಂದು ಯೋಜನೆಯನ್ನು ರೂಪಿಸುತ್ತಾರೆ. ಕೊಡಗರು, ಕನ್ನಡಿಗರು, ತುಳುವರು ಇವರೆಲ್ಲಾ ಒಂದಾಗುತ್ತಾರೆ. ಬ್ರಿಟಿಷರ ವಿರುದ್ಧ ಕನ್ನಡ ಜಿಲ್ಲೆ ಸಾರಿದ ಯುದ್ಧದಲ್ಲಿ ಬ್ರಾಹ್ಮಣರು, ಲಿಂಗಾಯಿತರು, ಮುಸಲ್ಮಾನರು, ಗೌಡರು, ಬಂಟರು, ಕುಡಿಯ ಜನಾಂಗ ಹೀಗೆ ಬೇರೆ ಬೇರೆ ಜಾತಿಯ ಜನರು ಎಲ್ಲಾ ಭೇದಭಾವಗಳನ್ನು ಮರೆತು ಒಂದಾಗುತ್ತಾರೆ. ಹೀಗೆ ಸುಳ್ಯದಲ್ಲಿ ಸ್ವಾತಂತ್ರ್ಯವನ್ನು ಘೋಷಿಸಿ ಸ್ವಾತಂತ್ರ್ಯದ ಸಂಕೇತವಾದ ತಮ್ಮ ಬಾವುಟವನ್ನು ಹಿಡಿದು ಈ ಸ್ವಾತಂತ್ರ್ಯ ಸೇನೆ

ಮುಂದುವರಿಯುತ್ತದೆ. ಸುಳ್ಯ ಸ್ವತಂತ್ರವಾದ ಸುದ್ದಿಯನ್ನು ಕೇಳಿ ಜನರಿಗೆ ಸಂತೋಷವಾಗುತ್ತದೆ. ಬ್ರಿಟಿಷರು ಕಂದಾಯವನ್ನು ಹಣದ ರೂಪದಲ್ಲಿ ಸ್ವೀಕರಿಸುತ್ತಿದ್ದುದು ಹಾಗೂ 'ಲಿಂಗರಾಜನ ಕೋಲು' ಎಂಬುದಾಗಿ ಪ್ರಸಿದ್ಧವಾಗಿದ್ದ ತೆರಿಗೆ ಪದ್ಧತಿಯನ್ನು ನಾಶಮಾಡಿದುದು ಅಲ್ಲಿಯ ರೈತರ ಅಸಮಧಾನಕ್ಕೆ ಕಾರಣವಾಯಿತು. ಇವರ ಸೈನ್ಯವು ಮುಂದೆ ಬೆಳ್ಳಾರೆ, ಪುತ್ತೂರು, ನಂದಾವರ, ಬಂಟ್ವಾಳ, ಇಲ್ಲೆಲ್ಲ ಸ್ವಾತಂತ್ರ್ಯ ಘೋಷಿಸಿ ಮಂಗಳೂರಿಗೆ ಹೊರಟಿತು ಕಲ್ಯಾಣಪ್ಪನ ದಂಡು. ನಂದಾವರದ ಅರಸು ಲಕ್ಷ್ಮಪ್ಪ ಬಂಗರಸನೂ ಈ ದಂಡನ್ನು ತನ್ನ ಸೈನ್ಯ ಸಮೇತ ಸೇರಿಕೊಳ್ಳುತ್ತಾನೆ.

ಈ ಎಲ್ಲಾ ಊರುಗಳಿಂದ ಜನರು ಮನೆಯಲ್ಲಿದ್ದ ಆಯುಧಗಳನ್ನು ಹಿಡಿದುಕೊಂಡು ಕಲ್ಯಾಣಪ್ಪನ ಸೇನೆಯನ್ನು ಸೇರಿಕೊಂಡರು. 'ಕಲ್ಯಾಣಪ್ಪನ ದಂಡು' ಎಂದು ಪ್ರಸಿದ್ಧಿಯನ್ನು ಪಡೆದ ಈ ಸ್ವಾತಂತ್ರ್ಯ ಸೇನೆ ಮುಂದೆ 'ಕಲ್ಯಾಣಪ್ಪನ ಕಾಟಕಾಯಿ'ಯಾಗಿ ಬದಲಾದುದು ಬ್ರಿಟಿಷರ ಚಮತ್ಕಾರ. ಬಹಳ ವರ್ಷಗಳವರೆಗೂ ಇದು 'ಕಾಟಕಾಯಿ'ಯಾಗಿಯೇ ಉಳಿಯಿತು. ಕಲ್ಯಾಣಪ್ಪನ ಹೆಸರು ಕೆಡಿಸುವುದಕ್ಕೆ ಬ್ರಿಟಿಷರು ತಾವೇ ಕುಮ್ಮಕ್ಕು ಕೊಟ್ಟು ಲೂಟಿ, ದರೋಡೆ ಮಾಡಿಸಿರುವ ಸಾಧ್ಯತೆಯನ್ನು ಅಲ್ಲಗಳೆಯುವಂತಿಲ್ಲ. ಏಕೆಂದರೆ ಬ್ರಿಟಿಷರು ತಮ್ಮ ಸ್ವಾರ್ಥಕ್ಕೋಸ್ಕರ ಯಾವ ಕೆಲಸವನ್ನು ಕೂಡ ಮಾಡುತಿದ್ದರು. ಕಲ್ಯಾಣಪ್ಪನ ಬಗ್ಗೆಯಿದ್ದ ಜನಾಭಿಪ್ರಾಯವು ಬದಲಾಗಿ ಅದೊಂದು 'ಹೋರಾಟದ ದಂಡು' ಅಲ್ಲ; ಅದೊಂದು 'ಕಾಟಕಾಯಿ' ಎಂದು ಬಿಂಬಿಸಿ ಜನರು ದಂಡಿಗೆ ಸೇರದಂತೆ ತಡೆಯುವ ಉಪಾಯವಿದ್ದಿರಲೂ ಬಹುದು. ಆದರೆ ಕಲ್ಯಾಣಪ್ಪನ ದಂಡು ಯಾರ ಮನೆಯನ್ನೂ ಲೂಟಿ ಮಾಡಲಿಲ್ಲ. ಸ್ವಾತಂತ್ರ್ಯ ಪ್ರಿಯರಾದ ಅನೇಕ ಮಂದಿ ಶ್ರೀಮಂತರು ತಾವೇ ದಂಡಿಗೆ ಸಹಾಯ ಮಾಡಿದ ಉಲ್ಲೇಖವು ನಿರಂಜನರ 'ಕಲ್ಯಾಣಸ್ವಾಮಿ' ಕಾದಂಬರಿಯಲ್ಲಿ ನಮಗೆ ದೊರೆಯುತ್ತದೆ.

ಈ ರೀತಿಯಾಗಿ ಕೊಡಗಿನಿಂದ ಆರಂಭವಾದ ತೊರೆ, ನದಿಯಾಗಿ, ಮಹಾ ಪ್ರವಾಹವಾಗಿ ಕಡಲತಡಿಯ ಮಂಗಳೂರನ್ನು ಸೇರುತ್ತದೆ. ಈ ದಂಡನ್ನು ಸೇರಿಕೊಳ್ಳಲು ತೆಂಕುಂಬಳೆಯ ಸುಬ್ಬಣ್ಣ ಹೆಗ್ಡೆಯೂ ಬರುತ್ತಾನೆ. ಆದರೆ ದೋಣಿ ದಾಟುತ್ತಿರಲು ಬ್ರಿಟಿಷರ ಗುಂಡೇಟಿಗೆ ಅವನು ಬಲಿಯಾಗುತ್ತಾನೆ. ಕಲ್ಯಾಣಪ್ಪ ಮಂಗಳೂರು ಸೇರುವ ಮೊದಲೇ ಅಲ್ಲಿದ್ದ ಬಿಳಿಯರಿಗೆ ಮಾಹಿತಿ ತಲುಪಿರುತ್ತದೆ. ಅವರೆಲ್ಲರೂ ಕೂಡಾ ತಮ್ಮ ಸಂಸಾರ ಸಮೇತ ಹಡಗನ್ನು ಹತ್ತಿ ಕೇರಳದ ತಲಚೇರಿಗೆ ಹೋಗುತ್ತಾರೆ. ಬ್ರಿಟಿಷರು ಸ್ವಲ್ಪ ದಿನದ ಮಟ್ಟಿಗಾದರೂ ಮಂಗಳೂರಿನಿಂದ ನಿರ್ಗಮಿಸಿದ್ದು ಕಲ್ಯಾಣ ಸ್ವಾಮಿಯ ದಂಡಿನ ಬಗ್ಗೆ ಅವರಿಗಿದ್ದ ಭಯವನ್ನು ಸೂಚಿಸುತ್ತದೆ. ಕಲ್ಯಾಣ ಸ್ವಾಮಿಯ ದಂಡು ಮಂಗಳೂರಿನ ಬಾವುಟ ಗುಡ್ಡೆಯ ನೆತ್ತಿಯ ಮೇಲೆ ಹಾರುತ್ತಿದ್ದ 'ಈಸ್ಟ್ ಇಂಡಿಯಾ ಕಂಪೆನಿ'ಯ ಬಾವುಟವನ್ನು ಕಿತ್ತಸೆದರು. ಆ ಧ್ವಜಸ್ತಂಬದ ಮೇಲೆ ತಾವು ತಂದಿದ್ದ ಸ್ವತಂತ್ರ ಬಾವುಟವನ್ನು ನೆಟ್ಟರು.

ಹೀಗೆ ಮಂಗಳೂರಿನಲ್ಲಿ ಸ್ವಾತಂತ್ರ್ಯ ಘೋಷಿಸುತ್ತಾನೆ ಕಲ್ಯಾಣ ಸ್ವಾಮಿ. ಮಂಗಳೂರಿನ ವರ್ತಕರೆಲ್ಲರೂ ಕಲ್ಯಾಣ ಸ್ವಾಮಿಗೆ ವಂದಿಸಿ ಕಾಣಿಕೆಯನ್ನು ಅರ್ಪಿಸುತ್ತಾರೆ. ಹೀಗೆ ಕಲ್ಯಾಣಪ್ಪನ ಸ್ವಾತಂತ್ರ್ಯ ಸೇನೆಯು ಮಂಗಳೂರನ್ನು ಹದಿಮೂರು ದಿನಗಳವರೆಗೆ ತನ್ನ ಅಧೀನದಲ್ಲಿ

ಇಟ್ಟುಕೊಂಡಿತು. ಹದಿಮೂರು ದಿನಗಳ ನಂತರ ಸೈನ್ಯ ಸಮೇತವಾಗಿ ಬಂದ ಬ್ರಿಟಿಷ್ ಸೇನೆ ಕಲ್ಯಾಣ ಸ್ವಾಮಿಯ ದಂಡನ್ನು ಸದೆಬಡಿಯಿತು. ದೇಶದ್ರೋಹಿಗಳ ಸಹಾಯದಿಂದ ಕಲ್ಯಾಣ ಸ್ವಾಮಿ ಲಕ್ಷ್ಮಪ್ಪ ಬಂಗರಸನನ್ನೂ ಒಳಗೊಂಡಂತೆ ಕಲ್ಯಾಣ ಸ್ವಾಮಿಯ ದಂಡನ್ನು ಬಂಧಿಸುವಲ್ಲಿ ಬ್ರಿಟಿಷರು ಯಶಸ್ವಿಯಾದರು. ಅಸಂಖ್ಯಾತ ದೇಶಭಕ್ತ ಸೈನಿಕರು ಕೆಲವು ಮಂದಿ ಬ್ರಿಟಿಷರನ್ನು ಕೊಂದರು. ಇದಕ್ಕೆ ಪ್ರತಿಯಾಗಿ ಬ್ರಿಟಿಷರು ಕಲ್ಯಾಣಸ್ವಾಮಿ, ಬಂಗರಾಜನನ್ನು ಒಂದು ದಿನ ಮತ್ತು ರಾಮ ಗೌಡನನ್ನು ಮಾರನೇ ದಿನ ಮಂಗಳೂರಿನ ಬಿಕರ್ನಕಟ್ಟೆಯಲ್ಲಿ ನೇಣಿಗೇರಿಸಿದರು. ಬ್ರಿಟಿಷರು ಮೊದಮೊದಲು ತಮಗೆ ಮಲೆತು ನಿಂತವರಿಗೆ ಇಂತಹ ಬಯಲು ಪ್ರದೇಶದಲ್ಲಿ ನೇಣಿಗೇರಿಸಿ, ಹಲವಾರು ದಿನಗಳವರೆಗೆ ಆ ಹೆಣವನ್ನು ಅಲ್ಲೇ ಬಿಡುತ್ತಿದ್ದರು. ಏಕೆಂದರೆ ಉಳಿದವರಿಗೆ ಇದೊಂದು ಪಾಠವಾಗಲಿ ಎಂಬುದು ಅವರ ಉದ್ದೇಶವಾಗಿತ್ತು. ಮಂಗಳೂರಿನಲ್ಲಿ ಕಲ್ಯಾಣ ಸ್ವಾಮಿಯನ್ನು ನೇಣಿಗೇರಿಸಿದ ಸ್ಥಳವಾದ ಬಿಕರ್ನಕಟ್ಟೆಯ ಮೂಲ ಹೆಸರು 'ಭೀಕರ ನ್ಯಾಯ ಕಟ್ಟೆ'.

ಇಂತಹ ಸ್ವಾತಂತ್ರ್ಯ ಸೇನಾನಿಯ ಚರಿತ್ರೆಯನ್ನು ಬ್ರಿಟಿಷರು ತಿರುಚಿ 'ಕಲ್ಯಾಣಪ್ಪನ ಕಾಟಕಾಯಿ' ಎಂಬುದಾಗಿ ಮಾಡಿಬಿಟ್ಟರು. ಏಕೆಂದರೆ ಇವನ ಕತೆಯಿಂದ ಆ ಪ್ರದೇಶದ ಇನ್ನಷ್ಟು ಮುಂದಿನ ಪೀಳಿಗೆಯು ಪ್ರೇರಣೆ ಪಡೆಯುವುದು ಬ್ರಿಟಷರಿಗೆ ಬೇಡವಾದ ವಿಚಾರಾಗಿತ್ತು. ಆದರೆ ಸ್ವತಃ ನಿರಂಜನರೆ ತಮ್ಮ ಕಾದಂಬರಿಯ ಹಿನ್ನುಡಿಯಲ್ಲಿ ಕಲ್ಯಾಣಪ್ಪನ ಕುರಿತು ಬ್ರಿಟಿಷರಿಗಿದ್ದ ಭಯ ಹಾಗೂ ಅದನ್ನು ಅಡಗಿಸಿದವರನ್ನು ಅವರು ಸನ್ಮಾನಿಸಿದ ರೀತಿಯನ್ನು ಹೇಳಿಕೊಂಡಿದ್ದಾರೆ. "೧೮೪೧ನೇ ಇಸವಿಯಲ್ಲಿ ಹುಟ್ಟಿದ ಮಂಗಳೂರಿನ ಬಾಸೆಲ್ ಮಿಶನ್ ಛಾಪಖಾನೆಯಲ್ಲಿ 'ಕಲ್ಯಾಣಪ್ಪನ ಪ್ರಸಂಗ' ಎಂದು ಒಂದು ಯಕ್ಷಗಾನ ಪ್ರಸಂಗವು ಅಚ್ಚಾಗಿತ್ತು. ಅದನ್ನು ಕೂಡಲೇ ಇಂಗ್ಲೀಷ್ ಸರಕಾರವು ಕಂಡು ಹಿಡಿದು ಅದರ ಪ್ರತಿಗಳನ್ನೆಲ್ಲ ಸುಟ್ಟು ಹಾಕಿಸಿತಂತೆ.[೫] ಬಾಸಲ್ ಮಿಶನಿನವರು ಇಂಗ್ಲಿಷರಲ್ಲ, ಜರ್ಮನರು ಎಂಬುದನ್ನು ಗಮನದಲ್ಲಿಟ್ಟುಕೊಂಡರೆ ಮೇಲಿನ ಮಾಹಿತಿ ಸತ್ಯವೆನಿಸುವುದು. 'ಕಲ್ಯಾಣಸ್ವಾಮಿ'ಯ ಕಥೆ ಮುಗಿದ ಬಳಿಕ ಇಂಗ್ಲಿಷರು ತೋರಿಸಿದ ಧೋರಣೆಯನ್ನು ಗಮನಿಸಿದರೆ ಕಲ್ಯಾಣಸ್ವಾಮಿಯ ಎಷ್ಟೊಂದು ಇಂಗ್ಲೀಷರ ನಿದ್ರೆಗೆಡಿಸಿರಬೇಕೆಂಬುದು ಸ್ಪಷ್ಟವಾಗುತ್ತದೆ "...ಬೋಪು ದಿವಾನನಿಗೂ ಆತನ ಜನರಿಗೂ ಕಂಪೆನಿ ಸರಕಾರದವರು...ಜಹಗೀರು ಭೂಮಿಗಳನ್ನೂ, ಯುದ್ಧದಲ್ಲಿ ಸತ್ತುಹೋದವರ ಕುಟುಂಬದವರಗೆ ಮೂರು ತಲೆಮಾರಿನವರೆಗೆ ಪೆನ್ಶನ್ನನ್ನೂ ಕಾಟಕಾಯಿಯಲ್ಲಿ [ದಂಗೆ ಅಡಗಿಸಲು] ಭಾಗವಹಿಸಿದವರ ಯೋಗ್ಯತೆಗೆ ಅನುಗುಣವಾಗಿ ಚಿನ್ನ, ಬೆಳ್ಳಿ ಪದಕಗಳನ್ನೂ ಕೊಟ್ಟರು. ಚಿನ್ನದ ಪದಕವು ಸರಪಣಿ ಸಮೇತ ಹನ್ನೊಂದುವರೆ ತೂಕವುಳ್ಳದಾಗಿತ್ತು. ಆ ಪದಕದ ಒಂದು ಬದಿಯಲ್ಲಿ ಕೊಡಗು ವೀರನು ಯುದ್ಧ ಮಾಡುವ ಹಾಗೆ ಅಚ್ಚೊತ್ತಿದೆ. ಇನ್ನೊಂದು ಬದಿಯಲ್ಲಿ ಪೀಚಕತ್ತಿ ಮತ್ತು ಒಡಿಕತ್ತಿಗಳನ್ನು ಒಂದು ಹಾರದಲ್ಲಿ ಕಟ್ಟಿ ಸಿಕ್ಕಿಸಿದ ಹಾಗೆ ಬಿಡಿಸಿವೆ. ಇದಲ್ಲದೆ ಆ ಪದಕದ ಒಂದು ಬದಿಯಲ್ಲಿ ಇಂಗ್ಲಿಷಿನಲ್ಲಿ "For distinguished conduct and loyalty to the British government, Coorg,

April 1837" ಎಂದು ಬರೆದಿದೆ. ಅದರ ತರ್ಜುಮೆಯು ಕನ್ನಡದಲ್ಲಿ ಇನ್ನೊಂದು ಬದಿಯಲ್ಲಿದೆ. [ಡಿ.ಎನ್. ಕೃಷ್ಣಯ್ಯನವರ ಲೇಖನದಿಂದ][೬] "ಕೆನರಾ ಜಿಲ್ಲೆಯಲ್ಲಿ ಇಷ್ಟೊಂದು ದೊಡ್ಡ ಪ್ರಮಾಣದಲ್ಲಿ ಪ್ರಮುಖ ಜನ ಸಮುದಾಯ ಬ್ರಿಟಿಷ್ ಸರಕಾರದ ವಿರುದ್ಧ ಭಾಗವಹಿಸಲು ತಯಾರಾದರಲ್ಲಾ! ಇದು ಹೇಗೆ ಅಥವಾ ಯಾರಿಂದ ಈ ಪಿತೂರಿ ರೂಪಿಸಲ್ಪಟ್ಟಿತು ಎನ್ನುವುದನ್ನು ಖಚಿತಮಾಡಿಕೊಳ್ಳುವುದು ಪ್ರಾಯಃ ಅಗತ್ಯ. ಇಂಡಿಯಾದ ಸಂದರ್ಭ ಸಿಕ್ಕಿದಾಗ ದಂಗೆ ಎಬ್ಬಿಸಲು ತಯಾರಾಗಿರುವ, ಸರಕಾರದ ಮೇಲೆ ಕಹಿ ಮನಸ್ಸಿನ ಜನರು ಎಲ್ಲಾ ಕಡೆ ಇದ್ದಾರೆ. ಈ ಗೌರವಾನ್ವಿತ ಕಂಪನಿಯ ನೇರವಾದ ಆಡಳಿತಕ್ಕೆ ಸೇರಿದ ಇಂತಹ ಪ್ರದೇಶದ ಜನರ ಪೈಕಿ ಇಲ್ಲಿಯ ರೈತಾಪಿ ನಿವಾಸಿಗಳಲ್ಲಿ ಅನೇಕ ಸಾವಿರ ಜನರನ್ನು ಸರಕಾರದ ವಿರುದ್ಧ ಶಸ್ತ್ರ ಹಿಡಿದು ನಿಲ್ಲುವಂತೆ ಒಂದುಗೂಡಿಸುವುದು ಹೇಗೆ ಸಾಧ್ಯವಾಯಿತು? ಕೆಲವೇ ದಿನಗಳ ಮುನ್ನಚ್ಚರಿಕೆಯೊಳಗೆ ದೃಢಸಂಕಲ್ಪದಿಂದ, ಬದ್ಧ ವೈರವನ್ನು ಪ್ರಕಟಿಸುವಂತೆ ಮಾಡಲು ಹೇಗೆ ಸಾಧ್ಯವಾಯಿತೆಂಬ ಸಮಸ್ಯೆಯನ್ನು ಬಗೆಹರಿಸಬೇಕಾಗಿದೆ"[೭] ಈ ಎಲ್ಲಾ ವರದಿಗಳನ್ನು ಹಾಗೂ ದಂಗೆಯನ್ನು ಅಡಗಿಸಿದವರಿಗೆ ಬ್ರಿಟಿಷರು ನೀಡಿದ ಬಹುಮಾನಗಳನ್ನು ಗಮನಿಸಿದರೆ ಸುಳ್ಯದಲ್ಲಿ ಕಲ್ಯಾಣಸಾಮಿಯ ನೇತೃತ್ವದಲ್ಲಿ ನಡೆದುದು ದಂಗೆಯೋ ಅಥವಾ 'ಕಾಟಕಾಯಿ'ಯೋ ಎಂಬದು ಯಾರಿಗಾದರೂ ಅರ್ಥವಾಗುತ್ತದೆ. ಕೇವಲ ಕಾಟಕಾಯಿಯನ್ನು ಅಡಗಿಸಿದವರಿಗೆ ಬ್ರಿಟಿಷರು ಆ ಪರಿಯ ಪುರಸ್ಕಾರವನ್ನು ನೀಡಲು ಸಾಧ್ಯವೇ?

ನಿರಂಜನರ 'ಚಿರಸ್ಮರಣೆ' ಕಾದಂಬರಿಯು ಕಯ್ಯೂರಿನಲ್ಲಿ ನಡೆದ ರೈತಹೋರಾಟವನ್ನು ಜಗತ್ತಿಗೆ ಪರಿಚಯಿಸಿದ ಬಹಳ ಜನಪ್ರಿಯ ಕೃತಿ. ಈ ಕಾದಂಬರಿಯ ಬಳಿಕವೇ ಕಯ್ಯೂರಿನ ರೈತ ಹೋರಾಟವು ಪ್ರಸಿದ್ಧಿಯನ್ನು ಪಡೆದುಕೊಂಡಿತು. ವಿವಿಧ ಭಾಷಗಳಿಗೆ ಈ ಕೃತಿ ಅನುವಾದಗೊಂಡುದನ್ನು ಗಮನಿಸಿದರೆ ಈ ಕಾದಂಬರಿಯ ಮಹತ್ವವನ್ನು ನಾವು ಮನಗಾಣಬಹುದು.

ಸ್ವಾತಂತ್ರ್ಯ ಚಳವಳಿಗೆ ಸಂಬಂಧಿಸಿದ ಹಾಗೆ ರಚಿತವಾದ ಇತರ ಅನೇಕ ಕಾದಂಬರಿಗಳು ಸಾಹಿತ್ಯದ ಸೊಗಡಿನೊಂದಿಗೆ ಸ್ವಾತಂತ್ರ್ಯ ವೀರರ ಚರಿತ್ರೆಯನ್ನು ನಮಗೆ ಕಟ್ಟಿ ಕೊಡುತ್ತವೆ. ಈ ಅಂಶಗಳನ್ನು ಗಮನಿಸಿದರೆ ಸ್ವಾತಂತ್ರ್ಯ ಚಳುವಳಿ ಎಂಬುದು ಜನಸಾಮಾನ್ಯರ ಚಳುವಳಿಯಾಗಿತ್ತು; ಅದು ನಮ್ಮ ಲೆಕ್ಕಕ್ಕೆ ಸಿಗುವ ಬೆರಳೆಣಿಕೆಯಷ್ಟು ಜನರ ತ್ಯಾಗ ಬಲಿದಾನದಿಂದ ಮಾತ್ರ ಸ್ವಾತಂತ್ರ್ಯ ಬರಲಿಲ್ಲ ಎನ್ನುವುದು ಸ್ಪಷ್ಟವಾಗುತ್ತದೆ. ಇದರಲ್ಲಿ ಬಸಕ್ಕನಂತಹ ದೇವದಾಸಿ ತನ್ನ ವೃತ್ತಿಯನ್ನು ಬಿಟ್ಟು ಚಳುವಳಿ ಸೇರಿ ಜೈಲು ಪಾಲಾಗಿದ್ದಾಳೆ. ನಮ್ಮ ನಾಡಿನ ಹೆಣ್ಣುಮಕ್ಕಳ ಹೋರಾಟದ ಕತೆಯಂತೂ ಗಮನಾರ್ಹವಾದುದು. ಹೆಣ್ಣುಮಕ್ಕಳಿಗೆ ಅಂತಹ ಒಂದು ಶಕ್ತಿ ಬರಲು ಕಾರಣ ಗಾಂಧೀಜಿಯ ಪ್ರೇರಣೆ ಮತ್ತು ಬ್ರಿಟಿಷರ ಕ್ರೌರ್ಯ ಎನ್ನುವುದನ್ನು ನಾವು ಮರೆಯುವಂತಿಲ್ಲ. ಗುಡ್ಡಕಾಡುಗಳಲ್ಲಿ ವಾಸಿಸುವ ಜನರೂ, ಲಂಬಾಣಿ ಹೆಂಗಸರೂ ಈ ಚಳುವಳಿಯ ಭಾಗವಾಗಿದ್ದರು. ಬಾರತದ ಸ್ವಾತಂತ್ರ್ಯ ಚಳುವಳಿಯು ದೇಶ ವಿದೇಶಗಳಲ್ಲೂ ಪರಿಣಾಮ ಬೀರಿತು. ನಮ್ಮ ದೇಶದ ವೀರರು ಯಾವುದೇ ಶಿಕ್ಷೆಗೂ ಬಗ್ಗದೆ ದೇಶಪ್ರೇಮವನ್ನು ಮೆರೆದ ಕತೆಯ ಪ್ರತಿಯೊಂದು ಸಣ್ಣ ಸಣ್ಣ ವಿವರಗಳು ಕೂಡ ನಮಗೆ ಈ

ಕಾದಂಬರಿಗಳಲ್ಲಿ ಸಿಗುತ್ತವೆ. ನಮ್ಮ ಹಿರಿಯರು ದೇಶವನ್ನು ಎಷ್ಟು ಪ್ರೀತಿಸುತ್ತಿದ್ದರೆಂಬ ಅರಿವು ಇದರಿಂದ ನಮಗುಂಟಾಗುತ್ತದೆ. ದೇಶದಲ್ಲಿ ಯಾರೋ ಕೆಲವು ಪ್ರಮುಖ ಮುಖಂಡರ ಹೋರಾಟದಿಂದ ಸ್ವಾತಂತ್ರ್ಯ ಬಂತೆಂಬುದಾಗಿರುವಾಗ ನಮಗಿರುವ ಭಾವನೆಗೂ, ಈ ಹೋರಾಟದಲ್ಲಿ ನಮ್ಮ ತಂದೆ, ನಮ್ಮ ಅಜ್ಜ, ನಮ್ಮ ಪಕ್ಕದ ಮನೆಯವರು ಹೋರಾಡಿದ್ದಾರೆ, ಹುತಾತ್ಮರಾಗಿದ್ದಾರೆ, ಜೈಲುವಾಸ ಅನುಭವಿಸಿದ್ದಾರೆಂದು ಗೊತ್ತಾಗುವಾಗ ನಮಗುಂಟಾಗುವ ಭಾವನೆಗೂ ವ್ಯತ್ಯಾಸವಿರುತ್ತದೆ. ಆಗ ಆ ಚಳುವಳಿ ಕೂಡ ನಮಗೆ ಆಪ್ತವೆನಿಸುತ್ತದೆ.

ಇತಿಹಾಸ ಹೇಳಲು ಮರೆತು ಹೋದುದನ್ನು ಸಾಹಿತ್ಯವು ನಮಗೆ ತಿಳಿಸಿಕೊಡುತ್ತದೆ. ಚರಿತ್ರೆಯಲ್ಲಿ ಅಪ್ರಮುಖ್ಯವೆನಿಸಿದ ಘಟನೆಗಳು ಸಾಹಿತ್ಯದಲ್ಲಿ ಪ್ರಮುಖವೆನಿಸುತ್ತದೆ. ಇತಿಹಾಸಕ್ಕೆ ಉಲ್ಲೇಖಿಸಲು ಯೋಗ್ಯರಲ್ಲ ಎಂದು ಕಂಡವರೂ ಕೂಡಾ ಸಾಹಿತ್ಯದಲ್ಲಿ ಮಹಾನಾಯಕರು ಆಗಬಹುದು. ಹೀಗೆ ಸ್ವಾತಂತ್ರ್ಯ ಚಳುವಳಿಯ ಕುರಿತಾಗಿ ರಚನೆಯಾಗಿ ಉಪಲಬ್ಧವಿದ್ದ ಪ್ರತಿಯೊಂದು ಕನ್ನಡ ಕಾದಂಬರಿಗಳು ಕೂಡ ಬಹಳ ಮಹತ್ವದ ವಿಚಾರಗಳನ್ನು ನಮಗೆ ತಿಳಿಸಿಕೊಡುತ್ತದೆ. ಈ ಎಲ್ಲಾ ಕನ್ನಡ ಕಾದಂಬರಿಗಳು ಸ್ವಾತಂತ್ರ್ಯ ಚಳುವಳಿಯಲ್ಲಿ ನಮ್ಮ ಗಮನಕ್ಕೆ ಬಾರದೇ ಇದ್ದಂತಹ ಹಲವಾರು ಹೊಸ ವಿಚಾರಗಳ ಕುರಿತು ಬೆಳಕು ಚೆಲ್ಲಿವೆ.

## 'ಅವಳ' ಚರಿತ್ರೆಯಾಗಿ ಕಾದಂಬರಿ

ಇತಿಹಾಸವು ಕೇವಲ 'ಉಳ್ಳವರ' ಚರಿತ್ರೆ ಮಾತ್ರ ಅಲ್ಲ, ಅದು 'ಅವನ' ಚರಿತ್ರೆಯೂ ಹೌದು. ಭಾರತದ ಇತಿಹಾಸ ಮಾತ್ರವಲ್ಲದೆ ಪ್ರಪಂಚದ ಇತಿಹಾಸವನ್ನು ನಾವು ಗಮನಿಸಿದರೆ ಅದರಲ್ಲಿ ಕೇವಲ ಬೆರಳೆಣಿಕೆಯಷ್ಟು ಮಾತ್ರ ಮಹಿಳೆಯರ ಹೋರಾಟ, ಸಾಹಸ, ತ್ಯಾಗ, ಬಲಿದಾನದ ಕತೆಯನ್ನು ನಾವು ಕಾಣಬಹುದು. ಪ್ರಪಂಚದ ಇತಿಹಾಸದ ಪುಟಗಳಲ್ಲಿ ಶಾಶ್ವತ ಸ್ಥಾನವನ್ನು ಪಡೆದ ಹೆಗ್ಗಳಿಕೆ ಪುರುಷರದ್ದು. ಹಾಗಾದರೆ ಯಾವುದೇ ಒಂದು ಹೋರಾಟದಲ್ಲಿ ಅಥವಾ ಯಾವುದೇ ಒಂದು ಆಡಳಿತದಲ್ಲಿ ಮಹಿಳೆಯರ ಪಾತ್ರವೇನೂ ಇಲ್ಲವೇ? ಎಂಬ ಪ್ರಶ್ನೆ ಸಹಜವಾಗಿಯೇ ನಮ್ಮನ್ನು ಕಾಡುತ್ತದೆ. ಖಂಡಿತವಾಗಿಯೂ ಒಂದಲ್ಲ ಒಂದು ರೀತಿಯಲ್ಲಿ ಮಹಿಳೆಯರು ಪ್ರತಿಯೊಂದು ಹೋರಾಟ, ತ್ಯಾಗ, ಬಲಿದಾನ, ಆಡಳಿತದಲ್ಲಿ ತಮ್ಮ ಕೊಡುಗೆಯನ್ನು ನೀಡಿದ್ದಾರೆ. ಆದರೆ ಹೆಚ್ಚಾಗಿ ಪುರುಷರಿಂದಲೇ ರಚಿಸಲ್ಪಟ್ಟ ಚರಿತ್ರೆಯ ಪುಟಗಳಲ್ಲಿ ಮಹಿಳೆಯರು ನೇಪಥ್ಯಕ್ಕೆ ತಳ್ಳಲ್ಪಟ್ಟಿದ್ದಾರೆ. ಏಕೆಂದರೆ ಇತಿಹಾಸಕ್ಕೆ ರಾಷ್ಟ್ರದ ಪ್ರಮುಖ ಘಟನೆಗಳೇ ಮುಖ್ಯವೆನಿಸಿತ್ತದೆ. ಅದರ ಹಿಂದಿರುವ ನಿಸ್ವಾರ್ಥ ಸೇವೆ, ಪುರುಷರಿಗೆ ಸ್ಫೂರ್ತಿದಾಯಕವಾಗಿ ತಮ್ಮ ಸುಖವನ್ನು ತ್ಯಜಿಸಿದ ಮಹಿಳೆಯರ ತ್ಯಾಗವು ಚರಿತ್ರೆಗೆ ಅಪ್ರಮುಖ ವಿಷಯವೆನಿಸಿದೆ.

ಆದರೆ ಕಾದಂಬರಿಯು ಇತಿಹಾಸವು ತೆರೆಮರೆಗೆ ಸರಿಸಿದ ನಮ್ಮ ಮಹಿಳೆಯರ ಸಾಹಸ, ತ್ಯಾಗ, ಬಲಿದಾನ, ದಿಟ್ಟತನ, ಕಷ್ಟ ಸಹಿಷ್ಣುತಾ ಗುಣದತ್ತ ಬೆಳಕು ಚೆಲ್ಲಿದೆ. ಲಜಪತ ರಾಯರ ಕೊಲೆಗೆ ಪ್ರತೀಕಾರವಾಗಿ ಭಗತ್‌ಸಿಂಗ್ ಬ್ರಿಟಿಷ್ ಪೊಲೀಸ್ ಅಧಿಕಾರಿ ಸ್ಯಾಂಡರ್ಸ್‌ನ್ನು ಹತ್ಯೆ ಮಾಡಿದ್ದು ಎಲ್ಲರಿಗೂ ಹೊತ್ತಿರುವ ಸಂಗತಿ. ಆದರೆ ಆ ಭಗತ್‌ಸಿಂಗ್ ತಪ್ಪಿಸಿಕೊಳ್ಳಲು ಆತನ

ಜೊತೆಯಲ್ಲಿ ಅವನ ಪತ್ನಿಯಂತೆ ನಟಿಸಿ ಸಹಕರಿದವಳು ಹೋರಾಟಗಾರ ಭಗವತಿ ಚರಣರ ಪತ್ನಿ ದುರ್ಗಾದೇವಿ. ಅವರಿಬ್ಬರೂ ಶ್ರೀಮಂತ ದಂಪತಿಗಳಂತೆ ನಡೆಸಿ ಪೊಲೀಸರ ಎದರೇ ರೈಲುಬಂಡಿಯಲ್ಲಿ ಲಕ್ನೋಗೆ ಹೊರಟು ಹೋಗುತ್ತಾರೆ. ದುರ್ಗಾ ದೇವಿಯ ಮೂರು ವರ್ಷದ ಮಗು ಶಚಿ ಜೊತೆಯಲ್ಲಿದ್ದ ಕಾರಣ ಈ ದಂಪತಿಗಳ ಕುರಿತು ಪೊಲೀಸರಿಗೆ ಸಂಶಯ ಬರುವುದಿಲ್ಲ.

ಲಜಪತ ರಾಯರ ಕೊಲೆಗೆ ಪ್ರತಿಕಾರ ತೀರಿಸಲು ಕ್ರಾಂತಿಕಾರಿಗಳಿಗೆ ಪ್ರೇರಣೆ ನೀಡಿದವಳು ಒಬ್ಬಳು ಮಹಿಳೆಯೇ ಆಗಿದ್ದಾಳೆ. ಅವಳೇ ಬಾಸಂತಿದೇವಿ ಚಿತ್ತರಂಜನ ದಾಸ್. ಅವಳು ದೇಶದ ಯುವಜನರಿಗೆ ಒಂದು ಪತ್ರವನ್ನು ಕಳುಹಿಸುತ್ತಾಳೆ. ಅ ಪತ್ರದ ಒಕ್ಕಣೆ ಹೀಗಿತ್ತು–"ನಾನು ಲಜ್ಜೆ ಮತ್ತು ಅಪಮಾನದಿಂದ ತಲ್ಲಣಿಸಿ ಹೋಗಿದ್ದೇನೆ... ದೇಶದಲ್ಲಿ ಇನ್ನೂ ಯೌವನ ಮತ್ತು ಗಂಡಸುತನ ಇದ್ದವರು ಇದ್ದಾರೆಯೇ? ಇದಕ್ಕೆ ಸ್ಪಷ್ಟ ಉತ್ತರವನ್ನು ಈ ನಾಡಿನ ನಾರಿಯೊಬ್ಬಳು ಕೇಳುತ್ತಿದ್ದಾಳೆ! ಬಾಸಂತಿದೇವಿ ಚಿತ್ತರಂಜನದಾಸ್"[೮] ಇವಳ ಈ ಬೇಡಿಕೆಯೇ ಭಗತ್‌ಸಿಂಗ್ ಸ್ಯಾಂಡರ್ಸನನ್ನು ಹತ್ಯೆ ಮಾಡುವುದಕ್ಕೆ ಸ್ಫೂರ್ತಿಯನ್ನು ನೀಡುತ್ತದೆ. 'ವಂದೇ ಮಾತರಂ ಬಸಕ್ಕ ಕೆಂಪಿ, ಕ್ಯಾಪ್ಟನ್ ಲಕ್ಷ್ಮಿ, ಮರಣಶಯ್ಯೆಯಲ್ಲಿದ್ದರೂ ತನ್ನ ಮಗಳು ಜೈಲಿನಿಂದ ಕ್ಷಮೆ ಕೇಳಿ ಬಂದರೆ ಗಾಂಧಿ ಮಹಾತ್ಮ ಏನನ್ನಬಹುದು? ತನ್ನ ಮಗಳಿಗೆ ಕೆಟ್ಟ ಹೆಸರು ಬರಬಹುದೆಂದು ಯೋಚಿಸುವ ಬಸಕ್ಕಳ ಮುದುಕಿ ತಾಯಿ ಇವರೆಲ್ಲರ ಪಾತ್ರ ಕೂಡಾ ಕಾದಂಬರಿಯಲ್ಲಿ ಮುಖ್ಯವೆನಿಸುತ್ತದೆ. ಇಂತಹ ಸಾಮಾನ್ಯ ಮಹಿಳೆಯರ ಅಸಾಮಾನ್ಯ ತ್ಯಾಗದತ್ತ ಕಾದಂಬರಿ ಬೆಳಕು ಚೆಲ್ಲುತ್ತದೆ.

ಅಂಕೋಲಾ, ಸಿದ್ಧಾಪುರ, ಶಿರಸಿಯ ಕರನಿರಾಕರಣೆ ಚಳುವಳಿಯಲ್ಲಿ ಪ್ರಮುಖ ಪಾತ್ರ ವಹಿಸಿದವರು ಮಹಿಳೆಯರು. ಇವರು ಹರಾಜಿನಲ್ಲಿ ಕರನಿರಾಕರಿಸಿದವರ ತೋಟ, ದನಕರುಗಳನ್ನು ಕೊಂಡವರ ಮನೆಮುಂದೆ ಉಪವಾಸ ಸತ್ಯಾಗ್ರಹವನ್ನು ಮಾಡಿ ಅವರ ಮನ ಪರಿವರ್ತಿಸುವಲ್ಲಿ ಯಶಸ್ವಿಯಾಗಿದ್ದಾರೆ. 'ಮಾಡಿ ಮಡಿದವರು' ಕಾದಂಬರಿಯ ಹೇಮಾ, 'ಹೆಜ್ಜೆ' ಕಾದಂಬರಿಯ ಸಾವಿತ್ರಿ ಇವರಿಬ್ಬರದ್ದೂ ಅಸಾಧಾರಣವಾದ ತ್ಯಾಗ ಹಾಗೂ ದಿಟ್ಟತನ. ತಮ್ಮ ಸ್ವಂತ ಸುಖವನ್ನು ಬದಿಗಿಟ್ಟು ಹೋರಾಟದ ಭಾಗವಾಗುತ್ತಾರೆ. ಸಾವಿತ್ರಿಯಂತೂ ಭೂಗತ ಹೋರಾಟಗಾರರಿಗೆ ತನ್ನ ಮನೆಯಲ್ಲಿ ಆಶ್ರಯವನ್ನು ನೀಡುತ್ತಾಳೆ.

ಹೆಣ್ಣುಮಕ್ಕಳು ಸ್ವಾತಂತ್ರ್ಯದಂತಹ ಒಂದು ಮಹಾ ಹೋರಾಟದಲ್ಲಿ ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಹೇಗೆ ಸಹಕರಿಸಿದರೆಂಬ ಚಿತ್ರಣವನ್ನು ಕಾದಂಬರಿ ನೀಡುತ್ತದೆ. ಇತಿಹಾಸದ ಕಣ್ಣಿಗೆ ಗೋಚರಿಸದ ಹೆಣ್ಣುಮಕ್ಕಳು ತೋರಿದ ಅಸಾಧಾರಣವಾದ ತ್ಯಾಗ, ಹೋರಾಟದ ಮಜಲುಗಳನ್ನು ಕಾದಂಬರಿ ಕಟ್ಟಿಕೊಡುತ್ತದೆ. ಕೇವಲ ಪುರುಷನ ಹೋರಾಟದ ಕಥನವಾಗಿದ್ದ ಚಳುವಳಿಯಲ್ಲಿ ಶಾಲಾ ವಿದ್ಯಾರ್ಥಿನಿಯರಿಂದ ಹಿಡಿದು, ಹಳ್ಳಿಗಾಡಿನ ಗೃಹಿಣಿಯರವರೆಗೆ, ಕಟ್ಟಿಗೆ ಹೊತ್ತೊಯ್ಯುವ ಲಂಬಾಣಿ ಹೆಣ್ಣುಮಕ್ಕಳವರೆಗೆ ವ್ಯಾಪಿಸಿದ ಬಗೆಯನ್ನು ಕಾದಂಬರಿ ತಿಳಿಸುತ್ತದೆ.

ರಾಣಿ ಗೈದಿನ್‌ಲ್ಯೂ ಎಂಬ ಗುಡ್ಡಗಾಡಿನ ಒಬ್ಬ ಹೆಣ್ಣುಮಗಳು ಬ್ರಿಟಿಷರಿಗೆ ಸಿಂಹಸ್ವಪ್ನವಾಗಿ ಕಾಡಿದ್ದು ಚರಿತ್ರೆಯಲ್ಲಿ ಮಹತ್ವ ಪಡೆದ ಘಟನೆಯಲ್ಲ. ಆದರೆ ಕಾದಂಬರಿಯಲ್ಲಿ

ಆಕೆ ನಿಜವಾದ ಗುಡ್ಡಗಾಡು ಜನರ ಹೋರಾಟದ ನಾಯಕಿ. ಬ್ರಿಟಿಷರ ನಿದ್ದೆಗೆಡಿಸಿದ ಹೋರಾಟಗಾರ್ತಿ. ಹೀಗೆ ಚರಿತ್ರೆ ಮರೆತ 'ಅವಳ' ಸಾಧನೆಯನ್ನು ಮರುನಿರ್ಮಾಣ ಮಾಡುವಲ್ಲಿ, ಹೆಣ್ಣುಮಕ್ಕಳ ತ್ಯಾಗಕ್ಕೊಂದು ಬೆಲೆ ನೀಡುವಲ್ಲಿ ಕಾದಂಬರಿಯು ಯಶಸ್ವಿಯಾಗಿದೆ.

## ಇಲ್ಲದವರ/ಜನಸಾಮಾನ್ಯರ ಚರಿತ್ರೆಯಾಗಿ ಕಾದಂಬರಿ

ಕನ್ನಡದಲ್ಲಿ ಸ್ವಾತಂತ್ರ್ಯ ಚಳುವಳಿಗೆ ಸಂಬಂಧಿಸಿದಂತೆ ಬಂದಿರುವ ಬಹುತೇಕ ಕಾದಂಬರಿಗಳನ್ನು ಗಮನಿಸಿದರೆ ಅದು ಜನಸಾಮಾನ್ಯರ ಚರಿತ್ರೆಯಾಗಿದೆ ಎನ್ನುವುದು ಸ್ಪಷ್ಟವಾಗುತ್ತದೆ. ಸಾಮಾನ್ಯವಾಗಿ ಭಾವಿಸಿರುವಂತೆ ಕೇವಲ ಕೆಲವು ಮಂದಿಯಿಂದ ನಮ್ಮ ದೇಶಕ್ಕೆ ಸ್ವಾತಂತ್ರ್ಯ ಲಭ್ಯವಾಗಲಿಲ್ಲ. ದೇಶದ ಸ್ವಾತಂತ್ರ್ಯ ಹೋರಾಟದಲ್ಲಿ ಜನಸಾಮಾನ್ಯರು, ಅನಕ್ಷರಸ್ಥರು, ರೈತರು, ಕೂಲಿಕಾರ್ಮಿಕರೂ ಭಾಗವಹಿಸಿದ್ದರು. ಇವರ ಪ್ರತಿಕ್ರಿಯೆ ಹೇಗಿತ್ತು? ಈ ಸಾಮಾನ್ಯ ಜನರು ಗಾಂಧೀಜಿಯ ಕರೆಗೆ ಸಕಾರಾತ್ಮಕವಾಗಿ ಸ್ಪಂಧಿಸಿದರೆ? ಅಥವಾ ನಿರ್ಲಿಪ್ತರಾಗಿದ್ದರೇ? ಬ್ರಿಟಿಷ್ ಆಡಳಿತದ ಕುರಿತು ಜನಸಾಮಾನ್ಯರ ಅಭಿಪ್ರಾಯೇನು? ರಾಷ್ಟ್ರ ರಾಜಕೀಯದ ಅರಿವು ಅವರಿಗೆ ಇತ್ತೇ? ಈ ಎಲ್ಲಾ ಪ್ರಶ್ನೆಗಳಿಗೆ ನಾವು ಉತ್ತರವನ್ನು ಹುಡುಕುತ್ತಾ ಚರಿತ್ರೆಯ ಪುಟಗಳನ್ನು ತಿರುವಿದರೆ ಖಂಡಿತವಾಗಿಯೂ ನಾವು ನಿರಾಶರಾಗಲೇಬೇಕು. ಆದರೆ ಈ ಎಲ್ಲಾ ಪ್ರಶ್ನೆಗಳಿಗೆ ಸಮರ್ಪಕವಾದ ಉತ್ತರವನ್ನು ಕಾದಂಬರಿಗಳು ನೀಡಿವೆ. ಜನಸಾಮಾನ್ಯರ ಹೋರಾಟದ, ನಿಸ್ವಾರ್ಥ ಬಲಿದಾನದ, ತ್ಯಾಗದ ಎಳೆ ಎಳೆಯನ್ನು ಬಿಡಿಸುವ ಪ್ರಯತ್ನವನ್ನು ನಾವು ಕಾದಂಬರಿಗಳಲ್ಲಿ ಕಾಣುತ್ತೇವೆ.

ಸಾಮಾನ್ಯ ರೈತನಾದ ಶೇಖರಪ್ಪ ಬೆಳಗಾವಿಯಲ್ಲಿ ೧೯೪೨ರ ಚಳುವಳಿಯ ಮುಂದಾಳತ್ವವನ್ನು ವಹಿಸುತ್ತಾನೆ. ಮುಳುಗಿದೂರಿನ ಕೊಟ್ರಪ್ಪ, ಮಲಿಯಜ್ಜ, ಖಾದರ್ ಮುಂತಾದ ಬಡಜನರು ಕೂಡ ಹೋರಾಟದಲ್ಲಿ ಭಾಗವಹಿಸಿ ಜೈಲುಪಾಲಾಗುವ ಚಿತ್ರಣವನ್ನು ಕಾದಂಬರಿಗಳು ನೀಡುತ್ತವೆ. ಈಸೂರಿನ ಜನರು ಪ್ರತಿ ಸರಕಾರದಂತಹ ಸ್ವತಂತ್ರ ಸರಕಾರವನ್ನು ಸ್ಥಾಪಿಸಿ ಐದು ಮಂದಿ ಗಲ್ಲುಗಂಬವನ್ನೇರುತ್ತಾರೆ. ಇಂತಹ ಮಹಾನ್ ವಿಚಾರಗಳು ಇತಿಹಾಸದಲ್ಲಿ ಎಲ್ಲೋ ಒಂದು ಕಡೆ ಮಿಂಚಿ ಮರೆಯಾಗಿವೆ. ಆದರೆ ಕಾದಂಬರಿಗಳ ಮೂಲಕ ಈ ವ್ಯಕ್ತಿಗಳ ತ್ಯಾಗ, ಬಲಿದಾಗಳು ಇಂದಿನ ಜನತೆಗೆ ತಿಳಿಯುವಂತಾಗಿದೆ. ಗಾಂಧೀಜಿಯ ಕರನಿರಾಕರಣೆ, ಅಸಹಕಾರ ಚಳುವಳಿಯನ್ನು ಯಶಸ್ವಿಗೊಳಿಸಿದವರೇ ಜನಸಾಮಾನ್ಯರು. ಕೆಲವೊಂದು ಮನೆಗಳಲ್ಲಿ ಎಲ್ಲಾ ಜನರು ಜೈಲು ಪಾಲಾದ ಉದಾಹರಣೆಗಳಿವೆ. ಕಾರವಾರ ಜಿಲ್ಲೆಯಲ್ಲಿ ೧೮೬ ಕುಟುಂಬಗಳು ಕರನಿರಾಕರಣೆಯಲ್ಲಿ ಭಾಗವಹಿಸಿದುವು ಎಂಬ ವಿವರಣೆಯನ್ನು ಕಾದಂಬರಿಗಳು ನೀಡುತ್ತವೆ. ಆದರೆ ಜನಸಾಮಾನ್ಯರ ಹೋರಾಟವು ಚರಿತ್ರೆಯಲ್ಲಿ ಪಡೆದುಕೊಳ್ಳಬೇಕಾದಷ್ಟು ಮಹತ್ವವನ್ನು ಪಡೆದುಕೊಳ್ಳಲೇ ಇಲ್ಲ.

## ಭಾರತೀಯರ ಚಾರಿತ್ರಿಕ ಪ್ರಜ್ಞೆ

ವಸಾಹತುಶಾಹಿಯು ಆರ್ಥಿಕ, ಬೌದ್ಧಿಕ, ಸಾಂಸ್ಕೃತಿಕ ಮತ್ತು ಧಾರ್ಮಿಕ ರಂಗವನ್ನು ಮಾತ್ರವಲ್ಲದೇ ಜನಗಳ ಆಚಾರ ವಿಚಾರಗಳನ್ನೂ ಹಾಗೂ ಅವರ ಒಟ್ಟು ಅಸ್ತಿತ್ವವನ್ನೇ ಪಲ್ಲಟಗೊಳಿಸುತ್ತದೆ. ತನ್ನ ನಂಬಿಕೆ ಹಾಗೂ ತಾನು ಸತ್ಯವೆಂದು ತಿಳಿದ ತಿಳುವಳಿಕೆಯನ್ನು ಆಕ್ರಮಿತ ರಾಷ್ಟ್ರಕ್ಕೆ ವಿವಿಧ ಮಾಧ್ಯಮಗಳ ಮೂಲಕ ಹಂತ ಹಂತವಾಗಿ ರವಾನಿಸುವ ಪ್ರಯತ್ನವನ್ನು ಅದು ಮಾಡುತ್ತದೆ, ಆ ಪ್ರಯತ್ನದಲ್ಲಿ ಬಹುಪಾಲು ಯಶಸ್ವಿಯೂ ಆಗುತ್ತದೆ. ಇಂದು ನಾವು ಓದುತ್ತಿರುವ ಚರಿತ್ರೆಯೂ ಅಂತಹ ಒಂದು ವಸಾಹತು ಪ್ರಜ್ಞೆಯಿಂದಲೇ ರೂಪುಗೊಂಡದ್ದು. ಆದುದರಿಂದಲೇ ಭಾರತೀಯ ಇತಿಹಾಸಕಾರರು ಬ್ರಿಟಿಷರು ತಿರುಚಿದ, ತಮ್ಮ ಅನುಕೂಲಕ್ಕೆ ತಕ್ಕಂತೆ ರಚಿಸಿದ ಚರಿತ್ರೆಯನ್ನೇ ಪುನರುಚ್ಚರಿಸಿದರು.

ಆಚರಣೆ, ಕಲ್ಪನೆ, ಪುರಾಣ, ಸಂಪ್ರದಾಯ, ಐತಿಹ್ಯದ ಮೂಲಕ ಬದುಕಿನ ಅರ್ಥವನ್ನು ಕಟ್ಟಿಕೊಂಡವರು ಭಾರತೀಯರು. ಜಾನಪದ ಪ್ರಕಾರಗಳು ಹಾಗೂ ಮೌಖಿಕ ಪರಂಪರೆಯು ಅವರಿಗೆ ತಮ್ಮ ಪೂರ್ವಜರ ಚರಿತ್ರೆಯನ್ನು, ಸಾಹಸವನ್ನು, ತ್ಯಾಗವನ್ನು ತಿಳಿಸುವ ಮಾಧ್ಯಮವಾಗಿದೆ. ಸ್ವಾತಂತ್ರ್ಯಹೋರಾಟದಂತಹ ಘಟನೆಗೆ ಬಂದಾಗ ಕೂಡಾ ಇಂತಹ ಹಲವಾರು ಜಾನಪದ ಪ್ರಕಾರಗಳು ನಮಗೆ ಲಭ್ಯವಾಗುತ್ತವೆ. ಕರ್ನಾಟಕದ ಮೈಲಾರ ಮಹಾದೇವಪ್ಪ, ಕಿತ್ತೂರು ರಾಣಿ ಚೆನ್ನಮ್ಮ, ಸಂಗೊಳ್ಳಿ ರಾಯಣ್ಣ, ಆಂಧ್ರದಲ್ಲಿ ಅಲ್ಲೂರಿ ಸೀತಾರಾಮ ಇವರ ಕುರಿತಾಗಿ ಹಲವಾರು ಜಾನಪದ ಕತೆಗಳು, ಕವನಗಳು ಹುಟ್ಟಿಕೊಂಡಿವೆ. "ಆಂಧ್ರದಲ್ಲಿ ಅಲ್ಲೂರಿ ಸೀತಾರಾಮರಾಜು ಮನೆಮಾತು. ಅವನ ಜೀವನ ಒಂದು ಅದ್ಭುತ ಸಾಹಸ ಜೀವನ. ಬಹುಶಃ ಗುಡ್ಡಗಾಡು ಜನರ ಹಕ್ಕು ರಕ್ಷಣೆಗಾಗಿ ಹೋರಾಡಿದ ಪ್ರಥಮ ಭಾರತೀಯ ಸೇನಾನಿ. ಅವನ ಬಗ್ಗೆ ಬೀದಿನಾಟಕ, ಬುರ್ರ ಕಥಾ, ಜಾನಪದ ಗೀತೆಗಳು ನೂರಾರು. ಅವನು ಬ್ರಿಟಿಷರ ಗುಂಡಿಗೆ ಆಹುತಿಯಾಗಿ ಒಂಭತ್ತು ವರ್ಷಗಳೆ ಆದವು. ಅವನು ಆಂಧ್ರರಿಗೆ ತ್ಯಾಗದ ಆದರ್ಶ... ಒಂದು ಮಹಾನ್ ಪ್ರತಿಮೆ..."[೯] ಈ ರೀತಿಯಾಗಿ ಸ್ವಾತಂತ್ರ್ಯ ಹೋರಾಟದಲ್ಲಿ ಕೂಡ ಇತಿಹಾಸವು ಕಡೆಗಣಿಸಿದ ಹಲವಾರು ಮಹನೀಯರು ಹುತಾತ್ಮರಾಗಿದ್ದಾರೆ. ಇತಿಹಾಸದ ಪುಟಗಳಲ್ಲಿ ಅವರ ಹೆಸರು ಇಲ್ಲದಿದ್ದರೂ ಜಾನಪದ ಮಾಧ್ಯಮಗಳ ಮೂಲಕ ಜನಮನದಲ್ಲಿ ಶಾಶ್ವತ ಸ್ಥಾನ ಮಾನವನ್ನು ಇವರು ಗಳಿಸಿದ್ದಾರೆ. ಆದರೆ ಕನಿಷ್ಠ ಭಾರತೀಯ ಇತಿಹಾಸಕಾರರು ಈ ಜಾನಪದ ಪ್ರಕಾರಗಳನ್ನು ಆಕರಗಳನ್ನಾಗಿ ಪರಿಗಣಿಸಬೇಕಿತ್ತು. ಆಗ ಇನ್ನಷ್ಟು ಸಾಮಾನ್ಯ ಜನರ ತ್ಯಾಗ ಬಲಿದಾನಗಳು ಬೆಳಕಿಗೆ ಬರುತ್ತಿದ್ದವು.

## ಚಾರಿತ್ರಿಕ ಘಟನೆಗಳನ್ನು ಪುನರ್‌ಪರಿಶೀಲಿಸುವ ಅಗತ್ಯ

ಸ್ವಾತಂತ್ರ್ಯ ಹೋರಾಟವನ್ನು ನಾವು ಸಾಮಾನ್ಯವಾಗಿ ೧೮೫೭ರಿಂದ ೧೯೪೭ರವರೆಗೆ ಪರಿಗಣಿಸುತ್ತೇವೆ. ಆದರೆ ೧೭೬೨ರಿಂದಲೇ ಬ್ರಿಟಿಷರ ವಿರುದ್ಧ ಹೋರಾಡಿದ ಸ್ವಾಭಿಮಾನವನ್ನು

ಮೆರೆದ, ಬ್ರಿಟಿಷರನ್ನು ಭಾರತದಿಂದ ಓಡಿಸುವ ಹಲವಾರು ಪ್ರಯತ್ನಗಳು ನಡೆದಿವೆ. ತಮಿಳುನಾಡಿನ ಪಾಂಚಾಲ ಕುರುಚಿಯ ದೊರೆ ವೀರಪಾಂಡ್ಯ ಕಟ್ಟಬೊಮ್ಮು, ಕೊಡಗಿನ ಕಲ್ಯಾಣಸ್ವಾಮಿ, ಮುಂತಾದವರು ಬ್ರಿಟಿಷರ ವಿರುದ್ಧ ಸಂಘಟಿತ ಹೋರಾಟವನ್ನು ನಡೆಸಿದ್ದಾರೆ. ಅದೇ ರೀತಿಯಾಗಿ ಗುಡ್ಡಗಾಡಿನ ಜನರು, ಹಳ್ಳಿಯ ಜನರು ಕೂಡಾ ಸ್ವಾತಂತ್ರ್ಯ ಚಳುವಳಿಯಲ್ಲಿ ಬಹಳಷ್ಟು ಪ್ರಮುಖ ಪಾತ್ರವನ್ನು ವಹಿಸಿದ್ದಾರೆ. ಸ್ವಾತಂತ್ರ್ಯ ಚಳುವಳಿಯಂತಹ ಒಂದು ರಾಷ್ಟ್ರೀಯ ಹೋರಾಟದಲ್ಲಿ ಇತಿಹಾಸ ಕಡೆಗಣಿಸಿದ ಘಟನೆಗಳನ್ನು ಮರುಪರಿಶೀಲಿಸುವ, ಕಡೆಗಣಿಸಲ್ಪಟ್ಟವರ ಹೋರಾಟಕ್ಕೂ ಮಹತ್ವವನ್ನು ನೀಡುವ ಅಗತ್ಯವಿದೆ.

## ಪ್ರಾದೇಶಿಕತೆ

ಚರಿತ್ರೆಯು ಕೆಲವು ಮುಖ್ಯ ಅಂಶಗಳು ಹಾಗೂ ಮುಖ್ಯ ಘಟನೆಗಳನ್ನು ಮಾತ್ರ ಚರ್ಚಿಸುತ್ತದೆ. ಆದರೆ ಸಾಹಿತ್ಯವು ಆಯಾ ಲೇಖಕರು ಒದಗಿಸಿದ ಪ್ರಾದೇಶಿಕ ಸೌರಭ ಹಾಗೂ ಕ್ರಾಂತಿಯ ಕಿಡಿಯ ಸವಿಸ್ತಾರವಾದ ವಿವರವನ್ನು ನಿಡುತ್ತದೆ. ಉದಾ: 'ಮಾಡಿ ಮಡಿದವರು' ಹಾಗೂ 'ಸ್ವಾತಂತ್ರ್ಯದೆಡೆಗೆ' ಕಾದಂಬರಿಯಲ್ಲಿ ಕಿತ್ತೂರಿನ ರಾಣಿ ಚೆನ್ನಮ್ಮಳ ಸಾಹಸವು ಸ್ವಾತಂತ್ರ್ಯ ಹೋರಾಟಗಾರರಿಗೆ ಸ್ಫೂರ್ತಿಯನ್ನು ನೀಡುತ್ತದೆ. ಊರಿನ ವೀರಭದ್ರ ದೇವಾಲಯ, ಹನುಮಂತ ದೇವಾಲಯ, ಹಂಪಿಯ ಜಾತ್ರೋತ್ಸವ ಇವೆಲ್ಲವೂ ಹೋರಾಟಗಾರರನ್ನು ಒಟ್ಟುಗೂಡಿಸುವ, ಕ್ರಾಂತಿಯ ಕುರಿತು ಚರ್ಚಿಸುವ ತಾಣಗಳಾಗಿ ಕಾದಂಬರಿಗಳಲ್ಲಿ ಮೂಡಿಬಂದಿವೆ. ಊರ ದೇವರ ಹೆಸರಿನಲ್ಲಿ ಹೋರಾಟಗಾರರು ಪ್ರಮಾಣಮಾಡಿದರೆ ಅವರು ಪ್ರಾಣ ಹೋದರೂ ಹಿಂದೆ ಸರಿಯುತ್ತಿರಲಿಲ್ಲ. ದೇಶದಲ್ಲಿ ಮುಸ್ಲಿಂ ಲೀಗ್ ಹಾಗೂ ಕಾಂಗ್ರೆಸ್ಸಿನ ನಡುವೆ ಭಿನ್ನಾಭಿಪ್ರಾಯ ಬಂದು ರಾಜಕೀಯ ಮುಖಂಡರ ನಡುವೆ ಬೆಂಕಿಯ ಹೊಗೆಯಾಡುತ್ತಿದ್ದರೂ ಕೂಡಾ ಹಳ್ಳಿಯಲ್ಲಿ ಹಿಂದು ಮುಸಲ್ಮಾನರು ಒಗ್ಗಟ್ಟಾಗಿದ್ದ ಚಿತ್ರಣವನ್ನು ಕಾದಂಬರಿಗಳು ನೀಡುತ್ತದೆ.

ಹೀಗೆ ದಕ್ಷಿಣ ಭಾರತದ ಅದರಲ್ಲೂ ಕರ್ನಾಟಕದ ಸಮಗ್ರ ವಿವರವನ್ನು ಕನ್ನಡ ಕಾದಂಬರಿಗಳು ಇಡಿಯಾಗಿ ಅಥವಾ ಬಿಡಿಯಾಗಿ ಕಟ್ಟಿಕೊಟ್ಟಿವೆ. ಕರ್ನಾಟಕದ ವಿವಿಧ ಊರುಗಳು ಹೋರಾಟಕ್ಕೆ ನೀಡಿದ ಕೊಡುಗೆ, ಆ ಊರಿನ ಒಗ್ಗಟ್ಟು, ಕೆಲವೊಬ್ಬರು ದೇಶದ್ರೋಹಿಗಳ ಚಿತ್ರಣ, ಹೊತ್ತಿ ಉರಿಯುತ್ತಿದ್ದ ಹೋರಾಟ ಕೂಡಾ ವಿಫಲವಾಗಲು ಕಾರಣವಾಗುವ ಅಂಶಗಳು, ಗಾಂಧೀಜಿಯ ವಿಧಾಯಕ ಕಾರ್ಯಕ್ರಮಗಳಿಗೆ ಕರ್ನಾಟಕದ ವಿವಿಧ ಪ್ರದೇಶಗಳು ಸ್ಪಂದಿಸಿದ ರೀತಿ ಮುಂತಾದ ಹಲವಾರು ಪ್ರಾದೇಶಿಕ ವಿವರಗಳನ್ನು ನಾವು ಕನ್ನಡ ಕಾದಂಬರಿಗಳ ಮೂಲಕ ವಿವರವಾಗಿ ತಿಳಿದುಕೊಳ್ಳಲು ಸಾಧ್ಯ. ಸ್ವಾತಂತ್ರ್ಯ ಹೋರಾಟದ ನೈಜ ಚಿತ್ರಣವನ್ನು ಕನ್ನಡ ಕಾದಂಬರಿಗಳು ನೀಡುತ್ತವೆ.

ದೇಸೀ ಚಿಂತನ ಕ್ರಮದ ನೆಲೆಯಲ್ಲಿಯೂ ಕನ್ನಡ ಕಾದಂಬರಿಗಳು ಪ್ರಾಮುಖ್ಯತೆಯನ್ನು ಪಡೆದುಕೊಂಡಿವೆ. ಆಯಾ ಪ್ರಾದೇಶಿಕ ಭಾಷೆಯ ಸೊಗಡಿನಲ್ಲಿ ಹೋರಾಟದ ಒಂದು ಕತೆಯನ್ನು ಕಟ್ಟಕೊಡುವ ಪ್ರಯತ್ನವನ್ನು ಈ ಕಾದಂಬರಿಗಳೆಲ್ಲವೂ ಮಾಡಿವೆ. ಹೋರಾಟದ

ಕತೆಯ ಜೊತೆಜೊತೆಯಲ್ಲಿ ಉತ್ತರ ಕರ್ನಾಟಕ ಹಾಗೂ ದಕ್ಷಿಣ ಕರ್ನಾಟಕದ ಪ್ರಾದೇಶಿಕ ಪರಿಚಯ, ಅಲ್ಲಿಯ ಸಂಸ್ಕೃತಿಯ ಪರಿಚಯ, ಜನರ ಮನೋಭಾವ ಇವೆಲ್ಲವನ್ನೂ ನಾವು ಕಾದಂಬರಿಗಳಿಂದ ತಿಳದುಕೊಳ್ಳಬಹುದು.

*****

# ಟಿಪ್ಪಣಿಗಳು

---

[೧] ಮತ್ತೂರು ಕೃಷ್ಣಮುರ್ತಿ, ವೀರಪಾಂಡ್ಯ ಕಟ್ಟಬೊಮ್ಮು .ಪು.ಸಂ ೩

[೨] ಅದೇ, ಪು. ೩

[೩] ಅದೇ, ಪು. ೫

[೪] ಅದೇ, ಪು.೪೪

[೫] ನಿರಂಜನ, ಕಲ್ಯಾಣಸ್ವಾಮಿ, [ಗೋವಿಂದ ಪೈಯವರಯ ನಿರಂಜನರಿಗೆ ಬರೆದ ಪತ್ರದಿಂದ]

[೬] ಅದೇ, ಪು. ೧೯೨

[೭] ಅಮರ ಸುಳ್ಯದ ಸ್ವಾತಂತ್ರ್ಯ ಸಮರ [ಕಾಟನ್ ರಿಪೋರ್ಟ್ ಮೇಲೆ ಕಬ್ಬನ್‌ನ ಟಿಪ್ಪಣಿ]

[೮] ಕೋ. ಚೆನ್ನಬಸಪ್ಪ, ಬೇಡಿ ಕಳಚಿತು ದೇಶ ಒಡೆಯಿತು, ಪು. ೨೦೫

[೯] ಅದೇ, ಪು. ೨೦೫

# ಅಧ್ಯಾಯ – ೯

# ಸಮಾರೋಪ

ಸ್ವಾತಂತ್ರ್ಯ ಚಳುವಳಿಗೆ ಸಂಬಂಧಿಸಿದಂತೆ ಕನ್ನಡದಲ್ಲಿ ಉಪಲಬ್ಧವಿರುವ ಸುಮಾರು ೩೦ ಕಾದಂಬರಿಗಳನ್ನು ಪ್ರಸ್ತುತ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಅವುಗಳು ಕೇವಲ ಕಾಲ್ಪನಿಕ ಕಥನವಾಗದೆ ಲೇಖಕರು ನೋಡಿದ, ಅನುಭವಿಸಿದ ಅನುಭವ ಕಥನವಾಗಿದೆ. ಈ ಕಾದಂಬರಿಗಳು ಸ್ವಾತಂತ್ರ್ಯ ಚಳುವಳಿಗೆ ಸಂಬಂಧಿಸಿದಂತೆ ನೀಡುವ ಅತೀ ಸೂಕ್ಷ್ಮ ವಿವರಗಳನ್ನು ಕೂಡ ಈ ಪ್ರಬಂಧದಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಈ ಅಧ್ಯಯನದ ಮೂಲಕ ಕನ್ನಡ ಸಾರಸ್ವತ ಲೋಕವು ಕ್ರಿಯಾಶೀಲವಾಗಿ ಸ್ವಾತಂತ್ರ್ಯ ಚಳುವಳಿಯನ್ನು ಹೇಗೆ ಗ್ರಹಿಸಿದೆ ಎನ್ನುವ ವಿವರಣೆಯನ್ನು ನೀಡಲಾಗಿದೆ. ನಮ್ಮ ಪಠ್ಯಪುಸ್ತಕಗಳಲ್ಲಿ ಮತ್ತು ಜನಪ್ರಿಯ ಇತಿಹಾಸ ಗ್ರಂಥಗಳಲ್ಲಿ ಇತಿಹಾಸ ಎನ್ನುವುದು ಉತ್ತರ ಭಾರತಕ್ಕೆ ಸೀಮಿತವಾದುದು ಎನ್ನುವ ಹಾಗೆ ನಿರೂಪಿಸಲಾಗಿದೆ.

ಸ್ವಾತಂತ್ರ್ಯ ಚಳುವಳಿಗೆ ಸಂಬಂಧಿಸಿದಂತೆ ಹೇಳುವುದಾದರೆ ೧೮೫೭ರ ಸಿಪಾಯಿ ದಂಗೆ ಎಂದು ಕರೆಯಲಾಗುವ ಹೋರಾಟವನ್ನು ಪ್ರಥಮ ಸ್ವಾತಂತ್ರ್ಯ ಚಳುವಳಿ ಎಂದು ಕರೆಯಲಾಗುತ್ತದೆ. ಆದರೆ ಕನ್ನಡ ಕಾದಂಬರಿಗಳು ೧೮೦೨ರ ವೀರಪಾಂಡ್ಯ ಕಟ್ಟಬೊಮ್ಮುವಿನ ಹೋರಾಟ, ೧೮೩೭ರಲ್ಲಿ ಕಲ್ಯಾಣ ಸ್ವಾಮಿಯ ನೇತೃತ್ವದಲ್ಲಿ ನಡೆದ ಕೊಡಗಿನ ದಂಗೆ, ಮೊದಲಾದ ಘಟನೆಗಳನ್ನು ಸ್ವಾತಂತ್ರ್ಯ ಚಳುವಳಿಯ ರೂಪದಲ್ಲಿ ನಮ್ಮ ಮುಂದಿಡುತ್ತದೆ. ಕೆಲವೊಂದು ಇತಿಹಾಸ ಗ್ರಂಥಗಳಲ್ಲಿ ಇವುಗಳ ವಿವರಗಳು ಬಂದಿರುವುದೂ ಉಂಟು. ಆದರೆ ಕನ್ನಡ ಕಾದಂಬರಿಗಳಲ್ಲಿ ಮೂರ್ತರೂಪವನ್ನು ಪಡೆದ ಇಂತಹ ಘಟನೆಗಳ ಚಿತ್ರಣಗಳ ಮೂಲಕವೇ ಇತಿಹಾಸಕಾರರು ಅಂತಹ ಪ್ರಯತ್ನವನ್ನು ಮಾಡಿರುತ್ತಾರೆ. ನಿರಂಜನರ 'ಚಿರಸ್ಮರಣೆ' 'ಕಲ್ಯಾಣಸ್ವಾಮಿ' ಮೊದಲಾದ ಕಾದಂಬರಿಗಳಿಂದಲೇ ಇಂತಹ ಘಟನೆಗಳು ಇಂದು ಜನಮಾನಸದಲ್ಲಿ ಉಳಿದಿವೆಯಲ್ಲದೆ

ಇತಿಹಾಸದ ಬರವಣಿಗೆಗಳಿಂದ ಅಲ್ಲ. ಹೀಗೆ ಕನ್ನಡ ಕಾದಂಬರಿಗಳು ಸ್ವಾತಂತ್ರ್ಯ ಚಳುವಳಿಯಷ್ಟೇ ಐತಿಹಾಸಿಕವಾದ ಮಹತ್ವನ್ನು ಹೊಂದಿವೆ ಎನ್ನುವುದನ್ನು ಈವರೆಗೆ ಸಾಧಾರ ಪೂರ್ವಕವಾಗಿ ನಿರೂಪಿಸಲಾಗಿದೆ. ಈ ಹಿನ್ನೆಲೆಯಲ್ಲಿ ನಿಬಂಧದ ಪ್ರಮುಖ ಫಲಿತಗಳು ಹೀಗಿವೆ:

- ೧೭೯೨ರ ಹೊತ್ತಿಗೆ ದಕ್ಷಿಣ ಭಾರತದ ಪಾಂಚಾಲ ಕುರುಚಿಯ ರಾಜ ಬ್ರಿಟಿಷರ ವಿರುದ್ಧ ಹೋರಾಡುತ್ತಾನೆ. ದಕ್ಷಿಣ ಭಾರತದಲ್ಲಿ ಬ್ರಿಟಿಷರಿಂದ 'ರಾಜದ್ರೋಹಿ' ಎಂಬುದಾಗಿ ಬಿಂಬಿಸಲ್ಪಟ್ಟು ಗಲ್ಲುಗಂಬವನ್ನೇರಿದ ಮೊದಲ ರಾಜ ಇವನು.
- ೧೮೩೭ರಲ್ಲಿ ಕೊಡಗಿನ ರಾಜ ಚಿಕವೀರ ರಾಜನನ್ನು ಮತ್ತೆ ಸಿಂಹಾಸನದೊಳಗೆ ಪ್ರತಿಷ್ಠಾಪಿಸಲು ಪ್ರಯತ್ನಗಳು ನಡೆಯುತ್ತವೆ. ಕಲ್ಯಾಣಸ್ವಾಮಿಯ ನೇತೃತ್ವದಲ್ಲಿ ವ್ಯವಸ್ಥಿತವಾದ ದಂಡು ಕಾಲ್ನಡಿಗೆಯಲ್ಲಿ ಮಂಗಳೂರನ್ನು ತಲುಪಿ ಮಂಗಳೂರಿನಿಂದ ಬ್ರಿಟಿಷರನ್ನು ಓಡಿಸಿ ಹದಿಮೂರು ದಿನಗಳವರೆಗೆ ಮಂಗಳೂರನ್ನು ತನ್ನ ವಶದಲ್ಲಿಟ್ಟುಕೊಳ್ಳುತ್ತದೆ. ಬ್ರಿಟಿಷ್ ಇತಿಹಾಸಕಾರರು ವಿವರಿಸಿದಂತೆ ಇದೊಂದು 'ಕಾಟಕಾಯಿ' ಅಲ್ಲ. ಇದೊಂದು ವ್ಯವಸ್ಥಿತವಾದ ಬ್ರಿಟಿಷರ ವಿರುದ್ಧದ ಹೋರಾಟ. ಈ ಹೋರಾಟವನ್ನು ಹತ್ತಿಕ್ಕಲು ಸಹಕರಿಸಿದ 'ಬೋಪು ದಿವಾನ' ಹಾಗೂ ಮತ್ತಿತರರಿಗೆ ಬ್ರಿಟಿಷ್ ಸರಕಾರವು ಅಪಾರವಾದ ಬಹುಮಾನವನ್ನು ನೀಡುತ್ತದೆ. ಮೂರು ತಲೆಮಾರಿನವರೆಗೆ ಕಂದಾಯವನ್ನು ಮಾಫಿ ಮಾಡಿದ ದಾಖಲೆಗಳಿವೆ. ಆದುದರಿಂದ ಇದೊಂದು ಕಾಟಕಾಯಿ ಅಲ್ಲ ಎಂಬುದು ಸ್ಪಷ್ಟ.
- ನಿಜವಾದ ಅರ್ಥದಲ್ಲಿ ಸ್ವಾತಂತ್ರ್ಯ ಚಳುವಳಿಯೊಂದು ಜನಸಾಮಾನ್ಯರ ಹೋರಾಟ. ಗಾಂಧೀಜಿಯ ಮಾತಿಗೆ ಕರ್ನಾಟಕದ ಜನತೆ ಅದ್ಭುತವಾಗಿ ಪ್ರತಿಕ್ರಿಯಿಸಿದರು. ಉಪ್ಪಿನ ಸತ್ಯಾಗ್ರಹ, ಕರನಿರಾಕರಣೆ, ೧೯೪೨ರ ಚಳುವಳಿ ಈ ಎಲ್ಲಾ ಹೋರಾಟಗಳಲ್ಲಿ ಕೂಡ ಕರ್ನಾಟಕ ಪ್ರಮುಖ ಪಾತ್ರವನ್ನು ವಹಿಸಿವೆ. ಕರನಿರಾಕರಣೆ ಹಾಗೂ ಉಪ್ಪಿನ ಸತ್ಯಾಗ್ರಹದಲ್ಲಿ ಅಂಕೋಲಾ, ಶಿರಸಿ, ಹಿರೇಕೆರೂರು, ಸಿದ್ಧಾಪುರ, ನಾಗನಹಳ್ಳಿಯಂತಹ ಒಂದು ಚಿಕ್ಕ ಹಳ್ಳಿ ಹೋರಾಟದಿಂದ ಹಿಂದೆ ಉಳಿಯಲಿಲ್ಲ, ರೈತರು, ಕೂಲಿಕಾರ್ಮಿಕರು, ಸಾಮಾನ್ಯರಲ್ಲಿ ಅತೀ ಸಾಮಾನ್ಯರೆನಿಸಿಕೊಂಡವರೂ ಈ ಹೋರಾಟದಲ್ಲಿ ಭಾಗವಹಿಸಿ ತಮ್ಮ ಸರ್ವಸ್ವವನ್ನು ಕಳೆದುಕೊಂಡ ವಿವರಗಳನ್ನು ಕಾದಂಬರಿಗಳು ನೀಡುತ್ತವೆ.
- ೧೯೪೨ರ ಹೋರಾಟದಲ್ಲಿ 'ಈಸೂರು' ಎಂಬ ಚಿಕ್ಕ ಗ್ರಾಮ ಪ್ರಮುಖ ಪಾತ್ರ ವಹಿಸುತ್ತದೆ. ಈ ಹೋರಾಟದಲ್ಲಿ ಈಸೂರಿನ ಐದು ಮಂದಿ ಗಲ್ಲುಗಂಬವನ್ನೇರುತ್ತಾರೆ.
- ಹೋರಾಟದಲ್ಲಿ ಮಹಿಳೆಯರ ಪಾತ್ರ ಅತ್ಯಂತ ಪ್ರಮುಖವಾದುದು. ಗಾಂಧೀಜಿಯ ಮಾತಿಗೆ ಸಕಾರಾತ್ಮಕವಾಗಿ ಸ್ಪಂದಿಸಿದವರು ಮಹಿಳೆಯರು. ಅವರು ಈ ಹೋರಾಟದ ಕಾವನ್ನು ತೀವ್ರಗೊಳಿಸಿದರು. ಸಮಾಜದ ಮುಖ್ಯ ವಾಹಿನಿಯಲ್ಲಿ ಇರುವ ಮಹಿಳೆಯರು ಮಾತ್ರವಲ್ಲದೆ ದೇವದಾಸಿಯಾಗಿದ್ದ ಬಸಕ್ಕ, ದಲಿತಳಾಗಿದ್ದ ಕೆಂಪಿ. ದುರುಗಮ್ಮ ಮುಂತಾದ ಮಹಿಳೆಯರು ಹೋರಾಟದಲ್ಲಿ ಭಾಗವಹಿಸಿ ಜೈಲು ಸೇರಿದ್ದರು. ಲಂಬಾಣಿ ಹೆಣ್ಣುಮಕ್ಕಳು, ಗುಡ್ಡ ಗಾಡಿನ ಹೆಣ್ಣು ಮಕ್ಕಳು ಹೋರಾಟಕ್ಕೆ ಒಂದಲ್ಲ ಒಂದು ರೀತಿಯಲ್ಲಿ ಸಹಾಯ ಮಾಡಿದ್ದಾರೆ. ಸಶಸ್ತ್ರ

ಹೋರಾಟದಲ್ಲಿ ಮಹಿಳೆಯರ ಪಾತ್ರ ಗಣನೀಯವಾದದು. ಹಲವು ಮಹಿಳೆಯರು ಈ ಸ್ವಾತಂತ್ರ್ಯ ಹೋರಾಟದಲ್ಲಿ ಶಸ್ತ್ರಧಾರಿಗಳಾಗಿ ಭಾಗವಹಿಸಿ ಬ್ರಿಟಿಷರಿಗೆ ಸಿಂಹಸ್ವಪ್ನವಾಗಿ ಕಾಡಿದ ಉದಾಹರಣೆಗಳನ್ನು ಕಾದಂಬರಿಗಳು ನೀಡುತ್ತವೆ.

- ಸ್ವಾತಂತ್ರ್ಯ ಹೋರಾಟದಲ್ಲಿ ಹಲವಾರು ಮಂದಿ ಮುಸ್ಲಿಮರು ಹೋರಾಡಿದ್ದಾರೆ, ಹುತಾತ್ಮರಾಗಿದ್ದಾರೆ. ಕಾಕೋರಿ ಪಿತೂರಿ ಎಂದೇ ಖ್ಯಾತವಾಗಿ ಬ್ರಿಟಿಷರ ಎದೆಗುಂಡಿಗೆಯನ್ನು ನಡುಗಿಸಿದ ಚಲಿಸುವ ರೈಲಿನಂದ ಬ್ರಿಟಿಷ್ ಟ್ರೆಜರಿಯನ್ನು ಅಪಹರಿಸಿ ಗಲ್ಲುಗಂಬವನ್ನೇರಿದ ಹುತಾತ್ಮರಲ್ಲಿ ಅಷ್ಫಕ್ ಒಬ್ಬರು. ಕಯ್ಯೂರಿನ ರೈತರ ಹೋರಾಟದಲ್ಲಿ ಕಾಮ್ರೇಡ್ ಅಬುಬಕರ್ ನೇಣುಗಂಬವನ್ನು ಏರುತ್ತಾರೆ. ಖಾನ್‌ಅಬ್ದುಲ್‌ಗಫರ್‌ಖಾನ್ ಅವರು 'ಖುದಾಯಿ ಖಿದ್‌ಮದ್‌ಗಾರ್' ಎಂಬ ಒಂದು ಪಠಾಣರ ಸಂಸ್ಥೆಯನ್ನೇ ಸ್ವಾತಂತ್ರ್ಯ ಹೋರಾಟಕ್ಕೋಸ್ಕರ ಕಟ್ಟಿದ್ದರು. ಹಳ್ಳಿಯಲ್ಲಿರುವ ಸಾಮಾನ್ಯ ಮುಸ್ಲಿಮರು ಹಿಂದೂಗಳ ಜೊತೆ ಜೊತೆಯಲ್ಲಿ ಹೋರಾಟದಲ್ಲಿ ಭಾಗವಹಿಸಿದ ಚಿತ್ರಣವನ್ನು ಕಾದಂಬರಿಗಳು ನೀಡುತ್ತವೆ.
- ಸ್ವಾತಂತ್ರ್ಯ ಹೋರಾಟದ ಸಮಯದಲ್ಲಿ ಪೊಲೀಸ್ ದೌರ್ಜನ್ಯವಂತೂ ಮೇರೆ ಮೀರಿತ್ತು. ಹೆಣ್ಣುಮಕ್ಕಳ ಅತ್ಯಾಚಾರವೂ ನಡೆಯುತ್ತದೆ. ದೌರ್ಜನ್ಯದ ವಿವಿಧ ಮುಖಗಳನ್ನು ಕಾದಂಬರಿ ಚಿತ್ರಿಸುತ್ತದೆ. ಅಪರೂಪಕ್ಕೊಮ್ಮೊಮ್ಮೆ ಮಾನವೀಯತೆಯನ್ನು ಮೆರೆದ ಉದಾಹರಣೆಗಳೂ ಇವೆ. ಇಂದು ನಾವು ಕೇಳುತ್ತಿರುವ ಪೊಲೀಸ್ ದೌರ್ಜನ್ಯದ ಪಳೆಯುಳಿಕೆಯು ಬ್ರಿಟಿಷ್ ಸಾಮ್ರಾಜ್ಯಶಾಹಿಯ ಬಳುವಳಿಯಾಗಿದೆ.
- ಗಾಂಧೀಜಿಯ ಕುರಿತಾದ ವಿವಿಧ ಪರವಿರೋದ ನಿಲುವುಗಳನ್ನು ನಾವು ಕಾದಂಬರಿಯಲ್ಲಿ ಕಾಣುತ್ತೇವೆ. ಕಾಂಗ್ರೆಸ್ ಮುಖಂಡರಲ್ಲಿ ಅನೇಕರಿಗೆ ಗಾಂಧೀಜಿಯ ಕೆಲವೊಂದು ಧೋರಣೆಗಳು ಒಪ್ಪಿಗೆ ಆಗುತ್ತಿರಲಿಲ್ಲ. ಸಂಪ್ರದಾಯವಾದಿಗಳಾಗಿದ್ದ ಬ್ರಾಹ್ಮಣರು ಗಾಂಧೀಜಿ ತಮ್ಮ ಧರ್ಮವನ್ನು ಹಾಳು ಮಾಡಿದರೆಂದು ದೂರುತ್ತಿದ್ದರು. ಆದರೆ ಗಾಂಧೀಜಿಯವರನ್ನು ಮಹಿಳೆಯರು ಮಾತ್ರ ಯಾವುದೇ ಗೊಂದಲವಿಲ್ಲದೆ ಒಪಿಕೊಂಡಿದ್ದರು. ಕೆಲವರಂತೂ ಗಾಂಧೀಜಿ ಶ್ರೀಕೃಷ್ಣ ಪರಮಾತ್ಮನ ಅವತಾರವೆಂದೇ ತಿಳಿದಿದ್ದರು. ಹಿಂದು ಮಹಾಸಂಘಟನೆ, ಸಶಸ್ತ್ರ ಹೋರಾಟಗಾರರು, ಕಮ್ಯುನಿಸ್ಟ್ ಪಕ್ಷದವರು, ಮುಸ್ಲಿಮ್ ಲೀಗ್‌ನವರು ಗಾಂಧೀಜಿಯನ್ನು ವಿರೋಧಿಸುತ್ತಿದ್ದರು.
- ಸ್ವಾತಂತ್ರ್ಯ ಹೋರಾಟದ ಆ ಕಾಲಘಟ್ಟದಲ್ಲಿ ಸಮಾಜದಲ್ಲಾಗುವ ವಿವಿಧ ಪಲ್ಲಟಗಳ ಕುರಿತು ಕಾದಂಬರಿ ಬೆಳಕು ಚೆಲ್ಲುತ್ತದೆ. ವಿದ್ಯಾಭ್ಯಾಸದಲ್ಲಾದ ಪಲ್ಲಟ, ಆಲೋಚನಾ ಕ್ರಮದಲ್ಲಾದ ಪಲ್ಲಟ, ಒಂದು ಕಡೆಗೆ ನಡೆಯುತ್ತಿರುವ ಮತಾಂತರ, ಮತಾಂತರಕ್ಕೆ ಕಾರಣವಾದ ಅಂಶಗಳು, ಮತಾಂತರ ಮಾಡಲು ಪಾದ್ರಿಗಳು ಉಪಯೋಗಿಸುತ್ತಿದ್ದ ತಂತ್ರಗಳು, ಕ್ರೈಸ್ತ ಧರ್ಮದಲ್ಲಿ ಮತಾಂತರ ಹೊಂದಿದ ಹಿಂದುಗಳ ಸ್ಥಾನಮಾನ ಇವೆಲ್ಲ ವಿಚಾರಗಳನ್ನು ಕಾದಂಬರಿಗಳು ವಿಶ್ಲೇಷಿಸುತ್ತವೆ.

- ದೇಶ ವಿಭಜನೆಯ ವೇಳೆಗೆ ನಡೆದ ರಕ್ತಪಾತ, ಕೊಲೆ ಮೊದಲಾದ ವಿವರಗಳನ್ನು ಕನ್ನಡ ಕಾದಂಬರಿಗಳು ವಿವರವಾಗಿ ಚಿತ್ರಿಸಿವೆ.
- ಸ್ವಾತಂತ್ರ್ಯ ಹೋರಾಟದಲ್ಲಿ ಕರಪತ್ರಗಳ ಪಾತ್ರ ಮಹತ್ವದ್ದು. ಈ ಕರಪತ್ರಗಳು ಜನರನ್ನು ಬಡಿದೆಬ್ಬಿಸಿ ಹೋರಾಟಕ್ಕೆ ಅಣಿಗೊಳಿಸುವಲ್ಲಿ ಮಹತ್ವದ ಪಾತ್ರ ವಹಿಸುತ್ತವೆ.
- ಸ್ವಾತಂತ್ರ್ಯ ಹೋರಾಟದಲ್ಲಿ ಸಾಹಿತಿಗಳ ಪಾತ್ರ, ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಅವರ ಭಾಗವಹಿಸುವಿಕೆ; ಸ್ವಾತಂತ್ರ್ಯ ಚಳುವಳಿಗೆ ಸಾಹಿತ್ಯ ಕ್ಷೇತ್ರದ ಮೂಲಕ ಸಾಹಿತಿಗಳು ಸ್ಪಂದಿಸಿದ ಬಗೆಯನ್ನು ವಿಶ್ಲೇಷಣೆಗೊಳಪಡಿಸಲಾಗಿದೆ.
- ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಕನ್ನಡ ಕಾದಂಬರಿಗಳು ಪರ್ಯಾಯ ಚರಿತ್ರೆಯ ರೂಪದಲ್ಲಿ ಕೆಲಸ ಮಾಡಿವೆ. ಇವು ಪ್ರಾದೇಶಿಕ ಚರಿತ್ರೆಯನ್ನು ಕಟ್ಟಿಕೊಡುವಲ್ಲಿ ಮಹತ್ವದ ಪಾತ್ರವನ್ನು ವಹಿಸಿವೆಯೆಂಬುದನ್ನು ಈ ಅಧ್ಯಯನದ ಮೂಲಕ ಕಂಡುಕೊಳ್ಳಲಾಗಿದೆ.

ಹೀಗೆ ಈ ನಿಬಂಧದಲ್ಲಿ ಸ್ವಾತಂತ್ರ್ಯ ಚಳುವಳಿಯು ಕನ್ನಡ ಕಾದಂಬರಿಗಳಲ್ಲಿ ಮೂಡಿಬಂದ ಬಗೆಯನ್ನು ವಿವಿಧ ಆಯಾಮಗಳ ಮೂಲಕ ದೀರ್ಘವಾಗಿ ಇಲ್ಲಿಯವರೆಗೆ ಚರ್ಚಿಸಲಾಯಿತು. ಕಾದಂಬರಿಗಳನ್ನು ವಿಶ್ಲೇಷಣೆಗೊಳಪಡಿಸುವ ಸಂದರ್ಭದಲ್ಲಿ ಇತಿಹಾಸ ಮತ್ತು ಸಾಹಿತ್ಯಕೃತಿಗಿರುವ ಇರುವ ವ್ಯತ್ಯಾಸವನ್ನು ಗಮನದಲ್ಲಿ ಇರಿಸಿಕೊಳ್ಳಲಾಗಿದೆ. ಇತಿಹಾಸದಲ್ಲಿ ನೇಪಥ್ಯಕ್ಕೆ ಸರಿದ ಸತ್ಯಘಟನೆಗಳಿಗೆ ಕಾದಂಬರಿಯ ಮೂಲಕ ಮಹತ್ವ ಲಭಿಸಿದ ಬಗೆಯನ್ನು ಪ್ರಸ್ತುತ ಅಧ್ಯಯನದಲ್ಲಿ ಮುನ್ನೆಲೆಗೆ ತರಲಾಗಿದೆ.

*****

# ಅನುಬಂಧ – ೧

## ಪ್ರಾಥಮಿಕ ಆಕರಗಳು

### (ಪ್ರಕಟಿತ ವರ್ಷಗಳಿಗನುಸಾರವಾಗಿ)


೧೯೪೧ ಅಶ್ವಥನಾರಾಯಣ, **ಬಿಡುಗಡೆಯ ಬೆಲೆ** ಮನೋಹರ ಗ್ರಂಥ ಪ್ರಕಾಶನ ಸಮಿತಿ, ಧಾರವಾಡ

೧೯೪೨ ಅಣ್ಣರಾಯ ಮಿರ್ಜಿ, **ಪ್ರತಿಸರಕಾರ** ಲಲಿತ ಸಾಹಿತ್ಯಮಾಲೆ, ಧಾರವಾಡ

೧೯೪೬ ಕಟ್ಟೀಮನಿ ಬಸವರಾಜ, **ಸ್ವಾತಂತ್ರ್ಯದೆಡೆಗೆ** ಸಪ್ನ ಬುಕ್‌ಹೌಸ್, ಬೆಂಗಳೂರು

೧೯೪೬ ನಿರಂಜನ, **ಕಲ್ಯಾಣ ಸ್ವಾಮಿ** ಡಿ.ವಿ.ಕೆ ಮೂರ್ತಿ ಪ್ರಕಾಶನ, ಮೈಸೂರು

೧೯೪೬ ಸುಬ್ಬರಾವ್ [ತ.ರಾ.ಸು[ **ರಕ್ತತರ್ಪಣ** ಓಂಶಕ್ತಿ ಪ್ರಕಾಶನ, ಬೆಂಗಳೂರು

೧೯೪೬ ಇನಾಂದರ್ ವಿ.ಎಂ, **ಮೂರಾಬಟ್ಟೆ** ಗೀತಾಬುಕ್ ಹೌಸ್, ಮೈಸೂರು

೧೯೪೭ ಅಣ್ಣಾರಾಯ ಮಿರ್ಜಿ, **ರಾಷ್ಟ್ರ ಪುರುಷ** ಮನೋಹರ ಪ್ರಕಾಶನ, ಸಮಿತಿ, ಧಾರವಾಡ

೧೯೪೭ ಕಾರಂತ ಶಿವರಾಮ, **ಔದಾರ್ಯದ ಉರುಳಲ್ಲಿ** ಐಬಿಎಚ್ ಪ್ರಕಾಶನ, ಬೆಂಗಳೂರು

೧೯೪೭ ವಾಸುದೇವಾಚಾರ್ಯ ಬಾಗಲುಕೋಟೆ, **ಸೆರೆಮನೆಯ ಶೂರ** ಸಂ.ಬಿಂದು ಮಾಧವ ಬುರ್ಲಿ, ಧಾರವಾಡ

೧೯೪೭ ಶ್ರೀರಂಗ, **ಪುರುಷಾರ್ಥ** ಲಲಿತ ಸಾಹಿತ್ಯ ಮಾಲೆ, ಧಾರವಾಡ

೧೯೫೦ ಇನಾಂದರ್ ವಿ.ಎಂ, **ವಿಜಯ ಯಾತ್ರೆ** ಉಷಾಸಾಹಿತ್ಯ ಮಾಲೆ, ಮೈಸೂರು

೧೯೫೦ ಕೃಷ್ಣರಾಯ [ಅ.ನ.ಕೃ] **ಅಮರ ಆಗಸ್ಟ್** ಸಾಗರ ಪ್ರಕಾಶನ, ಬೆಂಗಳೂರು

೧೯೫೩ ಕೃಷ್ಣಮೂರ್ತಿ ಪುರಾಣಿಕ, **ಹಬ್ಬಿದ ಬಳ್ಳಿ** ಸಾಹಿತ್ಯ ಸೇವಾಮಂದಿರ, ಗೋಕಾಕ

೧೯೫೪ ವ್ಯಾಸರಾಯ ಬಲ್ಲಾಳ, **ಹೇಮಂತ ಗಾನ** ನವಕನಾಟಕ ಪ್ರಕಾಶನ

೧೯೫೫ ನಿರಂಜನ, **ಚಿರಸ್ಮರಣೆ** ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು

೧೯೫೮ ಆನಂದಕಂದ, **ಮಗಳ ಮದುವೆ** ಶರತ್ ಪ್ರಕಾಶನ ಮಂದಿರ, ಬೆಳಗಾವಿ

೧೯೫೮ ರಾಜಾರಾಮ್ ಮುಜಲೀಕರ, **ಶ್ರದ್ಧಾಂಜಲಿ** ಹೇಮಾವತಿ ಪ್ರಕಾಶನ ಸಕಲೇಶಪುರ

೧೯೬೧ ಕೃಷ್ಣಮೂರ್ತಿ ಮತ್ತೂರು, **ವೀರಪಾಂಡ್ಯ ಕಟ್ಟಬೊಮ್ಮ** ಜಗದೀಶ್ವರ ಪಬಿಕೇಶನ್ಸ್ ಬೆಂಗಳೂರು,

೧೯೬೬ ಭಟ್ಟ ಪ.ಸು **ಆತ್ಮಾರ್ಪಣೆ** ವಿಜಯಭಾರತಿ ಪ್ರಕಾಶನ, ಬೆಂಗಳೂರು

೧೯೬೭ ನಿರಂಜನ, **ಸ್ವಾಮಿ ಅಪರಾಂಪರ** ಡಿ.ವಿ.ಕೆ ಪ್ರಕಾಶನ, ಮೈಸೂರು

೧೯೭೪ ರಾವ್ ಬಹದ್ದೂರು, **ಕನಸು–ನನಸು** ಗೀತಾಬುಕ್ ಹೌಸ್, ಮೈಸೂರು

೧೯೭೫ ಬಸವರಾಜ್ ಆರ್, **ಈಸೂರಿನ ಚಿರಂಜೀವಿಗಳು** ರಾಷ್ಟ್ರೋತ್ಥಾನ ಸಾಹಿತ್ಯ

೧೯೭೭ ಭಾರತೀಸುತ, **ಶತದ್ರು ದಂಡೆಗೆ** ಧೃತಿ ಪ್ರಕಾಶನ, ಬೆಂಗಳೂರು

೧೯೮೧ ಗೊರೂರು ರಾಮಸ್ವಾಮಿ ಅಯ್ಯಂಗಾರ್, **ಮೆರೆವಣಿಗೆ** ಐ.ಬಿ.ಎಚ್. ಪ್ರಕಾಶನ, ಬೆಂಗಳೂರು

೧೯೯೮ ಕಟ್ಟೀಮನಿ ಬಸವರಾಜ, **ಮಾಡಿ ಮಡಿದವರು** ಸಪ್ನ ಬುಕ್ ಹೌಸ್, ಬೆಂಗಳೂರು

೨೦೦೦ ವ್ಯಾಸರಾಯ ಬಲ್ಲಾಳ, **ಹೆಜ್ಜೆ** ಗೀತಾಬುಕ್ ಹೌಸ್, ಮೈಸೂರು

೨೦೦೧ ಚೆನ್ನಬಸಪ್ಪ ಕೋ, **ಬೇಡಿಕಳಚಿತು ದೇಶ ಒಡೆಯಿತು** ನವಕರ್ನಾಟಕ ಪ್ರಕಾಶನ

೨೦೦೬ ಪ್ರಭಾಕರ ನೀರುಮಾರ್ಗ, **ಮಂಗಳೂರು ಕ್ರಾಂತಿ** ಹೇಮಾವತಿ ಪ್ರಕಾಶನ, ಮಂಗಳೂರು

೨೦೧೦ ಶ್ರೀನಿವಾಸ ವೈದ್ಯ, **ಹಳ್ಳ ಬಂತು ಹಳ್ಳ** ಮನೋಹರ ಗ್ರಂಥಮಾಲೆ,ಧಾರವಾಡ

೨೦೧೩ ಬೊಳವಾರು, **ಸ್ವಾತಂತ್ರ್ಯದ ಓಟ** ಮುತ್ತುಪ್ಪಾಡಿ ಪ್ರಕಾಸನ, ಬೆಂಗಳೂರು

( ? ) ವಸುದೇವ ಭೂಪಾಲಂ, **ಆಂದೋಲನ** ಬೆಂಗಳೂರು ಪ್ರೆಸ್

( ? ) ಚೆನ್ನಬಸಪ್ಪ ಕೋ, **ಹಿಂದಿರುಗಿ ಬರಲಿಲ್ಲ** ವಿದ್ಯಾನಿಧಿ ಬುಕ್‌ಡಿಪೋ, ಮೈಸೂರು

*****

# ಅನುಬಂಧ – ೨

## ಪರಾಮರ್ಶನ ಗ್ರಂಥಗಳು


೧.ಅನಂತರಾಮಯ್ಯ ಆರ್.ಎಲ್, (ಅನು), (೨೦೧೩), **ಸ್ವಾತಂತ್ರ್ಯದ ಹೋರಾಟ** ನ್ಯಾಷನಲ್ ಬುಕ್‌ಟ್ರಸ್ಟ್ ಇಂಡಿಯ, ನವದೆಹಲಿ.

೨.ಅಬ್ದುಲ್ ರೆಹಮಾನ್ ಪಾಷ ಎಂ, (ಅನು), (೨೦೧೪), **ಗಾಂಧಿ–ನೆಹರೂ ಆಯ್ದ ಪತ್ರಗಳು** ನ್ಯಾಷನಲ್ ಬುಕ್‌ಟ್ರಸ್ಟ್, ಇಂಡಿಯ, ನವದೆಹಲಿ.

೩.ಅರ್ಜುನ್ ದೇವ್, (ಸಂ), (೨೦೧೪), **ಗಾಂಧಿಯುಗಕ್ಕೆ ಕನ್ನಡಿ** ಅಭಿನವ ಪ್ರಕಾಶನ, ಬೆಂಗಳೂರು.

೪.ಆಮೂರ ಜಿ.ಎಸ್, (೧೯೯೪), **ಕನ್ನಡ ಕಾದಂಬರಿಗಳು** ಶ್ರೀಹರಿ ಪ್ರಕಾಶನ, ದಾರವಾಡ,

೫.ಇರ್ಫಾನ್ ಹಬೀಬ್, (೨೦೧೨), **ರಾಷ್ಟ್ರೀಯ ಆಂದೋಲನ** ನವಕರ್ನಾಟಕ ಪ್ರಕಾಶನ,

೬.ಕಕ್ಕಿಲಾಯ ಬಿ.ವಿ [ಸಂ], ( ೧೯೯೮), **ಸ್ವಾತಂತ್ರ್ಯದ ಸ್ವರ್ಣ ಹೆಜ್ಜೆ** ದಕ್ಷಿಣ ಕನ್ನಡ ಜಿಲ್ಲಾಡಳಿತ, ಮಂಗಳೂರು ಜಿಲ್ಲೆ.

೭.ಕಮಲಾ ಸಂಪಳ್ಳಿ, (೧೯೯೨) **ನಮ್ಮ ವೀರ ವನಿತೆಯರು** 'ಅಭಿರಾಮ' ಬೆಂಗಳೂರು.

೮.ಕಲಬುರ್ಗಿ ಎಂ.ಎಂ, (೧೯೯೨) **ಮಾರ್ಗ ಸಂಪುಟ–೩** ಸ್ವಪ್ನ ಬುಕ್ ಹೌಸ್, ಬೆಂಗಳೂರು.

೯.ಕೃಷ್ಣಮೂರ್ತಿ ಸಿ.ಎನ್, (೨೦೧೨), **ಸ್ವಾತಂತ್ರ್ಯಚಳುವಳಿಗೆ ಹರಿಹರ ತಾಲೂಕಿನ ಕೊಡುಗೆ** ಶ್ರೀ ವಿ.ವಿ.ಪ್ರಕಾಶನ, ಹರಿಹರ.

೧೦.ಗಿರಿಜಾ ಶಾಸ್ತ್ರಿ (ಅನು), **ಮೋಪ್ಲಾ ಕಾಂಡ** (೨೦೦೯), ರಾಷ್ಟ್ರೋತ್ಥಾನ ಸಾಹಿತ್ಯ, ಬೆಂಗಳೂರು.

೧೧.ಗೀತಾ ಹೆಚ್ ಎನ್ (ಅನು),( ೨೦೦೯), **ಬಹುರೂಪಿ ಗಾಂಧಿ** ನವಕರ್ನಾಟಕ ಪ್ರಕಾಶನ, ಬೆಂಗಳೂರು.

೧೨.ಗೋಪಾಲರಾವ್ ಎಚ್.ಎಸ್ [ಅನು], (೨೦೧೨), **ಆಧುನಿಕ ಭಾರತದ ಇತಿಹಾಸ** ನವಕರ್ನಾಟಕ ಪ್ರಕಾಶನ, ಬೆಂಗಳೂರು.

೧೨.ಗೋಪಾಲರಾವ್ [ಅನು], (೨೦೧೪), **ಕೋಮುವಾದ ಹಾಗೂ ಭಾರತೀಯ ಇತಿಹಾಸ ಲೇಖನ** ನವಕರ್ನಾಟಕ ಪ್ರಕಾಶನ, ಬೆಂಗಳೂರು.

೧೩.ಗೌರಿ ಸುಂದರ್ [ಸಂ], **ವ್ಯಾಸಸಾಹಿತ್ಯ ಶ್ರೀ ವ್ಯಾಸರಾಯ ಬಲ್ಲಾಳರ ಕಾದಂಬರಿಗಳ ವಿಮರ್ಶಾ ಗ್ರಂಥ** ಸುಂದರ ಪ್ರಕಾಶನ, ಬೆಂಗಳೂರು

೧೪.ಚಂದ್ರಕಾಂತ ಪೋಕಳೆ(ಅನು), ( ೨೦೦೨), **ಮಹಾನಾಯಕ** ನವಕರ್ನಾಟಕ ಪ್ರಕಾಶನ ಬೆಂಗಳೂರು.

೧೫.ಚಂದ್ರಶೇಖರ ಪಾಟೀಲ (ಸಂ), (೨೦೧೩), **ಚೆನ್ನಬಸಪ್ಪ ಕೋ** ಕಣ್ವ ಪ್ರಕಾಶನ, ಬೆಂಗಳೂರು.

೧೬.ಚಂದ್ರಶೇಖರ ಭಂಡಾರಿ, (೨೦೦೭), **ನಾನಾದಿಂದ ನೇತಾಜಿವರೆಗೆ ಸ್ವಾತಂತ್ರ್ಯ ಸಂಗ್ರಾಮ ೧೮೫೭ – ೧೯೪೭** ಸಾಹಿತ್ಯ ಸಿಂಧು ಪ್ರಕಾಶನ, ಬೆಂಗಳೂರು–೧

೧೭.ಚಕ್ರವರ್ತಿ ಸೂಲಿಬೆಲೆ (೨೦೧೪), **ಗದರ್ ಚಳುವಳಿ** ರಾಷ್ಟ್ರೋತ್ಥಾನ ಸಾಹಿತ್ಯ, ಬೆಂಗಳೂರು.

೧೮.ಚಕ್ರವರ್ತಿ ಸೂಲಿಬೆಲೆ, (೨೦೦೭), **ಸ್ವಾತಂತ್ರ್ಯ ಮಹಾಸಂಗ್ರಾಮ–೧೮೫೭–ಒಂದು ವಾಕ್ಚಿತ್ರ** ರಾಷ್ಟ್ರೋತ್ಥಾನ ಸಾಹಿತ್ಯ, ಬೆಂಗಳೂರು.

೧೯.ಚದುರಂಗ, (೧೯೫೦), **ಸರ್ವಮಂಗಳಾ** ಅಭಿರುಚಿ ಪ್ರಕಾಶನ, ಸರಸ್ವತೀಪುರಂ, ಮೈಸೂರು

೨೧.ನಾಗರಾಜ, (೧೯೯೫), **ದೇಶವಿಭಜನೆಯ ದುರಂತ ಕಥೆ** ಸಾಹಿತ್ಯ ಸಿಂಧು ಪ್ರಕಾಶನ, ಬೆಂಗಳೂರು.

೨೨.ನಾಗವೇಣಿ ಎಚ್, (೧೯೯೯), **ಗಾಂಧಿ ಬಂದ** ಲೋಹಿಯಾ ಪ್ರಕಾಶನ, ಬಳ್ಳಾರಿ.

೨೩.ನಾಯಕ ಹಾ.ಮಾ, (ಸಂ), (೨೦೦೧), **ವ್ಯಾಸರಾಯ ಬಲ್ಲಾಳ** ನವಕರ್ನಾಟಕ ಪ್ರಕಾಶನ ಬೆಂಗಳೂರು.

೨೪.ನಾರಾಯಣ ರಾವ್ ವಿ.ಎಸ್, (೧೯೭೮), **ಸ್ವಾತಂತ್ರ್ಯ ಸಂಗ್ರಾಮದಲ್ಲಿ ಶ್ರೀಸಾಮಾನ್ಯ** ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು.

೨೫.ನೀಲಮ್ಮ, (೨೦೦೦), **ಬಸವರಾಜ ಕಟ್ಟೀಮನಿಯವರ ಕೃತಿಗಳು ಒಂದು ಸಾಮಾಜಿಕ ಮತ್ತು ಸಾಂಸ್ಕೃತಿಕ ಅಧ್ಯಯನ** ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು.

೨೬.ಪರಮಶಿವಯ್ಯ ಜಿ. ಶಂ, (೧೯೯೪), **ಗೊರೂರು ಜೀವನ ಸಾಧನೆ** ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

೨೭.ಪಾರ್ಥಸಾರಥಿ ಕೆ.ಎಸ್, (೨೦೦೭), **ಭಾರತದ ಪ್ರಥಮ ಸ್ವಾತಂತ್ರ್ಯ ಸಂಗಾಮ** ನವಕರ್ನಾಟಕ ಪ್ರಕಾಶನ. ಬೆಂಗಳೂರು.

೨೮.ಪೂರ್ಣಿಮ ಆರ್[ಅನು], (೨೦೧೨), **ಒಂದು ಜೀವನ ಸಾಲದು!** ನವಕರ್ನಾಟಕ ಪ್ರಕಾಶನ. ಬೆಂಗಳೂರು.

೨೯.ಪ್ರಕಾಶ ಹಿಟ್ಟಿನಹಳ್ಳಿ, (೧೯೮೫), **ಸ್ವಾತಂತ್ರ್ಯ ಹೋರಾಟದಲ್ಲಿ ಬಾರತೀಯ ಮುಸ್ಲಿಮರ ಪಾತ್ರ** ನವಕರ್ನಾಟಕ ಪ್ರಕಾಶನ. ಬೆಂಗಳೂರು.

೩೦.ಪ್ರಧಾನ್ ಗುರುದತ್ತ(ಸಂ), **ತ.ರಾ.ಸು** ನವಕರ್ನಾಟಕ ಸಾಹಿತ್ಯ ಸಂಪದ, ಬೆಂಗಳೂರು.

೩೧.ಪ್ರೇಮಕುಮಾರ್ ಬಿ.ಪಿ. (೨೦೧೨), **ನೌಕಾಬಂಡಾಯ-೧೯೪೬** ರಾಷ್ಟ್ರೋತ್ಥಾನ ಸಾಹಿತ್ಯ, ಬೆಂಗಳೂರು.

೩೨.ಪ್ರೇಮಕುಮಾರ್ ಬಿ.ಪಿ, (೨೦೧೧), **ಜಲಿಯನ್ ವಾಲಾಬಾಗ್** ಸಪ್ನ ಬುಕ್ ಹೌಸ್, ಬೆಂಗಳೂರು.

೩೩.ಬಸವರಾಜ ಕಟ್ಟೀಮನಿ, (೧೯೮೧), **ಕಾದಂಬರಿಕಾರನ ಕಥೆ** ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು.

೩೪.ಬಾಬು ಕೃಷ್ಣಮೂರ್ತಿ, (೧೯೮೪), **ಅಜೇಯ** ರಾಷ್ಟ್ರೋತ್ಥಾನ ಸಾಹಿತ್ಯ, ಕೇಶವ ಕೃಪ ಬೆಂಗಳೂರು.

೩೫.ಬಿಂದು ಮಾಧವ ಬುರ್ಲಿ, (೧೯೫೫), **ಕರನಿರಾಕರಣೆಯ ವೀರ ಕತೆ** ಮಿಂಚಿನಬಳ್ಳಿ ಪ್ರಕಾಶನ, ಧಾರವಾಡ.

